ಮನೋಹರ ಗ್ರಂಥಮಾಲೆಯ ೧೦೩ನೆಯ ಕುಸುಮ

# ಮಾದನ ಮಗಳು

( ಸಾಮಾಜಿಕ ಕಾದಂಬರಿ )

ಬರೆದವರು :

ಎಂ. ವಿ. ಸೀತಾರಾಮಯ್ಯ ಎಂ.ಎ.

ಜೂನ್ ೧೯೫೦

ಬೆಲೆ ೩-೦-೦

ಮನೋಹರ ಗ್ರಂಥಪ್ರಕಾಶನ ಸಮಿತಿ

ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ

ಸಂಪಾದಕ :

ಜಿ. ಬಿ. ಜೋಶಿ

ಪ್ರಕಾಶಕರು :

ಜಿ. ಬಿ. ಜೋಶಿ

ಮನೋಹರ ಗ್ರಂಥಮಾಲಾ

ಧಾರವಾಡ

ಮುದ್ರಕರು :

ವಿ. ವಾಯು. ಜತಾರ

ಕರ್ನಾಟಕ ಪ್ರಿಂಟಿಂಗ್ ವರ್ಕ್ಸ

ಧಾರವಾಡ

# ಬಿನ್ನಹ

ಇದು ನನ್ನ ಮೂರನೆಯ ಕಾದಂಬರಿಯಾದರೂ ವಾಸ್ತವವಾಗಿ ಎರಡನೆಯದು. ಇದನ್ನು ೧೯೪೨ರಲ್ಲಿ ಪ್ರಾರಂಭಿಸಿ ಕೆಲವು ಅಧ್ಯಾಯಗಳನ್ನು ಬರೆದು, ಅನೇಕ ಕಾರಣಗಳಿಂದ ಬರೆವಣಿಗೆಗೆ ವಿಘ್ನಗಳೊದಗಿ ಬರೆದಷ್ಟಕ್ಕೇ ನಿಲ್ಲಿಸಿದ್ದೆ; ಮುಂದುವರಿಸುವ ಯೋಗ ಬೇಗನೆ ಕೂಡಿ ಬರಲಿಲ್ಲ. ಈ ವರ್ಷ ತಾನೆ ಬರೆವಣಿಗೆಯನ್ನು ಮುಂದುವರಿಸುವ ಅವಕಾಶವೊದಗಿ, ತಿಂಗಳೊಳಗೆ ಮುಗಿಸಿದ್ದಾಯಿತು. ಆಗಲೆ ಇದನ್ನು ಬರೆದು ಮುಗಿಸಿದ್ದರೆ ಇದು ಯಾವ ರೂಪವನ್ನು ತಳೆಯುತ್ತಿದ್ದಿತೊ ಹೇಳಲಾರೆ. ಆದರೆ, ಇಷ್ಟು ದೀರ್ಘ ಕಾಲಾನಂತರದ ಮೇಲೆ ಮುಂದುವರಿಸಿ ಬರೆದೂ ಕಾದಂಬರಿಯ ಮೂಲಭೂತ ಕಲ್ಪನೆಯಲ್ಲಿ ಹೆಚ್ಚಿನ ಮಾರ್ಪಾಟೇನೂ ಆಗಿಲ್ಲವೆಂದು ಖಂಡಿತವಾಗಿ ಹೇಳಬಲ್ಲೆ. ಯಾವ ಸಮಸ್ಯೆಯನ್ನು ಈ ಕಾದಂಬರಿಯ ಹಿನ್ನೆಲೆಯಾಗಿ ಅಳವಡಿಸಿರುವೆನೋ ಆ ಹರಿಜನ ಸಮಸ್ಯೆ ರಾಜಕೀಯ ದೃಷ್ಟಿಯಿಂದ ಒಂದು ಪರಿಹಾರವನ್ನು ಪಡೆದಿರುವುದಾದರೂ ಸಾಮಾಜಿಕ ದೃಷ್ಟಿಯಿಂದ ಇನ್ನೂ ಬಹುಮಟ್ಟಿಗೆ ಪರಿಹಾರವಾಗದ ಸಮಸ್ಯೆಯಾಗಿಯೇ ಉಳಿದಿರುವ ಕಾರಣದಿಂದ, ಕಾದಂಬರಿಯ ಮೊದಲ ಕಲ್ಪನೆ ಹೆಚ್ಚಿನ ಮಾರ್ಪಾಟು ಹೊಂದದೆ ಮೂಲ ಸ್ವರೂಪದಲ್ಲಿಯೇ ರೂಪಗೊಂಡಿದೆಯನ್ನಬೇಕು. ಅದೇ ಕಾರಣದಿಂದಲೇ ಕಾದಂಬರಿಯನ್ನು ಬರೆದು ಮುಗಿಸಬೇಕೆಂಬ ಪ್ರೇರಣೆಯೂ ಉಂಟಾಯಿತು.

ಕಾದಂಬರಿಗೆ ಹರಿಜನ ಸಮಸ್ಯೆಯನ್ನೇ ಪ್ರಧಾನವಾದ ಹಿನ್ನೆಲೆಯಾಗಿ ಇಟ್ಟುಕೊಂಡಿದ್ದರೂ ಸಮಸ್ಯೆಯ ಸಮಗ್ರ ಸ್ವರೂಪದ ಪರಿಚಯ ಮಾಡಿಕೊಡುವುದು ನನ್ನ ಉದ್ದೇಶವಾಗಿಲ್ಲ; ಅಂತೆಯೇ ಅದಕ್ಕೆ ನಿರ್ದಿಷ್ಟ ಪರಿಹಾರದ ಸೂಚನೆಗಳನ್ನು ಮುಂದಿರಿಸುವುದೂ ನನ್ನ ಗುರಿಯಲ್ಲ. ಅಲ್ಲಿ ಇಲ್ಲಿ ಪರಿಹಾರ ಸೂಚನೆಗಳು ವ್ಯಕ್ತಪಟ್ಟಿದ್ದರೂ, ಅವು ಕೂಡ—ಮಹಾತ್ಮ ಗಾಂಧಿಯವರ ಹರಿಜನೋದ್ಧಾರ ಚಳವಳಿಯ ಪ್ರಭಾವ ನಾಡಿನಲ್ಲಿ ಎಷ್ಟರ

ಮಟ್ಟಿಗೆ ಕಾರ್ಯ ಪ್ರೇರಕವಾಯಿತು, ಆ ಕಾರ್ಯಸಾಧನೆಯ ಮಾರ್ಗದಲ್ಲಿ ಹರಿಜನ ಸೇವಕರು ಎದುರಿಸುತ್ತಿರುವ ಅಡ್ಡಿ ಆತಂಕಗಳು ಯಾವವು, ಅವನ್ನು ಧೈರ್ಯದಿಂದ ವಿವೇಚನೆಯಿಂದ ನಿಸ್ವಾರ್ಥಬುದ್ಧಿಯಿಂದ ಎದುರಿಸಿದರೆ ಪರಿಹಾರ ಹೇಗೆ ಸಾಧ್ಯ, ಗಾಂಧಿಯುವರ ಮಾರ್ಗವನ್ನು ಅನುಸರಿಸದಿದ್ದರೆ ಬೇರೆಯ ಅಪರಿಹಾರ್ಯ ಪ್ರಸಂಗಗಳು ಹೇಗೆ ಹುಟ್ಟಿಕೊಳ್ಳಬಹುದು — ಎಂಬ ವಸ್ತುಸ್ಥಿತಿಯ ಅಸಮಗ್ರ ಚಿತ್ರಣವೇ ಆಗಿದೆ. ಒಂದು ವರ್ಣಚಿತ್ರದಲ್ಲಿ ಬೆಟ್ಟ ಗುಡ್ಡ ನದಿ ಗಿಡ ಮರ ಬಳ್ಳಿಗಳ ಪ್ರಕೃತಿದೃಶ್ಯದ ಹಿನ್ನೆಲೆಯನ್ನು ರೂಪಿಸಿದಾಗ ಅವುಗಳ ಇರವನ್ನು ಮಾತ್ರ ಸೂಚಿಸಿ ಅಖಂಡ ಸ್ವರೂಪವನ್ನು ಊಹೆಗೆ ಬಿಡುವಂತೆ, ಕಾದಂಬರಿಯುಲ್ಲಿಯಾದರೂ ಒಂದು ಸಮಸ್ಯೆಯ ಸುಳಿವು-ಹೊಳವುಗಳನ್ನು ಮಾತ್ರ ಕಾಣಿಸುವುದು ಸಾಧ್ಯ. ಸಮಸ್ಯೆಯ ಅಸಮಗ್ರ ಚಿತ್ರಣ ಅನಿವಾರ್ಯವೆ; ಅದರ ಕೂಲಂಕಷ ವಿಚಾರವಿಮರ್ಶೆಗಳು ಕಾದಂಬರಿಗೆ ಭಾರವಾಗಬಹುದು. ಕಾದಂಬರಿಯಲ್ಲಿ ಈ ಇತಿ-ಮಿತಿಯ ಹದ ಎಷ್ಟರ ಮಟ್ಟಿಗೆ ಕಲಾತ್ಮಕವಾಗಿ, ಯಶಸ್ವಿಯಾಗಿ, ಕೈಗೂಡಿದೆ ಯೆಂಬುದನ್ನು ಸಹೃದಯರು ನಿರ್ಣಯಿಸಬೇಕು. ಆ ಹದವನ್ನು, ಆ ಹೊಂದಿಕೆಯನ್ನು; ಸಾಧಿಸಬೇಕೆಂಬುದೇನೊ ನನ್ನ ಆಶಯ, ಪ್ರಯತ್ನ. ಸಿದ್ಧಿ ಎಂತೊ ನಾನರಿಯೆ.

ಹರಿಜನ ಸಮಸ್ಯೆಯಂತೆಯೇ ಭಾರತ ಸ್ವಾತಂತ್ರ್ಯಸಂಗ್ರಾಮದ ಅತಿಸಂಗ್ರಹ ನಿರೂಪಣೆಯೂ ಕಾದಂಬರಿಯ ನಡುವೆ ಒಂದು ಅವಶ್ಯ ಪ್ರಕರಣವಾಗಿ ಕಾಣಿಸಿಕೊಂಡಿದೆ. ಅದನ್ನು ಕೂಡ ಕಥೆಯ ಹಾಸುಹೊಕ್ಕಿನಲ್ಲಿ ಅಳವಡಿಸಲು ತಕ್ಕಮಟ್ಟಿಗೆ ಪ್ರಯತ್ನಪಟ್ಟಿರುತ್ತೇನೆ. ಈ ಸಂದರ್ಭದಲ್ಲಿಯೂ, ಈ ಅಳವಡಿಕೆ ಎಷ್ಟರ ಮಟ್ಟಿಗೆ ಹದವಾಗಿ ಹೊಂದಿಕೊಂಡಿದೆಯೊ ನಾನು ಹೇಳಲಾರೆ.

ಪ್ರಾರಂಭದಲ್ಲಿ ಕಾದಂಬರಿಗೆ "ಸಾಧನೆ" ಎಂದು ನಾಮಕರಣ ವಾಗಿತ್ತು. ಈ ಹೆಸರು ಉಚಿತವಾಗಿರುವುದಾದರೂ ಇದೇ ಹೆಸರಿನ ಗ್ರಂಥಗಳು ಬೇರೆ ಒಂದೆರಡು ಇವೆಯಾದ್ದರಿಂದ ಈಗಿನ ಬೇರೆಯ ಹೆಸರನ್ನು ಇಡಬೇಕಾಯಿತು.

ಈ ಕಾದಂಬರಿಯ ರಚನೆಯ ಸಂಬಂಧವಾಗಿ 'ಹರಿಜನ' ಪತ್ರಿಕೆಯ ಕೆಲವು ಹಿಂದಿನ ಸಂಚಿಕೆಗಳು, ಶ್ರೀ. ಪಾಟೀಲ ಕಲ್ಲನಗೌಡರ 'ಅಸ್ಪೃಶ್ಯತೆಯ ಕಲಂಕ' ಎಂಬ ಮಹಾತ್ಮಾ ಗಾಂಧಿಯವರ ವಿಚಾರಸಂಗ್ರಹದ ಪುಸ್ತಕ, ಶ್ರೀ. ಪಟ್ಟಾಭಿ ಸೀತಾರಾಮಯ್ಯನವರ 'ಕಾಂಗ್ರೆಸ್ಸಿನ ಇತಿಹಾಸ', ಶ್ರೀ. ಗೊರೂರು ರಾಮಸ್ವಾಮಯ್ಯಂಗಾರರ 'ಮೆರವಣಿಗೆ'— ಇವುಗಳನ್ನು ಪರಿಶೀಲಿಸಿ ಉಚಿತ ಕಂಡ ಮಟ್ಟಿಗೆ ನೆರವು ಇಲ್ಲವೆ ಸ್ಫೂರ್ತಿಯನ್ನು ಪಡೆದಿದ್ದೇನೆ. ಈ ಪ್ರಕಟನೆಗಳಿಗೆ ನಾನು ಋಣಿ.

'ಮನೋಹರ ಗ್ರಂಥಮಾಲೆ'ಗೆ ಒಂದು ಕಾದಂಬರಿಯನ್ನು ಬರೆದು ಕೊಡುವುದಾಗಿ ಬಹುಹಿಂದೆಯೇ ಮಾತುಕೊಟ್ಟಿದ್ದೆ. ಅದನ್ನು ನೆನೆದು, 'ಮಾಲೆ'ಯ ಶ್ರೀ. ಜಿ. ಬಿ. ಜೋಶಿಯವರು – ನನ್ನ ಮಾನ್ಯ ಮಿತ್ರರು – ಈಗ ಮುಂದೆ ಬಂದು, ಈ ಕಾದಂಬರಿಯ ಪ್ರಕಟನೆಯ ಭಾರವನ್ನು ಸಂತೋಷದಿಂದ ವಹಿಸಿಕೊಂಡರು; ಕೇವಲ ಅತ್ಯಲ್ಪ ಕಾಲದಲ್ಲಿ ಮುದ್ರಣ ಮಾಡಿಸಿ ಬೆಳಕಿಗೆತರುವ ಸಾಹಸದ ಪ್ರಯತ್ನಮಾಡಿರುವರು. ಅವರ ವಿಶ್ವಾಸ, ಉಪಕಾರ, ಹಿರಿದು. ಅವರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ.

ಕಾದಂಬರಿಯ ಹಸ್ತಪ್ರತಿಯನ್ನು ಓದಿಸಿಕೇಳಿ, ಓದಿ, ಮೆಚ್ಚುಗೆಯನ್ನು ತಿಳಿಸಿದುದಲ್ಲದೆ ಸೂಕ್ತ ಸಲಹೆ ಸೂಚನೆಗಳನ್ನು ಕೊಟ್ಟ ನನ್ನ ಮಿತ್ರರಿಗೂ ವಂದನೆಗಳು.

೧೫–೮–೧೯೫೦
ಬೆಂಗಳೂರು ನಗರ

ಎಂ. ವಿ. ಸೀತಾರಾಮಯ್ಯ

---

## ಮುಂದೆ ಬರಲಿರುವ ಕುಸುಮುಗಳು

(೧)

**ಹೊಸ ಸಂಸಾರ ಮತ್ತು ಇತರ ಏಕಾಂಕಗಳು**

ಬರೆದವರು :

**ದ. ರಾ. ಬೇಂದ್ರೆ ಎಂ. ಎ.**

(೨)

**ಇಂದ್ರಚಾಪ**

( ಸುಪ್ರಸಿದ್ಧ ರಶಿಯನ್ ಕಾದಂಬರಿಯ ಅನುವಾದ)

ಅನುವಾದಕರು :

**ತಲ್ಚೇರಿ ರಂಗರಾಯರು ಎಂ. ಎ. ಎಲೆಲ್. ಬಿ.**

(೩)

**ಎರಡನೆಯ ಸಂಬಂಧ**

( ಸಾಮಾಜಿಕ ಕಾದಂಬರಿ )

**ಎನ್ಕೆ ಕುಲಕರ್ಣಿ ಎಂ. ಎ.**

(೪)

**ಸಮರಸವೇ ಜೀವನ**

( ಇಜ್ಜೋಡಿನ ಮುಂದಿನ ಭಾಗ)

ಬರೆದವರು :

**ವಿ. ಕೃ. ಗೋಕಾಕ ಬಿ. ಎ. ( ಆಕ್ಸಫರ್ಡ )**

(೫)

**ಮೂಕ ಬಲಿ**

( ಸಾಮಾಜಿಕ ಕಾದಂಬರಿ )

ಬರೆದವರು:

**ಜಡಭರತ**

(೬)

**ಮಹಾಲಕ್ಷ್ಮಿ ಮತ್ತು ಇತರ ನಾಟಕಗಳು**

ಬರೆದವರು :

**ದ. ರಾ. ಬೇಂದ್ರೆ ಎಂ. ಎ.**

# ಕೃತಜ್ಞತೆ

ಈ 'ಮಾದನ ಮಗಳು' ಕಾದಂಬರಿಯನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಕೊಟ್ಟುದಕ್ಕಾಗಿ ಶ್ರೀ. ಎಂ. ವಿ. ಸೀತಾರಾಮಯ್ಯನವರಿಗೆ ನಾನು ತುಂಬ ಉಪಕೃತನಾಗಿದ್ದೇನೆ. ತಮ್ಮ ಕಾದಂಬರಿಗೆ ತಾವೇ ಒಂದು ಹೊದಿಕೆ ಚಿತ್ರ ಬರೆದುಕೊಟ್ಟು ಅದರ ಬಾಹ್ಯ ಸೌಂದರ್ಯ ಇನ್ನೂ ಹೆಚ್ಚು ವಂತೆ ಮಾಡಿದ್ದಾರೆ. ಅದಕ್ಕೂ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

—ಸಂಪಾದಕ

# ಮಾದನ ಮಗಳು

೧

ಅಂದು ಮೈಸೂರಿನ ವಿಶ್ವವಿದ್ಯಾನಿಲಯದ ಸಂಘದ ಆಶ್ರಯದಲ್ಲಿ ವಿಶೇಷ ಚರ್ಚಾಕೂಟ ಏರ್ಪಾಟಾಗಿತ್ತು. ಚರ್ಚೆ ಕನ್ನಡದಲ್ಲಿ ನಡೆಯುವು ದಾಗಿತ್ತು. ಆಗಿನ ದಿನಗಳಲ್ಲಿ ಕನ್ನಡದಲ್ಲಿ ಭಾಷಣ ಅಥವಾ ಚರ್ಚೆ ಎಂದರೆ ಒಂದು ವಿಶೇಷ ಸಂದರ್ಭವೆಂದೇ ಹೇಳಬೇಕು; ಏಕೆಂದರೆ, ಒಂದು ಕಡೆ, ಕನ್ನಡದಲ್ಲಿ ಮಾತನಾಡಲು ಅಪಾರ ಶಕ್ತಿಸಾಮರ್ಥ್ಯಗಳು ಬೇಕೆಂಬ ಭಾವನೆ; ಮತ್ತೊಂದು ಕಡೆ, ಕನ್ನಡದಲ್ಲಿ ಮಾತಾಡುವುದು ಮಾನಕ್ಕೆ ಕಡಮೆ ಎಂಬ ಎಣಿಕೆ. ಮೊದಲ ತೆರದ ಭಾವನೆಯುಳ್ಳ ವಿದ್ಯಾರ್ಥಿಗಳು, ಸ್ವತಃ ವಾಗ್ಮಿ ಗಳಲ್ಲದಿದ್ದರೂ ವಾಗ್ಮಿಗಳಲ್ಲಿ, ಒಟ್ಟಿನ ಮೇಲೆ ಕನ್ನಡದಲ್ಲಿ, ತೀವ್ರ ಅಭಿಮಾನ ವುಳ್ಳವರು; ಎರಡನೆಯ ತೆರದ ಭಾವನೆ ಹೊಂದಿದ್ದವರು, ಕನ್ನಡ ಹೆಂಗಸು ರಾಡುವ ಭಾಷೆ, ಹಳ್ಳಿಯವರಾಡುವ ಭಾಷೆ ಎಂದು ಕನ್ನಡದ ಬಗ್ಗೆ ಅಸಡ್ಡೆ ತೋರುತ್ತಿದ್ದವರು ಮತ್ತು ತಾವು ನೇರವಾಗಿ ಇಂಗ್ಲೆಂಡಿನಿಂದಲೇ ಬಂದವ ರೆಂಬ ದುರಹಂಕಾರದಲ್ಲಿ ಮೆರೆಯುತ್ತಿದ್ದವರು; ಈ ಎರಡು ಪಂಗಡದ ವಿದ್ಯಾರ್ಥಿಗಳಿಗೂ ಕನ್ನಡದ ವಿಷಯವಾಗಿ ಆಗಾಗ್ಗೆ ದ್ವಂದ್ವಯುದ್ಧಗಳು ನಡೆಯುತ್ತಲೇ ಇದ್ದವು. 'ಕರ್ಣಾಟಕ ಸಂಘ'ದ ಆಶ್ರಯದಲ್ಲಿ ಕನ್ನಡ ಸಭೆಗಳು ಸೇರುತ್ತಿದ್ದುವಾದರೂ ವಿಶ್ವವಿದ್ಯಾನಿಲಯ ಸಂಘದಲ್ಲಿ ಕನ್ನಡ ಸಭೆ ಗಳು ಏರ್ಪಡುತಿದ್ದುದು ಬಹು ವಿರಳ; ಇಲ್ಲವೆಂದೇ ಹೇಳಬೇಕು.

ಹೀಗಿರುವಾಗ, ಆ ಸಂಘದಲ್ಲಿ ಒಂದು ಕನ್ನಡ ಚರ್ಚಾಕೂಟವನ್ನು ಏರ್ಪಡಿಸಬೇಕೆಂದು ಸುಂದರಮೂರ್ತಿ ಸಂಘದ ಕಾರ್ಯದರ್ಶಿಗಳಿಗೆ ಸಲಹೆ ಮಾಡಿದಾಗ, ಕಾರ್ಯದರ್ಶಿ ಆಗುವುದಿಲ್ಲವೆಂದು ಬಿಟ್ಟರು. ಏತಕ್ಕೆಂದು ಕೇಳಿ ದಾಗ, ಕನ್ನಡದಲ್ಲಿ ಮಾತಾಡುವವರನ್ನು ಹುಡುಕುವುದು ಬಹು ಕಷ್ಟದ ಕೆಲಸವೆಂದೂ ಅವರನ್ನು ಹುಡುಕಿ ಒಪ್ಪಿಸಿ, ವಿಷಯವನ್ನು ಸೂಚಿಸಿದರೆ ಆಗಬಹುದೆಂದೂ ಕಾರ್ಯದರ್ಶಿ ಹೇಳಿದರು; ಮತ್ತು ವಿಷಯದ ಸೂಚಕ ನಾಗಿ ಭಾಷಣ ಮಾಡಬೇಕೆಂದೂ ಒತ್ತಾಯ ಮಾಡಿದರು. ವಿಷಯವನು

ಸೂಚಿಸುವುದು ಸುಂದರಮೂರ್ತಿಗೆ ಅಷ್ಟು ಕಷ್ಟವಾಗಲಿಲ್ಲ; ಕೆಲವು ದಿನಗಳ ಹಿಂದೆ, ಪುರಭವನದ ( ಟೌನ್‌ಹಾಲ್ ) ಮೈದಾನದಲ್ಲಿ, ಸುಪ್ರಸಿದ್ಧ ವಿಜ್ಞಾನಿಗಳಾದ ಪ್ರಫುಲ್ಲಚಂದ್ರ ರಾಯ್ ಅವರು ಅಸ್ಪೃಶ್ಯತೆಯ ವಿಚಾರ ಪ್ರಸ್ತಾಪಿಸಿ ಸ್ಫೂರ್ತಿದಾಯಕವಾದ ಭಾಷಣ ಮಾಡಿದ್ದುದು ಅವನ ಮನಸ್ಸಿನಲ್ಲಿ ದೊಡ್ಡ ವಿಚಾರಕ್ರಾಂತಿಯನ್ನೆಬ್ಬಿಸಿತ್ತು; ಅಂದಿನ ರಾತ್ರಿಯೇ ಅವನು ಹೋಟೆಲಿನ ಕೋಣೆಯಲ್ಲಿ ತನ್ನ ಪ್ರಿಯಮಿತ್ರ ವಿಶ್ವನಾಥಶಾಸ್ತ್ರಿಯೊಡನೆ ಆ ವಿಷಯ ಕುರಿತು ಸಣ್ಣ ಚರ್ಚೆಯೊಂದನ್ನು ಹೂಡಿದ್ದ; ಬೆಳಗಿನ ಜಾವ ನಾಲ್ಕಾದರೂ ಆ ಚರ್ಚೆ ಮುಕ್ತಾಯಕ್ಕೆ ಬಂದಿರಲಿಲ್ಲ; ಸುಂದರ ಅಸ್ಪೃಶ್ಯತೆಯನ್ನು ತೊಡೆದು ಹಾಕಬೇಕೆಂದು ವಾದಿಸುತ್ತಿದ್ದ, ವಿಶ್ವನಾಥಶಾಸ್ತ್ರಿ ಅದು ಸಾಧ್ಯವಿಲ್ಲವೆಂದು ಪ್ರತಿವಾದಿಸುತ್ತಿದ್ದ; ಅಧ್ಯಕ್ಷರಿಲ್ಲ, ಅಭಿಮತ ಕೊಡುವವರಿಲ್ಲ; ಅಬಾಧಿತವಾಗಿ ಅವರಿಬ್ಬರ ಚರ್ಚೆ ಮುಂದೆ ಸಾಗಿ, ನಿದ್ದೆ ಬಂದದ್ದರಿಂದ ಅದು ಅನಿವಾರ್ಯವಾಗಿ ನಿಲ್ಲಬೇಕಾಯಿತು. ಅಂದಿನಿಂದಲೂ ಈ ವಿಷಯ ಸುಂದರನ ಮನಸ್ಸನ್ನು ಬಿಟ್ಟು ಕದಲಿರಲಿಲ್ಲ. "ಅಸ್ಪೃಶ್ಯತಾ ನಿವಾರಣೆಯಾದ ಹೊರತು ನಮ್ಮ ದೇಶಕ್ಕೆ ಮೋಕ್ಷವಿಲ್ಲ" ಎಂಬ ವಿಷಯವನ್ನು ಸೂಚಿಸಿ, ತನಗೆ ಕನ್ನಡದಲ್ಲಿ ಮಾತಾಡುವ ಶಕ್ತಿಯಿಲ್ಲದಿದ್ದರೂ ಕನ್ನಡದ ಮೇಲಣ ಮತ್ತು ವಿಷಯದ ಮೇಲಣ ತೀವ್ರ ಅಭಿಮಾನದ ಕಾರಣದಿಂದ ತಾನೇ ವಿಷಯವನ್ನು ಸಭೆಯ ಮುಂದಿಟ್ಟು ವಾದಿಸುವುದಾಗಿಯೂ, ವಿಷಯವನ್ನು ವಿರೋಧಿಸಿ ಮಾತಾಡಲು ವಿಶ್ವನಾಥಶಾಸ್ತ್ರಿಯನ್ನು ಒಪ್ಪಿಸಿರುವುದಾಗಿಯೂ ಸುಂದರಮೂರ್ತಿ ಕಾರ್ಯದರ್ಶಿಗೆ ತಿಳಿಸಿದ. ವಿಷಯದ ಪರವಾಗಿಯೂ ವಿರುದ್ಧವಾಗಿಯೂ ಮುಖ್ಯಭಾಷಣಕಾರರಿಗೆ ಸಮರ್ಥನೆ ಕೊಡಲು ಇನ್ನು ಇಬ್ಬಿಬ್ಬರು ( ಒಟ್ಟು ನಾಲ್ಕು ಮಂದಿ ) ಭಾಷಣಕಾರರನ್ನು ಗೊತ್ತುಮಾಡಿದ್ದ. ತನಗೆ ವಿಷಯದ ಬಗ್ಗೆ ಹೆಚ್ಚು ಆಸಕ್ತಿಯಿದ್ದರೂ ಕನ್ನಡ ಭಾಷೆಯ ಮೇಲೆ ಅಷ್ಟು ಪ್ರಭುತ್ವವಿಲ್ಲದ್ದರಿಂದ, ಕನ್ನಡ ವಾಗ್ಮಿತೆಯಲ್ಲಿ ಮೇಲುದರ್ಜೆಯವನಾಗಿದ್ದ ಲಕ್ಷ್ಮೀಪತಿಯನ್ನು ತನ್ನ ಪರ ಮಾತಾಡಿ ತನ್ನ ಪಕ್ಷಕ್ಕೆ ಗೆಲವು ತಂದುಕೊಡಬೇಕೆಂದು ಬೇಡಿಕೊಂಡಿದ್ದ; ಲಕ್ಷ್ಮೀಪತಿ ಆಗಲೆಂದು ಒಪ್ಪಿಕೊಂಡಿದ್ದ. ತನ್ನ ಕಡೆಯವನಾಗಿ ಮಾತಾಡಲು ಸುಂದರಮೂರ್ತಿ ಕೋರಿದ್ದ ಇನ್ನೊಬ್ಬನೆಂದರೆ ರಾಚಪ್ಪ.

೨

ಸುಂದರಮೂರ್ತಿಗೂ ವಿಶ್ವನಾಥಶಾಸ್ತ್ರಿಗೂ ಮೊದಲಿನಿಂದಲೂ ಗಾಢವಾದ ಸ್ನೇಹ. ಇಬ್ಬರೂ ಒಂದೇ ಊರಿನಿಂದ ಬಂದವರು; ಇಬ್ಬರೂ ಸ್ವಲ್ಪ ಹೆಚ್ಚು ಕಡಮೆ ಒಂದೇ ವಯಸ್ಸಿನವರು; ಒಂದೇ ತರಗತಿಯಲ್ಲಿ ಓದುತ್ತಿದ್ದರು. ಜೊತೆಗೆ, ಇಬ್ಬರೂ ಒಂದೇ 'ಜನ': ಸ್ಮಾರ್ತ ಬ್ರಾಹ್ಮಣರು. ಈ ಕಾರಣದಿಂದ, ಮೈಸೂರಿಗೆ ಓದುವುದಕ್ಕೆ ಬಂದು ಇಬ್ಬರೂ ಹೈಸ್ಕೂಲಿಗೆ ಒಟ್ಟಿಗೆ ಸೇರಿದಾಗ, ಸುಬ್ಬರಾಯನ ಕೆರೆಯ ಬಳಿ ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡು ಜೊತೆಯಾಗಿಯೆ ಇದ್ದರು. ಇಬ್ಬರೂ ಇಷ್ಟು ಹತ್ತಿರದ ಸ್ನೇಹಿತರಾದರೂ, ರೂಪ, ಶೀಲ ಸ್ವಭಾವ ಮೊದಲಾದವುಗಳಲ್ಲಿ ಒಬ್ಬರಿಗೊಬ್ಬರು ದೂರ. ಸುಂದರ ಹೆಸರಿಗೆ ತಕ್ಕಹಾಗೆ ತಕ್ಕಮಟ್ಟಿಗೆ ಸುಂದರನೆ; ಎತ್ತರವಾದ ನಿಲುವು; ತಿಳಿಗೆಂಪು ಕೂಡಿದ ಬಿಳಿಯ ಮೈಬಣ್ಣ; ಕೋಲು-ಮುಖವೂ ಅಲ್ಲ, ತೀರ ಗುಂಡು-ಮುಖವೂ ಅಲ್ಲ; ಹೆಣ್ಣಿನ ತುಟಿಯನ್ನು ನಾಚಿಸುವಂತಹ ಕೆಂದುಟಿ; ಚುರುಕಾದ ಬುದ್ಧಿ; ಅದಕ್ಕೆ ತಕ್ಕ ಚುರುಕು ನೋಟ; ಎಲ್ಲರನ್ನೂ ಸರ್ವದಾ ತನ್ನ ಕಡೆಗೆ ಕರೆಯು ವಂತಹ ಮಾಸದ ನಸುನಗೆಯ ಮುಖಭಾವ; ನಯವಾದ ನುಡಿ, ನಯವಾದ ನಡೆ. ವಿಶ್ವನಾಥಶಾಸ್ತ್ರಿ ಕುಬ್ಜ, ಶ್ಯಾಮಲಮೂರ್ತಿ; ಚೌಕನಾದ ಮುಖ; ಯಾವಾಗಲೂ ಸಡಿಲವಾಗದ ಹುಬ್ಬುಗಂಟು; ಬಯ್ಯುವದಕ್ಕೇ ಬಿಟ್ಟಂತೆ ತೋರುವ, ಸರ್ವದಾ ಅರೆದೆರೆದ ಬಾಯಿ; ಒರಟು ಮಾತು, ಒರಟು ನಡತೆ; ವಿಶ್ವನಾಥಶಾಸ್ತ್ರಿಯನ್ನು ಕಂಡರೆ ಜೊತೆಯವರಿಗೆಲ್ಲ ಅಸಹ್ಯ; ಆದರೆ ಅವನ ಚುರುಕುಬುದ್ಧಿಯ, ಭಾವುಕ ಹೃದಯದ, ಅರಿವು ಸುಂದರಮೂರ್ತಿಗಲ್ಲದೆ ಬೇರೆಯವರಿಗಾಗಿರಲಿಲ್ಲ; ಆಗಲು ಕಾರಣವೂ ಇರಲಿಲ್ಲ. ಇಷ್ಟೇ ಅಲ್ಲದೆ, ಸುಂದರಮೂರ್ತಿ ಊರಿನ ಶಾನುಭೋಗರ ಮಗ, ಲೌಕಿಕರ ಮನೆತನಕ್ಕೆ ಸೇರಿದವನು; ವಿಶ್ವನಾಥಶಾಸ್ತ್ರಿ ಊರ ಜೋಯಿಸರ ಮಗ, ವೈದಿಕರ ಮನೆತನಕ್ಕೆ ಸೇರಿದವನು. ಸುಂದರಮೂರ್ತಿ ಕನ್ನಡಪ್ರೇಮಿ, ವಿಶ್ವನಾಥಶಾಸ್ತ್ರಿ ಸಂಸ್ಕೃತಪ್ರೇಮಿ. ಇಂಥ ಪರಸ್ಪರ ವಿರುದ್ಧಸ್ವಭಾವಗಳ ವ್ಯಕ್ತಿಗಳು ಹೈಸ್ಕೂಲು ತರಗತಿಗಳಲ್ಲಿ ಬಹಳ ಅನ್ಯೋನ್ಯವಾಗಿ ಒಂದೇ ಕಡೆ ಇದ್ದರು.

ಇದಕ್ಕೆ ಕಾರಣಗಳಿಲ್ಲದೆ ಇರಲಿಲ್ಲ: ವಿಶ್ವನಾಥಶಾಸ್ತ್ರಿ ಬಡ ಜೋಯಿಸರ ಮಗ, ಬಡ ಬ್ರಾಹ್ಮಣ; ಸುಂದರನಿಗೆ ಅವನ ತಂದೆ ತಿಂಗಳು ತಿಂಗಳೂ ಕೈತುಂಬ ಹಣ ಕಳಿಸುತ್ತಿದ್ದರು; ವಿಶ್ವನಾಥಶಾಸ್ತ್ರಿಗೆ ಅವನ ತಂದೆ ಹಣ ಕಳಿಸಿದರೆ ಕಳಿಸಿದರು, ಇಲ್ಲದಿದ್ದರೆ ಇಲ್ಲ. ಹೀಗಾಗಿ, ಅವನು ಸುಂದರನನ್ನು ಬಹುಮಟ್ಟಿಗೆ ಆಶ್ರಯಿಸಿಕೊಂಡಿದ್ದ; ಅದಕ್ಕೆ ಪ್ರತಿಫಲವಾಗಿ, ತಾನೇ ಅಡಿಗೆ ಮಾಡುತ್ತಿದ್ದ, ಹಲವು ವೇಳೆ ಸುಂದರನ ಬಟ್ಟೆಗಳನ್ನೂ ಒಗೆದು ಹಾಕಿಬಿಡುತ್ತಿದ್ದ. ಕಾಲೇಜು ತರಗತಿಗಳಿಗೆ ಬಂದಾಗ, ಇಬ್ಬರೂ ಸ್ವಲ್ಪ ಮಟ್ಟಿಗೆ ಬೇರೆಯಾಗುವ ಘಟನೆಗಳೊದಗಿದವು: ಸುಂದರ ತನ್ನ ನೀಳವಾಗಿದ್ದ ಕಪ್ಪು ಕೂದಲರಾಶಿಯನ್ನು ಕತ್ತರಿಸಿ 'ಕ್ರಾಪು' ಬಿಟ್ಟ; ಕಾಲಕಾಲಕ್ಕೆ ತಪ್ಪದೆ ಸಂಧ್ಯಾವಂದನೆ ಮಾಡುತ್ತಿದ್ದವನು ಸಂಪೂರ್ಣವಾಗಿ ಅದನ್ನು ಬಿಟ್ಟುಬಿಟ್ಟ; ದೇವರಪಟ ಪೂಜಿಸುವುದನ್ನು ಬಿಟ್ಟು ಮಹಾತ್ಮ ಗಾಂಧಿ, ಮೋತಿಲಾಲ ನೆಹರು, ಗೋಖಲೆ, ತಿಲಕ ಮೊದಲಾದ ಮಾನವ ವ್ಯಕ್ತಿಗಳನ್ನು ಪೂಜಿಸತೊಡಗಿದ. ವಿಶ್ವನಾಥಶಾಸ್ತ್ರಿಯಾದರೋ, ಸಂಸ್ಕೃತದಲ್ಲಿ ಹೆಚ್ಚು ಹೆಚ್ಚು ಪ್ರವೇಶ ದೊರೆತಂತೆ ಸ್ತೋತ್ರಪಠನ, ವೇದೋಪನಿಷತ್ತುಗಳ ವಾಚನ, ಭಗವದ್ಗೀತಾಪಾರಾಯಣ ಇವುಗಳನ್ನು ಹೆಚ್ಚು ಮಾಡುತ್ತ ಬಂದ. ಕಡೆಗೆ, ಸುಂದರನ ರೀತಿ ವಿಶ್ವನಾಥಶಾಸ್ತ್ರಿಗೆ ಸರಿಬೀಳಲಿಲ್ಲ; ಅಷ್ಟೇ ಹೊತ್ತಿಗೆ ಅವನಿಗೆ ಸಂಸ್ಕೃತದಲ್ಲಿ ಒಂದು ವಿದ್ಯಾರ್ಥಿವೇತನವೂ ದೊರೆತಿತ್ತು; ಆದ್ದರಿಂದ, ಮೊದಲಿನಂತೆ ಅವನು ಸುಂದರನನ್ನು ಅಷ್ಟಾಗಿ ಆಶ್ರಯಿಸಿಕೊಂಡಿರಬೇಕಾಗಿರಲಿಲ್ಲ; ತನ್ನ ಈ ಸ್ವಾವಲಂಬನ ಸ್ಥಿತಿಯನ್ನು ವಿಶ್ವನಾಥ ತನ್ನ ನಡೆನುಡಿಯಲ್ಲಿ ಕೊಂಚ ಕೊಂಚ ತೋರ್ಪಡಿಸುತ್ತ ಬಂದ. ಈ ಸೂಕ್ಷ್ಮವನ್ನು ಗ್ರಹಿಸಿದ ಸುಂದರ ವಿಶ್ವನಾಥಶಾಸ್ತ್ರಿಯನ್ನು ಯಾವ ವಿಚಾರದಲ್ಲೂ ಮನನೋಯಿಸುವುದಕ್ಕೆ ಹೋಗುತ್ತಿರಲಿಲ್ಲ; ತನಗೆ ಇನ್ನು ಮುಂದೆ ಅಡಿಗೆ ಮಾಡಬೇಡವೆಂದು ಹೇಳಿ ತಾನು ಹೋಟಲಿಗೆ ಊಟಕ್ಕೆ ಹೋಗುವುದಕ್ಕೆ ಮೊದಲು ಮಾಡಿದ. ವ್ಯವಹಾರದೃಷ್ಟಿಯಲ್ಲಿ ಒಬ್ಬರಿಂದ ಒಬ್ಬರು ಅಗಲುತ್ತ ಹೋಗುತ್ತಿದ್ದರೂ, ಅವರ ಪರಸ್ಪರ ಸ್ನೇಹಭಾವ ಏಕರೀತಿಯಾಗಿತ್ತು; ಒಬ್ಬರ ಕಷ್ಟಕ್ಕೆ ಒಬ್ಬರಾಗುತ್ತಿದ್ದರು. ಸುಂದರ ಮೂರ್ತಿ ಆಗಾಗ್ಗೆ ಖಾಯಿಲೆ ಬೀಳುತ್ತಿದ್ದ; ಆಗ, ವಿಶ್ವನಾಥಶಾಸ್ತ್ರಿ ತನ್ನ

ಎಲ್ಲ ಕೆಲಸಗಳನ್ನು ಬಿಟ್ಟು ಅವನನ್ನು ಉಪಚರಿಸುತ್ತಿದ್ದ. ಈ ಕಾರಣ, ಅವರು ಒಂದೇ ಕೊಠಡಿಯುಲ್ಲಿಯೇ ಇನ್ನೂ ವಾಸವಾಗಿದ್ದರು. ಸುಂದರ ಮೂರ್ತಿಯು ಎಷ್ಟೋ ನಡವಳಿಕೆಗಳನ್ನೆಲ್ಲ ವಿಶ್ವನಾಥಶಾಸ್ತ್ರಿ ಹೇಗೋ ತಾಳಿ ಕೊಂಡಿದ್ದರೂ, ಒಂದನ್ನು ಕಂಡರೆ ಮಾತ್ರ ಅವನು ಕಿಡಿಕಿಡಿಯಾಗುತ್ತಿದ್ದ: ಅದೇನೆಂದರೆ, ರಾಚಪ್ಪನ ವಿಷಯದಲ್ಲಿ ಸುಂದರ ತೋರುತ್ತಿದ್ದ ವಿಶ್ವಾಸ. ರಾಚಪ್ಪನಿಗೂ ಸುಂದರನಿಗೂ ಅಂಥ ಸಲಿಗೆ ಸ್ನೇಹಗಳೇನೂ ಇರಲಿಲ್ಲ; ಆದರೆ, ಅವನ ವಿಷಯದಲ್ಲಿ ಮೊದಲಿನಿಂದಲೂ ಸುಂದರ ಸಹಾನುಭೂತಿ ಯಿಂದ ವರ್ತಿಸುತ್ತಿದ್ದ. ಯಾರು ಏನೆನ್ನುವರೋ ಎಂದು ರಾಚಪ್ಪ ತರಗತಿಯ ಪೀಠಸೋಪಾನದ (Gallery) ಮೇಲ್ಗಡೆ ಬಂದು ಮೂಲೆ ಯಲ್ಲಿ ಒಬ್ಬನೇ ಕುಳ್ಳಿರುತ್ತಿದ್ದ; ಒಬ್ಬರೊಡನೆ ಬೆರೆಯುತ್ತಿರಲಿಲ್ಲ, ಒಬ್ಬ ರೊಡನೆ ಒಂದು ಮಾತಾಡುತ್ತಿರಲಿಲ್ಲ. ಸುಂದರ ಎಂದಾದರೂ ಒಂದೊಂದು ದಿನ ಒಂದೆರಡು ನಿಮಿಷಗಳು ತಡವಾಗಿ ಬಂದು, ರಾಚಪ್ಪ ಒಂಟಿಯಾಗಿ ಕುಳಿತಿರುವುದನ್ನು ಕಂಡು, ತಾನು ಹೋಗಿ ಅವನ ಜೊತೆ ಕುಳಿತುಕೊಳ್ಳು ವನು; ಆಗ ಎಲ್ಲರೂ ಇವನ ಕಡೆ ತಿರುಗಿ ನೋಡುವರು; ವಿಶ್ವನಾಥಶಾಸ್ತ್ರಿ ದುರಗುಟ್ಟಿಕೊಂಡು ನೋಡುವನು. ತರಗತಿ ಮುಗಿದ ಮೇಲೆ ಕೊಠಡಿಗೆ ಬಂದಾಗ, ತನ್ನ ಸ್ನೇಹಿತನ ಮನನೋಯಿಸದಿರುವುದಕ್ಕಾಗಿ ಸುಂದರ ತೊಟ್ಟಿದ್ದ ಬಟ್ಟೆಯನ್ನೆಲ್ಲ ಬಿಚ್ಚಿ ನೆನೆಯಿಸಿ, ತಣ್ಣೀರು ಸ್ನಾನಮಾಡಿ, ಬೇರೆಯ ಬಟ್ಟೆ ಹಾಕಿಕೊಳ್ಳುವನು. "ಇಷ್ಟು ಕಷ್ಟದಲ್ಲಾದರೂ ಆ ಹೊಲೆಯನ ಜೊತೆ ಕುಳಿತುಕೊಳ್ಳದೆ ಹೋದರೆ ಏನೋ?" ಎಂದು ವಿಶ್ವನಾಥಶಾಸ್ತ್ರಿ ಹಂಗಿಸುವನು. ಆಗ ಶಾಂತಮೂರ್ತಿಯಾದ ಸುಂದರ ಕೂಡ ನಾಗಸರ್ಪದಂತೆ ಕೆರಳಿ "ಜೋಕೆ ವಿಶ್ವ! ನೀನು ನನ್ನ ಹೊಲೆಯ ಅನ್ನು; ಅವನನ್ನ ಮಾತ್ರ ಹೊಲೆಯ ಎನ್ನಬೇಡ, ತಿಳಿಯಿತೆ?" ಎನ್ನು ವನು ಬಳಿಕ, ಅಂದಿನ ರಾತ್ರಿ ಇಬ್ಬರೂ ಒಬ್ಬರೊಡನೊಬ್ಬರು ಮಾತ ನಾಡದೆ ಮೌನವಾಗಿರುವರು. ಚರ್ಚಾಕೂಟದ ಹಿಂದಿನ ದಿನದ ರಾತ್ರಿ ಮಲಗುವುದಕ್ಕೆ ಮುಂಚೆ ಚರ್ಚಾವಿಷಯವನ್ನು ಕುರಿತು ಸ್ವಲ್ಪ ಕಾವಿ ನಿಂದಲೇ ವಾದವಿವಾದ ಮಾಡುತ್ತ ಅವರು ಮಲಗಿಕೊಂಡಿದ್ದರು. ಎಂದಿನಂತೆಯೇ, ಆ ಚರ್ಚೆ ಕೊನೆಗಾಣುವಂತೆ ತೋರಲಿಲ್ಲ. ತಾನು

ವಾದದಲ್ಲಿ ಸೋಲುತ್ತಿರುವುದಾಗಿ ಒಮ್ಮೆ ವಿಶ್ವನಾಥಶಾಸ್ತ್ರಿಗೆ ಅನ್ನಿಸಿದಾಗ, "ಓಹೋ! ಹೊಲೆಯನಿಂದಲೇ ಮಾತಾಡಿಸಿಬಿಟ್ಟರೆ ನಿನ್ನ ಪಕ್ಷ ಗೆಲ್ಲುತ್ತೆ ಅಂತ ಮಾಡಿಕೊಂಡೆಯೋ?" ಎಂದು ಸುಂದರನನ್ನು ಕೆಣಕಿದ. ಸುಂದರ ಕುಪಿತನಾಗಿ ಮುಸುಕೆಳೆದುಕೊಂಡು ಮಲಗಿಬಿಟ್ಟ.

೩

ವಿಶ್ವವಿದ್ಯಾನಿಲಯದ ಸಂಘದ ಚರ್ಚಾಭವನದಲ್ಲಿ ವಿದ್ಯಾರ್ಥಿಗಳು ಕಿಕ್ಕಿರಿದು ನೆರೆದಿದ್ದರು. ವೇದಿಕೆಯ ಅತ್ತಕಡೆ ಇತ್ತಕಡೆಗಳಲ್ಲಿ ಕಾಲೇಜಿನ ಅಧ್ಯಾಪಕರು ಕುಳಿತಿದ್ದರು. ವೇದಿಕೆಯ ಮೇಲೆ ಮಧ್ಯದಲ್ಲಿ ಸಭಾಧ್ಯಕ್ಷರಿಗಾಗಿ ಸೋಫಾ ಹಾಕಿತ್ತು. ಅಧ್ಯಕ್ಷರ ಅಕ್ಕಪಕ್ಕಗಳಲ್ಲಿ ಕುರ್ಚಿಯ ಮೇಲೆ ಪಕ್ಷ ಪ್ರತಿಪಕ್ಷಗಳ ಭಾಷಣಕಾರರು ಸಿದ್ಧರಾಗಿ ಕುಳಿತಿದ್ದರು. ಸಂಘದ ಅಧ್ಯಕ್ಷರೇ ಅಂದಿನ ಸಭಾಧ್ಯಕ್ಷರು; ಅವರು ಇನ್ನೂ ಸಭೆಗೆ ಬಂದಿರಲಿಲ್ಲ. ವಿದ್ಯಾರ್ಥಿಗಳೆಲ್ಲ ಒಬ್ಬರಿಗೊಬ್ಬರು ಮೆಲುದನಿಯಲ್ಲಿ ಮಾತಾಡಿಕೊಳ್ಳುತ್ತಿದ್ದುದರಿಂದ, ಸಭೆಯಲ್ಲಿ ಗುಜುಗುಜು ಎನ್ನುತ್ತಿತ್ತು.

ಸಭಾಪ್ರಾರಂಭದ ಕಾಲ ಬಂತು; ಗುಜುಗುಜು ಶಬ್ದದಲ್ಲಿ ಆರು ಗಂಟೆ ಹೊಡೆದದ್ದು ಯಾರಿಗೂ ಸರಿಯಾಗಿ ಕೇಳಿಸಿರಲಾರದು. ಅಧ್ಯಕ್ಷರು ಯಾವುದೋ ಮಾಯದಲ್ಲಿ ಬಂದು ತಮ್ಮ ಪೀಠವನ್ನಲಂಕರಿಸಿ, ಮೇಜಿನ ಮೇಲಿದ್ದ ಕರೆಗಂಟೆ (call-bell) ಯನ್ನು ನಿರಂತರವಾಗಿ ಒಂದು ನಿಮಿಷ ಕಾಲ ಬಾರಿಸಿದ ಮೇಲೆ ಸಭೆಯ ಗುಲ್ಲು ತಟ್ಟನೆ ನಿಂತು ಶಾಂತ ವಾತಾವರಣ ನೆಲಸಿತು. ಎದುರಿಗೆ ಗೋಡೆಯ ಮೇಲೆ ತೂಗಹಾಕಿದ್ದ ಗೋಡೆ-ಗಡಿಯಾರದ ಟಿಕ್-ಟಿಕ್ ಸದ್ದು ಸ್ಪಷ್ಟವಾಗಿ ಕೇಳುವಂತಾಯಿತು. ಕಾರ್ಯದರ್ಶಿ ವೇದಿಕೆಯ ಮೇಲೆ ನಿಂತು ಕಾರ್ಯಕ್ರಮವಿವರವನ್ನು ಸಭೆಗೆ ತಿಳಿಯಪಡಿಸಿ, ಸಭಾಕಾರ್ಯವನ್ನು ನಡಸಿಕೊಡಬೇಕೆಂದು ಅಧ್ಯಕ್ಷರನ್ನು ಬೇಡಿಕೊಂಡರು. ಅಧ್ಯಕ್ಷರು ಸಭಾಕಾರ್ಯವನ್ನು ಪ್ರಾರಂಭಿಸಿ, ವಿಷಯವನ್ನು ಚರ್ಚೆಗಿಡುವಂತೆ ಸುಂದರಮೂರ್ತಿಯನ್ನು ಕೋರಿದರು.

ಸುಂದರಮೂರ್ತಿ ಎದ್ದು ಬಂದು ವೇದಿಕೆಯ ಮುಂಭಾಗದಲ್ಲಿ ನಿಂತ.

ಲಕ್ಷ್ಮೀಪತಿಯ ಸಹಾಯದಿಂದ ಬರೆದಿಟ್ಟುಕೊಂಡಿದ್ದ ಭಾಷಣದ ಪ್ರತಿಯನ್ನು ಮೆಲ್ಲನೆ ಜೇಬಿನಿಂದ ತೆಗೆದು ಕೈಲಿ ಹಿಡಿದುಕೊಂಡ. ಸಭೆಯಲ್ಲಿ ಹಲಕೆಲವರು "ಓ" ಎಂದು ಕೂಗಿಕೊಂಡರು. ಅಧ್ಯಕ್ಷರು ಗಂಟೆ ಬಾರಿಸಿದ ಮೇಲೆ ಸದ್ದಡಗಿತು.

ಸುಂದರಮೂರ್ತಿ—"ಅಧ್ಯಕ್ಷರೇ, ಮೊದಲು ವಿಷಯಕ್ಕೆ ಸಂಬಂಧ ಪಡದ ಎರಡು ಮಾತುಗಳನ್ನು ಅರಿಕೆಮಾಡಿಕೊಳ್ಳುತ್ತೇನೆ; ಅಪ್ಪಣೆ ಕೊಟ್ಟು ಲಾಲಿಸಬೇಕು" ಎಂದ. (ಈ ವಾಕ್ಯವನ್ನು ಸಹ ಬರೆದುಕೊಂಡೇ ಬಂದಿದ್ದ!) ಅಧ್ಯಕ್ಷರು ನಸುನಗೆ ನಕ್ಕು ತಲೆಯಲ್ಲಾಡಿಸಿ ಸಮ್ಮತಿ ಸೂಚಿಸಿದರು. ಸುಂದರಮೂರ್ತಿ ಓದನ್ನು ಮುಂದುವರಿಸಿ: "ನಾನು ವೇದಿಕೆಯ ಮೇಲೆ ನಿಂತು, ಅದರಲ್ಲೂ ಕನ್ನಡದಲ್ಲಿ, ಮಾತಾಡುವುದು ಇದೇ ಮೊದಲು. ನನ್ನ ವಾಗ್ಝರಿಯಿಂದ ಸಭೆಯ ಮನವೊಲಿಸಿಕೊಳ್ಳುತ್ತೇನೆಂಬ ನಂಬಿಕೆ ನನಗಿಲ್ಲ. ಆ ಕೆಲಸವನ್ನು ಪ್ರತಿಪಕ್ಷದ ಮಾನ್ಯ ಮುಖಂಡರಿಗೆ ಬಿಟ್ಟಿದ್ದೇನೆ. (ಆಗ ವಿಶ್ವನಾಥಶಾಸ್ತ್ರಿ ಸಭೆಯ ಕಡೆ ತಿರುಗಿ ತನ್ನ ಕರ್ಮ್ಮಾಗ-ನೈದಿಲೆ ಅರಳಿದುದನ್ನು ಸಭೆಗೆ ಪ್ರದರ್ಶನ ಮಾಡಿದನು. ಸಭೆ ಕರತಾಡನ ಮಾಡಿತು!) ಆದರೆ, ಪ್ರತಿಪಕ್ಷದ ವಾಗ್ಬಾಣಗಳನ್ನು ನಿಸ್ತೇಜಗೊಳಿಸುವಂಥ ವಾಗ್ಬಾಣಗಳನ್ನು ಬಿಡಲಿಲ್ಲ. ವಾಗ್ಯೋಧರು ನನ್ನ ಕಡೆಯಲ್ಲೂ ಇದ್ದಾರೆ. ಅಲ್ಲದೆ, ನಾನು ಸೂಚಿಸಲಿರುವ ವಿಷಯ ಬಹು ಗಹನವಾದದ್ದು, ಮುಖ್ಯವಾದದ್ದು. ಅದು ವಿವಾದಾಸ್ಪದವೆಂಬುದನ್ನು ಬೇರೆಯಾಗಿ ಹೇಳಲೇಬೇಕಾಗಿಲ್ಲ. ಈ ಚರ್ಚಾಕೂಟದಲ್ಲಿ ವಿಷಯ ಗೆದ್ದರೇನು, ಬಿದ್ದರೇನು? ಇದೊಂದು ತಮಾಷೆ ಎಂಬ ಭಾವ ಸಲ್ಲದು. ವಿಷಯ ಗೆದ್ದರೆ ಪ್ರಗತಿಶೀಲರಾದ ವಿದ್ಯಾರ್ಥಿಗಳ ಮನೋಭಾವವೇನೆಂಬುದು ಸಾರ್ವಜನಿಕರಿಗೆ ತಿಳಿದೀತು; ಜನಸಾಮಾನ್ಯದ ಮನೋಧರ್ಮ ಬದಲಾಗಲು ಸ್ವಲ್ಪಮಟ್ಟಿಗೆ ಸಹಾಯಕವಾದೀತು; ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುವ ನಮ್ಮ ತೀರ್ಮಾನವನ್ನು ನೋಡಿ, ಅಸ್ಪೃಶ್ಯತಾ ನಿವಾರಣೆಯನ್ನೇ ತಮ್ಮ ಜೀವನದ ಪರಮಧ್ಯೇಯಗಳಲ್ಲಿ ಒಂದನ್ನಾಗಿ ಇಟ್ಟುಕೊಂಡಿರುವ ಮಹಾತ್ಮರ ಆತ್ಮ ನಲಿದೀತು. ಆದ್ದರಿಂದ, ಈ ವಿಷಯಕ್ಕೆ ಎಲ್ಲರೂ ತಮ್ಮ ಸಂಪೂರ್ಣ ಸಹಾನುಭೂತಿಯ ಬೆಂಬಲ ಕೊಡಬೇಕೆಂದು ಮೊದಲೇ ಬೇಡಿಕೊಂಡು ವಿಷಯವನ್ನು ಸಭೆಯ ಮುಂದೆ

ಚರ್ಚೆಗೆ ಇಡುತ್ತೇನೆ." ಇಷ್ಟು ಓದಿದಮೇಲೆ ಸುಂದರನಿಗೆ ಸ್ವಲ್ಪ ಧೈರ್ಯ ಬಂದಿತು; ಗಂಟಲು ಬಿಟ್ಟಿತು; ಬರೆದಿದ್ದ ಭಾಷಣ ಅವನ ಕಂಠಗತ ವಾಗಿರದಿದ್ದರೂ ಅದರ ವಿಷಯ ಸ್ಥೂಲದಲ್ಲಿ ಹೃದ್ಗತವಾಗಿದ್ದುದರಿಂದ, ಓದನ್ನು ನಿಲ್ಲಿಸಿ ಭಾಷಣ ಮಾಡುವುದಾಗಿ ನಿಶ್ಚಯಿಸಿದ; ನಿಶ್ಚಯಿಸಿ, ಬರೆದದ್ದನ್ನು ಮೇಜಿನ ಮೇಲೆ ಇಟ್ಟ; ಮೊದಮೊದಲು ಸ್ವಲ್ಪ ತಡವರಿಸಿದ, ಅಷ್ಟೆ; ಬರಬರುತ್ತ ಮನೆಮಾತಿನ ಶೈಲಿಯಲ್ಲಿ, ಸರಳವಾದ ಭಾಷೆಯಲ್ಲಿ, ಎಲ್ಲರ ಮನಮುಟ್ಟುವಂತೆ ಸುಮಾರು ಇಪ್ಪತ್ತು ನಿಮಿಷಕಾಲ ಭಾಷಣ ಮಾಡಿದ. ಸುಂದರಮೂರ್ತಿ ಹೇಳಿದ್ದು ನೆರೆದಿದ್ದ ಬಹುಮಂದಿಗೆ ಸಮಂಜಸ ವಾಗಿ ತೋರಿತು; "ವರ್ಣಾಶ್ರಮ ಧರ್ಮಗಳು ಸಮಾಜದ ಎಲ್ಲ ವ್ಯಕ್ತಿಗಳ ಕೆಲಸ ಕಾರ್ಯದ ಹಂಚಿಕೆಯ ಸೌಕರ್ಯಕ್ಕಾಗಿ ಏರ್ಪಟ್ಟುದು; ಯಾರೂ ಮಾಡಲೊಪ್ಪದೆ ಉಳಿದ, ಆದರೂ ಸಮಾಜದ ಸುಸ್ಥಿತಿಗೆ ಅತ್ಯಗತ್ಯವಾದ ಕೀಳೆನಿಸಿದ ಕೆಲಸವನ್ನು ಮಾಡಿದ ಮಾತ್ರಕ್ಕೆ ಅವರು ಕೀಳಾದರೆ? ಅವರು ಮದ್ಯಪಾನ, ಮಾಂಸಭಕ್ಷಣ ಮಾಡುತ್ತಿರಬಹುದು, ನಿಜ. ವರ್ಣಾಶ್ರಮಕ್ಕೆ ಸೇರಿದವರು ಎಷ್ಟು ಮಂದಿ ಮದ್ಯಪಾನ ಮಾಡುವುದಿಲ್ಲ, ಮಾಂಸ ತಿನ್ನುವುದಿಲ್ಲ? ಅವರನ್ನು ನಾವು ಸಮಾಜಬಾಹಿರರನ್ನಾಗಿ ಮಾಡಿದ್ದೇವೆಯೇ? ಮಾಂಸಾಹಾರಿಗಳಾದ ಕ್ರೈಸ್ತಮತೀಯರನ್ನೂ ಮುಸಲ್ಮಾನರನ್ನೂ ಪುರಸ್ಕರಿಸಿ, ಇವರನ್ನು ತಿರಸ್ಕರಿಸಲು ಇವರು ಮಾಡಿದ ಪಾಪವೇನು? ಕೆಲವು ಕಡೆ ಬ್ರಾಹ್ಮಣರು ಮೀನು ತಿನ್ನುತ್ತಾರೆ; ಬಂಗಾಲದಲ್ಲಿ ಅವರು ಮಾಂಸವನ್ನೂ ತಿನ್ನುತ್ತಾರಂತೆ ಪಂಚಮರಿಗೆ ವಿದ್ಯೆಯ ಬೆಳಕನ್ನು ಕೊಡದೆ, ಅಜ್ಞಾನಾಂಧಕಾರದಲ್ಲಿ ಅವರು ತೊಳಲುತ್ತಿರಬೇಕಾದರೆ ಅದಕ್ಕೆ ಹೊಣೆ ಯಾರು? ನಾವೇ ಅಲ್ಲವೆ? ಇವರನ್ನು ನಾವು ಹೀಗೆ ಕಡೆಗಣಿಸುತ್ತಿರುವುದರಿಂದಲೇ ಅಲ್ಲವೆ ನಮ್ಮ ದೇಶದಲ್ಲಿ ದೇಶೀಯ ಕ್ರಿಶ್ಚಿಯನ್ನರ ಸಂಖ್ಯೆ ದಿನದಿನಕ್ಕೆ ಬೆಳೆಯುತ್ತ ಬಂದು ಹಿಂದೂ ಸಮಾಜ ಬಲಹೀನವಾಗುತ್ತಿದ್ದು, ಪ್ರಪಂಚದ ದೃಷ್ಟಿಯಲ್ಲಿ ನಗೆಗೀಡಾಗಿರುವುದು? ಇಷ್ಟಕ್ಕೂ ಹೊಲೆಯರು ಯಾರು? ಈ ಪ್ರಶ್ನೆಗೆ ಉತ್ತರ ಶ್ರೀ ಪುರಂದರದಾಸರ ಒಂದು ಕೃತಿಯಲ್ಲಿ ಅಡಕವಾಗಿದೆ; "ಹೊಲೆಯ ಹೊರಗಿಹನೆ, ಊರೊಳಗಿಲ್ಲವೆ?"

ಶ್ರೀ ಹರಿಯ ಸ್ಮರಣೆಯನು ಎಲ್ಲವರು ಪೇಳಿ.
ಶೀಲವನು ಕೈಕೊಂಡು ನಡಸದಾತನೆ ಹೊಲೆಯ
ಹೇಳಿದ ಹರಿಕಥೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ
ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ
ಲಂಡತನದಲಿ ನಡೆವ ಭಂಡ ಹೊಲೆಯ
ಉಂಡಮನೆಗೆರಡನ್ನು ಬಗೆವಾತನೇ ಹೊಲೆಯ
ಹೆಂಡತಿಯ ಇಚ್ಛೆಯುವ ಹೇಡಿ ಹೊಲೆಯ
ಇದ್ದಾಗ ದಾನಧರ್ಮವ ಮಾಡದವ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ
ಬದ್ಧವಾದ ನಯನುಡಿಯು ಇಲ್ಲದಾತನೆ ಹೊಲೆಯ
ಶುದ್ಧ ತಾನೆಂಬಾತ ಶುಂಠ ಹೊಲೆಯ.
ಆಸೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ
ಲೇಸು ಉಪಕಾರಗಳ ಮಾಡದವ ಹೊಲೆಯ
ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ
ಹುಸಿಯ ಬಗುಳುವನೊಬ್ಬ ಹುಚ್ಚು ಹೊಲೆಯ
ಅರಿತು ಆಚಾರವನು ನಡಸದಾತನೆ ಹೊಲೆಯ
ಪರಸತಿಗೆ ಅಳುಪಿದವ ಪಾಪಿ ಹೊಲೆಯ
ಗುರುಹಿರಿಯರನು ಕಂಡು ನಮಿಸದಾತನೆ ಹೊಲೆಯ
ಪುರಂದರವಿಠಲನ ನೆನೆಯದವ ಹೊಲೆಯ.

ಆದ್ದರಿಂದ ನಾವು ಮೇಲು ಅವರು ಕೀಳು ಎಂಬ ಭಾವ ಸಲ್ಲದು. ಅವರಲ್ಲಿರುವ ಕುಂದುಕೊರತೆಗಳನ್ನು ತಿದ್ದಿ ಅವರನ್ನು ಮೇಲಕ್ಕೆತ್ತಬೇಕಾದದ್ದು ನಮ್ಮ ಕರ್ತವ್ಯ.''

ಸುಂದರಮೂರ್ತಿ ಮಾತಾಡಿ ಕುಳಿತ ಮೇಲೆ ವಿಶ್ವನಾಥಶಾಸ್ತ್ರಿ ಎದ್ದು, ತೆನ್ನಾಲಿ ರಾಮಕೃಷ್ಣ ಕರಿಯ ನಾಯಿಯನ್ನು ಬಿಳಿಯ ನಾಯಿಯನ್ನು ಮಾಡಿದ ಕಥೆಯನ್ನು ಹೇಳಿ ಸಭೆಯನ್ನು ನಗೆಯಲ್ಲಿ ತೇಲಿಸಿದ; ಶಾಸ್ತ್ರ

ಪುರಾಣಗಳಲ್ಲಿ ಹೇಳಿರುವ ಚಂಡಾಲರೇ ಈಗಿನ ಅಂತ್ಯಜರೆಂದೂ, ಅಂತ್ಯಜರು ವರ್ಣಾಶ್ರಮಧರ್ಮಕ್ಕೆ ಸೇರಿಲ್ಲವೆಂದೂ ಅವರ ಸಂಗಡ ಪ್ರಾಚೀನಕಾಲದಿಂದಲೂ ಚಾತುರ್ವರ್ಣಬಾಹಿರವಾಗಿ ನೆಲಸಿದೆಯೆಂದೂ ತೋರಿಸುವುದಕ್ಕೆ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿದ. ಅಸ್ಪೃಶ್ಯ ರೊಡನೆ ಬೆರೆಯುವುದರಿಂದ ಆರ್ಯಧರ್ಮ ಕಳಂಕಿತವಾಗುತ್ತದೆಂದೂ, ಸಮಾಜದ ತಳಪಾಯವೇ ಕುಸಿದುಬೀಳುವುದೆಂದೂ ದೀರ್ಘವಾಗಿ ವಾದಿಸಿದ. ಇವನ ವಾಗ್ಝರಣೆಗೂ, ಯುಕ್ತಿವಾದಕ್ಕೂ ಸಭೆ ಮೆಚ್ಚಿ ತಲೆದೂಗುತ್ತಿತ್ತು. ತನ್ನ ಭಾಷಣ ಮುಗಿದ ಮೇಲೆ ವಿಶ್ವನಾಥಶಾಸ್ತ್ರಿ ಒಂದು ಬಗೆಯ ಗೆಲವಿನ ಭಾವದಿಂದ ಕಾಲಮೇಲೆ ಕಾಲು ಹಾಕಿಕೊಂಡು, ಆಗಿಂದಾಗ್ಗೆ ಸಭಿಕರ ಕಡೆಗೆ ತಿರುಗಿ ನೋಡುತ್ತ ಕುಳಿತಿದ್ದ.

ಬಳಿಕ, ಲಕ್ಷ್ಮೀಪತಿ ಎದ್ದು ನಿಂತು, ವಿಶ್ವನಾಥಶಾಸ್ತ್ರಿಯ ವಾದವನ್ನೆಲ್ಲ ಚಿಕ್ಕದಾದರೂ ಸ್ಫೂರ್ತಿದಾಯಕವಾದ ಭಾಷಣವೊಂದರಲ್ಲಿ ಖಂಡಿಸಿ, ಸಭೆಯ ಕರತಾಡನದ ಮಧ್ಯೆ ಬೆವತ ಮುಖವನ್ನು ಒರಸಿಕೊಳ್ಳುತ್ತ ಕುಳಿತ.

ಇನ್ನುಳಿದವರ ಭಾಷಣಗಳು ಸ್ವಲ್ಪಹೊತ್ತಿನಲ್ಲೆ ಮುಗಿದುಹೋದುವು; ಸಭಿಕರ ಮನಸ್ಸಿನ ಮೇಲೆ ಅಷ್ಟಾಗಿ ಪರಿಣಾಮವನ್ನೂ ಉಂಟುಮಾಡಲಿಲ್ಲ. ಸಭಿಕರಲ್ಲಿ ಕೆಲವರು ವಿಷಯದ ಪರವಾಗಿಯೂ ವಿರೋಧವಾಗಿಯೂ ಮಾತಾಡಿದ ಮೇಲೆ ಅಧ್ಯಕ್ಷರು ವಿಷಯವನ್ನು ಸಭೆಯ ಅಭಿಮತಕ್ಕೊಡ್ಡಿದರು. ವಿಷಯ ಬಹುಮತದಿಂದ ಅಂಗೀಕೃತವಾಯಿತು. ಅಧ್ಯಕ್ಷರು ವಿಷಯ ಅಂಗೀಕೃತವಾದದ್ದಕ್ಕಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ, ಬರಿಯ ಉಪನ್ಯಾಸಗಳಿಂದ ಪ್ರಯೋಜನವಿಲ್ಲವೆಂದೂ, ಬೇಸಗೆಯ ರಜಾ ಕಾಲಗಳಲ್ಲಿ ವಿದ್ಯಾರ್ಥಿಗಳು ಅಂತ್ಯಜರ ಉದ್ಧಾರಕಾರ್ಯದಲ್ಲಿ ತೊಡಗಬೇಕೆಂದೂ, ಅವರ ದುರಭ್ಯಾಸಗಳು ನಿಲ್ಲುವಂತೆ ಮಾಡಿ ಅವರು ನಮ್ಮೊಡನೆ ಸರಿಸಮಾನರಾಗಿ ಇರಲು ಅವರನ್ನು ಯೋಗ್ಯರನ್ನಾಗಿ ಪರಿವರ್ತಿಸಬೇಕೆಂದೂ, ಈ ಭಾಗದಲ್ಲಿ ಸುಂದರಮೂರ್ತಿ ಇತರ ವಿದ್ಯಾರ್ಥಿಗಳಿಗೆ ಮಾದರಿಯಾಗಿ ಕೆಲಸ ಮಾಡುವನೆಂದು ತಾವು ದೃಢವಾಗಿ ನಂಬಿರುವುದಾಗಿಯೂ ಹೇಳಿ ಸಭೆಯನ್ನು ಮುಕ್ತಾಯಗೊಳಿಸಿದರು.

೪

ಚರ್ಚೆ ಮುಗಿದ ಕೂಡಲೆ ರಾತ್ರಿ ರಾಚಪ್ಪನನ್ನು ಬಲವಂತ ಮಾಡಿ ತಾನು ಊಟಮಾಡುವ ಹೋಟೆಲಿಗೆ ಊಟಕ್ಕೆ ಕರೆದುಕೊಂಡು ಹೋದ. ಸಹಪಂಕ್ತಿಭೋಜನ ಹರಿಜನೋದ್ಧಾರ ಕಾರ್ಯಕ್ಕೆ ಅವಶ್ಯವೇ ಅಲ್ಲವೇ ಎಂಬ ವಿಚಾರ ಕುರಿತು ಅವನು ಯೋಚನೆ ಮಾಡಿರಲಿಲ್ಲ. ಈ ಬಗ್ಗೆ ಗಾಂಧಿಯವರ ಅಭಿಪ್ರಾಯ ಏನು ಎಂಬುದನ್ನು ತಿಳಿದುಕೊಳ್ಳುವುದಕ್ಕೂ ಪ್ರಯತ್ನಪಟ್ಟಿರ ಲಿಲ್ಲ. ಇಂಥ ಸುಧಾರಣೆಯ ಕ್ಷೇತ್ರಕ್ಕೆ ಕಾಲಿಡುವ ಯುವಕನೊಬ್ಬನು ಹೊಸ ಹುರುಪಿನಲ್ಲಿ ತಾನು ಎಲ್ಲವನ್ನೂ ಮಾಡಿ ತೋರಿಸಿಬಿಡಬೇಕೆಂದು ಬಯಸುವುದು ತೀರ ಸಹಜ. ಆದ್ದರಿಂದ ರಾಚಪ್ಪನನ್ನು ಊಟಕ್ಕೆ ಕರೆದದ್ದರಲ್ಲಿ ಸುಂದರ ತನ್ನ ವಿಚಾರಬುದ್ಧಿಯನ್ನು ಉಪಯೋಗಿಸಿಯೇ ಇರಲಿಲ್ಲ.

ಹೋಟಲಿನಲ್ಲಿ ಅವರು ಊಟಕ್ಕೇಳುವಷ್ಟರೊಳಗಾಗಿ ಯಾವನೋ ಒಬ್ಬ ವಿದ್ಯಾರ್ಥಿ, ರಾಚಪ್ಪ 'ಆದಿಕರ್ಣಾಟಕ' ಎಂಬುದನ್ನು ಹೋಟಲಿನ ಒಡೆಯನಿಗೆ ತಿಳಿಸಿಬಿಟ್ಟಿದ್ದ. ಮೊದಲು, ರಾಚಪ್ಪನಿಗೆ ಊಟಕ್ಕೆ ಬಡಿಸುವು ದಿಲ್ಲವೆಂಬುದಾಗಿ ಯಜಮಾನ ಹಟ ಹಿಡಿದ. ಸುಂದರಮೂರ್ತಿ, ಊಟ ಮಾಡುವವರು ಒಪ್ಪಿದರೆ ಅಭ್ಯಂತರವೇನೆಂದು ಕೇಳಿದ.

ಅಲ್ಲಿ ಸುಂದರಮೂರ್ತಿಯ ಗೆಳೆಯರು ನಾಲ್ಕಾರು ಮಂದಿ ಊಟಕ್ಕಾಗಿ ಕಾದು ನಿಂತಿದ್ದರು. ಹೋಟಲಿನ ಯಜಮಾನ ಅವರನ್ನು ಕುರಿತು— "ಏನ್ರೀ? ನೀವು ಹೇಳಿ. ಸುಂದರಮೂರ್ತಿಗಳು ತಮ್ಮ ಜೊತೆ ಕರೆದು ಕೊಂಡು ಬಂದಿರುವ ಹೊಲೆಯನ ಜೊತೆ ನೀವು ಊಟ ಮಾಡುತ್ತೀರಾ?" ಎಂದು ಕೇಳಿದ.

ಸುಂದರಮೂರ್ತಿಗೆ ರೇಗಿತು. "ಏನ್ರೀ ಭಟ್ಟರೆ, ಹೊಲೆಯ ಗಿಲೆಯ ಎನ್ನುತ್ತೀರಿ? ಆತನಿಗೆ ಹೆಸರಿಲ್ಲವೆ?"

"ಯಾರೂ ಆತನ ಹೆಸರು ಹೇಳಲಿಲ್ಲ. ಅವರು ಹೊಲೆಯರು ಎಂದು ಅಷ್ಟು ಮಾತ್ರ ಹೇಳಿದರು. ಹೆಸರು ಗೊತ್ತಿದ್ದರೆ ಹೆಸರು ಹಿಡಿದೇ ಕೂಗು ತ್ತಿದ್ದೆ. ಹೋಗಲಿ, ಆ ವಿಚಾರ ಇರಲಿ. ನಿಮ್ಮ ಸ್ನೇಹಿತರನ್ನು ಕೇಳಿ, ಅವರು ಒಪ್ಪುತ್ತಾರೆಯೊ?"

ಸುಂದರ ತನ್ನ ಮಿತ್ರರನ್ನು ಕೇಳಿದ; ಅವರೆಲ್ಲ ಉತ್ತರ ಕೊಡಲು ಹಿಂದು ಮುಂದು ನೋಡುತ್ತ ನಿಂತಿರಲು, ಅವರಲ್ಲೊಬ್ಬ ಇತರರ ಪರವಾಗಿ ಬಾಯಿಬಿಟ್ಟ:

" ಅದು ಹೇಗೆ ಸಾಧ್ಯ ಸುಂದರಮೂರ್ತಿ ? ರಾಚಪ್ಪ ಒಳ್ಳೆಯವರು ; ನಮ್ಮ ಹಾಗೆಯೇ ವಿದ್ಯಾವಂತರು, ಶುಭ್ರವಾಗಿದ್ದಾರೆ. ಆದರೂ....ನಾವು ಬ್ರಾಹ್ಮಣರು....ಏಷ್ಟಾದರೂ ಮನಸ್ಸು ಒಪ್ಪುವುದಿಲ್ಲ ನೋಡಿ...."

" ಇದು ನಿಮ್ಮೊಬ್ಬರ ಅಭಿಪ್ರಾಯವೋ,– ಇಲ್ಲ ಎಲ್ಲರ ಅಭಿಪ್ರಾಯವೋ ? " ಎಂದು ಸುಂದರಮೂರ್ತಿ ಕೇಳಿದ.

" ವೆಂಕಟಕೃಷ್ಣಯ್ಯ ನಮ್ಮ ಪರವಾಗಿ ಮಾತಾಡಿದ್ದಾರಲ್ಲ; ಇನ್ನು ನಮ್ಮ ಅಭಿಪ್ರಾಯ ಬೇರೆ ಯಾವುದಿದೆ ?.... ಇದೊಂದು ವಿಚಾರದಲ್ಲಿ ನಮ್ಮನ್ನು ಕ್ಷಮಿಸಿಬಿಡಿ " ಎಂದು ಮತ್ತೊಬ್ಬ ಮಾತಾಡಿದ. ' Certainly ' ( ನಿಶ್ಚಯವಾಗಿಯೂ ) ಎಂದು ಇನ್ನೊಬ್ಬ ದನಿಗೂಡಿಸಿದ.

" ನೀವೆಲ್ಲ ಇವೊತ್ತು ವಿಷಯದ ಪರವಾಗಿ ಅಭಿಮತ ಕೊಟ್ಟವರಲ್ಲವೆ ? " ಎಂದು ಸುಂದರಮೂರ್ತಿ ಹಂಗಿಸುವ ದನಿಯಲ್ಲಿ ಗೆಳೆಯರನ್ನು ಕುರಿತು ಪ್ರಶ್ನಿಸಿದ.

" ಹೊತ್ತಾಯಿತು ; ಹೊಟ್ಟೆ ತಾಳಹಾಕುತ್ತಿದೆ; ಇಲ್ಲೂ ಬಂದೆಯಾ ಜಡೆಶಂಕರಾ ಅಂತ. ಇದೆಲ್ಲಿಯ ಒಣಚರ್ಚೆ ? ಊಟಕ್ಕೆ ಹೋಗೋಣ ಬನ್ನಿ " ಎಂದು ವೆಂಕಟಕೃಷ್ಣಯ್ಯ ಊಟದ ನಡುಮನೆಯೊಳಕ್ಕೆ ಹೋದರು. ಉಳಿದ ಗೆಳೆಯರು ಮೌನವಾಗಿ ಅವನನ್ನು ಹಿಂಬಾಲಿಸಿದರು.

ಹೋಟಲಿನ ಅಂಗಳದೊತ್ತಿನ ಕೈಸಾಲೆಯಲ್ಲಿ ಬ್ರಾಹ್ಮಣೇತರರ ಊಟಕ್ಕಾಗಿ ಪ್ರತ್ಯೇಕವಾಗಿಟ್ಟಿದ್ದ ಕೋಣೆಯೊಂದಿತ್ತು. ಅಲ್ಲಿಯಾದರೂ ಊಟ ಮಾಡಬಹುದೇ ಎಂಬುದಾಗಿ ಸುಂದರ ಯಜಮಾನನನ್ನು ಕೇಳಿದ. ಅದಕ್ಕೆ ಯಜಮಾನ —

" ಸ್ವಾಮಿ, ಒಂದು ವೇಳೆ ಬ್ರಾಹ್ಮಣರಾದ ನಾವಾದರೂ ನಿಮ್ಮ ಸ್ನೇಹಿತರನ್ನು ಪಂಕ್ತಿಗೆ ಸೇರಿಸಿಕೊಂಡೇವು. ಆದರೆ, ಆ ಕೋಣೆಗೆ ಬರುವವರಿಗೆ ನಿಮ್ಮ ಸ್ನೇಹಿತರು ಯಾವ ಜಾತಿ ಎನ್ನುವುದು ಗೊತ್ತಾದರೆ ಅವರನ್ನೂ ಜೀವದಿಂದ ಉಳಿಸುವುದಿಲ್ಲ; ನಿಮ್ಮನ್ನೂ ಜೀವದಿಂದ ಉಳಿಸುವು

ದಿಲ್ಲ: ಸುಮ್ಮನೆ ನಾನು ಹೇಳಿದ ಹಾಗೆ ಕೇಳಿ: ನಿಮ್ಮ ಸ್ನೇಹಿತರಿಗೆ ಇಲ್ಲಿ ಕೈಸಾಲೆಯಲ್ಲಿ ಬಡಿಸುವುದಕ್ಕೆ ಏರ್ಪಾಡು ಮಾಡುತ್ತೇನೆ; ಹೇಗಿದ್ದರೂ ಇಲ್ಲಿಯ ವರೆಗೆ ನೀವು ಕರೆದುಕೊಂಡು ಬಂದುಬಿಟ್ಟಿದ್ದೀರಿ, ಪರವಾಯಿಲ್ಲ. ನೀವು ಒಳಕ್ಕೆ ಬಂದು ಊಟಮಾಡಿಕೊಂಡು ಹೋಗಿ" ಎಂದ. ಗಿರಾಕಿ ಕಳೆದುಕೊಳ್ಳಲು ಇಷ್ಟವಿಲ್ಲದೆ ಹೋಟಲ್ ಯಜಮಾನ ವ್ಯವಹಾರ್ಯವಾದ ಒಂದು ಮಾರ್ಗವನ್ನು ಸೂಚಿಸಿದ್ದ.

"ಪರವಾಯಿಲ್ಲ, ನಾನೂ ನನ್ನ ಸ್ನೇಹಿತರ ಜೊತೆಯೇ ಕುಳಿತು ಊಟ ಮಾಡುತ್ತೇನೆ. ನನಗೂ ಇಲ್ಲಿಯೇ ಬಡಿಸುವ ಹಾಗೆ ಹೇಳಿ, ಎಲೆ ಹಾಕಿಸಿ" ಎಂದು ಸುಂದರಮೂರ್ತಿ ಹೇಳಿದ.

ಅಂತೆಯೇ, ಸುಂದರಮೂರ್ತಿಗೂ ರಾಚಪ್ಪನಿಗೂ ಕೈಸಾಲೆಯಲ್ಲಿ ಊಟವಾಯಿತು. ಒಳಕ್ಕೆ ಊಟಕ್ಕೆ ಹೋಗಿದ್ದ ಗೆಳೆಯರು ಹೊರಕ್ಕೆ ಬಂದಾಗ ಇಬ್ಬರೂ ಊಟಕ್ಕೆ ಕುಳಿತುಕೊಂಡಿದ್ದುದನ್ನು ನೋಡಿದರು. ಅವರುಗಳು ಹೊರಕ್ಕೆ ಹೋಗುತ್ತ ಇರಲು. ಅವರಲ್ಲಿ ಒಬ್ಬನು "ಹುಚ್ಚು, ಹುಚ್ಚು!" ಎಂದದ್ದು ಸುಂದರನಿಗೆ ಕೇಳಿಸಿತು. ತನ್ನನ್ನೇ ಉದ್ದೇಶಿಸಿ ಅಂದಿರ ಬಹುದೆಂದು ಸುಂದರ ಬಗೆದು, "ನನ್ನ ಹುಚ್ಚು ಅವರಿಗೂ ಹಿಡಿಯ ಬಾರದೆ?" ಎಂದುಕೊಂಡ.

೫

ಸುಂದರ ರಾಚಪ್ಪನನ್ನು ಬೀಳ್ಕೊಂಡು ತನ್ನ ಕೊಠಡಿಗೆ ಹಿಂದಿರುಗು ವಷ್ಟರೊಳಗಾಗಿ ಒಂದು ದೊಡ್ಡ ಅನಿರೀಕ್ಷಿತ ಘಟನೆ ನಡೆದುಹೋಗಿತ್ತು. ವೆಂಕಟಕೃಷ್ಣಯ್ಯ ಸುಂದರನ ಕೊಠಡಿಗೆ ಹೋಗಿ, ಅಲ್ಲಿ ವಿಶ್ವನಾಥಶಾಸ್ತ್ರಿಗೆ ನಡೆದ ಸಮಾಚಾರವನ್ನೆಲ್ಲ ವರದಿ ಮಾಡಿಬಿಟ್ಟಿದ್ದನು. ವಿಶ್ವನಾಥಶಾಸ್ತ್ರಿ ಎರಡನೆಯ ಯೋಚನೆಯನ್ನೇ ಮಾಡದೆ, ತನ್ನ ಹಾಸಿಗೆ ಬಟ್ಟೆಬರೆ ಪುಸ್ತಕ ಗಳು ಮುಂತಾದುವನ್ನೆಲ್ಲ ತೆಗೆದುಕೊಂಡು ಪಕ್ಕದಲ್ಲಿದ್ದ ಕೃಷ್ಣಭಟ್ಟನ ಕೊಠ ಡಿಗೆ ವಲಸೆ ಹೋದನು. ಭಟ್ಟರು ಬಹು ಸಂತೋಷದಿಂದ ಶಾಸ್ತ್ರಿಗಳಿಗೆ ಆಶ್ರಯವಿತ್ತರು; ಈ ಕೆಲಸವನ್ನು ಹಿಂದೆಯೇ ಮಾಡಬಾರದಾಗಿತ್ತೆ ಎಂದು ಆಕ್ಷೇಪಣೆಯನ್ನೂ ಮಾಡಿದರು.

ಸುಂದರ ತನ್ನ ಕೊಠಡಿಗೆ ಹಿಂದಿರುಗಿದಾಗ ಕೊಠಡಿಗೆ ಬೀಗ ಹಾಕಿತ್ತು. ಸುಂದರನಿಗೆ ಆಶ್ಚರ್ಯವಾಯಿತು; ವಿಶ್ವನಾಥ ಎಂದೂ ಹಾಗೆ ರಾತ್ರಿ ಹೊತ್ತಿನಲ್ಲಿ ಬೀಗ ಹಾಕಿಕೊಂಡು ಹೊರಗೆ ಹೋಗಿರಲಿಲ್ಲ. ಸುಂದರ ಕೃಷ್ಣಭಟ್ಟನ ಕೊಠಡಿಯ ಬರಿ ಬಾಗಿಲನ್ನು ನೂಕಿ ತಲೆ ಹಾಕಿದ: ಅಲ್ಲಿ ವಿಶ್ವನಾಥಶಾಸ್ತ್ರಿ–ತನ್ನ ಹೃದಯದ ಗೆಳೆಯನೆಂದು ಭಾವಿಸಿದ್ದ ವಿಶ್ವ– ಹಾಸಿಗೆ ಹಾಸಿಕೊಂಡು ಮಲಗಿದ್ದ. ಸುಂದರನಿಗೆ ವಿವರಗಳು ಬೇಗ ಹೊಳೆಯದೆ ಹೋದರೂ, ವಿಶ್ವನಾಥನಿಗೆ ಏನೋ ಅಸಮಾಧಾನವಾಗಿದೆಯೆಂದು ತಟ್ಟನೆ ಹೊಳೆಯಿತು. ಕೇಳಿದ:

“ಏಕೆ, ವಿಶ್ವ, ಇಲ್ಲಿ ಮಲಗಿದ್ದೀ? ಹಾಸಿಗೆ ಬಟ್ಟೆ ಎಲ್ಲ ತಂದು ಬಿಟ್ಟಿದ್ದೀ? ನನಗೆ ಅರ್ಥವಾಗುವುದಿಲ್ಲ.”

ವಿಶ್ವನಾಥ ಮೌನ.

“ನೀನು ನನ್ನ ತೊರೆದುಬಿಟ್ಟೆಯೆಂದು ತಿಳಿಯಲೇನು?”

ಎಷ್ಟು ಹೊತ್ತು ಮೌನ ಸಾಧ್ಯ? ವಿಶ್ವನಾಥ ಬಾಯಿಬಿಟ್ಟ:

“ನಾನು ನಿನ್ನ ತೊರೆಯುವುದಕ್ಕಿಂತ ಮುಂಚೆ ನೀನು ನನ್ನ ತೊರೆದು ಕೊಂಡಿದ್ದೀಯೆ. ನಾನೇನು ಮಾಡಲಿ?” ಎಂದು ಅರ್ಧ ಎದ್ದು ಕುಳಿತ.

“ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ, ವಿಶ್ವ.”

“ನಿನಗೆ ರಾಚಪ್ಪ ಬೇಕಾಯಿತು; ಅವನನ್ನು ಕಟ್ಟಿಕೊಂಡೆ. ನನ್ನನ್ನು ತೊರೆದೆ.”

“ಹೌದು; ನೀವೆಲ್ಲ ನಿರಾಕರಿಸಿದ ರಾಚಪ್ಪನನ್ನ ನಾನು ಕಟ್ಟಿಕೊಂಡೆ; ದಿಟ. ಆದಮಾತ್ರಕ್ಕೆ, ನಿನ್ನನ್ನು ಬಿಟ್ಟಹಾಗಾಯಿತೆ, ತೊರೆದ ಹಾಗಾಯಿತೆ?”

“ನೀನು ರಾಚಪ್ಪನನ್ನು ಏಕೆ ಕಟ್ಟಿಕೊಂಡೆ?”

“ಒಂದು ತತ್ವಕ್ಕಾಗಿ– ಚಿಕ್ಕತನದಿಂದಲೂ ನನ್ನಲ್ಲಿ ಅಂಟಿಕೊಂಡು ಬಂದಿರುವ ಒಂದು ತತ್ವಕ್ಕಾಗಿ.”

“ಹೌದು, ಸುಂದರ. ಹೊಲೆಯರ ಸಹವಾಸ ಚಿಕ್ಕತನದಿಂದಲೂ ನಿನಗೆ ಒಗ್ಗಿಹೋಗಿದೆ; ನಾನು ಮರೆತಿದ್ದೆ.” ಎಂದು ಸರಿಯಾಗಿ ಎದ್ದು ಕುಳಿತು, ನೀಳವಾಗಿ ಉಸಿರೆಳೆದು, ಏನೋ ಕಡೆಯ ನಿರ್ಧಾರದ ಮಾತಾಡುವಂತೆ ಬಿಡಿಸಿ ಬಿಡಿಸಿ ಮಾತಾಡಿದ: “ನಿಮ್ಮ ತೋಟದ ಜೀತದಾಳು

ಮಾದಿಗರ ಮಾದನ ಮಗಳು ಚೆನ್ನಿಯ ಜೊತೆಯೇ ನಿನ್ನಾಟ. ನಾನು ಅದನ್ನು ಎಷ್ಟು ಸಲ ಕಂಡಿರಲಿಲ್ಲ? ಎಷ್ಟು ಸಲ ಅದಕ್ಕಾಗಿ ನಿನ್ನ ತಂದೆ ತಾಯಿ ನಿನ್ನನ್ನು ಗದ್ದರಿಸಿ, ನಿನಗೆ ಸ್ನಾನ ಮಾಡಿಸಿ, ಬೇರೆ ಬಟ್ಟೆ ಹಾಕುತ್ತಿರಲಿಲ್ಲ? ಸ್ವಲ್ಪ ದೊಡ್ಡವನಾದ ಮೇಲೆ ಕೂಡ ನೀನು ಯಾರಿಗೂ ಕಾಣದ ಹಾಗೆ ತೋಟಕ್ಕೆ ಹೋಗಿ ಅಲ್ಲಿ ಚೆನ್ನಿಯ ಜೊತೆ ಆಟವಾಡುತ್ತಿರಲಿಲ್ಲ? ನಾನು ಕಂಡು, ನಿನ್ನ ತಂದೆಗೆ ಚಾಡಿ ಹೇಳುತ್ತೇನೆಂದಾಗ ಎಷ್ಟು ಸಲ ನೀನು ಮಾದನಿಂದ ನನಗೆ ಎಳನೀರು ಕೀಳಿಸಿ ಕೊಡಿಸಿಲ್ಲ? ಇನ್ನೂ ದೊಡ್ಡವನಾದ ಮೇಲೆ ಹಳ್ಳಿ ಬಿಟ್ಟು ಬಂದೆ. ಅವೆಲ್ಲ ಅಲ್ಲಿಗೇ ನಿಂತುಹೋಯಿತು ಎಂದಿದ್ದೆ. ಚೆನ್ನಿಯ ಸಹವಾಸ ಹೋಯಿತು, ರಾಚಪ್ಪನ ಸಹವಾಸ ಬಂತು; ಅಷ್ಟೆ. ಹೊಲೆಯರ ಹುಡುಗರ ಜೊತೆ ಆಟವಾಡುವುದು, ಊಟ ಮಾಡುವುದು ಒಂದು ತತ್ತ್ವವಾಗಿದೆ ನಿನಗೆ. ಇದು ನಿನ್ನಲ್ಲಿ ಒಂದು ತತ್ತ್ವವಾಗಿದೆಯೆಂದು ನಾನು ಎಣಿಸಿರಲಿಲ್ಲ. ಅದನ್ನು ನೀನೇ ಹೇಳಿದ್ದೀಯೆ. ನೀನು ಆ ತತ್ತ್ವವನ್ನೇ ಪಾಲಿಸಬೇಕಾದರೆ ನನ್ನನ್ನು ತೊರೆಯಬೇಕಾಗುತ್ತೆ; ಏಕೆಂದರೆ, ಆ ತತ್ತ್ವ ನಾನು ಒಪ್ಪತಕ್ಕವನಲ್ಲ. ನಾನು ಬೇಕಾದರೆ ತತ್ತ್ವವನ್ನು ಬಿಡಬೇಕು— ಅಂದರೆ ರಾಚಪ್ಪನ ಸಹವಾಸವನ್ನು ಸಂಪೂರ್ಣವಾಗಿ ಬಿಡಬೇಕು. ರಾಚಪ್ಪ ಬೇಕಾದರೆ, ನನ್ನನ್ನು ಬಿಡಬೇಕು. ಬಿಡಬೇಕೇನು, ಬಿಟ್ಟೇ ಇದ್ದೀಯೆ. ಈಗ ನನ್ನ ಮಾತಿನ ಅರ್ಥವಾಯಿತೇ?"

ಸುಂದರ ಸುಮ್ಮನಿದ್ದ.

ವಿಶ್ವನಾಥ ಮುಂದುವರಿಸಿದ: "ಇನ್ನೂ ಮಿಂಚಿಲ್ಲ. ಯೋಚನೆ ಮಾಡು. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಿದ್ದೇ ಇದೆ."

"ವಿಶ್ವನಾಥ, ಈಗ ನಾನು ಮಾಡುತ್ತಿರುವುದೇ ಪ್ರಾಯಶ್ಚಿತ್ತ—ಅದರ ಪ್ರಾರಂಭ—ಪೂರ್ವದಲ್ಲಿ ನಿಮ್ಮಂಥವರು ತಿಳಿದೋ ತಿಳಿಯದೆಯೋ ಮಾಡಿದ ಪಾಪಕ್ಕಾಗಿ. ತಿಳಿದೂ ತಿಳಿದೂ ಆ ಪಾಪವನ್ನು ಮುಂದುವರಿಸುವ ನಿಮ್ಮ ಪಾಪ ಇನ್ನೂ ಘೋರ. ಹೋಗಲಿ, ಈ ವಾದದಿಂದ ಇನ್ನು ಪ್ರಯೋಜನವಿಲ್ಲ. ನನ್ನ ತತ್ತ್ವ ನಾನು ಬಿಡುವಂತಿಲ್ಲ— ನನ್ನ ಪ್ರಾಣ ಹೋದರೂ ಬಿಡುವುದಿಲ್ಲ. ಆದರೆ, ವಿಶ್ವ, ನಾನು ನಿನ್ನ ಗೆಳೆಯನಲ್ಲವೆಂದು ಮಾತ್ರ ತಿಳಿಯಬೇಡ, ಕಂಡೆಯಾ? ನಾನು ಬಿರುಸಿನಿಂದ ಮಾತಾಡಿರುವುವನ್ನೆಲ್ಲ

ಕ್ಷಮಿಸಿಬಿಡು. ಮುಂದೂ ಕೂಡ ನಿನ್ನಲ್ಲಿ ನನಗೆ ಗೆಳೆತನವೇ ಹೊರತು ಹಗೆತನವೆಂದಿಗೂ ಇರಲಾರದು. ನೀನು ಇದೇ ಭಾವವನ್ನಿಟ್ಟುಕೊಳ್ಳಬೇಕು. ವಿಶ್ವ ಮಲಗಿಕೊ, ಇನ್ನು ಹೋಗುತ್ತೇನೆ. ನಮಸ್ಕಾರ, ಕೃಷ್ಣಭಟ್ಟರೆ!" ಎಂದು ಸುಂದರ ಬಾಗಿಲೆಳೆದುಕೊಂಡು ತನ್ನ ಕೊಠಡಿಗೆ ಹಿಂದಿರುಗಿದ. ಗೆಳೆಯರಿಬ್ಬರ ಕಾವಿನ ವಾಗ್ವಾದ ಒಳ್ಳೆಯ ಜೋಗುಳವಾಗಿ ಪರಿಣಮಿಸಿತ್ತು ಕೃಷ್ಣಭಟ್ಟನಿಗೆ. ಅವನು ಮುಸುಕು ಹಾಕಿಕೊಂಡು ಗೊರಕೆಹೊಡೆಯುತ್ತಿದ್ದ.

೬

ವಾಗ್ವಾದ ಮಾಡಿ ಮಲಗಿಕೊಂಡರೆ ಬೇಗ ನಿದ್ದೆ ಹತ್ತುವುದೇ ಇಲ್ಲ; ವಾಗ್ವಾದದ ವಿಷಯಗಳೇ ಮನಸ್ಸಿನಲ್ಲಿ ಕಡೆಯುತ್ತಿದ್ದು ನಿದ್ದೆಯು ಬರವಿಗೆ ತಡೆಯೊಡ್ಡುತ್ತವೆ. ಇತ್ತ ಸುಂದರನಿಗೂ ಹಾಗಾಯಿತು; ಅತ್ತ ವಿಶ್ವನಾಥನಿಗೂ ಹಾಗಾಯಿತು.

ಸುಂದರನ ಆಲೋಚನೆಯು ಎಳೆ ಆ ವಿಷಯ ಈ ವಿಷಯ ಹಿಡಿದು ಬಾಲ್ಯಕ್ಕೆ ಹಿಂದುವರಿಯಿತು. ಇದುವರೆಗೂ ಅಷ್ಟಾಗಿ ಬಾರದಿದ್ದ ಚೆನ್ನಿಯ ನೆನಪು ಬಂದಿತು. ಚೆನ್ನಿಯ ನೆನಪು ಬಂದೊಡನೆ ಹೃದಯ ಏನೋ ಒಂದು ಬಗೆಯಲ್ಲಿ ಹಗುರವಾಯಿತು, ನಲಿವುಗೂಡಿತು. ಏಕೆ? ವಿಶ್ವನಾಥ ಹೇಳಿದ್ದು ದಿಟ: ಬಾಲ್ಯದಲ್ಲೆಲ್ಲ ತನ್ನ ಒಡನಾಟ ಚೆನ್ನಿಯ ಜೊತೆಯೇ ಆಯಿತು. ತಾನು ನಾಲ್ಕೈದು ವರ್ಷದ ಹುಡುಗನಾಗಿದ್ದಂದು ತನ್ನ ತಂದೆ ತನ್ನನ್ನು ತೋಟಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಆಗ ಅವರು ಮಾದನೊಡನೆ—"ಬಾಳೆಗೆ ಅಗತೆ ಮಾಡಿಸಿದೆಯಾ? ತೆಂಗಿನ ಸೋಗೆ ಕಿತ್ತೆಯಾ? ಆ ಅಡಕೆಮರ ಏಕೆ ಬಿದ್ದುಹೋಯಿತು? ಯಾರೋ ಬಾಳೆಗೊನೆ ಕದ್ದಿದ್ದಾರಲ್ಲ? ಏನು ಕುಡಿದು ಬಂದು ಬಿದ್ದಿದ್ದೆಯೋ?" ಎಂದು ತೋಟದ ವಿಚಾರ ಕೇಳುತ್ತ ಅವನನ್ನು 'ತರಾಟೆ'ಗೆ ತೆಗೆದುಕೊಳ್ಳುತ್ತಿದ್ದಾಗ, ತಾನು ಚೆನ್ನಿಯೊಡನೆ ಆಟವಾಡುತ್ತಿರುತ್ತಿದ್ದನು; ಚೆನ್ನಿ ತನ್ನನ್ನು ಕರೆದುಕೊಂಡು ಹೋಗಿ ಬಗೆಬಗೆಯ ಗಿಡಗಳನ್ನು ಹೆಸರು ಹೇಳಿ ತೋರುತ್ತಿದ್ದಳು; ತಾನು ಅಡಕೆಮರವನ್ನು ತೋರಿ 'ಇದು ಬಾಳೆಯ ಗಿಡವೆ?' ಎಂದು ತೊದಲುಮಾತಿನಲ್ಲಿ ಕೇಳಿದಾಗ ಚೆನ್ನಿಯೂ ತೊದಲು

ಮಾತಿನಲ್ಲಿ 'ಅಲ್ಲ, ಇದು ಅಡಕೆಮರ' ಎಂದು ಹೇಳಿ ನಗುತ್ತಿದ್ದಳು. ಪುಟ್ಟ ದಣಿಗಳಿಗೆ ಗೊತ್ತಿಲ್ಲದ ಎಷ್ಟೋ ಸಂಗತಿಗಳು ತನಗೆ ಗೊತ್ತು ಎಂದು ಅವಳಿಗೆ ಹೆಮ್ಮೆ; 'ಎಷ್ಟು ಗಿಡಮರಗಳು ಚೆನ್ನಿಗೆ ಗೊತ್ತು!' ಎಂದು ತನಗೆ ಆಶ್ಚರ್ಯ. ಚೆನ್ನಿ ಯಾವ ಯಾವುವೊ ಕಾಡುಹೂಗಳನ್ನೆಲ್ಲ ಕೊಯ್ದು ಗೊಂಚಲು ಮಾಡಿ ತನಗೆ ಕೊಡುತ್ತಿದ್ದಳು; ತಾನು ಅವುಗಳಲ್ಲಿ ಯಾವುದಾದರೂ ಒಂದು ದೊಡ್ಡ ಹೂವನ್ನು ತೆಗೆದು 'ನೀನು ಮುಕ್ಕೊ' (ಮುಡಿದುಕೊ) ಎಂದು ಚೆನ್ನಿಗೆ ಕೊಡುತ್ತಿದ್ದನು. ಚೆನ್ನಿ, 'ನನಗೆ ಬರಾಕಿಲ್ಲ, ನೀ ಮುಡ್ಸು' ಎಂದು ಹಟ ಹಿಡಿಯುತ್ತಿದ್ದಳು. ಹುಡುಗಿ ಚೆನ್ನಿ ಹೂ ಮುಡಿಯುವುದನ್ನರಿಯಳು, ಹೂ ಮುಡಿಸುವರನ್ನು ಕಾಣಳು. ತನ್ನ ತಂಗಿಗೆ ತನ್ನ ತಾಯಿ ಹೂ ಮುಡಿಸುವುದನ್ನು ತಾನು ನೋಡಿದ್ದನಾದ್ದರಿಂದ ತಾನು ಚೆನ್ನಿಗೆ ಹೂಮುಡಿಸತೊಡಗುತ್ತಿದ್ದನು. ಆಗ ಇದ್ದಕ್ಕಿದ್ದಂತೆ ತನ್ನ ತಂದೆ ಇದನ್ನು ಕಂಡು– 'ಏ ಸುಂದರೂ, ಹೊಲೆಯರ ಹುಡುಗಿ ಕಣೋ ಚೆನ್ನಿ, ಮುಟ್ಟಿಸಿಕೋಬಾರದು.' ಎಂದು ಗದರುತ್ತಿದ್ದರು. ತಾನು 'ಯಾಕೆ?' ಎಂದು ಕೇಳುತ್ತಿದ್ದನು. 'ಯಾಕೋ, ಬಾರದು ಅಂದರೆ ಬಾರದು' ಎಂದು ತಂದೆ ಖಂಡಿತವಾಗಿ ನುಡಿಯುತ್ತಿದ್ದರು. 'ಬುಡಿ ಬುದ್ದಿ. ಅರೀದ ಮಕ್ಕಳು ಅವಕ್ಕೇನು ಕಟ್ಟು' ಎಂದು ಮಾದ ತಂದೆಗೆ ಸಮಾಧಾನ ಹೇಳುತ್ತಿದ್ದನು. ತಂದೆ ಮತ್ತೆ ಮಾತಿನಲ್ಲಿ, ತೋಟದ ಪರಾಮರಿಕೆಯಲ್ಲಿ ತೊಡಗುತ್ತಿದ್ದರು. ಮನೆಗೆ ಹೋಗುವ ಹೊತ್ತಾದಾಗ, ಮಾದ ತನಗೆ ಮತ್ತು ತನ್ನ ತಂದೆಗೆ ಎಳನೀರು ಕಿತ್ತುತಂದು ಕುಡಿಯಲೊಪ್ಪಿಸುತ್ತಿದ್ದನು. ಆಗ, 'ಚೆನ್ನಿಗೂ ಕೊಟ್ಟರೇ ನಾನು ಕುಡಿಯೋದು' ಎಂದು ತಾನು ಹಟ ಹಿಡಿಯುತ್ತಿದ್ದನು. ಚೆನ್ನಿಗೂ ಎಳನೀರು ಕೊಟ್ಟಮೇಲೆ ತಾನು ಕುಡಿಯುತ್ತಿದ್ದನು. ಆಮೇಲೆ, ಮನಸ್ಸಿಲ್ಲದ ಮನಸ್ಸಿನಿಂದ ತಂದೆಯೊಡನೆ ಮನೆಗೆ ಹಿಂದಿರುಗುತ್ತಿನು. ಇನ್ನು ಕೆಲವು ದಿನ, ತಾನು ಚೆನ್ನಿಯೊಡನೆ ಚಿಟ್ಟೆ ಹಿಡಿಯುವ ಆಟವಾಡುತ್ತಿದ್ದನು. ಚಿಟ್ಟೆ ಹಿಡಿಯುವುದರಲ್ಲಿ ಚೆನ್ನಿ ದಿಟ್ಟೆ; ತಾನು ಪುಕ್ಕಲ ಎನ್ನಿಸಿತ್ತು. ಚಿಟ್ಟೆ ಹೂವಿನ ಮೇಲೆ ಮಧುಪಾನದಿಂದ ಮತ್ತಾಗಿ ರೆಕ್ಕೆಯಲುಗಿಸದೆ ಕುಳಿತಿದ್ದಾಗ ಚೆನ್ನಿ ಮೆಲ್ಲನೆ ಸದ್ದು ಮಾಡದೆ ಹೋಗಿ ಅದು ಹೇಗೊ ಅದನ್ನು ಫಕ್ಕನೆ ಹಿಡಿದು ಬಿಡುತ್ತಿದ್ದಳು. ಅವಳು ಚಿಟ್ಟೆಯನ್ನು ಹಿಡಿದು ತಂದು ಕೊಟ್ಟರೂ ಅದನ್ನು

ಕೈಯಿಂದ ಮುಟ್ಟಲು ತನಗೆ ಹೆದರಿಕೆ! ಆದ್ದರಿಂದ, 'ನೀನೇ ಚಿಟ್ಟಿ ಆಗು, ನಾನು ಹಿಡಿಯುತ್ತೇನೆ' ಎನ್ನುತ್ತಿದ್ದ ತಾನು. ಚೆನ್ನಿ ಚಿಟ್ಟಿಯಾಗಿ ತೋಟದಲ್ಲೆಲ್ಲ ಚಿಮ್ಮುತ್ತ ಓಡಾಡುತ್ತಿದ್ದಳು. ಓಟದಲ್ಲಿ ತಾನು ಹಿಂದೆ ಬೀಳುತ್ತಿರಲಿಲ್ಲ; ಚೆನ್ನಿಯನ್ನು ಬೇಗನೆ ಹಿಡಿದುಬಿಡುತ್ತಿದ್ದನು. ಆಗ 'ಚಿಟ್ಟಿ ಮುಟ್ಟಬೇಡ, ಕಚ್ತುತ್ತೆ' ಎನ್ನುತ್ತಿದ್ದಳು ಚೆನ್ನಿ. 'ಈಗ ನೀನು ಚಿಟ್ಟಿಯಲ್ಲ, ಚೆನ್ನಿ' ಎಂದು ಗೊಳ್ಳನೆ ನಗುತ್ತ ಚೆನ್ನಿಯನ್ನು ತಬ್ಬಿ ಹಿಡಿದುಬಿಡುತ್ತಿದ್ದ ತಾನು. ಹೀಗೆ ಇಬ್ಬರೂ ತೋಟದಲ್ಲೆಲ್ಲ ಎದ್ದು ಬಿದ್ದು ನೆಗೆದು ಕುಣಿದು ಓಡಾಡುತ್ತಿದ್ದರು— ತನ್ನ ತಂದೆ ಕಂಡು ಗದ್ದರಿಸುವ ತನಕ.

ಈ ಉಲ್ಲಾಸದ ಹುಡುಗತನದ ದಿನಗಳು ಬೇಗ ಕೊನೆಗಂಡವು. ತನ್ನನ್ನು ಶಾಲೆಗೆ ಸೇರಿಸಿದಾಗ ಮೊದಲಿನ ಹಾಗೆ ಪ್ರತಿದಿನವೂ ತೋಟಕ್ಕೆ ಹೋಗಲು ಅವಕಾಶ ಸಿಕ್ಕುತ್ತಿರಲಿಲ್ಲ. ಎಂದೋ ಒಮ್ಮೊಮ್ಮೆ ಭಾನುವಾರ ಇಲ್ಲವೆ ಬೇರೆಯ ರಜಾ ದಿನಗಳಲ್ಲಿ ಎಂದಿನಂತೆ ತಂದೆಯ ಜೊತೆಯ ತೋಟಕ್ಕೆ ಹೋಗುತ್ತಿದ್ದನು. ಆಗ ತಾನು ಏಳೆಂಟು ವರ್ಷದ ಹುಡುಗ. 'ಚೆನ್ನಿಯನ್ನು ಮುಟ್ಟಸಿಕೋಬಾರದು' ಎಂದು ತನ್ನ ತಂದೆ ಹೇಳಿದರೆ, 'ಯಾಕೆ?' ಎಂದು ಕೇಳುವ ತೀರ ಬಾಲ್ಯಕ್ಕೆ ಸಹಜವಾದ ದಿಟ್ಟತನದ ತನ್ನ ಆ ಹಕ್ಕು ಹೋಗಿಬಿಟ್ಟಿತ್ತು. ಆದರೂ ಕೂಡ ಒಂದು ದಿನ ಹಾಗೆ ಕೇಳಿದ್ದಕ್ಕೆ ಉತ್ತರವಾಗಿ 'ಇದಕ್ಕೆ' ಎಂದು ಹೇಳಿ ತನ್ನ ತಂದೆ ಕೊಟ್ಟ ಬಿಸಿಯೇಟನ್ನು ಅವನು ಮರೆಯುವಂತಿರಲಿಲ್ಲ. ಮತ್ತೆ ಯಾಕೆ ಎಂದು ಕೇಳುವ ಧೈರ್ಯ ಬರಲಿಲ್ಲ; ಮೊದಲಿನಂತೆ ಚೆನ್ನಿಯೊಡನೆ ಆಟವಾಡುವುದಕ್ಕೂ ಧೈರ್ಯ ಬರಲಿಲ್ಲ.

ಆದರೆ, 'ಯಾಕೆ?' ಎಂಬ ತನ್ನ ಪ್ರಶ್ನೆಗೆ ಉತ್ತರ ಸಿಕ್ಕದ ಹೊರತು ತನಗೆ ಸಮಾಧಾನವಾಗದು. ತನ್ನ ತಾಯಿಯನ್ನು ಕೇಳಿದ. ತಾಯಿಯೊಡನೆ ಅಂದು ನಡೆದ ಸಂಭಾಷಣೆ ನಿನ್ನೆಯೋ ಮೊನ್ನೆಯೋ ಎನ್ನುವಷ್ಟು ಅಚ್ಚಳಿಯದಂತೆ ನೆನಪಿತ್ತು ಸುಂದರನಿಗೆ :

ಸುಂದರ ಕೇಳಿದ : "ಅಮ್ಮಾ ಚೆನ್ನಿಯನ್ನು ಯಾಕೆ ಮುಟ್ಟಸಿಕೋಬಾರದಮ್ಮ?"

ತಾಯಿ : "ಅವಳು ಹೊಲೆಯರ ಹುಡುಗಿ, ಮಗೂ. ಅದಕ್ಕೆ ಮುಟ್ಟಸಿಕೋಬಾರದು."

"ಹೊಲೆಯರು ಅಂದರೆ ಯಾರಮ್ಮ?"

"ಅವರು ತುಂಬ ಕೀಳುಜನ; ಕೊಳಕರು, ಚೊಕ್ಕಟ ಶುಭ್ರ ವಾಗಿರುವುದಿಲ್ಲ."

"ಕಾಳೀಗೌಡನೂ ಚೊಕ್ಕಟವಾಗಿರುವುದಿಲ್ಲ. ಅವನನ್ನು ಮುಟ್ಟಿಸಿ ಕೊಳ್ಳುವುದಿಲ್ಲವೇ? ಅವರ ಮನೆಯಲ್ಲಿ ಹಾಲು ಸಹಿತ ಕುಡಿದಿದ್ದೇನೆ."

"ಕಾಳೀಗೌಡ ಶೂದ್ರ. ಹೊಲೆಯರು ಶೂದ್ರರಿಗಿಂತ ಕೀಳು. ಹೊಲೆಯರು ಹೆಂಡ ಕುಡಿಯುತ್ತಾರೆ, ಬೀದಿ, ಬಚ್ಚಲು, ಕಕ್ಕಸು ಗುಡಿಸು ತ್ತಾರೆ. ಇನ್ನೂ ಏನೇನೋ ಕೊಳಕು ಕೆಲಸ ಮಾಡುತ್ತಾರೆ. ಅದಕ್ಕೋಸ್ಕರ ಅವರನ್ನ ಮುಟ್ಟಿಸಿಕೋಬಾರದು, ಮಗೂ."

"ಚೆನ್ನಿ ಇದೊಂದು ಕೆಲಸಾನೂ ಮಾಡೋದಿಲ್ಲವಲ್ಲವಮ್ಮಾ? ಅವಳಪ್ಪ ಕೂಡ ಮಾಡೋದಿಲ್ಲ! ಅವರು ನಮ್ಮ ತೋಟ ನೋಡಿಕೋತಾ ಇದಾರೆ, ಅಷ್ಟೆ."

"ಆದರೆ, ಮಾದ ಹೆಂಡ ಕುಡೀತಾನೆ."

"ಚೆನ್ನೀನೂ ಕುಡೀತಾಳೆಯೆ?"

"ಇಲ್ಲ."

"ಹಾಗಾದರೆ ಚೆನ್ನೀನ ಯಾಕೆ ಮುಟ್ಟಿಸಿಕೋಬಾರದು? ಚೆನ್ನಿ ಒಳ್ಳೆಯೋಳಲ್ಲ?"

"ಆದರೂ ಕೂಡದಪ್ಪ. ಅವರು ಏನಾದರೂ ಮಾಡಲಿ ಬಿಡಲಿ; ಮುಖ್ಯ ಅವರು ಹೊಲೆಯರ ಜಾತಿಗೆ ಸೇರಿದವರು. ಆ ಜಾತಿಗೆ ಸೇರಿದವರು ಯಾರನ್ನೂ ಮುಟ್ಟಿಸಿಕೋಬಾರದು, ತಿಳಿಯಿತೆ. ದೊಡ್ಡವನಾದರೆ ಎಲ್ಲ ಅರ್ಥವಾಗುತ್ತೆ; ಇನ್ನು ಸುಮ್ಮನೆ ಇರು ಮತ್ತೆ."

ತನ್ನ ತಾಯಿ ಹೇಳಿದ್ದು ದಿಟ. ತಾನು ಈಗ ದೊಡ್ಡವನಾಗಿದ್ದಾನೆ. ಎಲ್ಲ ಅರ್ಥವಾಗಿದೆ. ಅಂದು ಪ್ರಫುಲ್ಲಚಂದ್ರ ರಾಯ್ ಅವರು ಹೇಳಿದ್ದು ಎಂಥ ದೊಡ್ಡ ಮಾತು: "Does untouchability penetrate through this glass of water? No. As a scientist I can assure you it does not." (ಈ ಗಾಜಿನ ಲೋಟದ ಮೂಲಕ ಅಸ್ಪೃಶ್ಯತೆ ಹಾಯ್ದು ಬರುತ್ತದೆಯೆ? ಇಲ್ಲ. ವಿಜ್ಞಾನಿಯಾದ ನಾನು ನಿಮಗೆ ಭರವಸೆ ಕೊಟ್ಟು

ಹೇಳುತ್ತೇನೆ, ಅದು ಹಾಗೆ ಬರುವುದಿಲ್ಲ) ಈ ಮಾತೇ ತನ್ನ ಚಿಕ್ಕಂದಿನ ಪ್ರಶ್ನೆಗೆ ಸರಿಯಾದ ಉತ್ತರ ಕೊಟ್ಟಿರುವದು; ಈ ಮಾತೇ ತನ್ನ ಜೀವನದ ಕರ್ತವ್ಯ ಧ್ಯೆಯಗಳನ್ನು ತೋರಿಸಿಕೊಟ್ಟಿರುವುದು; ಈ ಮಾತಿನ ಬೆಳಕಿನಲ್ಲಿ ಇನ್ನು ಮುಂದೆ ತಾನು ಹರಿಜನರ ಉದ್ಧಾರಕ್ಕಾಗಿ— ಇಡಿಯ ದೇಶದ ಹರಿಜನರ ಉದ್ಧಾರನಲ್ಲದಿದ್ದರೆ ಕಡೆಯ ಪಕ್ಷ ತನ್ನ ಹಳ್ಳಿಯ ಹರಿಜನರ ಉದ್ಧಾರಕ್ಕಾಗಿ— ಹೋರಾಡಬೇಕಾಗಿದೆ.

ಹರಿಜನರ ಉದ್ಧಾರಕಾರ್ಯ ಮುಖ್ಯ; ಇರಲಿ. ಇಡಿಯ ಸಮಾಜದ ಪರಿವರ್ತನೆ ತನ್ನ ಒಬ್ಬನ ಉದ್ಯಮದಿಂದ ಸಾಧ್ಯವಾಗದೆ ಹೋಗಬಹುದು. ಕಡೆಗೆ, ಒಂದು ವ್ಯಕ್ತಿಯನ್ನಾದರೂ ಉದ್ಧಾರಮಾಡಬಹುದಲ್ಲವೆ? ಚೆನ್ನಿ ಶಬ್ಬಲಿಗೂಸಾಗಿ ಬೆಳೆದವಳೆಂದು ಕೇಳಿದ್ದ. ಮುದುಕ ಮಾದ ಸತ್ತು ಹೋದರೆ ಅವಳ ಗತಿಯೇನು? ಅದೂ ಕೂಡ ತನ್ನಿಂದ ಸಾಧ್ಯವಾಗದಿರ ಬಹುದು. ಒಂಟಿ ವ್ಯಕ್ತಿಯ ಕಾರ್ಯಶಕ್ತಿ ಎಷ್ಟು ಪರಿಮಿತ! ಅದರ ಗತಿಗೆ ಎಷ್ಟು ನಿರ್ಬಂಧ, ಎಷ್ಟು ನಿರೋಧ! ತಾನು ಇದನ್ನೆಲ್ಲ ಎದುರಿಸಬೇಕು. ಏನಾದರೂ ಆಗಲಿ, ಈ ಸಲ ಖಂಡಿತ ಚೆನ್ನಿಯನ್ನೂ ಮಾದನನ್ನೂ ನೋಡಿ ಅವರೊಡನೆ ಮಾತಾಡಬೇಕು. ಚೆನ್ನಿಯೊಡನೆ ಆಟವಾಡಿಯಂತೂ ಹಲ ವಾರು ವರ್ಷಗಳಾದುವು; ಅವಳೊಡನೆ ಮಾತಾಡಿಯೇ ಬಹುಕಾಲವಾಯಿತು; ಅವಳನ್ನು ನೋಡಿದ್ದು ಎರಡು ವರ್ಷಗಳ ಹಿಂದೆ— ತನಗೆ ಮೆಟ್ರಿಕ್ಯುಲೇ ಷನ್ ಪರೀಕ್ಷೆ ಆದ ವರ್ಷ ಊರಿನ ಗೆಳೆಯರನ್ನೆಲ್ಲ ಕರೆದುಕೊಂಡು ಅವರಿಗೆ ತೋಟದಲ್ಲಿ ಎಳೆನೀರು ಕೊಡಿಸಲು ಹೋದಾಗ. ಈಗ ಅವಳು ತುಂಬ ಬೆಳೆದಿರಬೇಕು. ಹೇಗಿದ್ದಾಳು? ಕಮಲೆಯ ಹಾಗಿದ್ದಾಳೇ? ಪಾಪ, ಕಮಲೆಯ ರೂಪ ಚೆನ್ನಿಗೆಲ್ಲಿ ಬರಬೇಕು? ಆದರೆ, ಬಣ್ಣದಲ್ಲಿ ಚೆನ್ನಿ ಕಮಲೆಗೆ ಕಡಮೆಯಾಗಿರಲಿಲ್ಲ. ಬಣ್ಣ ಒರೆಗಲ್ಲಾಗುವ ಪಕ್ಷಕ್ಕೆ— ಚೆನ್ನಿಯನ್ನು ಹೊಲೆಯರ ಹುಡುಗಿ ಎಂದು ಯಾರೂ ಹೇಳುವಂತಿರಲಿಲ್ಲ. ಅವಳನ್ನು ತಾನು ಈಚೆಗೆ ನೋಡಿರಲಿಲ್ಲ. ರೂಪದಲ್ಲೂ ಅವಳು ಈಗ ಚೆನ್ನಾಗಿಯೇ ಇರಬಹುದು!.... ಹೀಗೆ, ಸುಂದರನ ಆಲೋಚನೆ ಕಡೆಯಲ್ಲಿ ಕಮಲೆ– ಚೆನ್ನಿಯರ ರೂಪ-ಬಣ್ಣಗಳ ಪರಸ್ಪರ ಹೋಲಿಕೆಯಲ್ಲಿ ನೆಲೆನಿಂತಿತು. ಅವನಿಗೆ ನಿದ್ದೆ ಹತ್ತಿತು.

ವಿಶ್ವನಾಥನ ಮನಸ್ಸಿನಲ್ಲಿ ಕಡೆಯುತ್ತಿದ್ದುದು ಒಂದೇ ಒಂದು ನಿರ್ಧಾರ: ಪರೀಕ್ಷೆ ಮುಗಿದು ಊರಿಗೆ ಹಿಂದಿರುಗಿದ ಮೇಲೆ ಸುಂದರನ ನಡವಳಿಕೆಯನ್ನು ಅವನ ತಂದೆಗೆ ತಿಳಿಸಿ ಸುಂದರನಿಗೆ ತಕ್ಕ ಶಾಸ್ತಿ ಮಾಡಿಸಬೇಕು. ಇದನ್ನು ಅವನ ತಂದೆಗೆ ನಂಬಿಕೆ ಬರುವಂತೆ ಹೇಗೆ ತಿಳಿಸುವುದು? ತಾನೇ ನೇರವಾಗಿ ಅವರಿಗೆ ಎಲ್ಲವನ್ನೂ ಹೇಳಿಬಿಡುವುದೆ, ಇಲ್ಲ ತನ್ನ ತಂದೆಗೆ ಹೇಳಿ ಅವರಿಂದ ಹೇಳಿಸುವುದೆ ? ಈ ರೀತಿ ಅವನ ಆಲೋಚನೆಗಳು ಅವನ ಒಂದು ನಿರ್ಧಾರದ ಸುತ್ತ ಬಳಸುತ್ತ, ಸುಂದರನ ಮೇಲೆ ಅವನಲ್ಲಿ ಹುಟ್ಟಿದ್ದ ವಿರೋಧಭಾವನೆಯನ್ನು ಬಲಪಡಿಸುತ್ತಿದ್ದುವು. "ಹೇಗಾದರೂ ಆಗಲಿ, ಮುಂದೆ ನೋಡಿಕೊಳ್ಳೋಣ ; ಅಂತೂ ಅವನಿಗೆ ತಕ್ಕ ಶಾಸ್ತಿ ಮಾಡಿಸಿಯೇ ಸಿದ್ಧ" ಎಂಬ ಅದೇ ನಿರ್ಧಾರದ ಪುನರುಚ್ಚಾರಣೆಯೊಡನೆ ವಿಶ್ವನಾಥನಿಗೂ ನಿದ್ದೆ ಹತ್ತಿತು.

೭

"ಪರೀಕ್ಷೆ ಇನ್ನು ಎರಡು ದಿನಕ್ಕೆ ಮುಗಿಯುತ್ತಂತೆ. ಅದು ಮುಗಿದ ದಿನವೇ ಸಂಜೆ ಹೊರಟು ಬರುತ್ತೇನೆ ಅಂತ ವಿಶ್ವನಾಥ ಕಾಗದ ಬರೆದಿದ್ದಾನೆ. ಅವನೇನೋ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದಾನಂತೆ. ನಿಮ್ಮ ಸುಂದರನ ವಿಚಾರ ಏನೂ ಬರೆದಿಲ್ಲ. ಅವನಿಂದ ನಿಮಗೂ ಏನೂ ಕಾಗದ ಬಂದಿಲ್ಲವೋ ?" ಎಂದು ನಂಜುಂಡಶಾಸ್ತ್ರಿಗಳು ಬಂದು ಶಾನುಭೋಗ ಕೃಷ್ಣಪ್ಪನವರನ್ನು ವಿಚಾರಿಸಿದರು. "ಇಲ್ಲ. ಅವನಿಂದ ಏನೂ ಕಾಗದ ಬಂದಿಲ್ಲ ಇವೊತ್ತು ನಾಳೆಯಲ್ಲಿ ಬರಬಹುದು. ಶಾಮಿ ಏನೋ ಬೆಂಗಳೂರಿನಿಂದ ಕಾಗದ ಬರೆದಿದ್ದಾನೆ. ಅವನ ಪರೀಕ್ಷೆ ಇನ್ನೂ ಹದಿನೈದು ದಿನಗಳಿವೆಯಂತೆ. ಚೆನ್ನಾಗಿ ಓದುತ್ತಿದ್ದಾನಂತೆ. ಫಸ್ಟ್‌ಕ್ಲಾಸಿನಲ್ಲಿ ಪ್ಯಾಸಾಗಬೇಕು ಅಂತ ತುಂಬ ಕಷ್ಟಪಡುತ್ತಾ ಇದ್ದಾನಂತೆ. ಅವನೂ ಪರೀಕ್ಷೆ ಆದ ಕೂಡಲೆ ಬಂದಾನು. ಅಥವಾ ಅವರ ಭಾವ ರಜದಲ್ಲೂ ಅವನನ್ನ ಅಲ್ಲೇ ಉಳಿಸಿಕೊಂಡರೂ ಉಳಿಸಿಕೊಂಡಾನು. ನಾನೇನೋ ಬಂದು ಬಿಡು ಅಂತ ಕಾಗದ ಬರೆಯೋಣ ಅಂತ ಮಾಡಿಕೊಂಡಿದೇನೆ." ಅಂತ ಕೃಷ್ಣಪ್ಪನವರು ಉತ್ತರ ಕೊಟ್ಟರು.

ಈ ಉತ್ತರದಿಂದ ಶಾಸ್ತ್ರಿಗಳಿಗೆ ಒಂದು ತುಸ ನಿರಾಶೆಯಾಯಿತು. ತಮ್ಮ ಮಗ ಸುಂದರನ ಜೊತೆಯೇ ಹೊರಟು ಬಂದಿದ್ದರೆ, ಕೃಷ್ಣಪ್ಪನವರು ಹೇಗೂ ತಮ್ಮ ಮಗನಿಗಾಗಿ ಹೊಳೇನರಸೀಪುರಕ್ಕೆ ಗಾಡಿ ಕಳಿಸುತ್ತಿದ್ದರು. ಈಗ ತಮ್ಮ ಮಗನಿಗಾಗಿ ಪ್ರತ್ಯೇಕ ಗಾಡಿ ಕಳಿಸಿಕೊಡಿ ಎಂದು ಕೇಳಲು ಶಾಸ್ತ್ರಿಗಳಿಗೆ ತುಂಬ ಸಂಕೋಚವಾಯಿತು. ಏನೋ ಮಾತು ತಿರುಗಿಸಿದರು:

"ಓಹೋ, ಅಂದ ಹಾಗೆ ನಿಮ್ಮ ಶಾಮಿ ಈ ವರ್ಷ 'ಮೆಟ್ರಿಕ್ಯುಲೇಷನ್' ಪರೀಕ್ಷೆಗೆ ಹೋಗುತ್ತಾನೆ ಅಲ್ಲವೆ?" ಎಂದು ಕೇಳಿದರು ಶಾಸ್ತ್ರಿಗಳು.

"ಹೌದು."

"ನಿಮ್ಮ ಶಾಮಿಗೆ ಈ ವೈಶಾಖಕ್ಕೆ ಹದಿನಾರು ತುಂಬುತ್ತೆ ಅಂತ ಕಾಣುತ್ತೆ. ಆಗಲೇ ಮದುವೆಗೆ ನೆರೆದಿದ್ದಾನೆ. ನಿಮ್ಮ ಸುಂದರನಿಗೆ ಬೇಗ ಮದುವೆ ಮಾಡಿಬಿಟ್ಟರೆ....ಏನೋ ಋಣಾ ಸಂಬಂಧವಿದ್ದರೆ ಸಂಬಂಧ ಬೆಳಸೋಣ ಅಂತ ನನಗೂ ಚಪಲ. ನಿಮ್ಮ ಶಾಮಿಗೂ ನಮ್ಮ ಗೌರಿಗೂ ವರಸಾಮ್ಯ ಬಹು ಚೆನ್ನಾಗಿ ಆಗುತ್ತೆ. ವೈದಿಕರ ಮನೆ ಹೆಣ್ಣು; ತಂದು ಕೊಳ್ಳುತ್ತೀರೋ ಇಲ್ಲವೋ...ಏನೋ ದೊಡ್ಡ ಮನಸ್ಸು ಮಾಡಿದರೆ.... ಇರಲಿ, ದೇವರಿದ್ದಾನೆ, ಎಲ್ಲ ಅವನ ಚಿತ್ತ."

"ಇದೇನು ಶಾಸ್ತ್ರಿಗಳೇ ಹೀಗಂತೀರಿ! ವೈದಿಕರ ಮನೆ ಹೆಣ್ಣು ನಮ್ಮ ಮನೆ ಸೇರಿದರೆ ನಮ್ಮ ವಂಶ ಪಾವನವಾದೀತು. ಮುಖ್ಯ, ನೋಡಿ, ಮೊದಲು ತುಂಗೆಗೆ ಮದುವೆಯಾಗಬೇಕು; ನಮ್ಮ ಸುಂದರನಿಗೆ ಮದುವೆಯಾಗಬೇಕು. ಅವನಿಗೆ ಆಗಲೇ ಇಪ್ಪತ್ತು ತುಂಬಿಹೋಯಿತು. ಬಿ. ಎ. ಪರೀಕ್ಷೆ ಆದ ಹೊರತು ಮದುವೆಯಾಗೋದಿಲ್ಲ ಅಂತ ಹಟಮಾಡುತಾ ಇದಾನೆ. ಯಾರು ಯಾರೋ ದೊಡ್ಡಮನುಷ್ಯರು ನನ್ನ ಅಳಿಯನ ಶಿಫಾರಸು ಪಡೆದು ಬೆಂಗಳೂರಿನಿಂದ ಹೆಣ್ಣು ಕೊಡುವುದಕ್ಕೆ ಅಂತ ಬರ್ತಾರೆ–ಪಾಪ. ನಾನು ಹೇಗೆ ಒಪ್ಪಿಕೊಳ್ಳಲಿ, ಸುಂದರ ಒಪ್ಪದೆ? ನಮ್ಮ ಕಾಲದಲ್ಲಿ ಹೀಗೆಲ್ಲ ಇರಲಿಲ್ಲ ನೋಡಿ; ನಮ್ಮ ಅಪ್ಪ ಅಮ್ಮ ನೋಡಿದ ಹೆಣ್ಣುಗಳನ್ನು ಕಣ್ಣುಮುಚ್ಚಿಕೊಂಡು ಮದುವೆಮಾಡಿಕೊಂಡುಬಿಡುತ್ತಿದ್ದೆವು. ಈಗ ನಮ್ಮ ಸಂಸಾರ ಏನಾಗಿದೆ?"

"ಅದಕ್ಕೇನು ಬಿಡಿ ಕೃಷ್ಣಪ್ಪನವರೆ. ನೀವು ಭಾಗ್ಯಶಾಲಿಗಳು.

ನಿಮ್ಮ ಮನೆ ಒಳ್ಳೆ ನಂದಗೋಕುಲದ ಹಾಗೆ ಬೆಳೀತಾ ಇದೆ. ದೇವರು ದೊಡ್ಡವನು ನೋಡಿ, ಅವನ ಕೃಪೆ ಇದ್ದರೆ ಎಲ್ಲಾ ಸಾಧ್ಯ. ಅವನ ಚಿತ್ತ ಇದ್ದರೆ....ಋಣಾನುಬಂಧ ಇದ್ದರೆ....ನನ್ನ ಆಸೆ ನೆರವೇರುತ್ತೆ ಅನ್ನಿ. ಅದರ ಯೋಚನೆ ನನಗಿಲ್ಲ.''

ಅಷ್ಟು ಹೊತ್ತಿಗೆ ದೂರದಲ್ಲಿ ' ಬುದ್ಯೋ ಬುದ್ಯೋ ' ಎಂದು ಕೂಗು ಕೇಳಬಂದಿತು.

''ನೀವೇನು ಮಡಿ ಇಲ್ಲವಲ್ಲ ಶಾಸ್ತ್ರಿಗಳೇ? ಅಷ್ಟು ಹೊತ್ತಿನಿಂದ ನಿಂತೇ ಇದ್ದೀರಲ್ಲ, ಕುಳಿತುಕೊಳ್ಳಬಾರದೆ?'' ಎಂದು ಕೇಳಿದರು ಕೃಷ್ಣಪ್ಪನವರು.

"ಊಟ ಆಗಿ ಎಷ್ಟೋ ಹೊತ್ತು ಆಯಿತು; ಮಡಿ ಯಾಕೆ ಇನ್ನು? ಅದೇ ನಮ್ಮ ಹುಡುಗನ ಕಾಗದ ಬಂತು ; ನಿಮ್ಮ ಹುಡುಗನಿಂದಲೂ ಬಂದಿದೆಯೋ ಏನೋ ಅಂತ ವಿಚಾರಿಸಿಕೊಂಡು ಹೋಗೋಣ ಅಂತ ಬಂದೆ, ಅಷ್ಟೆ. ಹಾಗೇನೇ........ಈ ತಿಂಗಳ ಬಡ್ಡಿ ಇದೆಯಲ್ಲ....ನಮ್ಮ ಹುಡುಗ ಇದ್ದಕ್ಕಿದ್ದ ಹಾಗೇ ಕಾಗದ ಬರೆದುಬಿಟ್ಟ. ಪ್ರಯಾಣದ ಖರ್ಚಿಗೆ ದುಡ್ಡು ಬೇಕೂ ಅಂತ. ಯಾವ ಸಲವೂ ಹೀಗೆ ಬರೆದಿರಲಿಲ್ಲ; ಹೇಗೂ ಮಿಗಿಸಿ ಇಟ್ಟುಕೊಂಡಿರುತಿದ್ದ ಅಂತ ಕಾಣುತ್ತೆ. ತುರ್ತಾಗಿ ಅವನಿಗೆ ಕಳಿಸಬೇಕಾಯ್ತು. ಯತ್ನವಿಲ್ಲ, ದೊಡ್ಡ ಮನಸ್ಸು ಮಾಡಿದರೆ....ಮುಂದಿನ ತಿಂಗಳು........''

''ಅದೇನು ಪರವಾಯಿಲ್ಲ, ಬಿಡಿ ಶಾಸ್ತ್ರಿಗಳೇ. ಯೋಚನೆ ಮಾಡಬೇಡಿ" ಎಂದು ಕೃಷ್ಣಪ್ಪನವರು ಹೇಳುತ್ತಿದ್ದ ಹಾಗೆ ಮತ್ತೊಂದು ಸಲ ''ಬುದ್ಯೋ ಬುದ್ಯೋ'' ಎಂಬ ಕೂಗು ಕೇಳಬಂತು— ಪಕ್ಕದ ಬೇಲಿಯಾಚೆಯಿಂದ.

''ಬಾರ್ಲ, ಬಾರ್ಲ'' ಎಂದು ಕೃಷ್ಣಪ್ಪನವರು ಗಟ್ಟಿಯಾಗಿ ಮಾರುತ್ತರ ಕೊಟ್ಟ ಸ್ವಲ್ಪ ಹೊತ್ತಿನ ಮೇಲೆ ಮಾದ ಬಂದು ನಡುರಸ್ತೆಯಲ್ಲಿ ನಿಂತು, ಕಾಯುತ್ತಿರುವ ಬಿಸಿಲಿನಲ್ಲಿ ಕಾಯುತ್ತಿರುವ ನೆಲದ ಮೇಲೆ, ತನ್ನ ಬಡಕಲ ದೇಹವನ್ನು ಚಾಚಿ ' ಅಡ್ಡಬಿದ್ದೆ ನನ್ನೊಡ್ಯಾ ' ಎಂದ.

ಮಾದ ತನ್ನ ಧಣಿಗಳನ್ನು ಭೇಟಿಯಾಗಲು ಸಾಧಾರಣವಾಗಿ ಮಧ್ಯಾಹ್ನದ ಮೇಲೆ ಎರಡು ಇಲ್ಲ ಮೂರು ಗಂಟೆಯ ವೇಳೆಗೆ ಬರುತ್ತಿದ್ದ. ಮಾದನೊಬ್ಬನೇಕೆ, ತೋಟ, ತಳವಾರ, ನೀರುಗಂಟಿ ಮುಂತಾದ ಇತರ ಎಲ್ಲ

ಹೊಲೆಯ ಕೆಲಸಗಾರರೂ ಬ್ರಾಹ್ಮಣರ ವಸತಿಗೆ ಏನಾದರೂ ಕೆಲಸದ ಮೇಲೆ ಬರಬೇಕಾದರೆ ಅದೇ ಹೊತ್ತಿಗೆ ಬರುತ್ತಿದ್ದರು. ಬಹು ಹಿಂದಿನ ಕಾಲದಿಂದ ಅವರು ಪಾಲಿಸಿಕೊಂಡು ಬರುತ್ತಿದ್ದ ಸಮಯಾಚಾರವಾಗಿತ್ತು ಇದು. ಬೆಳಗಿನ ಹೊತ್ತಂತೂ ಬ್ರಾಹ್ಮಣರ ಮಡಿಯ ಹೊತ್ತು; ಆ ಹೊತ್ತಿನಲ್ಲಿ ಹೊಲೆಯರು ಊರಿನಲ್ಲಿ ತಲೆಹಾಕುವಂತಿರಲಿಲ್ಲ. ಶಾನುಭೋಗರ ಮನೆಯೇನೋ ಪೇಟೆಯಿಂದ ಕೋಟೆಗೆ ಹೋಗುವ ದಾರಿಯಲ್ಲಿ, ಕೋಟೆಯ ಪ್ರಾರಂಭದಲ್ಲೆ ಇತ್ತು; ಅಲ್ಲಿಗೆ ಹೊಲೆಯರು ಬೆಳಗ್ಗೆ ಬಿಟ್ಟು ಮಧ್ಯಾಹ್ನದ ಮೇಲೆ ಯಾವಾಗ ಬೇಕಾದರೂ ಬರಬಹುದಾಗಿತ್ತು. ಆದರೆ, ಶಾನುಭೋಗರ ಮನೆಯಾದ ಮೇಲೆ ಎರಡು ಮನೆ ಬಿಟ್ಟು ನಂಜುಂಡಶಾಸ್ತ್ರಿಗಳ ಮನೆ. ನಂಜುಂಡಶಾಸ್ತ್ರಿಗಳ ಮನೆಯಲ್ಲಿ ಅವರ ತಾಯಿ ಪಾರ್ವತಮ್ಮ ಮಡಿ ಹೆಂಗಸು; ಆಕೆ ಊಟವಾದ ಮೇಲೆ ಜಗುಲಿಯ ಮೇಲೆ ಬಂದು ಕುಳಿತುಕೊಂಡು ಹೂಬತ್ತಿ ಮಾಡುವುದು, ಎಲೆ ಹಚ್ಚುವುದು ಮುಂತಾದ ಕೆಲಸಗಳನ್ನು ಜರುಗಿಸುತ್ತಿದ್ದರು. ಇವರ ಜೊತೆ ಹೊತ್ತು ಕಳೆಯಲು ಕೋಟೆಯಿಂದ ಇನ್ನು ಇಬ್ಬರು ಮೂವರು 'ಮಡಿಹೆಂಗಸರು' ತಮ್ಮ ತಮ್ಮ ಸರಕುಗಳೊಡನೆ ಠಾಕೋಠಾಕ್ ಮೂರು ಗಂಟೆಗೆ ಸರಿಯಾಗಿ ಹಾಜರಾಗಿಬಿಡುತ್ತಿದ್ದರು. ಈ ಮಡಿಹೆಂಗಸರ ಮಹಾಸಭೆ ಸೇರಿ ಕಾರ್ಯಕಲಾಪ ನಡಸುತ್ತಿರುವಾಗ ಹೊಲೆಯರು ಇವರಿಗೆ ತಮ್ಮ ಮುಖ ತೋರಿಸಿ ಜೀವಸಹಿತ ಹಿಂದಿರುಗಿ ಹೋಗುವಂತಿರಲಿಲ್ಲ! ಆ ಹೊಲೆಮಕ್ಕಳು ಕಲ್ಲುಗಳ ಸುರಿಮಳೆಯಾದರೂ ತಲೆಕೊಟ್ಟು ನಿಂತಾರು; ಬ್ರಾಹ್ಮಣರ ಮಡಿಯ ಮೂರ್ತಿಗಳಾದ ಇವರ ಬಯ್ಗುಳ ಬಾಣಪ್ರಯೋಗಕ್ಕೆ ಎದುರಾಗಿ ನಿಲ್ಲಲು ಅವರು ಅಳುಕುತ್ತಿದ್ದರು! ಆದ್ದರಿಂದ ಆ ಪೂರ್ವೋಕ್ತ ಸಮಯಾಚಾರ ಪಾಲನೆ.

ಆದರೆ ಮಾದ ಇಂದು ಆ ಕಟ್ಟುಪಾಡನ್ನು ಮೀರಿ ಬಂದಿದ್ದಾನೆ! ತೋಟದಿಂದ ಊರ ದಾರಿಯ ಮೂಲಕ ಪೇಟೆ ಹೊಕ್ಕು ಅಲ್ಲಿಂದ ಬಳಸು ದಾರಿಯಲ್ಲಿ ಶಾನುಭೋಗರ ಮನೆಗೆ ಬರುವುದು ಬಿಟ್ಟು ತೋಟದಿಂದ ನೇರವಾಗಿ ಬ್ರಾಹ್ಮಣರ ವಸತಿಗೆ ಹಾದು ಬಂದುಬಿಟ್ಟಿದ್ದಾನೆ! ಏನಿರಬಹುದು ಸಮಾಚಾರ? ಎಂದು ಆಶ್ಚರ್ಯ ಸಂದೇಹಗಳು ಕೃಷ್ಣಪ್ಪನವರ ಮನಸ್ಸಿನಲ್ಲಿ ಮೂಡಿದವು.

"ಏನ್ಲಾ ಮಾದ, ಏನು ಸಮಾಚಾರ?" ಎಂದು ಕೇಳುವ ವರೆಗೂ ಮಾದ ಅಡ್ಡಬಿದ್ದೇ ಇದ್ದ; ಹಾಗೆ ಕೇಳಿದ ಕೂಡಲೆ ಎದ್ದು ನಿಂತು, ಹೊದೆದಿದ್ದ ಹರುಕಲು ದುಪ್ಪಟಿಯ ತುಂಡನ್ನು ಸೊಂಟಕ್ಕೆ ಬಿಗಿದು, ಕೆಳಗೆ ಬಿದ್ದಿದ್ದ ಊರುಗೋಲನ್ನು ಕೊಂಕುಳಿನಲ್ಲಿರುಕಿಸಿಕೊಂಡು, ಮುಪ್ಪಿನಿಂದ ಮುಂಬಾಗಿದ್ದ ಬೆನ್ನನ್ನು ಮತ್ತೂ ಕೆಳಕ್ಕೆ ಬಗ್ಗಿಸಿ, ಧಣಿಗಳಿಗೆ ತನ್ನ ಅರಿಕೆಯೊಪ್ಪಿಸಲು ಸಿದ್ಧನಾಗಿ ನಿಂತ.

"ಏನ್ಲಾ, ಈಟೊಂದು ತಳಾರ್ದ್ಕೊಂಡು ಬಂದೆ?" ಕೃಷ್ಣಪ್ಪನವರು ಕೇಳಿದರು.

"ಹೌದ್ನನ್ನೊಡ್ಯಾ, ತಾಳಾರಾಯ್ತಾ. ಏನ್ ಮಾಡ್ಲಿ ಬುದ್ದಿ. ನನ್ನ ಗರಚಾರ. ನೀವೇ ನನ್ನ ದೇವ್ರು, ಅಪ್ಪಣೆ ಕೊಡಿಸ್ಬೇಕು."

"ಅದೇನು ಬೊಗಳ್ಲಾ."

"ಚೆನ್ನೀಗೆ ಜರ ಬುದ್ದಿ; ಕೆಂಡಾಮುಂಡ್ಲ ಜರ....ನೀವೇ ಕಾಪಾಡ್ಬೇಕು" ಎಂದು ಮತ್ತೆ ಅಡ್ಡಬಿದ್ದ ಮಾದ.

"ಏಟು ದಿನದಿಂದಲೋ?"

"ನಿನ್ನೆ ಹೊತ್ತು ಮುಳುಗೋನಾಗ ಚೆಂದಾಗಿದ್ಲು ಬುದ್ದಿ ಚೆನ್ನಿ. ಮುದ್ದೆ ನುಂಗಿ ಮಲಗಿದ್ಲು; ಎದ್ಲು, ಮಲಗಿದ್ಲು; ಎದ್ಲು, ಮಲಗಿದ್ಲು 'ಯಾಕಾ ಮಗಾ' ಅಂದೆ. 'ಮೈ ಸುಡ್ತದೆ' ಅಂದ್ಲು. ಮುಟ್ಟಿನೋಡ್ದೆ, ಕಾದೆಂಚಿನಂಗೆ ಸುಡ್ತ ಇತ್ತು ಮೈ. ಆಪೊತ್ನಲ್ಲಿ ಎಲ್ಲಿಂದ ಮದ್ದು ತರ್ಲಿ ನನ್ನೊಡ್ಯಾ? ಹೊತ್ತಾರೆ ಆಸ್ಪತ್ರೆಗೆ ಹೋಗಿದ್ದೆ. ಹೊತ್ತು ನೆತ್ತೀಗೆ ಬರೋಗಂಟ ಕಾದಿದ್ದೆ. ಡಾಕ್ಟರು ಹೊರೀಕ್ಬಂದು ಕೇಳಿದ್ರು. ಹೇಳ್ದೆ. ಸೀಸಾಯಿ ತಂದಿದೀಯ ಅಂದ್ರು. ಇಲ್ಲ ಅಂದೆ. ಹಂಗಾದರೆ ಮದ್ದಿಲ್ಲ ಈಗ, ಚಂಜೇಗೆ ಸೀಸಾಯಿ ತಗೊಂಬಾ ಅಂದ್ರು. ತಪ್ಪಟಕ್ಕೆ ಬಂದು, ಹಿಟ್ಟು ಬೇಯಿಸ್ಕೊಂಡು, ವಸಿ ಮಲಗಿದ್ದೆ. ಅದಕ್ಕೆ ಬಂದದ್ದು ಹೊತ್ತಾಯ್ತು ಬುದ್ದಿ, ಕೋಪಸ್ಕೊಬಾರದ್ರು. ಸೀಸಾಯಿ ಕೇಳೋಣ ಅಂತ ಬಂದೆ, ನನ್ನೊಡ್ಯಾ."

ಮಾದನನ್ನು ಹೊಲೆಯ ಎಂದು ಎಷ್ಟೇ ನಿಕೃಷ್ಟವಾಗಿ ಕಂಡರೂ ಅವನು ಕಷ್ಟದಲ್ಲಿದ್ದ ಸಮಯದಲ್ಲಿ ಮಾತ್ರ ಅವನಲ್ಲಿ ಮರುಕ ತೋರುತ್ತಿದ್ದರು ಕೃಷ್ಣಪ್ಪನವರು; ತಮ್ಮ ಕೈಲಾದ ಸಹಾಯವನ್ನೂ ಮಾಡುತ್ತಿದ್ದರು.

ಏಕೆಂದರೆ, ತಮ್ಮ ತಂದೆ ತಮಗೆ ಬಿಟ್ಟ ಸ್ಥಿರಸ್ವತ್ತು, ಚರಸ್ವತ್ತು, ಜಾನು ವಾರು ಇವುಗಳ ಜೊತೆಗೆ ಮಾದನೂ ಒಂದು ಆಸ್ತಿಯಾಗಿದ್ದ— ತಮ್ಮ ತಂದೆಗೆ ಅವನ ತಂದೆ ಚಾಮ ತೀರಿಸಬೇಕಾಗಿದ್ದ ಸಾಲವನ್ನು ತೀರಿಸಲಾರದೆ ಅವರಿಗೆ ತನ್ನನ್ನು ತಾನು ಜೀತದಾಳಾಗಿ ಮಾರಿಕೊಂಡಿದ್ದನು; ಚಾಮನ ಜೊತೆ ಮಾದನೂ ತೋಟದಲ್ಲೇ ವಾಸವಾಗಿದ್ದು ಕೆಲಸಮಾಡುತ್ತಿದ್ದ. ಚಾಮ ಸಾಯುವಾಗ, ಮಾದನನ್ನು ಶಾಮಣ್ಣನವರ ಸಂರಕ್ಷಣೆಗೆ ಒಪ್ಪಿಸಿ ಸತ್ತ. ಶಾಮಣ್ಣನವರು ಮಾದನಿಗೆ ಮದುವೆಯನ್ನೂ ಮಾಡಿಸಿದರು. ಅವರು ಸತ್ತಮೇಲೆ ಮಾದ ಕೃಷ್ಣಪ್ಪನವರ ಸೇವೆಯಲ್ಲಿ ನಿಂತ. ಹೀಗೆ, ಅವನು ಕೃಷ್ಣಪ್ಪನವರ ಕುಟುಂಬದಲ್ಲಿ ಒಂದು ಜೀವವಾಗಿ ಸೇರಿಹೋಗಿ ದ್ದನು. ಕೃಷ್ಣಪ್ಪನವರ ತಂದೆ ಶಾಮಣ್ಣನವರು ತನ್ನನ್ನು ಮಗನಂತೆ ಕಾಪಾಡುತ್ತಿದ್ದರು, ಎಂದು ಮಾದ ಪದೇ ಪದೇ ನೆನೆದುಕೊಳ್ಳುತ್ತಿದ್ದ; ಯಾವ ರೀತಿಯಲ್ಲಿ ಮಗನಂತೆ ಕಾಣುತ್ತಿದ್ದರೋ ಅದರ ನೆನಪು ಕೃಷ್ಣಪ್ಪ ನವರಿಗೆ ಇರಲಿಲ್ಲ. ಅಂತೂ, ತಮ್ಮ ತೋಟದ ದುಡಿಮೆಯಲ್ಲೇ ಅವನು ಮುದುಕನಾಗಿದ್ದ, ಗಟ್ಟಿಮುಟ್ಟಾಗಿದ್ದ ಕಾಲದಲ್ಲಿ ಹಾಳುಬಿದ್ದಿದ್ದ ತೋಟ ವನ್ನು ನಗುವಂತೆ ಮಾಡಿದವನೇ ಅವನು—ಎಂಬುದಿಷ್ಟು ಮಾತ್ರ ಕೃಷ್ಣಪ್ಪ ನವರಿಗೆ ಚೆನ್ನಾಗಿ ಮನವರಿಕೆಯಾಗಿತ್ತು. ಮಾದನ ವಿಷಯದಲ್ಲಿ ಕೃಷ್ಣಪ್ಪ ನವರು ಮರುಕದೋರುತ್ತಿದ್ದರೆ ಆಶ್ಚರ್ಯವೇನು? ಮೇಲಾಗಿ, ಕೃಷ್ಣಪ್ಪ ನವರು ಸ್ವಭಾವತಃ ಮೃದು ಹೃದಯವುಳ್ಳವರು.

"ಇರಲಿ ಹೋಗೊ ಸಂಜೆಗೆ ನಾನೇ ಔಷಧಿ ತಂದು ಕೊಡುತೀನಿ" ಎಂದರು ಕೃಷ್ಣಪ್ಪನವರು.

"ದೇವರು ನಿಮ್ಮ ಹೊಟ್ಟೆ ತಣ್ಣಗೆ ಮಡಗಿರ್ಲಿ ನನ್ನೊಡ್ಯಾ" ಎಂದು ಹೇಳಿ, ಮಾದ ತೋಟಕ್ಕೆ ಹಿಂದಿರುಗಿದ.

"ಮತ್ತೆ ಬರ್ತೆನೆ" ಎಂದು ನಂಜುಂಡಶಾಸ್ತ್ರಿಗಳೂ ಎದ್ದುಹೋದರು.

೮

ವಿಶ್ವನಾಥ ತಾನು ಕಾಗದ ಬರೆದಿದ್ದಂತೆ ಪರೀಕ್ಷೆ ಮುಗಿದ ಕೂಡಲೆ ಸಂಜೆಯೇ ಊರಿಗೆ ಹೊರಟುಬಿಟ್ಟ. ತಾನು ಹಾಗೆ ಹೊರಡುವ ಉದ್ದೇಶ

ವನ್ನು ಸುಂದರನಿಗೂ ತಿಳಿಸಿರಲಿಲ್ಲ. ಪರೀಕ್ಷೆ ಅಂದು ಮಧ್ಯಾಹ್ನದ ಮೇಲೆ ಎರಡು ಗಂಟೆಗೇ ಮುಗಿದುಹೋಗಿತ್ತು. ಸುಂದರ ವಿಶ್ವನಾಥಶಾಸ್ತ್ರಿ ಇಬ್ಬರೂ ತಮ್ಮ ತಮ್ಮ ಕೊಠಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ವಿಶ್ವನಾಥ ಗಂಟು ಮೂಟೆ ತೆಗೆದುಕೊಂಡು ರೈಲಿಗೆ ಹೊರಟಾಗಲೇ ಅವನು ಪ್ರಯಾಣ ಹೊರಟ ಸಂಗತಿ ಸುಂದರನಿಗೆ ಗೊತ್ತಾದದ್ದು. "ನೀನು ಇವೊತ್ತು ಸಂಜೆಯೆ ಹೊರಡುವುದೆಂದು ತಿಳಿಸಿದ್ದರೆ ನಾನೂ ನಿನ್ನ ಸಂಗಡ ಬರುತ್ತಿದ್ದೆ. ನಾನು ಮೈಸೂರಿನಿಂದ ಹೂವು ವಿಳ್ಳೆಯದೆಲೆ ತರುತ್ತೇನೆಂದು ಅಮ್ಮ, ತುಂಗ ನಿರೀಕ್ಷಿಸಿಕೊಂಡಿರುತ್ತಾರೆ. ನಾಳಿದ್ದು ಸಂಜೆ ಹೊರಟು ಬರುವ್ದದಾಗಿ ನಾನು ಇವೊತ್ತು ಕಾಗದ ಹಾಕಿದ್ದೇನೆ. ಇರು, ವಿಶ್ವ, ನಾನೂ ಬರುತ್ತೇನೆ, ನಾಳಿದ್ದು ಒಟ್ಟಿಗೆ ಹೋಗೋಣ" ಎಂದು ಸುಂದರಮೂರ್ತಿ ಬಹು ಅಂತಃ ಕರಣಪೂರ್ವಕವಾದ ದನಿಯಲ್ಲಿ ಕೇಳಿಕೊಂಡ. ಸುಂದರಮೂರ್ತಿ ಹೇಳುವು ದನ್ನು ಕೇಳುವ ವರೆಗೂ ವಿಶ್ವನಾಥ ನಿಂತಿದ್ದ; ಹಾಗೆ ನಿಂತುಕೊಂಡಿರುವುದ ರಿಂದಲೇ ತಾನು ಸುಂದರಮೂರ್ತಿಗೆ ಏನೋ ದೊಡ್ಡ ಉಪಕಾರ ಮಾಡು ತ್ತಿರುವುದಾಗಿ ಅವನ ಭಾವನೆ; ಸುಂದರಮೂರ್ತಿಯ ಮಾತು ಮುಗಿದ ಕೂಡಲೆ, "ಇವೊತ್ತು ಹೊರಟುಬರುತ್ತೇನೆ ಅಂತ...." ಎಂದು ಒದರಿ, "ಕೃಷ್ಣಭಟ್ಟ, ರೈಲಿಗೆ ಹೊತ್ತಾಯಿತು ಹೋಗೋಣ ನಡಿಯಯ್ಯ" ಎಂದು ದಡಬಡನೆ ಹೊರಟೇಬಿಟ್ಟ; "ನಾನೂ ಬೇಕಾದರೆ ಸ್ಟೇಷನ್ನಿಗೆ ಬರುತೇ ನಪ್ಪ; ಬರಲೇನು?" ಎಂಬ ಸುಂದರನ ಪ್ರಶ್ನೆಯನ್ನು ಕಿವಿಗೆ ಹಾಕಿ ಕೊಳ್ಳದೆ ಹೊಸಿಲು ದಾಟಿಯೇ ಬಿಟ್ಟ.

೬

ಮಾರನೆಯ ಬೆಳಗ್ಗೆ ಬಂದು ತನ್ನನ್ನು ಭೇಟಿಯಾಗುವಂತೆ ಸುಂದರ ಮೂರ್ತಿ ರಾಚಪ್ಪನನ್ನ ಪ್ರಾರ್ಥಿಸಿಕೊಂಡಿದ್ದ. ಅದೇ ಮೇರೆಗೆ ರಾಚಪ್ಪ ಬೆಳಗ್ಗೆ ಹತ್ತುಗಂಟೆ ಹೊತ್ತಿಗೆ ಸುಂದರಮೂರ್ತಿಯ ಕೊಠಡಿಯ ಬಳಿ ಬಂದು, ಹೊರಗೆ ನಿಂತು "ಮಿಸ್ಟರ್ ಸುಂದರಮೂರ್ತೀ" ಎಂದು ಕೂಗಿದ. ಸುಂದರಮೂರ್ತಿ ಎದ್ದವನೇ ಸ್ನಾನಮಾಡಿ, ಬಟ್ಟೆಬರೆ ಹಾಕಿಕೊಂಡು ಸಿದ್ಧವಾಗಿ ಕುಳಿತಿದ್ದ. "ಒಳಕ್ಕೆ ಬನ್ನಿ ರಾಚಪ್ಪ" ಎಂದು ಸುಂದರಮೂರ್ತಿ

ಬೀದಿಯ ಬಾಗಿಲ ವರೆಗೂ ಬಂದು ಕರೆದ. “ಒಳಕ್ಕೆ ಬರಬಹುದೇ?” ಎಂದು ರಾಜಪ್ಪ ಪ್ರಶ್ನಿಸಿದ. “ಬನ್ನಿ ಪರವಾಯಿಲ್ಲ. ವಿಶ್ವನಾಥಶಾಸ್ತ್ರಿಗಳು ನಿನ್ನೆ ಸಂಜೆಯೇ ಊರಿಗೆ ಹೋದರು. ಕೃಷ್ಣಭಟ್ಟರೂ ಇವೊತ್ತು ಬೆಳಗ್ಗೆ ಊರಿಗೆ ಹೊರಟು ಹೋದ ಹಾಗೆ ಕಾಣುತ್ತೆ. ಮನೆಯವರು ಆಕ್ಷೇಪಣೆ ಮಾಡುವುದಕ್ಕೆ ನಾನೇನು ನಿಮ್ಮನ್ನ ಮನೆಯ ಒಳಕ್ಕೆ ಕರೆದುಕೊಂಡು ಹೋಗುವುದಿಲ್ಲ. ನನ್ನ ಕೊಠಡಿಗೆ ನನ್ನ ಇಷ್ಟ ಬಂದವರನ್ನು ಕರೆದು ಕೊಂಡು ಬರುವುದಕ್ಕೆ ಅವರು ಆಕ್ಷೇಪಣೆ ಮಾಡಲಾರರು. ಇಷ್ಟಕ್ಕೂ, ಚಾಡಿ ಚುಚ್ಚುವುದಕ್ಕೆ ನನ್ನ ಸ್ನೇಹಿತ ಇಲ್ಲವಲ್ಲ. ಒಳಕ್ಕೆ ಬನ್ನಿ ಪರವಾಯಿಲ್ಲ” ಎಂದು ರಾಜಪ್ಪನನ್ನು ತನ್ನ ಕೊಠಡಿಯೊಳಕ್ಕೆ ಕರೆದುಕೊಂಡು ಹೋಗಿ, ಕುಳಿತುಕೊಳ್ಳುವ ಹಾಗೆ ಹೇಳಿದ. ರಾಜಪ್ಪ ಬಹು ಸಂಕೋಚದಿಂದ ಚಾಪೆಯ ತುದಿಯ ಮೇಲೆ ಕುಳಿತುಕೊಂಡ. “ಇದೇನು ರಾಜಪ್ಪ, ಇಷ್ಟು ಸಂಕೋಚ? ಇತರರೆಲ್ಲ ನಿಮ್ಮನ್ನ ಅಸ್ಪೃಶ್ಯರೆಂದು ಕಾಣುವುದು ಹಾಗಿರಲಿ. ನೀವೇ ನನ್ನನ್ನು ಅಸ್ಪೃಶ್ಯನೆಂದು ಕಾಣುವಹಾಗಿದೆಯಲ್ಲ!'' ಎಂದು ಸುಂದರಮೂರ್ತಿ ನಗುತ್ತ ಹೇಳಿದ. ರಾಜಪ್ಪನೂ ಪ್ರತಿಯಾಗಿ ನಕ್ಕ, ಅಷ್ಟೆ. ಸಂಕೋಚ ಬಿಟ್ಟ ರೀತಿಯಲ್ಲಿ ಇನ್ನು ಸ್ವಲ್ಪ ಚಾಪೆಯ ಮೇಲಕ್ಕೆ ಸರಿದು ಕುಳಿತ.

ಸುಂದರಮೂರ್ತಿ ಹಿಂದಿನ ರಾತ್ರಿಯೇ ಬಿಸ್ಕತ್ತು ನಂಜನಗೂಡಿನ ರಸಬಾಳೆಹಣ್ಣು ಇವನ್ನು ಕೊಂಡು ತಂದಿದ್ದ. ಅವನ್ನು ಗೆಳೆಯನಿಗಿತ್ತು, ತಾನೂ ತಿನ್ನಲಿಟ್ಟುಕೊಂಡ. ಉಪಹಾರ ಮುಗಿದ ಮೇಲೆ, “ಸ್ವಲ್ಪ ಹೊರಗೆ ಸುತ್ತಾಡಿಕೊಂಡು ಬರೋಣವೆ?'' ಎಂದು ಸುಂದರಮೂರ್ತಿ ಎದ್ದ. “ಆಗಬಹುದು'' ಎಂದ ರಾಜಪ್ಪ. ಇಬ್ಬರೂ ಹೊರಕ್ಕೆ ಹೊರಟರು.

ಮೊದಲು ಪರೀಕ್ಷೆಯ ವಿಚಾರ ಪರಸ್ಪರ ಕೇಳುತ್ತ ನಡೆದುಹೋದರು. ಕುಕ್ಕರಹಳ್ಳಿ ಕೆರೆಯ ಏರಿಯ ಮೇಲೆ ಮರದ ನೆರಳಿನಲ್ಲಿ ಇಬ್ಬರೂ ಕುಳಿತರು.

ಸ್ವಲ್ಪಹೊತ್ತು ಸುಂದರಮೂರ್ತಿ ಕೆರೆಯ ನೀರಿನಲ್ಲಿ ಮೆಲುಗಾಳಿಗೆ ಉಂಟಾಗುತ್ತಿದ್ದ ಕಿರುದೆರೆಗಳಾಟವನ್ನು ನೋಡುತ್ತ ಕುಳಿತ. ಅವನ ಮನಸ್ಸಿನಲ್ಲೂ ಭಾವನೆಯ ಕಿರುದೆರೆಗಳು ಏಳುತ್ತಿದ್ದುವು. ಬಾಲ್ಯದಲ್ಲಿ ತನಗೆ

ಚೆನ್ನಿಯ ಸಹವಾಸ ದೊರೆತದ್ದು, ಈ ಸಹವಾಸದಿಂದಾಗಿ ರಾಯ್ ಅವರ ಉಪನ್ಯಾಸ ಕೇಳಿದೊಡನೆ ತನ್ನಲ್ಲಿ ಹರಿಜನರ ಬಗ್ಗೆ ಸುಪ್ತವಾಗಿದ್ದ ಮರುಕದ ಭಾವ ಸ್ಫುಟವಾದದ್ದು. ತನ್ನ ಸಹಾನುಭೂತಿಯನ್ನೂ ಪ್ರಕಟಗೊಳಿಸಲು ಚರ್ಚಾಕೂಟದ ಅವಕಾಶ ದೊರೆತದ್ದು, ತನ್ನ ಭಾವನೆಯನ್ನು ತಕ್ಕಮಟ್ಟಿಗೆ ಕಾರ್ಯರೂಪದಲ್ಲಿ ವ್ಯಕ್ತಗೊಳಿಸಲು ರಾಚಪ್ಪನ ಸ್ನೇಹದ ಆಲಂಬನೆ ದೊರೆತದ್ದು—ಇವೆಲ್ಲ ತನ್ನನ್ನು ಒಂದು ನಿರ್ದಿಷ್ಟ ಗುರಿಯ ಕಡೆಗೆ ಒಯ್ಯುತ್ತಿರುವುದಾಗಿ ಅವನಿಗೆ ತೋರಿತು. ರಾಚಪ್ಪನನ್ನು ಮುಟ್ಟಿ, ಅವನ ಜೊತೆಯಲ್ಲಿ ತಿಂಡಿ ತೀರ್ಥ ತಿಂದು, ಎಲ್ಲರೆದುರಿಗೆ ಅವನೊಡನೆ ತಿರುಗಾಡಿಬಿಟ್ಟರೆ ಹರಿಜನರನ್ನು ಉದ್ಧಾರ ಮಾಡಿದ ಹಾಗಾಗುವುದಿಲ್ಲವೆಂಬುದನ್ನು ಅವನು ಮನಗಂಡಿದ್ದನು. ಹರಿಜನ ಉದ್ಧಾರಕಾರ್ಯ ಹೇಗೆ ಪ್ರಾರಂಭಿಸುವುದು, ಅಸ್ಪೃಶ್ಯತೆಯ ನಿವಾರಣೆ ಹೇಗೆ ಮಾಡುವುದು ಎಂಬ ವಿಚಾರದಲ್ಲಿ ವಿದ್ಯಾವಂತನಾದ ಹರಿಜನನೊಬ್ಬನ ಅಭಿಪ್ರಾಯ ಏನಿದ್ದಿರಬಹುದು, ಅವನು ಈ ಕಾರ್ಯದಲ್ಲಿ ಎಷ್ಟರ ಮಟ್ಟಿಗೆ ನೆರವಾಗಬಹುದು ಎಂಬುದನ್ನು ರಾಚಪ್ಪನಿಂದ ತಿಳಿದುಕೊಳ್ಳಬೇಕೆಂಬುದೆ ಸುಂದರನ ಮುಖ್ಯ ಉದ್ದೇಶವಾಗಿತ್ತು. ಅಲ್ಲದೆ, ರಾಚಪ್ಪನ ವಿಷಯವಾಗಿಯೂ ಸುಂದರನಿಗೆ ಏನೂ ತಿಳಿದಿರಲಿಲ್ಲ; ಅದನ್ನೂ ತಿಳಿಯಬೇಕೆಂಬ ಕುತೂಹಲ ಒಂದುಕಡೆ ಇತ್ತು. ಮೂರನೆಯದಾಗಿ, ಎಲ್ಲಕ್ಕಿಂತ ಮುಖ್ಯವಾಗಿ, ಎಲ್ಲರೂ ದೂರಮಾಡಿದ್ದ ರಾಚಪ್ಪನೊಡನೆ ಅಕೃತ್ರಿಮವಾದ ಸ್ನೇಹವನ್ನು ಬೆಳಸಬೇಕೆಂಬ ಬಲವಾದ ಆಸೆಯೂ ಇತ್ತು.

ಮೊತ್ತಮೊದಲು ಸ್ನೇಹ ಮೊಳೆಯಬೇಕೆ ಹೊರತು ಬೆಳಸತಕ್ಕದ್ದಲ್ಲ. ಮೊಳೆತ ಮೇಲೆ ಬೆಳಸುವಿಕೆ, ಕೃಷಿ. ಹರಿಜನರು ಕೊಳಕರು, ಶ್ವಪಚರು, ಕೀಳುಜನ; ಸ್ನೇಹದ ಮಾತು ಹಾಗಿರಲಿ, ನಮ್ಮ ಸಹಾನುಭೂತಿಗೂ ಅರ್ಹರಲ್ಲ ಎಂಬೀ ಬಗೆಯ ಮುನ್ನೊಲವು ಎದುವರೆಗೆ ಮನದಲ್ಲಿ ಮನೆ ಮಾಡಿಕೊಂಡಿರುವುದೋ ಅದುವರೆಗೆ ಅವರಲ್ಲಿ ಸ್ನೇಹ ಮೊಳೆಯಲಾರದು. ಸುಂದರಮೂರ್ತಿಯಲ್ಲಿ ಈ ಬಗೆಯ ಮುನ್ನೊಲವು ನೆಲಸಿರಲಿಲ್ಲ. ಆದ್ದರಿಂದಲೇ ರಾಚಪ್ಪನ ವಿಷಯವಾಗಿ ಸುಂದರಮೂರ್ತಿಯ ಮನಸ್ಸಿನಲ್ಲಿ ಸ್ನೇಹಭಾವ ಆಗಲೇ ಮೊಳೆತುಬಿಟ್ಟಿತ್ತು. ಅದನ್ನು ಮೊಳಕೆಯಲ್ಲೇ

ಬಾಡಗೊಡದೆ ಬೆಳಸಬೇಕೆಂದು ಸುಂದರಮೂರ್ತಿ ಬಯಸಿದ್ದು ತೀರ ಸಹಜ.

ಸುಂದರಮೂರ್ತಿ ತನ್ನ ಭಾವನೆಗಳನ್ನು ರಾಚಪ್ಪನ ಮುಂದಿಟ್ಟ:

"ರಾಚಪ್ಪ, ಅಸ್ಪೃಶ್ಯತೆಯ ನಿವಾರಣೆಯ ವಿಷಯದಲ್ಲಿ ನನಗೂ ನಿಮಗೂ ಭಿನ್ನಾಭಿಪ್ರಾಯವಿರಲಾರದು. ನನಗಿಂತಲೂ ನಿಮಗೆ ಈ ವಿಷಯದಲ್ಲಿ ಹೆಚ್ಚು ಆಸಕ್ತಿಯಿದೆಯೆಂದು ನನ್ನ ನಂಬಿಕೆ. ನಾನು ಒಬ್ಬನೇ ಆಗಲಿ ನಾವಿಬ್ಬರೂ ಕೂಡಿಯೇ ಆಗಲಿ ಒಂದು ವಿಧಾಯಕ ಕಾರ್ಯಕ್ರಮ ಕೈಕೊಳ್ಳುವಷ್ಟು ಚೈತನ್ಯ ನಮ್ಮಲ್ಲಿಲ್ಲ. ಅದಕ್ಕೆ ಒಟ್ಟು ಜನತೆಯ, ಸರಕಾರದ ಬೆಂಬಲ ಬೇಕು. ಈ ವಿಷಯದಲ್ಲಿ ಸರಕಾರ ಮುಂದುವರಿಯದೆ ನಾವು ಏನು ಮಾಡುವುದೂ ಕಷ್ಟವೆಂದು ನನಗೆ ತೋರುತ್ತದೆ. ಸರಕಾರ ಏನು ಮಾಡಲಿ ಬಿಡಲಿ, ಈ ವಿಚಾರದಲ್ಲಿ ಪ್ರಜಾಭಿಪ್ರಾಯವನ್ನು ರೂಪಗೊಳಿಸುವ ಕಾರ್ಯದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತ್ಯನುಸಾರ ಕೆಲಸಮಾಡಬಹುದೆಂದು ನನಗೆ ತೋರುತ್ತದೆ. ಆ ದಿವಸ ಚರ್ಚಾಕೂಟದ ಅಧ್ಯಕ್ಷರು ವಿದ್ಯಾರ್ಥಿಗಳಿಗೆ ಕೊಟ್ಟ ಸಲಹೆಯ ಉದ್ದೇಶವಾದರೂ ಇದೇ ಎಂದು ನನಗೆ ತೋರುತ್ತದೆ. ವಿದ್ಯಾರ್ಥಿಗಳಾದ ನಾವು ನಮ್ಮ ಹಳ್ಳಿಗಳಲ್ಲಾದರೂ ಪ್ರಚಾರಕಾರ್ಯ ನಡಸಬೇಕು. ಇತ್ತ, ಹರಿಜನರನ್ನು ಸಮಾಜದೊಳಕ್ಕೆ ಕರೆದುಕೊಳ್ಳಿರೆಂದು ಬ್ರಾಹ್ಮಣ ವೈಶ್ಯ ಶೂದ್ರಾದಿಗಳಿಗೆ ಬೋಧಿಸಬೇಕು; ಅತ್ತ, ಮದ್ಯಪಾನ ಮೊದಲಾದ ದುರಭ್ಯಾಸಗಳನ್ನು ಬಿಟ್ಟು ಒಳ್ಳೆಯ ನಡತೆ ಕಲಿಯಿರೆಂದು ನಿಮ್ಮ ಜನಕ್ಕೆ ಬೋಧಿಸಬೇಕು. ಇದಕ್ಕೆ ನಿಮ್ಮ ನೆರವೂ ಬೇಕು, ರಾಚಪ್ಪ; ನೀವು ವಿದ್ಯಾವಂತರು; ನಿಮ್ಮ ಜನ ನಿಮ್ಮ ಮಾತು ಲಾಲಿಸಿಯಾರೆಂದು ತೋರುತ್ತದೆ.

ಸುಂದರಮೂರ್ತಿಯ ಮಾತನ್ನು ಸಾವಧಾನವಾಗಿ ಕೇಳುತ್ತಿದ್ದ ರಾಚಪ್ಪ ಈ ಬಗೆಯ ಮಾತುಕಥೆಯನ್ನು ನಿರೀಕ್ಷಿಸಿರಲಿಲ್ಲ. ಚರ್ಚಾಕೂಟಗಳಲ್ಲಿ ಅನೇಕರು ಪಕ್ಷಪ್ರತಿಪಕ್ಷಗಳನ್ನು ವಹಿಸಿ ಮಾತಾಡಿದ ಮಾತ್ರಕ್ಕೆ, ಹಾಗೆ ಮಾತಾಡಿದವರೆಲ್ಲ ತಾವು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕಾರ್ಯಪ್ರಪಂಚದಲ್ಲಿ ಅನುಷ್ಠಾನಕ್ಕೆ ತರುವರೆಂದು ಯಾರೂ ಎಣಿಸುವುದಿಲ್ಲ. ಸುಂದರಮೂರ್ತಿ ಉಳಿದವರಂತಲ್ಲದೆ ತನ್ನ ವಿಷಯದಲ್ಲಿ ಸಹಾನು

ಭೂತಿಯಿಂದ ವರ್ತಿಸುತ್ತಿದ್ದುದಕ್ಕಾಗಿ ರಾಚಪ್ಪ ಅವನಲ್ಲಿ ಒಂದು ಗೌರವ, ಅಭಿಮಾನ, ತಳೆದಿದ್ದ; ಚರ್ಚಾಕೂಟದಲ್ಲಿ ಹರಿಜನರ ಉದ್ಧಾರ ಪರವಾಗಿ ಉತ್ಸಾಹದಿಂದ ಮಾತಾಡಿದ್ದಕ್ಕಾಗಿ ಸಂತೋಷಗೊಂಡಿದ್ದ; ಆಮೇಲೂ ಸಹ ತನ್ನನ್ನು ಬಹು ಸ್ನೇಹದಿಂದ ಕಂಡುಕೊಳ್ಳುತ್ತಿದ್ದುದಕ್ಕಾಗಿ ಅವನಿಗೆ ಮನಸ್ಸಿನಲ್ಲೇ ಕೃತಜ್ಞತೆಯನ್ನು ತೋರುತ್ತಿದ್ದ. ರಾಚಪ್ಪನು ವಿದ್ಯಾವಂತ ನಾದಂತೆಲ್ಲ, ಹಿಂದೂಗಳೆನ್ನಿಸಿಕೊಂಡವರು ತನ್ನ ಪಂಗಡದ ಜನರನ್ನು ಯಾವ ಸ್ಥಿತಿಯಲ್ಲಿಟ್ಟಿದ್ದಾರೆಂಬುದನ್ನು ನೆನೆದು ಅವನ ಹೃದಯ ಒಮ್ಮೆ ಮರುಗುತ್ತಿತ್ತು, ಒಮ್ಮೆ ಕೋಪದಿಂದ ಕುದಿಯುತ್ತಿತ್ತು; ಅವರ ಮೇಲೆ ಒಂದಲ್ಲ ಒಂದು ದಿನ, ತನ್ನ ಜನಕ್ಕೆ ಶಕ್ತಿಬಂದಾಗ, ಅಥವಾ ತನಗೆ ಅಧಿಕಾರ ಬಂದಾಗ, ಸೇಡುತೀರಿಸಿಕೊಳ್ಳಬೇಕೆಂಬ ಭಾವ ಮೊಳೆಯುತ್ತಿತ್ತು. ಆದರೆ, ಮರುಕ್ಷಣವೆ, ಮಹಾತ್ಮ ಗಾಂಧಿ ಮೊದಲುಗೊಂಡು ಸುಂದರ ಮೂರ್ತಿಯವರೆಗೆ ಹರಿಜನರ ಉದ್ಧಾರಕಾರ್ಯದಲ್ಲಿ ತೊಡಗಿರುವವರೆಲ್ಲ ಹಿಂದೂಗಳೇ ಎಂಬುದನ್ನು ನೆನೆದು ಅವನ ಹೃದಯ ಸಮಾಧಾನಗೊಳ್ಳುತ್ತಿತ್ತು. ತನ್ನ ತರಗತಿಯವರನ್ನು ಕಂಡರೂ ರಾಚಪ್ಪನಿಗೆ ಒಳಗೊಳಗೇ ಅಸಮಾಧಾನ, ಆಕ್ರೋಶ: ತಾನು ಅವರಂತೆಯೇ ವಿದ್ಯಾವಂತ ನಲ್ಲವೆ? ಅವರಂತೆಯೇ ನಿರ್ಮಲವಾಗಿಲ್ಲವೆ, ಅಂದಚೆಂದವಾಗಿ ಉಡುಪು ಹಾಕುತ್ತಿಲ್ಲವೆ? ತಾನೇನೂ ಮದ್ಯಪಾನ ಮಾಡುವುದಿಲ್ಲ, ಹೊಗೆ ಕೂಡ ಸೇದುವುದಿಲ್ಲ. ತರಗತಿಯವರೆಲ್ಲ ತನ್ನನ್ನು ಏಕೆ ಹೀಗೆ ದೂರಮಾಡಬೇಕು? ಆದರೆ ಸುಂದರಮೂರ್ತಿ ತನ್ನ ಸ್ನೇಹಹಸ್ತವನ್ನು ನೀಡಿದಂದು ರಾಚಪ್ಪನ ಈ ಬಗೆಯ ಅಸಮಾಧಾನ ಎಷ್ಟೋ ಕಡಮೆಯಾಯಿತು. ತನ್ನಲ್ಲಿ ಅಡಗಿದ್ದ ಅಲ್ಪಸ್ವಲ್ಪ ಅಸಮಾಧಾನವನ್ನು ಕೂಡ ರಾಚಪ್ಪ ಇತರರಿಗೆ ಹೇಳಿಕೊಂಡಿರಲಿಲ್ಲ, ಮುಖಭಾವದಲ್ಲಿ ಕೂಡ ವ್ಯಕ್ತಪಡಿಸಿರಲಿಲ್ಲ. ಹರಿಜನರೆಲ್ಲರೂ ತಮ್ಮ ನೋವನ್ನು ನೋವಿದೆಯೆಂಬ ಅರಿವು ಕೂಡ ಇಲ್ಲದೆ ಹೇಗೆ ಶತಮಾನಗಳಿಂದ ಮೂಕರಾಗಿ ಸಹಿಸುತ್ತಿದ್ದಾರೆಯೋ ಹಾಗೆಯೇ ಅವರ ಪ್ರತಿನಿಧಿಯಾದ ರಾಚಪ್ಪನೂ ಕೂಡ ತನ್ನ ನೋವನ್ನು ಮೂಕನಾಗಿ ಸಹಿಸುತ್ತಿದ್ದ—ಆದರೆ, ಆ ನೋವಿನ ಅರಿವಿತ್ತು ಇವನಿಗೆ. ನೊಂದ ಹೃದಯ ಅವಕಾಶ ಸಿಕ್ಕಿದಾಗ ತನ್ನ ನೋವನ್ನು ತೋಡಿಕೊಳ್ಳಲೆಳಸುತ್ತದೆ.

"ಸುಂದರಮೂರ್ತಿಗಳೇ, ನಮ್ಮ ಪಂಗಡದ ಜನರನ್ನು ಮೇಲೆತ್ತ ಬೇಕೆಂದು ನೀವು ಉದ್ದೇಶಪಟ್ಟುಕೊಂಡಿದ್ದೀರಿ. ಇದು ಸಂತೋಷದ ಸಂಗತಿ. ನಮ್ಮ ಜನದ ಉದ್ಧಾರಕ್ಕೆ ಬ್ರಾಹ್ಮಣರಾದ ನೀವೇ ಮುಂದೆ ಬರುತ್ತಿರುವುದನ್ನು ನೋಡಿ ನನ್ನ ಮನಸ್ಸಿನ ನೋವು ಎಷ್ಟೋ ಕಡಮೆಯಾಗಿದೆ ನೋವು ಏಕೆ ಎಂದು ಕೇಳಬಹುದು ನೀವು. ನಮ್ಮ ಜನವೆಲ್ಲ ಪಡುತ್ತಿರುವ ನೋವಿಗಾಗಿ ನಿಮ್ಮನ್ನು ಈಗ ದೂಷಿಸಿ ಫಲವಿಲ್ಲ. ಒಬ್ಬರನ್ನೊಬ್ಬರು ದೂಷಿಸುವುದರಿಂದ ಏನೂ ಕಾರ್ಯಸಾಧನೆಯಾಗುವುದಿಲ್ಲ. ಆದರೂ, ನಿಮ್ಮ ಸ್ನೇಹಿತರುಗಳು ನನ್ನನ್ನು ಎಷ್ಟು ದೂರವಾಗಿ ಕಾಣುತ್ತಿರುವರೆಂಬುದನ್ನು ನೆನೆದು ನನ್ನ ಮನಸ್ಸು ತುಂಬ ನೊಂದಿದೆ. ಒಂದೊಂದು ಸಲ ಅನ್ನಿಸುತ್ತಿತ್ತು: ಕ್ರೈಸ್ತಮತಕ್ಕೆ ಸೇರಿಬಿಟ್ಟು ನಿಮ್ಮೊಡನೆ ಬಂದು ಕುಳಿತರೆ ಆಗ ಏನು ಮಾಡುತ್ತೀರಿ ಎಂದು. ಆದರೆ. ಸುಂದರಮೂರ್ತಿಗಳೆ, ನಿಮ್ಮ ಸಹವಾಸ ದೊರೆತ ಮೇಲೆ ನನ್ನ ಮನಸ್ಸಿನ ಸ್ಥಿತಿಯೇ ಬೇರೆಯಾಗಿದೆ. ಮತ ಬದಲಾಯಿಸಿಕೊಂಡ ಮಾತ್ರಕ್ಕೆ ಬದುಕು ಬದಲಾಗುವುದಿಲ್ಲ. ನಮ್ಮ ಜನ ತಮ್ಮ ಬದುಕನ್ನು ಬದಲಾಯಿಸಿಕೊಳ್ಳಬೇಕು, ತಿದ್ದಿಕೊಳ್ಳಬೇಕು. ಅದಕ್ಕೆ ನಿಮ್ಮಂಥವರು ಇನ್ನೂ ಹೆಚ್ಚು ಮಂದಿ ಮುಂದೆ ಬಂದು ಕೆಲಸ ಮಾಡಿದರೆ ಮಾತ್ರ ಸಾಧ್ಯ. ನನ್ನೊಬ್ಬನಿಂದ ಏನು ಸಾಧ್ಯವಾದೀತು?"

ರಾಚಪ್ಪನ ಮನೋಭಾವವನ್ನರಿತು ಸುಂದರಮೂರ್ತಿಗೆ ತುಂಬ ಸಂತೋಷವಾಯಿತು. "ನಾನು ಮೊದಲೇ ಹೇಳಿದ ಹಾಗೆ, ನಮ್ಮ ಕೈಲಾದಷ್ಟನ್ನು ನಾವು ನಿರ್ವಂಚನೆಯಾಗಿ ಮಾಡೋಣ. ನನ್ನ ಊರಿನಲ್ಲಿ ನಾನು ಆದಷ್ಟು ಕೆಲಸಮಾಡುತ್ತೇನೆ; ನಿಮ್ಮ ಊರಿನಲ್ಲಿ ನೀವು ಆದಷ್ಟು ಕೆಲಸ ಮಾಡಿ. ಆಗಬಹುದಲ್ಲ? ಅಂದ ಹಾಗೆ, ನಿಮ್ಮೂರಾವುದು?"

"ಊರೇನು ಊರು, ಸಣ್ಣ ಹಳ್ಳಿ; ಕೆಂಚನ ಹಳ್ಳಿ ಅಂತ. ತಿರುಮಕೂಡಲ ನರಸೀಪುರದ ಹತ್ತಿರ."

"ಹಾಗಾದರೆ ಇಲ್ಲಿಗೆ ಹತ್ತಿರವೇ ಆಯಿತು. ನಿಮ್ಮ ತಂದೆ ತಕ್ಕಮಟ್ಟಿಗೆ ಅನುಕೂಲಸ್ಥರು ಅಂತ ಕಾಣುತ್ತೆ. ನಿಮ್ಮ ಗೃಹಕೃತ್ಯದ ವಿಚಾರ ಕೇಳುತ್ತೇನೆ ಅಂತ ಏನೂ ತಿಳಿದುಕೊಳ್ಳಬೇಡಿ; ಬಹುದಿವಸಗಳಿಂದ ಕೇಳ

ಬೇಕು ಅಂತ ಕುತೂಹಲ, ಕೇಳಿದೆ; ಕ್ಷಮಿಸಬೇಕು...." ಸಂಕೋಚದಿಂದ ನುಡಿದ ಸುಂದರಮೂರ್ತಿ.

ರಾಚಪ್ಪ ಹೇಳಿದ: "ಅದಕ್ಕೆ ಇಷ್ಟು ಸಂಕೋಚ ಏಕೆ ಸುಂದರ ಮೂರ್ತಿಗಳೆ? ಸ್ನೇಹಿತರಿಗೆ ಏನು ಬೇಕಾದರೂ ತಿಳಿದುಕೊಳ್ಳುವ ಹಕ್ಕಿದೆ. ಕೆಂಚಪ್ಪ ನಮ್ಮ ಅಜ್ಜ; ತಿರುಮಕೂಡ್ಲು ನರಸೀಪುರ ಅವರ ಸ್ಥಳ; ಅವರ ಹೆಸರೇ ಹಳ್ಳಿಯದು. ಅವರು ಒಳ್ಳೇ ಭಾರಿ ಜಟ್ಟಿಗಳಾಗಿದ್ದರಂತೆ. ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಜಟ್ಟಿ ಕಾಳಗ ಎಂದರೆ ತುಂಬ ಪ್ರೀತಿಯಂತೆ. ನಮ್ಮ ಅಜ್ಜನ ಹೆಸರು ಅವರ ಕಿವಿಗೆ ಮುಟ್ಟಿತಂತೆ. ಒಂದು ಸಲ ನವರಾತ್ರಿ ಹಬ್ಬಕ್ಕೆ ಅವರನ್ನು ಕರಸಿದ್ದರಂತೆ. ಆಗ ಅವರ ಸಾಮರ್ಥ್ಯ ನೋಡಿ ಬೆರಗಾಗಿ, ಅವರನ್ನು ಮುಂದಿನ ವರ್ಷವೂ ಕರಸಿದರಂತೆ; ಆ ವರ್ಷ ಉತ್ತರದೇಶದಿಂದಲೂ ಕೆಲವು ಹೆಸರಾದ ಜಟ್ಟಿಗಳನ್ನು 'ಸ್ಪೆಷಲ್ಲಾಗಿ' ಕರಸಿದ್ದರಂತೆ; ಆ ಜಟ್ಟಿಗಳನ್ನೆಲ್ಲ ನಮ್ಮ ಅಜ್ಜ ಸೋಲಿಸಿಬಿಟ್ಟರಂತೆ. ಮಹಾರಾಜರು ಸಂತೋಷಪಟ್ಟು, ಬಳಿಗೆ ಕರಸಿ, ಊರು ಕುಲ ಎಲ್ಲ ವಿಚಾರಿಸಿ, 'ನಿನಗೆ ಏನು ಬೇಕೋ ಕೇಳು ಕೆಂಚಯ್ಯ.' ಎಂದರಂತೆ. 'ಹೊಲೆಯನಿಗೆ ದರ್ಶನ ಕೊಟ್ಟಿರಲ್ಲ ಪ್ರಭುಗಳು, ಅದಕ್ಕಿಂತ ಇನ್ನೇನು ಬೇಕು?' ಎಂದರಂತೆ ನಮ್ಮ ಅಜ್ಜ. ಅದಕ್ಕೆ ಮಹಾರಾಜರು 'ಹೊಲೆಯನೇನು, ಹಾರುವನೇನು, ನಮ್ಮ ಪ್ರಜೆಗಳೆಲ್ಲ ನಮಗೆ ಒಂದೆ. ಬೇಕಾದ್ದು ಕೇಳಿಕೊ' ಎಂದರಂತೆ ಮಹಾರಾಜರು. 'ನಾನು ಸಾಯೋ ವರೆಗೂ ತಮ್ಮ ಪಾದಸೇವೆ ಒಂದಿದ್ದರೆ ಸಾಕು' ಎಂದರಂತೆ ನಮ್ಮ ಅಜ್ಜ. 'ಆಗಲಿ, ಹೋಗು. ತಿರುಮಕೂಡ್ಲು ನರಸೀಪುರದ ಹತ್ತಿರ ನಿನಗೆ ಇಪ್ಪತ್ತು ಎಕರೆ ಜಮೀನು ಕೊಟ್ಟಿದ್ದೇವೆ. ನೀನು ಇನ್ನು ಮುಂದೆ ಅಲ್ಲಿ ನಮ್ಮ ಸೇವೆ ಮಾಡಬೇಕು. ಒಂದು ಗರಡಿ ಕಟ್ಟಿ, ಪ್ರತಿವರ್ಷವೂ ನವರಾತ್ರಿ ಹಬ್ಬಕ್ಕೆ ಒಂದು ಹೊಸ ಜಟ್ಟಿ ಜೊತೆ ಕಳಿಸಿಕೊಡಬೇಕು. ನಾವು ಅವರ ಕಾಳಗ ನೋಡಿ ಸಂತೋಷಪಡ್ತೇವೆ. ಜಮೀನನ್ನು ನೀನು ವಂಶಪಾರಂಪರ್ಯವಾಗಿ ಅನುಭೋಗಿಸಬಹುದು.' ಎಂದು ಅಪ್ಪಣೆಕೊಟ್ಟರಂತೆ. ನಮ್ಮ ಅಜ್ಜನಿಗೆ ಬಂದ ದತ್ತಿ ತಿರುಮಕೂಡಲು ನರಸೀಪುರಕ್ಕೆ ಐದು ಮೈಲಿ. ನಮ್ಮ ಅಜ್ಜ ಹೆಂಡತಿ ಮಕ್ಕಳನ್ನು ಕರಕೊಂಡು ಅಲ್ಲಿಯೇ ಹೋಗಿ ನೆಲಸಿ,

ಅಲ್ಲಿ ಒಂದು ಗರಡಿಮನೆ ಕಟ್ಟಿದರಂತೆ. ಆ ಗರಡಿಮನೆ ಬಹು ಪ್ರಸಿದ್ಧವಾಗಿ, ಅದರ ಸುತ್ತ ಒಂದು ಹಳ್ಳಿಯೇ ಬೆಳೆಯಿತಂತೆ. ನಮ್ಮ ಅಜ್ಜ ತಾವು ಬದುಕಿರುವವರೆಗೂ ಮಹಾರಾಜರು ಅಪ್ಪಣೆ ಕೊಡಿಸಿದ್ದ ರೀತಿಯಲ್ಲಿ ಅವರ ಸೇವೆ ಮಾಡಿದರಂತೆ. ಇದು ನಮ್ಮ ಅಜ್ಜನ ತಲೆಗೇ ನಿಂತುಹೋಯಿತಂತೆ. ನಮ್ಮ ಅಜ್ಜನಿಗೆ ಇಬ್ಬರು ಗಂಡುಮಕ್ಕಳು. ನಮ್ಮ ತಂದೆ ಅವರ ತಮ್ಮ. ಆಸ್ತಿ ಪಾಲಾಯಿತು. ನಮ್ಮ ಚಿಕ್ಕಪ್ಪ, ನಮ್ಮ ತಂದೆ ಇಬ್ಬರೂ ಆಸ್ತಿ ನೋಡಿಕೊಂಡು, ಅದರಿಂದ ಬಂದ ಫಸಲಿನಿಂದ ಜೀವನ ನಡಿಸಿಕೊಂಡು ಬಂದರು. ಈಗಲೂ ಹಾಗೆಯೇ ನಡೆಯುತ್ತಿದೆ; ಈಗ ನಮ್ಮ ತಂದೆ ಮುದುಕರು " ಎಂದು ರಾಜಪ್ಪ ನಿಲ್ಲಿಸಿದ.

"ಮುಮ್ಮಡಿ ಕೃಷ್ಣರಾಜ ಒಡೆಯರ ಹೃದಯ ಎಷ್ಟು ವಿಶಾಲವಾದ್ದು! ನಮ್ಮ ಈಗಿನ ಮಹಾರಾಜರಾದರೂ ಅಷ್ಟೆ, ತುಂಬ ವಿಶಾಲ ಮನಸ್ಸಿನವರು. ಆದರೂ ನಮ್ಮ ಸೀಮೆಯಲ್ಲಿ ಹರಿಜನರಿಗೆ ಎಷ್ಟು ಸೌಕರ್ಯ ಬೇಕೋ ಅಷ್ಟು ಇನ್ನೂ ದೊರೆತಿಲ್ಲ. ಅವರಿಗೆ ಇನ್ನೂ ದೇವಾಲಯಕ್ಕೆ ಪ್ರವೇಶ ದೊರೆತಿಲ್ಲ. ಪಾಪ, ಅವರು ತಾನೇ ಪ್ರಜಾಭಿಪ್ರಾಯವನ್ನು ವಿರೋಧಿಸಿ ಹೇಗೆ ಅಪ್ಪಣೆ ಮಾಡುವುದು?.... ಅದಿರಲಿ, ನಿಮ್ಮ ಹಳ್ಳಿಯಲ್ಲಿ ಈಗ ಎಷ್ಟು ಮನೆಗಳಿವೆ? ಎಲ್ಲರೂ ಹರಿಜನರೆ?"

"ನಮ್ಮ ಹಳ್ಳಿಯಲ್ಲಿ ಮೊದಲು ನೆಲಸಿದವರೆಲ್ಲ ಹರಿಜನರೆ. ಈಗ ಕೆಲವರು ಇತರ ಹಿಂದೂ ಜನರೂ ಬಂದು ವಾಸವಾಗಿದ್ದಾರೆ. ಒಟ್ಟು ಐವತ್ತು ಅರುವತ್ತು ಮನೆಗಳಿರಬಹುದು."

"ಓದುವ ಶಾಲೆ ಇದೆಯೊ?"

"ಓದುವ ಶಾಲೆಯೂ ಇಲ್ಲ, ಏನೂ ಇಲ್ಲ."

"ಹಾಗಾದರೆ ನಿಮ್ಮ ವಿದ್ಯಾಭ್ಯಾಸ ಹೇಗೆ ನಡೆಯಿತು?"

"ನಮ್ಮ ತಾಯಿಯ ತವರುಮನೆ ತಿರುಮಕೂಡ್ಲು ನರಸೀಪುರದಲ್ಲಿ; ಅವರ ತಂದೆಗೆ ಬೇರೆ ಗಂಡುಮಕ್ಕಳಿಲ್ಲ. ನನ್ನನ್ನೇ ಮನೆಯಲ್ಲಿಟ್ಟುಕೊಂಡು ಸಾಕುತ್ತ ಬಂದರು. ನಾನು ಚಿಕ್ಕವನಿದ್ದಾಗ ಹುಡುಗರು ಶಾಲೆಗೆ ಹೋಗುವುದನ್ನು ನೋಡಿ ನಾನೂ ಓದಬೇಕು, ಶಾಲೆಗೆ ಹೋಗಬೇಕು, ಅಂತ ಹಟ ಹಿಡಿಯುತ್ತಿದ್ದೆನಂತೆ. ನಮ್ಮ ತಂದೆ, ಈ ಅಜ್ಜ—ಇಬ್ಬರೂ ತುಂಬ

ಪ್ರಯತ್ನಪಟ್ಟು ನನ್ನನ್ನು ಶಾಲೆಗೆ ಸೇರಿಸಿದರು. ನಾನು ಶಾಲೆಗೆ ಸೇರಿದಾಗಲೇ ನನಗೆ ಹತ್ತುವರ್ಷ ಆಗಿ ಹೋಗಿತ್ತು.''

"ಏನೂ ತೊಂದರೆ ಇಲ್ಲದೆ ಶಾಲೆಗೆ ಪ್ರವೇಶ ದೊರೆಯಿತೆ?"

''ತೊಂದರೆ ಇಲ್ಲದೆ ಏನು, ಬೇಕಾದಷ್ಟಿತ್ತು. ಮೊದಲು ಸೇರಿಸಿಕೊಳ್ಳುವುದಿಲ್ಲ ಎಂದರು. ಒಂದು ಸಲ ಶಾಲೆಗೆ ಇನ್‌ಸ್ಪೆಕ್ಟರು ಬಂದಾಗ ಅವರಲ್ಲಿ ನಮ್ಮ ಅಜ್ಜ ಬೇಡಿಕೆ ಸಲ್ಲಿಸಿದರು. ಇನ್‌ಸ್ಪೆಕ್ಟರು ಶಾಲೆಯ ಮುಖ್ಯೋಪಾಧ್ಯಾಯರಿಗೆ ಹೇಳಿದರು— 'ಪಂಚಮರಿಗೆ ವಿದ್ಯಾಭ್ಯಾಸಕ್ಕೆ ಹೆಚ್ಚು ಅನುಕೂಲ ಕಲ್ಪಿಸಿಕೊಟ್ಟಿಲ್ಲವೇ ಹೊರತು, ಅವರನ್ನು ಶಾಲೆಗೆ ಸೇರಿಸಲೇ ಕೂಡದು ಅಂತ ಎಲ್ಲೂ ನಿಯಮವಿಲ್ಲ. ಸೇರಿಸಿಕೊಳ್ಳಿ ಪಾಪ; ದೂರ ಕೂರಿಸಿ ಬೇಕಾದರೆ'' ಅಂದರು. ಮೊದಲ ಸಲ ಪ್ರವೇಶ ದೊರೆತ ಮೇಲೆ ಕಷ್ಟವಾಗಲಿಲ್ಲ ನಂಜನಗೂಡಿನಲ್ಲಿ ಹೈಸ್ಕೂಲು ವಿದ್ಯಾಭ್ಯಾಸವಾಯಿತು; ಅದಕ್ಕಾಗಿ ನಮ್ಮ ಅಜ್ಜ ನಂಜನಗೂಡಿಗೇ ಬಂದುಬಿಟ್ಟರು. ಈಗಲೂ ನಂಜನಗೂಡಿನಲ್ಲೇ ಇದ್ದಾರೆ. ನಾನೂ ನಂಜನಗೂಡಿನಿಂದ ಪ್ರತಿನಿತ್ಯ ರೈಲಿನಲ್ಲಿ ಕಾಲೇಜಿಗೆ ಬರುತ್ತೇನೆ.''

"ನಿಮ್ಮ ತಂದೆ ಎಲ್ಲಿದ್ದಾರೆ ಈಗ?"

"ಅವರು ಕೆಂಚನಹಳ್ಳಿಯಲ್ಲೇ ಇದ್ದಾರೆ."

''ಅವರು ಮುದುಕರು ಅಂದಿರಲ್ಲ, ಅವರಿಗೆ ಸಹಾಯಕ್ಕೆ ಯಾರೂ ಇಲ್ಲವೆ?''

''ನನ್ನ ತಮ್ಮ ಒಬ್ಬ ಇದ್ದಾನೆ. ಅವನು ಜಮೀನು ನೋಡಿಕೊಳ್ಳುವ ಕೆಲಸದಲ್ಲಿ ಸಹಾಯ ಮಾಡುತ್ತಾನೆ."

''ಅವನನ್ನು ಶಾಲೆಗೆ ಸೇರಿಸಲಿಲ್ಲವೇಕೆ?"

"ಅವನಿಗೆ ಓದಬೇಕೆಂಬ ಆಸೆಯೇ ಹುಟ್ಟಲಿಲ್ಲ. ನಮ್ಮ ಜನದಲ್ಲಿ, ಮಕ್ಕಳನ್ನು ಶಾಲೆಗೆ ಹಾಕಿ ಓದಿಸಬೇಕೆಂಬ ಆಸೆ ದೊಡ್ಡವರಿಗಿರುವುದಿಲ್ಲ; ಓದಬೇಕೆಂಬ ಆಸೆ ಹುಡುಗರಿಗೆ ಹುಟ್ಟುವುದಿಲ್ಲ. ಆ ಆಸೆ ಇದ್ದಿದ್ದರೆ ನಮ್ಮ ಜನ ತಾವಾಗಿಯೇ ಮುಂದೆ ಬರುತ್ತಿದ್ದರು; ಸರಕಾರ ತಾನಾಗಿಯೇ ಸೌಕರ್ಯ ಕಲ್ಪಿಸುತ್ತಿತ್ತು.''

"ನಾವು ಆ ಆಸೆ ಹುಟ್ಟಿಸಬೇಕು.''

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ಮತ್ತೆ ಸುಂದರ ಮೂರ್ತಿಯೇ ಮಾತಿಗೆ ಮೊದಲುಮಾಡಿದ: "ಹೊತ್ತಾಯಿತು ಅಂತ ಕಾಣುತ್ತೆ, ಏಳೋಣವೆ?" ಎಂದು ಮೇಲಕ್ಕೆದ್ದ; ರಾಚಪ್ಪನೂ ಎದ್ದ. ಹಿಂದಿರುಗುವಾಗ ನಡೆಯುತ್ತಲೇ ಸುಂದರಮೂರ್ತಿ ತನ್ನ ವಿಚಾರ ಕುರಿತು ರಾಚಪ್ಪನಿಗೆ ತಿಳಿಯಹೇಳಿದ:

"ನಿಮ್ಮ ಗೃಹಕೃತ್ಯದ ವಿಚಾರ ಎಲ್ಲ ಕೇಳಿ ತಿಳಿದುಕೊಂಡು ನಮ್ಮ ಗೃಹಕೃತ್ಯದ ವಿಚಾರ ನಿಮಗೆ ಹೇಳದೆ ಇರುವುದು ನ್ಯಾಯವಲ್ಲ. ದೀರ್ಘ ವಾಗಿ ಹೇಳಿದರೆ ಬೇಸರವಾಗಬಹುದು; ಏಕೆಂದರೆ ನಿಮ್ಮ ಪೂರ್ವಿಕರ ಕಥೆ ಯಷ್ಟು ಸ್ವಾರಸ್ಯವಾಗಿಲ್ಲ ನಮ್ಮ ಪೂರ್ವಿಕರ ಕಥೆ. ನಮ್ಮೂರು ತೀರ ಹಳ್ಳಿಯೇನಲ್ಲ; ಸಬ್‌ತಾಲ್ಲೂಕು; ಮಿಡ್ಲ್‌ಸ್ಕೂಲು ಇದೆ; ಆಸ್ಪತ್ರೆ ಇದೆ; ಅಂಚೆಕಚೇರಿ ಇದೆ. ನಮ್ಮೂರು ಎಂದರೆ ನನಗೆ ತುಂಬ ಪ್ರೀತಿ; ನಮ್ಮೂರಿ ಗಿಂತ ಹೆಚ್ಚಾಗಿ ಅದರ ಹೆಸರಿನಲ್ಲಿ ನನಗೆ ಪ್ರೀತಿ ಹೆಚ್ಚು. ಅದರ ಹೆಸರು ಕೊಳಲೂರು ಅಂತ. ನಮ್ಮೂರು ಹೊಳೆನರಸೀಪುರಕ್ಕೆ ಹತ್ತೊಂಬತ್ತು ಮೈಲಿ; ಅಲ್ಲಿಯ ವರೆಗೆ ರೈಲಿನ ಪ್ರಯಾಣ, ಮುಂದಕ್ಕೆ ಬಸ್ಸಿನ ಪ್ರಯಾಣ, ಅಥವಾ ಎತ್ತಿನ ಗಾಡಿಯ ಪ್ರಯಾಣ. ನಮ್ಮ ಅಜ್ಜ ಮುತ್ತಜ್ಜ ಎಲ್ಲರೂ ಕೊಳಲೂರಿನ ಶಾನುಭೋಗರು; ತಕ್ಕ ಮಟ್ಟಿಗೆ ಆಸ್ತಿ ಗಳಿಸಿದರು; ನಮ್ಮ ಪೂರ್ವಿಕರ ವಿಚಾರ ನನಗೆ ಗೊತ್ತಿರುವುದು ಇಷ್ಟೆ. ಈ ಶಾನುಭೋಗಿಕೆ ನಮ್ಮ ತಂದೆಯ ಕಾಲಕ್ಕೇ ನಿಂತುಹೋಗುತ್ತದೋ ಏನೋ. ನಾನು ವಿದ್ಯಾವಂತನಾದೆ; ನನ್ನ ತಮ್ಮ ಬೆಂಗಳೂರಿನಲ್ಲಿ ನಮ್ಮ ಅಕ್ಕನ ಮನೆಯಲ್ಲಿ ಓದುತ್ತಿದ್ದಾನೆ, ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಓದುತ್ತಿದ್ದಾನೆ. ನಾನಾಗಲಿ ಅವನಾಗಲಿ ಶಾನುಭೋಗಿಕೆ ಪಟ್ಟಕಟ್ಟಿಕೊಳ್ಳುವಹಾಗಿಲ್ಲ. ಉಳಿದವರೆಂದರೆ ಮದುವೆಗೆ ನೆರೆದಿರುವಕ್ಕನನ್ನ ತಂಗಿ, ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿರುವ ನನ್ನ ಇನ್ನೊಬ್ಬ ತಮ್ಮ. ಇವನಿಗೆ ಓದನ್ನು ಇಲ್ಲಿಗೇ ನಿಲ್ಲಿಸಿಬಿಟ್ಟು ಇವನನ್ನು ಶಾನುಭೋಗಿಕೆಗೆ ತಯಾರುಮಾಡಬೇಕೆಂತ ನಮ್ಮ ತಂದೆಯ ಇಷ್ಟ. ಇದಕ್ಕೆ ನನ್ನ ತಾಯಿ, ನಾನು ಒಪ್ಪುವುದಿಲ್ಲ.

ರಾಚಪ್ಪ ನಡುವೆ ಬಾಯಿ ಹಾಕಿದ "ನಾನೂ ಅದನ್ನು ಒಪ್ಪುವುದಿಲ್ಲ. ನಿಮ್ಮ ತಮ್ಮನಿಗೆ ಓದಲು ಆಸೆ ಇಲ್ಲದೆ ಇದ್ದರೆ ಅದು ಬೇರೆಯ ಮಾತು.

ಅವರಿಗೆ ಆಸೆ ಇದ್ದರೆ, ಖಂಡಿತ ಓದಿಸಬೇಕು. ನನ್ನ ಓದುವ ಆಸೆಗೇ ನಮ್ಮ ವರು ಕಲ್ಲು ಹಾಕಲಿಲ್ಲ. ಇನ್ನು ನೀವು ಹಾಗೆ ಮಾಡಿದವಗುಂಟೆ? ಕಡೆಯ್ಪು ಪಕ್ಷ ಮೆಟ್ರಿಕ್ಯುಲೇಷನ್ ವರೆಗಾದರೂ ಓದಿಸಬೇಕು. ಅನಂತರ ಬೇಕಾದರೆ ಬಿಡಿಸಬಹುದು; ಶಾನುಭೋಗನಾಗು ಅಂತ ಹೇಳಬಹುದು. ಆಗಲೂ ಅವರು ಇನ್ನೂ ಓದಬೇಕು ಅಂತ ಇಷ್ಟಪಟ್ಟರೆ ಓದಿಲೇಬೇಕು. ಶಾನುಭೋಗ ಕೆಲಸದ ಹಕ್ಕು ನೀವು ಉಳಿಸಿಕೊಂಡು, ಸಂಬಳ ಕೊಟ್ಟು ಯಾರಿಂದ ಲಾದರೂ ಕೆಲಸ ಮಾಡಿಸಬಹುದು; ಅದೇನು ಕಷ್ಟದ ಕೆಲಸವಲ್ಲ."

ರಾಚಪ್ಪನ ಈ ಬುದ್ಧಿವಂತಿಕೆಯ ಮಾತು ಕೇಳಿ ಸುಂದರಮೂರ್ತಿ ಬೆರಗಾದ ಮೊದಲು; ತನಗೂ ಕೂಡ ಇಷ್ಟೇ ತೋಚಿರಲ್ಲಿಲ್ಲ; ತನ್ನ ತಂದೆಗೂ ತೋರಿರಲಾರದು; ಊರಿಗೆ ಹೋದಾಗ ತನ್ನ ತಂದೆಗೆ ಈ ಮಾತು ತಿಳಿಸ ಬೇಕು ಎಂದುಕೊಂಡ.

ಇಷ್ಟುಹೊತ್ತಿಗೆ ಇಬ್ಬರೂ ಸುಂದರಮೂರ್ತಿಯ ಕೊಠಡಿಯ ಹತ್ತಿರಕ್ಕೆ ಬಂದು ಅಲ್ಲಿ ಒಂದು ಐದು ನಿಮಿಷ ಮಾತಾಡುತ್ತ ನಿಂತಿದ್ದರು. ಕಡೆಯಲ್ಲಿ ರಾಚಪ್ಪ ಹೊರಡುವ ಪ್ರಸ್ತಾಪ ಮಾಡಿದ.

"ಎಲ್ಲಿಗೆ?" ಎಂದ ಸುಂದರಮೂರ್ತಿ.

"ನಂಜನಗೂಡಿಗೆ."

"ಹಾಗಾದರೆ ನಂಜನಗೂಡಿನಿಂದ ಬೆಳಗ್ಗೆ ನನಗಾಗಿ ಬಂದಿರಾ?"

"ಹೌದು."

"ನನಗಾಗಿ ಇಷ್ಟು ತೊಂದರೆ ತೆಗೆದುಕೊಂಡಿರಲ್ಲ. ನನಗೆ ಹೀಗೆಂದು ಗೊತ್ತಿದ್ದರೆ ನಾನೇ ನಂಜನಗೂಡಿಗೆ ಬರುತ್ತಿದ್ದೆ; ಅಲ್ಲಿಂದ ನಿಮ್ಮ ಹಳ್ಳಿಗೂ ಬರುತ್ತಿದ್ದೆ."

"ಈಗಲೂ ನನ್ನ ಜೊತೆ ಬರಬಹುದಲ್ಲ?" ಎಂದು ಆಹ್ವಾನಿಸಿದ ರಾಚಪ್ಪ.

"Thanks for the invitation (ಆಹ್ವಾನಕ್ಕಾಗಿ ವಂದನೆ). ಅಗತ್ಯವಾಗಿ ಬರುತ್ತೇನೆ. ಆದರೆ, ನಾನು ಮೊದಲೇ ಹೇಳಿದ ಹಾಗೆ, ಈ ವರ್ಷ ನಮ್ಮ ಊರಿನಲ್ಲಿ–ಊರೇನು, ಹಳ್ಳಿಯಲ್ಲಿ–ಸ್ವಲ್ಪ ಕೆಲಸ ಮಾಡ ಬೇಕೆಂದು ಆಸೆ ಇದೆ. ನಿಮ್ಮ ಹಳ್ಳಿಯಲ್ಲಿ ನೀವೂ ಏನಾದರೂ ಕೆಲಸ

ಮಾಡಿ. ನಾನು ಮಾಡಿದ ಕೆಲಸವನ್ನೆಲ್ಲ ನಿಮಗೆ ವರದಿ ಮಾಡುತ್ತೇನೆ; ನೀವು ಮಾಡಿದ ಕೆಲಸವನ್ನೆಲ್ಲ ನೀವು ನನಗೆ ವರದಿ ಮಾಡಿ. ಆ ಯೋಗ ವಿದ್ದರೆ, ಮುಂದೆ ಇಬ್ಬರೂ ಕೂಡಿ ಕೆಲಸ ಮಾಡೋಣ. ಇರಲಿ, ನೀವು ಊಟ ಮಾಡಿಕೊಂಡು ರೈಲಿಗೆ ಹೊರಡಬಹುದಲ್ಲ?" ಎಂದು ಊಟಕ್ಕೆ ಆಹ್ವಾನವಿತ್ತ ಸುಂದರಮೂರ್ತಿ.

"ಆವೊತ್ತಿನ ಪ್ರಸಂಗ ನೋಡಿ, ನಿಮಗೆ ತೊಂದರೆ ಕೊಡಲು ಇಷ್ಟ ಬರುವುದಿಲ್ಲ."

"ನೀವು ಯೋಚನೆ ಮಾಡಬೇಕಾಗಿಲ್ಲ. ನನ್ನ ಕೊಠಡಿಗೇ ಊಟ ತರಿಸಿಬಿಡುತ್ತೇನೆ. ಆಗಬಹುದಲ್ಲ?" ಎಂದ ಸುಂದರಮೂರ್ತಿ.

"ನನ್ನಲ್ಲಿ ಇಷ್ಟು ವಿಶ್ವಾಸವಿಟ್ಟು, ನೀವು ಇಷ್ಟೊಂದು ತೊಂದರೆ ತೆಗೆದು ಕೊಳ್ಳುವಾಗ ನಾನು ಒಲ್ಲೆ ಎಂದರೆ ನೀವು ಸುಮ್ಮನಿರುತ್ತೀರ?" ಎಂದು ರಾಚಪ್ಪ ನಗುತ್ತ ಕೇಳಿದ. ಸುಂದರಮೂರ್ತಿಯೂ ನಕ್ಕ. ಇಬ್ಬರು ನಗುತ್ತಲೇ ಕೊಠಡಿಗೆ ಹೋದರು.

೧೧

ಈ ಹೊತ್ತಿಗೆ ವಿಶ್ವನಾಥಶಾಸ್ತ್ರಿ ಕೋಳಲೂರಿನಲ್ಲಿ ಹಳಬನಾಗಿಬಿಟ್ಟಿದ್ದ; ಅಲ್ಲಿಯೂ ಊಟದ ಹೊತ್ತು. ನಂಜುಂಡಶಾಸ್ತ್ರಿಗಳ ಕುಟುಂಬವೆಲ್ಲ ಊಟಕ್ಕೆ ಕುಳಿತಿತ್ತು. ಕುಟುಂಬವೆಲ್ಲ ಎಂದರೆ— ನಂಜುಂಡಶಾಸ್ತ್ರಿಗಳು, ಅವರ ಹಿರಿಯ ಮಗ ವಿಶ್ವನಾಥ, ಅವನ ತಂಗಿ ಗೌರಿ, ಗೌರಿಗಿಂತ ಚಿಕ್ಕವರು ಇನ್ನಿಬ್ಬರು ಹೆಣ್ಣುಮಕ್ಕಳು— ಒಂಬತ್ತು ವರ್ಷದ ಪಾತಿ, ಆರು ವರ್ಷದ ಸಾತಿ. ನಂಜುಂಡಶಾಸ್ತ್ರಿಗಳ ಎರಡನೆಯ ಹೆಂಡತಿ ಸೀತಮ್ಮ ಬಡಿಸುವ ಕೆಲಸದಲ್ಲಿ ತನ್ನ ಅತ್ತೆ ಪಾರ್ವತಮ್ಮನವರಿಗೆ ಸಹಾಯ ಮಾಡುತ್ತಿದ್ದಳು.

ಸಾತಿಗೆ ಅದೇನೋ ಸುಂದರನ ಮೇಲೆ ತುಂಬ ಪ್ರೀತಿ; ಸುಂದರನಿಗೂ ಅಷ್ಟೆ, ಸಾತಿ ಎಂದರೆ ಸ್ವಂತ ತಂಗಿಯಷ್ಟೆ ವಿಶ್ವಾಸ. ಸಾತಿ ಕೇಳಿದಳು:

"ವಿಚ್ಚ (ವಿಶ್ವ ಎನ್ನುವುದಕ್ಕೆ ಸಾತಿಯ ತದ್ಭವ), ಸುಂದರಣ್ಣ ಏಕೆ ಬರಲಿಲ್ಲವೋ? ಅವನನ್ನ ಏಕೆ ಬಿಟ್ಟುಬಂದೆಯೋ?"

ವಿಶ್ವನಾಥ ಮೌನವಾಗಿದ್ದ.

ನಂಜುಂಡಶಾಸ್ತ್ರಿಗಳೂ ಅದೇ ಪ್ರಶ್ನೆ ಹಾಕಿದರು. ನೀನು ಯಾಕೆ

ಒಬ್ಬನೇ ಹೊರಟು ಬಂದೆ ಪ್ರತಿಸಲವೂ ಅವನ ಜೊತೆ ಬರುತ್ತಿದ್ದವನು. ? "
ಅವನ ಜೊತೆಯೇ ಬಂದಿದ್ದರೆ ಟಸ್ಸುಭಾರ್ಜು ಉಳಿಯುತ್ತಿತ್ತು; ಕೃಷ್ಣಪ್ಪ ನವರು ಹೇಗೂ ಗಾಡಿ ಕಳಿಸುತ್ತಿದ್ದರು."

ಶಾಸ್ತ್ರಿಗಳ ಮತ್ತೂ ಅವರ ಮಗಳ ಪ್ರಶ್ನೆ ಒಂದೇ ಆಗಿದ್ದರೂ ಉದ್ದೇಶ ಬೇರೆಬೇರೆಯಾಗಿತ್ತು. ಸಾತಿಯುದು ಪ್ರೀತಿಯ ಅಸಮಾಧಾನದ ಪ್ರಶ್ನೆ; ಶಾಸ್ತ್ರಿಗಳದು ತನಿಖೆಯ ಪ್ರಶ್ನೆ. ಈ ಎರಡು ಪ್ರಶ್ನೆಗಳಿಗೂ ವಿಶ್ವನಾಥ ಹೇಳಬೇಕಾಗಿದ್ದುದು ಒಂದೇ ಉತ್ತರ; ಅದು ಸಾತಿಗೆ ಅರ್ಥವಾಗದ್ದು; ಆದರೂ ತನ್ನ ತಂದೆಗೆ ತಿಳಿಸಲೇಬೇಕಾದದ್ದು. ಆದರೆ, ಇಷ್ಟು ಬೇಗ ಸುಂದರನ ವಿಚಾರ ತಾನು ಹೇಳಬೇಕಾಗುತ್ತೆ ಎಂದು ಅವನು ನಿರೀಕ್ಷಿಸಿರ ಲಿಲ್ಲ. ಸದ್ಯದಲ್ಲಿ ಏನೋ ಒಂದು ಕುಂಟು ಉತ್ತರ ಹೇಳಿಬಿಟ್ಟು, ಸಮಯ ಸಿಕ್ಕಿದಾಗ ತನ್ನ ತಂದೆಯ ಕೂಡ ಎಲ್ಲವನ್ನೂ ವಿಸ್ತಾರವಾಗಿ ಹೇಳಬೇಕೆಂದು ಅವನು ಮಾಡಿಕೊಂಡಿದ್ದ. ಆದರೆ ಇದು ತಕ್ಕ ಸಮುಯವೇ ಅಲ್ಲವೇ? ತನಗೆ ತಾನೇ ಪ್ರಶ್ನೆ ಹುಟ್ಟಿಕೊಂಡಿರುವಾಗ ಈಗಲೇ ಸರಿಯಾದ ಉತ್ತರ ಕೊಟ್ಟುಬಿಟ್ಟರಾಯಿತು ಎನಿಸಿತು. ಹಾಗೆ ಎನಿಸಿದ ಕ್ಷಣದಲ್ಲಿ, ವಿಶ್ವನಾಥನ ಮನಸ್ಸಿನಲ್ಲಿ ಸುಂದರನ ಬಗೆಗೆ ಉಂಟಾಗಿದ್ದ ವಿರೋಧಭಾವ ನೂರ್ಮಡಿ ಯಾಗಿ ಕೆರಳಿತು; ಆ ವಿರೋಧದ ವಿಷವನ್ನು ಕಕ್ಕಿಬಿಟ್ಟ ಹೊರತು ಇನ್ನೊಂದು ತುತ್ತು ಅನ್ನ ಹೊಟ್ಟೆಯೊಳಕ್ಕೆ ಹೋಗದಾಯಿತು. ವಿಶ್ವನಾಥ ನಿರ್ಧಾರ ಮಾಡಿಬಿಟ್ಟ; ಸುಂದರನ ವಿಚಾರವೆಲ್ಲವನ್ನೂ– ಎಂದರೆ, ಸುಂದರ ಚರ್ಚಾ ಕೂಟದಲ್ಲಿ ಭಾಗ ವಹಿಸಿದ್ದು, ಅವನ ನಡವಳಿಯಲ್ಲಿ ಬದಲಾಗಿರುವುದು, ರಾಚಪ್ಪನೊಡನೆ ಅವನು ಸ್ನೇಹ ಬೆಳಸಿದ್ದು– ಎಲ್ಲವನ್ನೂ ತನ್ನ ತಂದೆಗೆ ಸವಿಸ್ತಾರವಾಗಿ, ಕಣ್ಣು ಕಟ್ಟಿ, ಹೇಳಿದ; ಇದನ್ನು ಕೇಳುವುದಕ್ಕೆ ಪಾರ್ವತಮ್ಮ ಅಡಿಗೆಮನೆಯಿಂದ ಊಟದ ಮನೆಗೆ ಬಂದು ಕುಳಿತರು; ಸುಂದರನ ವಿಚಾರ ವಾದ್ದರಿಂದ ಸಾತಿ ಕೂಡ ಬಾಯಿಬಿಟ್ಟುಕೊಂಡು ಕೇಳುತ್ತಿದ್ದಳು.

ಕಥೆಯೆಲ್ಲವನ್ನೂ ಶಾಸ್ತ್ರಿಗಳೂ ಪಾರ್ವತಮ್ಮನವರೂ ಬಹಳ ಕುತೂ ಹಲದಿಂದಲೇ ಕೇಳುತ್ತಿದ್ದರೂ, ಮೌನವಾಗಿ ಕೇಳುತ್ತಿದ್ದರು. ವಿಶ್ವನಾಥ ಹೇಳುವುದೆಲ್ಲವನ್ನೂ ಹೇಳಿ– "ಸುಂದರ ರಾಚಪ್ಪನ ಜೊತೆ ಕುಳಿತು ಊಟವನ್ನೂ ಮಾಡಿದ. ನಾನೇ ಕಣ್ಣಾರೆ ಕಂಡೆ" ಎಂದು ತನ್ನ ನಿರೂ

ಪಣೆಗೆ ಮಹತ್ತ್ವದ ಮುಕ್ತಾಯ ಕೊಟ್ಟ.

"ಏನೂ!?" ಎಂದು ನಂಜುಂಡಶಾಸ್ತ್ರಿಗಳು ಬಾಯಿಬಿಟ್ಟರು; ಕೈಯಲ್ಲಿದ್ದ ತುತ್ತು ಎಲೆಯ ಮೇಲೆ ಜಾರಿತು.

"ಏನೋ ನೀನು ಹೇಳೋದು! ನಾನು ನಂಬಲಾರೆ!" ಎಂದರು ಪಾರ್ವತಮ್ಮನವರು.

ಇದುವರೆಗೂ ಅಷ್ಟು ಕುತೂಹಲವನ್ನು ತೋರಿಸದಿದ್ದ ಸೀತಮ್ಮ ಕೂಡ "ಅಲ್ಲ, ಇದೇನು ಬಂತು ಸುಂದರನಿಗೆ ಬುದ್ಧಿ ಹೀಗೆ ಮಾಡೋಕೆ!" ಎಂದು ಗಲ್ಲದ ಮೇಲೆ ಬೆರಳಿಟ್ಟರು.

"ನನ್ನ ಜನಿವಾರದಾಣೆಗೂ ನಾನು ಹೇಳುವುದು ಸತ್ಯ. ಬೇಕಾದರೆ ಸುಂದರನನ್ನೆ ಕೇಳಿದರೆ ಗೊತ್ತಾಗುತ್ತೆ."

ಅಲ್ಲಿಂದ ಮುಂದೆ ಮಾತು ಕಡಮೆಯಾಗಿ ಊಟ ಭರದಿಂದ ಸಾಗಿತು. ಶಾಸ್ತ್ರಿಗಳಿಗೆ ಒಂದು ಹೊಸ ಹೆಮ್ಮೆ ಅಂಕುರಿಸಿತು: ಸುಂದರನಿಗಿಂತ ತಮ್ಮ ಮಗನೇ ಎಷ್ಟೋ ಮೇಲೆಂದು. ಸುಂದರನಿಗಿಂತ ಒಂದೆರಡು ವರ್ಷ ಚಿಕ್ಕವ ನಾದರೂ ತಮ್ಮ ಮಗ ಸುಂದರನ ತರಗತಿಯಲ್ಲಿ ಓದುತ್ತಿರುವುದೇ ಒಂದು ಹೆಮ್ಮೆಯಾಗಿತ್ತು ಅವರಿಗೆ. ಆ ಹೆಮ್ಮೆಗೆ ಒಂದು ಕೋಡು ಮೂಡಿತು ಈಗ. ತಮ್ಮ ಮಗ ಇಂಗ್ಲಿಷ್ ವಿದ್ಯಾಭ್ಯಾಸದಿಂದ ಸ್ವಲ್ಪವಾದರೂ ಕೆಟ್ಟಿಲ್ಲ ವಲ್ಲ! ಎಂಥ ಪುಣ್ಯ ತಮ್ಮದು! ಎಷ್ಟೇ ಆಗಲಿ ತಮ್ಮ ಮಗನಲ್ಲವೆ ಅವನು? ಮಗನಿಗೆ ತಾವು ಚಿಕ್ಕಂದಿನಲ್ಲಿ ಕೊಟ್ಟ ಶಿಕ್ಷಣ ಹಾಗಿದೆ. ಕೃಷ್ಣಪ್ಪ ನವರಾದರೋ ತಮ್ಮ ಮಕ್ಕಳನ್ನು ಮೊದಲಿನಿಂದಲೂ ಹೋದ ದಾರಿಗೆ ಬಿಟ್ಟುಬಿಟ್ಟಿದ್ದಾರೆ. ಅಂಕೆ ಶಿಕ್ಷೆಯಿಲ್ಲದ ಮಕ್ಕಳು ಲಗಾಮಿಲ್ಲದ ತೊಂಡು ಕುದುರೆ ಹಾಗೆ. ಹೋದ ವರ್ಷವೇ ತಾವು ಕೃಷ್ಣಪ್ಪನವರಿಗೆ ಸಮಯೋಚಿತ ಎಚ್ಚರಿಕೆ ಕೊಟ್ಟರು: 'ಸುಂದರ ಕ್ರಾಪು ಬಿಟ್ಟುಬಿಟ್ಟಿದ್ದಾನೆ. ಅದು ಇನ್ನುಳಿದ ದುರ್ನಡತೆಗಳಿಗೆ ಹೆದ್ದಾರಿ ಹಾಕಿ ಕೊಡುತ್ತದೆ, ಆದ್ದರಿಂದ ಅದನ್ನು ತೆಗೆಸಿ; ಮತ್ತೆ ಜುಟ್ಟು ಬಿಡುವ ಹಾಗೆ ಅವನಿಗೆ ಹೇಳಿ' ಅಂತ. ಈ ಮಾತನ್ನು ಕೃಷ್ಣಪ್ಪ ನವರು ಕಿವಿಗೆ ಹಾಕಿಕೊಳ್ಳಲಿಲ್ಲ; 'ಅವೆಲ್ಲಾ ಈಗಿನ ಕಾಲಕ್ಕೆ ಬಂದದ್ದು, ಇದ್ದು ಕೊಳ್ಳಲಿ, ಅದರಿಂದೇನು ಬಾಧಕ?' ಎಂದು ಮಗನ ದುರ್ಚಾಳಿಯ ಮೊಳಕೆ ಯನ್ನು ಹಾಗೆಯೇ ಬಿಟ್ಟುಬಿಟ್ಟರು. ಈಗ ಆ ಮೊಳಕೆ ಚೆನ್ನಾಗಿ ಬೇರು

ಬಿಟ್ಟು ಬೆಳೆಯುತ್ತಿದೆ; ಅದರ ಫಲ ಮುಂದೆ ಅನುಭವಿಸಲೇಬೇಕಾಗುತ್ತೆ. ಆದರೂ, ತಾವು ಕಿವಿಯಿಂದ ಕೇಳಿ ಸುಮ್ಮನಿರುವುದು ಹೇಗೆ? ಇನ್ನೂ ಕಾಲ ಮೀರಿಲ್ಲ. ಅಲ್ಲದೆ, ಸುಂದರನನ್ನು ಸನ್ಮಾರ್ಗಕ್ಕೆ ತರದೆ, ಶಾಮಿಗೆ ತಾವು ಹೆಣ್ಣು ಹೇಗೆ ಕೊಡುವುದು? ಜೊತೆಗೆ, ಕೆಟ್ಟ ದಾರಿ ಹಿಡಿದಿರುವ ಯಾರನ್ನೇ ಆಗಲಿ, ಒಳ್ಳೆಯ ದಾರಿಗೆ ತಿರುಗಿಸಲು ಪ್ರಯತ್ನಪಡಬೇಕಾದದ್ದು ಪ್ರತಿಯೊಬ್ಬನ ಕರ್ತವ್ಯ. ಮೇಲಾಗಿ, ಸುಂದರ ತಮ್ಮ ಕೃಷ್ಣಪ್ಪನವರ, ತಮ್ಮ ಬೀಗರಾಗಲಿರುವವರ, ಮಗ. ಹೀಗೆ ಯಾವ ದೃಷ್ಟಿಯಿಂದ ಆಲೋಚಿಸಿದರೂ ಈಗ ತಾವು ಕೇಳಿದ ವಿಚಾರವನ್ನು ಕೃಷ್ಣಪ್ಪನವರಿಗೆ ತಿಳಿಸಿ ಸುಂದರನನ್ನು "ಒಳ್ಳೆಯ ದಾರಿಗೆ" ತರಲು ನೆರವಾಗುವುದು ತಮ್ಮ ಕರ್ತವ್ಯ ಎಂದು ತಿಳಿದು, ಹಾಗೆಯೇ ಮಾಡಲು ನಿರ್ಧರಿಸಿದರು. ಸುಂದರ ಹೇಗಾದರೂ ಇರಲಿ; ದೇವರ ದಯದಿಂದ ತಮ್ಮ ಮಗ 'ದುರ್ಮಾರ್ಗ' ಹಿಡಿಯಲಿಲ್ಲವಲ್ಲ, ಅಷ್ಟೇ ಸಾಕು; ಮುಖ್ಯ ದೇವರು ದೊಡ್ಡವನು— ಎಂದುಕೊಳ್ಳುವ ಹೊತ್ತಿಗೆ ಊಟ ಮುಗಿದಿತ್ತು. "ಸಮಯ ಸಿಕ್ಕಿದಾಗ ಕೃಷ್ಣಪ್ಪನವರಿಗೆ ವಿಚಾರ ತಿಳಿಸುತ್ತೇನೆ; ನೀನೇನೂ ಹೇಳುವುದಕ್ಕೆ ಹೋಗಬೇಡ. ನಾನು ಹೇಳುವುದಕ್ಕೂ ನೀನು ಹೇಳುವುದಕ್ಕೂ ವ್ಯತ್ಯಾಸವಿದೆ" ಎಂದು ಮಗನಿಗೆ ಹೇಳಿ, ಉತ್ತರಾಪೋಶನ ತೆಗೆದುಕೊಂಡು, "ಶ್ರೀಹರೀ!" ಎಂದು ಮೇಲಕ್ಕೆದ್ದರು.

ತನ್ನ ಉದ್ದೇಶ ನೆರವೇರಿತೆಂದು ವಿಶ್ವನಾಥ ಬಹು ಸಮಾಧಾನಗೊಂಡು, ತಾನೂ ತಂದೆಯೊಡನೆ ಮೇಲಕ್ಕೆದ್ದ.

೧೧

ಮೈಸೂರು ಮಾರ್ಕೆಟ್ಟಿನಲ್ಲಿ ವೀಳೆಯದೆಲೆಯ ವ್ಯಾಪಾರದ್ದೇ ಒಂದು ವೈಶಿಷ್ಟ್ಯ, ಅದರದ್ದೇ ಒಂದು ಸೊಗಸು, ನಿಂತು ನೋಡುವವರಿಗೆ ಒಂದು ನೋಟ. ಆ ವ್ಯಾಪಾರಕ್ಕೇ ಒಂದು ಪ್ರತ್ಯೇಕ ಆವರಣ ಮೀಸಲಾಗಿದೆ. ಮೈಸೂರಿನಲ್ಲಿ ವೀಳೆಯದೆಲೆ ಬೆಳೆಯುವವರು, ಮಾರುವವರು–ಎಲ್ಲರೂ ಪಂಚಮರೇ. ಅದೇನು ಭೂಗುಣವೊ, ಇಲ್ಲ ಅವರ ಕೈಗುಣವೊ, ವೀಳೆಯದೆಲೆ ಅಲ್ಲಿ ಬೆಳೆಯುವ ಹಾಗೆ ಇನ್ನೆಲ್ಲಿಯೂ ಬೆಳೆಯುವುದಿಲ್ಲ. ಅವನ್ನು ಮಾರುವುದರಲ್ಲೂ ಅದರದ್ದೇ ಒಂದು ಕೈವಾಡ; ಇನ್ನು ಯಾರಿಗೂ ಬರದು ಅದು; ಇನ್ನೆಲ್ಲಿಯೂ ಕಾಣಲಾಗದು ಅವನ್ನು. ಹೆಚ್ಚಿನ ಸಂಗತಿಯೆಂದರೆ,

ಮಾರುವವರೆಲ್ಲ ಪ್ರಮುಖವಾಗಿ ಹೆಂಗಸರು; ಮಾರಾಟದ ಕಲೆಯನ್ನು ಅವ ರಿಂದ ಕಲಿಯಬೇಕು ಇತರರು. ಮೊದಲೇ ಹೇಳಿದ ಹಾಗೆ, ಈ ವ್ಯಾಪಾರದ ಸೊಗಸನ್ನು ಕಾಣಬೇಕಾದರೆ ಮೈಸೂರಿನ ದೊಡ್ಡ ಮಾರ್ಕೆಟ್ಟಿಗೇ ಹೋಗ ಬೇಕು. ಅಲ್ಲಿ ದಕ್ಷಿಣದ ಹೆಬ್ಬಾಗಿಲಿನಿಂದ ಒಳಕ್ಕೆ ಹೋಗಿ, ಎಡಕ್ಕೆ ತಿರುಗಿ ಕೊಂಡು, ಕಟ್ಟಕಡೆಗೆ ಮತ್ತೆ ಬಲಕ್ಕೆ ತಿರುಗಿಕೊಂಡು ಸ್ವಲ್ಪ ದೂರ ನೇರ ವಾಗಿ ಹೋದರೆ, ನೀವು ಹೊರವೂರಿನವರಾದರೆ, 'ವೀಳೆಯದೆಲೆ ಮಾರು ವುದು ಎಲ್ಲಿ?' ಎಂದು ಯಾರನ್ನೂ ವಿಚಾರಿಸಿಕೊಂಡು ಹೋಗಬೇಕಾಗಿಲ್ಲ. ನೀವು ಅತ್ತ ಸುಳಿದರೆ ಸಾಕು; "ಬನ್ನಿ ಬುದ್ಧಿ. ಬನ್ನಿ. ಒಳ್ಳೆ ಪರಮಾ ಯಿಶಿ ಎಲೆ, ಕೊಳ್ಳಿ"...."ಇಲ್ಲಿ ಬನ್ನಿ ಬುದ್ಧಿ, ಇಲ್ಲಿ. ಒಳ್ಳೆ ರತ್ನಿ ಅಂತ ಎಲೆ"...."ಹೆಸರಿಗೇನು ಬುದ್ಧಿ, ಹೆಸರು ಹೇಳಬೈದು ಸಾವಿರ. ಮೋರೆ ನೋಡದೆ ಹೋದರೆ ಮೋಸ ಹೋಗೀರ ಆ ಕರೀ ಮೋರೆ ಎಲೆ ಕಟ್ಟಿ ಕೊಂಡು ಏನಾರ ಮಾಡೀರ? ನನ್ನೆಲೆ ನೋಡಿ. ಚೌದುಳ್ಳಿ ಚೆಲುವೆ ಎಲೆ"...."ಆಹ್ಹಾದಹಹ! ಚೌದುಳ್ಳಿ ಚೆಲುವೆ ಎಲೆ! ನೀನೇನೋ ಚೌದುಳ್ಳಿ ಚೆಲುವೆ ಕಣ್ ಹೆಣ್ಲೇ. ಆದರೆ ನಿನ್ನ ಎಲೆ ಚೌದುಳ್ಳಿ ಆದೀತಾ? ಬನ್ನಿ ಬುದ್ಧಿ ಇಲ್ಲಿ, ಬನ್ನಿ. ಏನ್ ಅವಳ ಮೋರೆ ನೋಡೀರೊ, ಇಲ್ಲ ಎಲೆ ಕೊಂಡೀರೋ?"....ಎಂಬ ಕರೆ ಕೂಗುಗಳು ನಿಮ್ಮನ್ನು ಅತ್ತ ಸೆಳೆಯು ವುವು. ನೀವು ಅವರ ಆಕರ್ಷಣೆಗಳಿಂದ ತಪ್ಪಿಸಿಕೊಂಡು ಹೋಗಲಾರಿರಿ. ನೀವು ವೀಳೆಯದೆಲೆಯ ವ್ಯಾಪಾರಕ್ಕಾಗಿಯೇ ಬಂದಿರುವಿರೆಂಬುದು ತಿಳಿದುಬಿಟ್ಟ ರಂತೂ, ಅವರು ನಿಮ್ಮನ್ನು ಮುತ್ತಿಯೇ ಬಿಡುತ್ತಾರೆ— ಋಷ್ಯಶೃಂಗನನ್ನು ಆಕರ್ಷಿಸಲು ಹೋಗಿದ್ದ ಚೆಲುವೆಯರು ಅವನನ್ನು ಮುತ್ತಿದಂತೆ. ಆದರೆ, ವೀಳೆಯದೆಲೆ ಮಾರುವ ಪಂಚಮ ಸ್ತ್ರೀಯರೆಲ್ಲ ಚೆಲುವೆಯರೇ? ಎಂಬ ಪ್ರಶ್ನೆ ನೀವು ಹಾಕಿದರೆ ಅದಕ್ಕೆ ಉತ್ತರ ಹೇಳುವುದು ಕಷ್ಟ. ಕೆಲವು ಮಂದಿ ಚೆಲುವೆಯರೂ ಇರುತ್ತಾರೆ; ಪಂಚಮಸ್ತ್ರೀಯರೆಂದರೆ ನಂಬಲಾಗದಂತಹ ಒಬ್ಬಿಬ್ಬರು ಚೆಲುವೆಯರಿರುವುದೂ ಉಂಟು. ಆದರೆ ಮುಖ್ಯವಾಗಿ ಗಮನಿಸ ಬೇಕಾದ್ದು ಅವರ ಆಕಾರದ ಚೆಲುವನ್ನಲ್ಲ; ಅವರ ಮಾರಾಟದ ಚೆಲುವನ್ನು, ಆ ಚೆಲುವನ್ನು ತರಲು ಅವರು ಉಪಯೋಗಿಸುವ ಸಾಧನೋಪಾಯ ಗಳನ್ನು. ಅವರ ಕರೆಕೂಗುಗಳು ಒಂದು ವೇಳೆ ನಿಮ್ಮನ್ನು ಆಕರ್ಷಿಸದೆ

ಹೋದರೂ, ಅವರ ವೇಷಭೂಷ ಅಲಂಕಾರಗಳು ಆಕರ್ಷಿಸುತ್ತವೆ. ಎಲ್ಲರೂ ಧರ್ಮಾವರದ ಸೀರೆಗಳನ್ನಲ್ಲದಿದ್ದರೆ (ಕೆಲವರು ಅವನ್ನೂ ಧರಿಸಿರುತ್ತಾರೆ), ಅದರ ಅನುಕರಣದ ಸೀರೆಗಳನ್ನಾದರೂ ಉಟ್ಟಿರುತ್ತಾರೆ; ಬೆಳ್ಳಿಯ ಕಡಗದ ಜೊತೆಗೆ ಬಣ್ಣ ಬಣ್ಣದ ಗಾಜಿನ ಬಳೆಗಳನ್ನು ತೊಟ್ಟಿರುತ್ತಾರೆ; ಮುಂಗೈ ವರೆಗೂ ಬರುವ ಉದ್ದತೋಳಿನ ಅನುಕರಣ ರೇಷ್ಮೆಯ 'ಜಾಕೆಟ್' ತೊಟ್ಟಿರುತ್ತಾರೆ; ಕತ್ತಿನಲ್ಲಿ (ಬಹುಶಃ ಚಿನ್ನದ) ಅಡ್ಡಿಕೆ, ಕಾಸಿನ ಸರ ಇಲ್ಲವೆ ಜೋಮಾಲೆಗಳನ್ನು ಧರಿಸಿರುತ್ತಾರೆ; ಚೆನ್ನಾಗಿ ಬಾಚಿಕೊಂಡು, ಅಚ್ಚನುಲ್ಲಿಗೆ ಹೂ ಮುಡಿದಿರುತ್ತಾರೆ; ತಮ್ಮ ವೀಳೆಯದೆಲೆಯ ಗುಣದ ಪ್ರಕಟನಾರ್ಥವಾಗಿಯೋ ಎಂಬಂತೆ, ತಾಂಬೂಲವನ್ನಗಿಯುತ್ತ, ಆಗಾಗ್ಗೆ ತಂಬುಲವನ್ನುಗಿಯುತ್ತ, ತುಟಿಯನ್ನು ನಾಲಗೆಯಿಂದ ಸವರುತ್ತ ಅವುಗಳ ಕೆಂಪಿನ ಕಡೆಗೆ ನಿಮ್ಮ ಗಮನ ಸೆಳೆಯುತ್ತಿರುತ್ತಾರೆ. ಇವು ಯಾವುವೂ ನಿಮ್ಮನ್ನು ಆಕರ್ಷಿಸದೆ ಹೋದರೂ, ಅವರ ಸರಸೋಕ್ತಿ, ಹಾವಭಾವ, ಬಿಂಕ ಬಿನ್ನಾಣ— ಇವು ನಿಮ್ಮನ್ನು ಖಂಡಿತ ಆಕರ್ಷಿಸಿಯೇಬಿಡುತ್ತವೆ. ಯಾವ ಬಗೆಯ ದುರ್ಭಾವನೆಯೂ ಇಲ್ಲದಿದ್ದರೂ, ಅವರ 'ಮೋಹಜಾಲಕ್ಕೆ' ಒಳಗಾಗಿ ವೀಳೆದೆಲೆಯ ವ್ಯಾಪಾರ ಮಾಡಿಯೇ ಮಾಡುತ್ತೀರಿ; ಕವಳಿಗೆ ಎಲೆ ಕೊಳ್ಳಬೇಕೆಂದಿದ್ದವರು ಕಟ್ಟು ಎಲೆ ಕೊಳ್ಳುತ್ತೀರಿ; ಮನೆಗೆ ಬಂದು ಎಣಿಸಿ ಮುಕ್ಕಾಲು ಕಟ್ಟು ಇರುವುದನ್ನು ಕಂಡು 'ಎಲಾ ಹೊಲೆ ಹೆಣ್ಣೇ!' ಎಂದು ಅವರ ಮಾರಾಟದ ಕಲೆಗೆ ಬೆರಗಾಗುತ್ತೀರಿ!

ಸುಂದರಮೂರ್ತಿ ಪ್ರತಿಸಲ ಊರಿಗೆ ಹಿಂದಿರುಗುವಾಗಲೂ ವೀಳೆಯದೆಲೆಯನ್ನು ಕೊಳ್ಳಲು ಮಾರ್ಕೆಟ್ಟಿಗೆ ಹೋಗುತ್ತಿದ್ದ. ಈ ಅನುಭವಗಳೆಲ್ಲ ಅವನಿಗೆ ಹಿಂದೆ ಆಗಿದ್ದುವು. ಈ ಸಲ ಅವನು ಮಾರ್ಕೆಟ್ಟಿಗೆ ಹೋಗಿ ವಿಳೆಯದೆಲೆ ಮಾರುವೆಡೆಗೆ ಹೋದ ಕೂಡಲೆ—"ಓ, ನಂಬುದ್ಯೋರು ಬಂದರು ನಂಬುದ್ಯೋರು. ಒಳ್ಳೆ ಬುತ್ತಿ ಚಿಗುರು ಕೊಡ್ತೀನಿ ಬನ್ನಿ ಬುದ್ಧಿ. ಊರಿಗೆ ತೆಗೆದುಕೊಂಡು ಹೋಗಿ ನೋಡಿ, ಒಂದು ವಾರ ಆದ್ರೂ ಎಲೆ ಕೆಡಬಾರ್ದು." ಎಂದು ಒಬ್ಬಳು ಕೈಯಲ್ಲಿ ಒಂದು ಕಟ್ಟು ಒಳ್ಳೆಯ ಚಿಗುರು ಹಿಡಿದುಕೊಂಡು ಬಂದಳು. ಆದರೆ ಮಿಕ್ಕವರೇನು ಇವನನ್ನು ಬಿಡಲಿಲ್ಲ; ಎಲ್ಲರೂ ಇವನನ್ನು ಮುತ್ತಿದರು. ಮೊದಲು ಸಲ ಕರೆದವಳು ಅದು ಹೇಗೋ ಸುಂದರಮೂರ್ತಿಯ

ನೆನಪು ಇಟ್ಟುಕೊಂಡಿದ್ದಳು; ಹೋದ ವರ್ಷ ಅವಳ ಹತ್ತಿರವೇ ಎಲೆ ತೆಗೆದು ಕೊಂಡಂತೆ ಸುಂದರಮೂರ್ತಿಗೂ ತುಸ ನೆನಪಾಯಿತು. ಈ ಸಲವೂ ಅವಳ ಬಳಿಯೇ ಎಲೆ ತೆಗೆಯುವುದಾಗಿ ಸುಂದರ ನಿರ್ಧರಿಸಿ "ಮೂರು ಕಟ್ಟು ಕೊಡಮ್ಮಾ" ಎಂದ. ಇತರರು "ನನ್ನ ಹತ್ತಿರ ಒಂಧು ಕಟ್ಟು ತಗೊಳ್ಳಿ ಬುದ್ಧಿ" ಎಂದು ಅವನ ಮುಂದೆ ಎಲೆ ಕಟ್ಟುಗಳನ್ನು ಚಾಚಿದರು. ಆದರೆ ಯಾವ ಎಲೆಯೂ ಮೊದಲು ಕರೆದವಳ ಎಲೆಯಷ್ಟು ಚೆನ್ನಾಗಿರಲಿಲ್ಲ. ಅಲ್ಲದೆ, ಅವಳು ತನ್ನ ಜೊತೆಗಾತಿಯರಿಗೆ ಒಂದು ಸವಾಲು ಹಾಕಿದಳು; "ಈ ಬುತ್ತಿ ಚಿಗರ್ನ ನಮ್ಮಯ್ನೋರ್ಗೆ ಕಟ್ಟಿ ಮೂರುವರೆ ಆಣೆಯ ಹಂಗೆ ಕೊಡ್ತೀನಿ. ಇದೇ ಖರೀದಿಗೆ ಇಂಥ ಎಲೆ ಇನ್ನು ಯಾರಾದರೂ ಕೊಡೋರಿದ್ರೆ ಈ ಎಲೇನ ಸ್ವಾಮಿಗಳಿಗೆ ಹಂಗೇನೆ ಕೊಟ್ಟು ಬಿಡ್ತೀನಿ" ಎಂದಳು. ಯಾರೂ ಮಾತಾಡಲಿಲ್ಲ. ಸುಂದರಮೂರ್ತಿ ಕಡೆಗೆ ಅವಳ ಹತ್ತಿರವೇ ಐದು ಕಟ್ಟು ಎಲೆ ತೆಗೆದ. ದುಡ್ಡು ಕೊಡುವಾಗ ಕೇಳಿದಳು ಅವಳು: "ಸ್ವಾಮಿಗಳ ಹೆಸ ರೇನೊ?" "ಸುಂದರಮೂರ್ತಿ" ಎಂದು ಉತ್ತರ ಬಂತು. "ನೀವು ಸುಂದರಪ್ಪನೋರೇ ಬುದ್ಧಿ. ನಿಮುಗಲ್ಲದೆ ಇನ್ನು ಯಾರಿಗೆ ಕೊಡಲಿ ಈ ಎಲೇನ. ಮನೇಲಿ ಅವ್ವಾವ್ರು – ಚಿಕ್ಕಮ್ಮಾವ್ರು – ಎಲೆ ಚೆಂದಾಗಿವೆ ಅಂದರೆ ನನಗೆ ಬಂದು ತಿಳಿಸಬೇಕು ಬುದ್ಧಿ" ಎಂದು ನಕ್ಕಳು. ಸುಂದರಮೂರ್ತಿಗೆ ಅವಳ ಮಾತಿನ ಅರ್ಥ ಆಯಿತು. "ನನಗಿನ್ನೂ ಮದುವೆ ಆಗಿಲ್ಲ" ಎಂಧ. "ಪರವಾಗಿಲ್ಲ ಬುದ್ಧಿ. ನಿಮುಗೆ ಲಗ್ನ ಆದ ಮೇಲೆ ತಿಳಿಸಿ. ಇನ್ನೂ ಫರ ಮಾಯಿಸಿ ಚಿಗರನ್ನ ತಂದು ಕೊಟ್ಟೇನು" ಎಂದಳು ಅವಳು. ಇಷ್ಟು ಹೊತ್ತಿಗೆ ಅವಳು ಎಲೆಯನ್ನು ಅಡಕೆಪಟ್ಟೆಯಲ್ಲಿ ಚೆನ್ನಾಗಿ ಪೊಟ್ಟಣ ಕಟ್ಟಿ ಅವನ ಕೈಗೆ ಕೊಟ್ಟಳು. ಅವನು ಹೋಗಿಬರುವ ಮುನ್ನ "ನಿನ್ನ ಹೆಸ ರೇನು?" ಎಂದು ಅವಳನ್ನು ಕೇಳಿದ. "ಹೊನ್ನಿ" ಎಂದಳು. "ಮರೀ ಬೇಡ ಹೊನ್ನಿ, ಬರ್ತೀನಿ" ಎಂದ ಸುಂದರ. "ಎಲ್ಲಾರೂ ಉಂಟೆ ಬುದ್ಧಿ" ಎಂದು ಕೈಜೋಡಿಸಿ ತಲೆ ಬಗ್ಗಿಸಿದಳು. ಸುಂದರಮೂರ್ತಿ ವೀಳೆಯದೆಲೆ ತೆಗೆದುಕೊಂಡು ಮುಂದಕ್ಕೆ ಹೊರಟ.

ಈ ಅನುಭವ ಸುಂದರಮೂರ್ತಿಗೆ ಹಿಂದೆ ಎಂದೂ ಆಗಿರಲಿಲ್ಲ. ವ್ಯಾಪಾರದ ಅವಸರದಲ್ಲಿ, ಸುಂದರಮೂರ್ತಿ ಈ ಬಗೆಯ ನಿಷ್ಕಲ್ಮಷವಾದ

ತಿಳಿಮನಸ್ಸಿನ, ತಿಳಿಹಾಸ್ಯದ, ವಿಶ್ವಾಸದ ಮಾತನ್ನು ಕೇಳಿರಲಿಲ್ಲ. ಇಂಥವ ರನ್ನು ನಾವು ದೂರ ಮಾಡಿರುವೆವಲ್ಲ?

ಇನ್ನೊಂದು ಹೊಸ ಸಂಗತಿ ಈ ಸಲ ಸುಂದರಮೂರ್ತಿಯ ಗೋಚರಕ್ಕೆ ಬಂದಿತು; ಯಾವ ಜನ, 'ಇವರು ಹೊಲೆಯರು, ಅಸ್ಪೃಶ್ಯರು, ಇವರನ್ನು ಮುಟ್ಟಿದರೆ 'ಹೊಲೆ, ಕಂಡರೆ ಮೈಲಿಗೆ' ಎನ್ನುತ್ತಿತ್ತೊ ಅದೇ ಜನ ಈ ವೀಳೆಯದೆಲೆ ಮಾರುವ ಹೆಂಗಸರೊಡನೆ ಸರಸವಾಡುತ್ತ, ಅವರನ್ನು ಮುಟ್ಟಿಸಿ ಕೊಂಡೇ ವ್ಯಾಪಾರ ಮಾಡುತ್ತಿದ್ದರು; ಹೊಲೆಯರನ್ನು ದೂರವಿಟ್ಟಿರುವುದ ರಲ್ಲಿ ಅಗ್ರಗಣ್ಯರೆನಿಸಿದ ತನ್ನಂತಹ, ತನಗಿಂತಲೂ ಮೇಲು ದರ್ಜೆಯ ಬ್ರಾಹ್ಮಣರೂ ಇದ್ದರು ಹಾಗೆ ವ್ಯಾಪಾರ ಮಾಡುವವರಲ್ಲಿ. ಪಟ್ಟಣದವ ರದ್ದು ಎಂಥ ಬೂಟಾಟಿಕೆ, ಎಂಥ ಆಷಾಢಭೂತಿತನ ಎನ್ನಿಸಿತು ಸುಂದರನಿಗೆ. ಮನಸ್ಸಿನಲ್ಲಿ ತುಂಬ ವ್ಯಥೆಯಾಯಿತು. ಈ ಬೂಟಾಟಿಕೆಯನ್ನು ತೊಲಗಿ ಸಿದರೆ ಹೊಲೆಯನ್ನು ಹೊಗಲಾಡಿಸಿದಂತೆ, ಅಸ್ಪೃತೆಯನ್ನು ನಿವಾರಣೆ ಮಾಡಿದಂತೆ– ಎಂದು ತೋರಿತು ಸುಂದರನಿಗೆ.

೧೨

ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ರೈಲು ಹೊಳೇನರಸೀಪುರಕ್ಕೆ ಹೋಯಿತು. ಸುಂದರಮೂರ್ತಿ ರೈಲು ಇಳಿದು, ಸಾಮಾನುಗಳನ್ನು ಇಳಿಸಿ ಕೊಳ್ಳಬೇಕೆಂದಿರುವಾಗ "ಸುಂದರಪ್ಪಾ, ಸುಂದರಪ್ಪಾ, ಓ ಸುಂದರಪ್ಪಾ" ಎಂದು ಕಾಳೇಗೌಡನ ಕೂಗು ಕೇಳಬಂತು. ಕಾಳೇಗೌಡ ಪ್ರತಿಯೊಂದು ಗಾಡಿಯ ಹತ್ತಿರವೂ ನಿಂತು ಕೂಗು ಹಾಕುತ್ತಿದ್ದ; ಚಿಕ್ಕ ಸ್ವಾಮಿಗಳು ಗಾಡಿ ಯಲ್ಲಿ ನಿದ್ದೆಹೋಗುತ್ತಿರಬಹುದೆಂದು ಅವನೆಣಿಕೆ; ಸುಂದರಮೂರ್ತಿ ಆಗಲೇ ಇಳಿದು ನಿಂತಿರುವುದನ್ನು ಅವನರಿಯನು. ಸುಂದರ "ಕಾಳ, ಇಲ್ಲಿದ್ದೇನೆ, ಬಾ ಇಲ್ಲಿ" ಎಂದಾಗ, ಕಾಳೇಗೌಡ ಸುಂದರನ ಬಳಿಗೆ ಒಂದು ಕೈಲಿ ಲಾಟೀ ನನ್ನೂ ಇನ್ನೊಂದು ಕೈಲಿ ಬಾರುಕೋಲನ್ನೂ ಹಿಡಿದುಕೊಂಡು ಬಂದ.

ಕಾಳೇಗೌಡ ಕೃಷ್ಣಪ್ಪನವರ ಮನೆಯ ಹಿರಿಯ ರೈತ. ಅವನು ಊರಿ ಗೆಲ್ಲಾ ಕಾಳೇಗೌಡನಾದರೂ ಕೃಷ್ಣಪ್ಪನವರ ಮನೆಯ ಕುಟುಂಬಕ್ಕೆ ಕಾಳ ನಾಗಿದ್ದ. ಕಾಳೇಗೌಡ ದೃಢಕಾಯನಾದ ಮಧ್ಯವಯಸ್ಕ; ಅವನ ಹೆಂಡತಿ ಲಚುಮಿ; ಪುಟ್ಟ, ಕಾಡ–ಇಬ್ಬರು ಗಂಡುಮಕ್ಕಳು; ಕೆಂಪಿ ಒಬ್ಬಳೇ ಮಗಳು.

“ಕಾಳ, ಸಾಮಾನೆಲ್ಲ ತೆಗೆದುಕೊಂಡು ಬಾ’ ಎಂದು ಸುಂದರ ಲಾಟೀನು ಇಸುಕೊಂಡು ಹೊರಟ. ಕಾಳ ಸಾಮಾನೆಲ್ಲವನ್ನೂ ಹೊತ್ತು ಕೊಂಡು ಹಿಂಬಾಲಿಸಿದ. ಸಾಮಾನನ್ನು ಗಾಡಿಯಲ್ಲಿಟ್ಟಾಯಿತು. ಇನ್ನೂ ಗಾಡಿ ಕಟ್ಟಿರಲಿಲ್ಲ.

“ಬಾಳೇಹಣ್ಣು ಹಾಲು ಕಳ್ಸವರೆ. ಫಳಾರ ಮಾಡಿಬುಟ್ಟರೆ, ಆ ಮ್ಯಾಕೆ ಗಾಡಿ ಕಟ್ತೀವ್ನಿ” ಎಂದ ಕಾಳ. ಇದು ಮಾಮೂಲಾಗಿತ್ತು. ಸುಂದರ ಗಾಡಿಯೊಳಗೇ ಕುಳಿತು ತಾನು ಮೈಸೂರಿನಿಂದ ತೆಗೆದುಕೊಂಡು ಬಂದಿದ್ದ ಬಿಸ್ಕತ್ತು ಮತ್ತು “ಚಾಚಾ” ಅನ್ನೂ ಬಾಳೆಯ ಹಣ್ಣನ್ನೂ ತಿಂದು, ಹಾಲು ಕುಡಿದ. ಕಾಳನಿಗೂ ಎರಡು ಬಿಸ್ಕತ್ತು, ಸ್ವಲ್ಪ ಚಾಚಾ ಕೊಟ್ಟ; ಅವನು ಬೇಡವೆಂದ; ಸುಂದರ ಬಲವಂತ ಮಾಡಿದ ಮೇಲೆ, ಸ್ವಲ್ಪ ರುಚಿ ನೋಡಿ, “ಪಸಂದಾಗದೆ” ಎಂದು ಎಲ್ಲವನ್ನೂ ತಿಂದ.

ತಿಂದಾದ ಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡ ಬಳಿಕ, ಕಾಳ ಗಾಡಿ ಕಟ್ಟಿ, ಮೂಕಿಯ ಮೇಲೆ ಏರಿ ಕುಳಿತು “ಹುಚ್” ಎಂದು ಗಾಡಿ ಹೊರಟಿತು.

ಸುಂದರ ಹಾಸಿಗೆ ಬಿಚ್ಚಿ, ಹಾಗೆಯೇ ಉರುಳಿಕೊಂಡ.

“ಮನೆಯಲ್ಲಿ ಎಲ್ಲರೂ ಸ್ವಸ್ಥವಾಗಿದ್ದಾರೇನೋ?” ಎಂದು ಸುಂದರ ಪ್ರಶ್ನಿಸಿದ.

“ಎಲ್ಲರೂ ಚೆನ್ನಾಗವರೆ ಬುದ್ಧಿ.”

“ನಮ್ಮ ಮಾವನ ಮನೆಯಲ್ಲಿ, ಜೋಯಿಸರ ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೋ?”

“ಅಲ್ಲೂ ಎಲ್ಲಾ ಚೆನ್ನಾಗವರೆ ಬುದ್ಧಿ. ಗಾಡೀನ ಮೈಲಾರಯ್ನೋರ ಮನೇ ಮುಂದೇನೆ ಹೊಡಕೊಂಡು ಬಂದೆ. ಕಮಲಮ್ಮ ಹೊರಗೆ ನಿಂತಿದ್ರು. ‘ಹೊತ್ತು ಮೂಡೋದರೊಳಗೆ ಸುಂದರಪ್ಪನೋರನ್ನು ಕರಕೊಂಡು ಬರ್ತೀನಿ’ ಎಂದೆ. ನೆಗ್ತಾ ಒಳಕ್ಕೆ ಹೊರಟು ಹೋದರು.”

ಕಾಳೇಗೌಡ ಸುಂದರಮೂರ್ತಿಯನ್ನು ಕರೆದುಕೊಂಡು ಬರುವಾಗ, ಕರೆದುಕೊಂಡು ಹೋಗುವಾಗ—ಯಾವಾಗಲೂ ಗಾಡಿಯನ್ನು ಮೈಲಾರಯ್ಯ ನವರ ಮನೆಯ ಮುಂದೆಯೇ ಹೊಡೆದುಕೊಂಡು ಹೋಗುತ್ತಿದ್ದ,

ಮನೆಯ ಮುಂದೆ ನಿಲ್ಲಿಸುತ್ತಿದ್ದ. ಊರುಬಿಟ್ಟು ಹೋಗುವಾಗ, ಸುಂದರ ಮೂರ್ತಿ ತನ್ನ ಸೋದರಮಾವ ಮೈಲಾರಯ್ಯ ಮತ್ತು ಅವರ ಹೆಂಡತಿ ಕಾವೇರಮ್ಮ—ಮತ್ತು ಅವರ ಹಿರಿಯ ಮಗಳು ಕಮಲಮ್ಮ—ಇವರನ್ನು ಬೀಳ್ಕೊಂಡು ಹೋಗುತ್ತಿದ್ದ. ಸುಂದರ ಸೋದರಮಾವನಿಗೂ ಕಾವೇರತ್ತೆಗೂ ನಮಸ್ಕಾರ ಮಾಡಿ "ಹೋಗಿ ಬರುತ್ತೇನೆ" ಎಂದು ಹೇಳುವ ಹೊತ್ತಿಗೆ ಸರಿಯಾಗಿ ಕಮಲೆ ಎಲ್ಲಿಯೋ ಮಾಯವಾಗಿಬಿಡುತ್ತಿದ್ದಳು. ಕಾವೇರಮ್ಮನವರು "ಲೇ ಕಮಲೀ, ಎಲ್ಲಿಗೆ ಹೋದೆಯೇ. ನಿನ್ನ ಗಂಡ ಮೈಸೂರಿಗೆ ಹೋಗ್ತಾನಲ್ಲೇ ; ಏನೇನು ಬೇಕೋ ಕೇಳಿ, ತಂದು ಕೊಡುತಾನೆ." ಎಂದು ಗಟ್ಟಿಯಾಗಿ ಕೂಗಿ ಹೇಳುತ್ತಿದ್ದರು. ಆದರೆ ಕಮಲೆ ಮೆಲ್ಲನೆ ಹಿತ್ತಿಲ ಬಾಗಿಲಿನಿಂದ ಹೊರಟು ಬೀದಿಯ ಬಾಗಿಲಿನಲ್ಲಿ ನಿಂತಿದ್ದು, ಸುಂದರ ಇನ್ನೇನು ಗಾಡಿಯನ್ನು ಹತ್ತಬೇಕೆನ್ನುವಷ್ಟರೊಳಗಾಗಿ "ಸುಂದರಾ, ಹೂವು ವೀಳೆಯದೆಲೆ ಜ್ಞಾಪಕ ಇರಲಿ" ಎನ್ನುತ್ತಿದ್ದಳು. ಪರೀಕ್ಷೆ ಮುಗಿದ ಮೇಲೆ ಊರಿಗೆ ಬಂದ ಕೂಡಲೆಯೂ ಹೀಗೆಯೆ : ಸುಂದರ ಮೊದಲು ಮೈಲಾರಯ್ಯನವರ ಮನೆಗೆ ಭೇಟಿ ಕೊಡುತ್ತಿದ್ದ. ಸುಂದರ ಊರಿಗೆ ಬರುವುದು ಎಲ್ಲರಿಗೂ ಗೊತ್ತಿರುತ್ತಿತ್ತು; ಕಮಲೆ ಅವಳ ತಮ್ಮಂದಿರು—ಎಲ್ಲರೂ ಸುಂದರನಿಗೆ ಸ್ವಾಗತ ಬಯಸಲು ಎದ್ದು ಕುಳಿತಿರುತ್ತಿದ್ದರು. ಸುಂದರ ಒಳಕ್ಕೆ ಹೋದ ಕೂಡಲೆ "ಮುಖ ತೊಳೆದುಕೊ ಸುಂದರ, ಕಾಫಿ ಕುಡಿದು ಹೋಗುವಿಯಂತೆ" ಎಂದು ಕಾವೇರತ್ತೆ ಹೇಳುತ್ತಿದ್ದರು. ಸುಂದರ ಒಮ್ಮೆ ಸುತ್ತಲೂ ಕಣ್ಣು ಹಾಕುತ್ತಿದ್ದನು, ಕಮಲೆ ಎಲ್ಲಿ ಎಂದು. ಆದರೆ ಅವಳು ಅಲ್ಲಿರುತ್ತಿರಲಿಲ್ಲ. ಬಚ್ಚಲಮನೆಗೆ ಸುಂದರ ಮುಖ ತೊಳೆದುಕೊಳ್ಳಲು ಹೋದರೆ ಅಲ್ಲಿ ಚೆಂಬಿನಲ್ಲಿ ಬಿಸಿನೀರು ಸಿದ್ಧವಾಗಿರುತ್ತಿತ್ತು; ಅದನ್ನು ಕಮಲೆಯೇ ಇಟ್ಟಿರಬೇಕೆಂದು ಸುಂದರ ಎಣಿಸಿ ಸಂತೋಷಗೊಳ್ಳುತ್ತಿದ್ದನು; ನಿಜವಾಗಿಯೂ ಮದುವೆಯಾದರೆ ಇನ್ನೆಷ್ಟು ಉಪಚಾರಮಾಡುವಳೋ ಎಂದು ತನ್ನಲ್ಲಿ ತಾನೇ ನಗುತ್ತಿದ್ದನು. ಮುಖ ತೊಳೆದು ಹೊರಕ್ಕೆ ಬಂದು ಕುಳಿತರೆ ಕಾವೇರತ್ತೆ ಕಮಲೆಯ ಕೈಯಲ್ಲೇ ಕಾಫಿ ತಿಂಡಿ ಕಳಿಸುತ್ತಿದ್ದರು. "ಗಂಡನಿಗೆ ಹೇಗೆ ಉಪಚಾರ ಮಾಡುವುದು ಎನ್ನುವುದನ್ನು ಮಗಳಿಗೆ ಹೇಳಿಕೊಡುತ್ತಿದ್ದೀರೋ ಅತ್ತೆ ?" ಎಂದು ಸುಂದರ ಹಾಸ್ಯವಾಗಿ ಕೇಳುತ್ತಿದ್ದನು. ಇದಕ್ಕೆ

ಕಾವೇರತ್ತೆ— "ಹೌದಪ್ಪ. ಇಲ್ಲದೆ ಹೋದರೆ ನೀನು ಮದುವೇನೆ ಮಾಡಿ ಕೊಳ್ಳುವುದಿಲ್ಲ ಅಂದರೆ ಏನು ಮಾಡುವುದು?" ಎಂದು ಉತ್ತರ ಕೊಡುತ್ತಿದ್ದರು. ಸುಂದರ ಎದ್ದು ಹೊರಡುವಾಗ "ನೀನು ಕೇಳಿದ್ದು" ಎಂದು ಸ್ವಲ್ಪ ಹೂವನ್ನೂ ಸ್ವಲ್ಪ ವೀಳೆಯದೆಲೆಯನ್ನೂ ಕಮಲೆಗೆ ಕೊಡಹೋಗುತ್ತಿದ್ದನು. ಆಗ ಕಮಲೆ ಹುಸಿನಾಚಿಕೆಯನ್ನು ನಟಿಸುತ್ತಿದ್ದಳು. "ಇರಲಿ ಕಂಡಿದೀನಿ; ತೆಗೆದುಕೊಳ್ಳೆ. ಕೇಳಿರುವುದೇ ಉಂಟಂತೆ, ತೆಗೆದುಕೊಳ್ಳೋಕೇನೊ ಕಾಣೆ." ಎಂದು ತಾಯಿ ಹಂಗಿಸಿದ ಮೇಲೆ ಕಮಲೆ ಅದನ್ನು ಹುಸಿಕೋಪ ನಟಿಸುತ್ತ, ಆದರೆ ಸಂತೋಷದಿಂದ ತೆಗೆದುಕೊಳ್ಳುತ್ತಿದ್ದಳು. ಆಗ "ನಾನು ಕೇಳಿದ್ದೆಲ್ಲಿ? ನಾನು ಕೇಳಿದ್ದೆಲ್ಲಿ?" ಎಂದು ಕಮಲೆಯ ಚಿಕ್ಕ ತಮ್ಮಂದಿರಿಬ್ಬರು ಬಂದು ಸುಂದರನನ್ನು ಕಾಡುತ್ತಿದ್ದರು. ಸುಂದರ ಅವರಿಗೆ ಬಿಸ್ಕತ್ತು ಪೆಪ್ಪೆರುಮೆಂಟಿನ ಪೊಟ್ಟಣಗಳನ್ನು ಕೊಡುತ್ತಿದ್ದನು. ಇಷ್ಟು ಹೊತ್ತಿನ ವರೆಗೂ ಮುಸುಕು ಹಾಕಿಕೊಂಡು ಮಲಗಿರುತ್ತಿದ್ದ ಮೈಲಾರಯ್ಯನವರು ಮಕ್ಕಳ ಗಲಾಟೆ ಕೇಳಿ ಹೊರಕ್ಕೆ ಎದ್ದು ಬಂದು "ಯಾವಾಗ ಬಂದೆ ಸುಂದರಾ?" ಎಂದು ಕೇಳಿ, ನಶ್ಯ ತೀಡುವುದಕ್ಕೆ ಕುಳಿತುಬಿಡುತ್ತಿದ್ದರು. "ನೋಡಪ್ಪ, ಇದೇ ನಿಮ್ಮ ಮಾವನ ಚಟುವಟಿಕೆ. ಅವರು ನಶ್ಯ ತೀಡುತ್ತಾ ಕುಳಿತುಬಿಟ್ಟರೆ, ಎಲ್ಲರನ್ನೂ ಮರೆತುಬಿಡುತ್ತಾರೆ. ನಿನ್ನ ಮಾತು ಮುಗಿದರೂ ಅವರು ನಶ್ಯ ತೀಡುವುದು ಮುಗಿದಿರುವುದಿಲ್ಲ. ಹೋಗು ಸುಂದರ, ಮಧ್ಯಾಹ್ನದ ಮೇಲೆ ಬಂದು ಮಾವನ ಕೂಡ ನಿಧಾನವಾಗಿ ಮಾತಾಡುವಿಯಂತೆ" ಎಂದು ಕಾವೇರತ್ತೆ ಸುಂದರನಿಗೆ ಎಚ್ಚರಿಕೆ ಕೊಡುತ್ತಿದ್ದರು. ಸುಂದರ, "ಮಧ್ಯಾಹ್ನ ಬರುತ್ತೇನೆ ಮಾವ" ಎಂದು ಹೊರಡುತ್ತಿದ್ದ. ಸುಂದರ ತನ್ನ ಮನೆಯೊಳಕ್ಕೆ ಹೋದ ಕೂಡಲೆ "ಅತ್ತೆ ಮನೆಯ ಉಪಚಾರ ಮುಗಿಸಿಕೊಂಡು ಬಂದೆ ತಾನೆ?" ಎಂದು ಹಾಸ್ಯದಿಂದ ಕೇಳುತ್ತಿದ್ದರು ಆವನ ತಾಯಿ. ಎರಡು ಮೂರು ವರ್ಷಗಳಿಂದ ಇದೊಂದು ಪರಿಪಾಟಿಯಾಗಿತ್ತು. ಈ ಅನುಭವಗಳೆಲ್ಲ ಬಹು ಸುಖದಾಯಕಗಳಾಗಿರುತ್ತಿದ್ದುವು ಸುಂದರನಿಗೆ; ಕಾಳೇಗೌಡ ಕಮಲೆಯ ಹೆಸರು ಎತ್ತಿದ ಕೂಡಲೆ ಅವುಗಳ ನೆನಪು ಬಂದಿತು ಅವನಿಗೆ; ನೆನಪನ್ನೇ ಮೆಲುಕುಹಾಕುತ್ತ ತುಸ ಹೊತ್ತನ್ನು ಮೌನವಾಗಿ, ಬಹು ಸುಖವಾಗಿ ಕಳೆದ ಸುಂದರ.

ತನ್ನ ಮಾತಿಗೆ ಉತ್ತರ ಕೊಡದೆ ಸುಂದರ ಮೌನವಾಗಿದ್ದುದನ್ನು ಕಂಡು, ಅವನು ನಿದ್ದೆಹೋಗುತ್ತಿದ್ದಿರಬಹುದೆಂದು ಎಣಿಸಿ, "ಏನು, ನಿದ್ದೆ ಹೋದಿರಾ ಬುದ್ದಿ ?" ಎಂದು ಕೇಳಿದ. "ನೀನಿರೋವಾಗ ಇಷ್ಟು ಬೇಗ ನಿದ್ದೆ ಬಂದುಬಿಡುತ್ತೇನೊ? ನೀನಿನ್ನೂ ಊರಿನ ಸಮಾಚಾರ ಎಲ್ಲಾನೂ ಹೇಳಿಲ್ಲ; ಪದಗಳನ್ನು ಹೇಳಿಲ್ಲ; ಇದನ್ನೆಲ್ಲ ಕೇಳದೆ ನಿದ್ದೆ ಬರುತ್ತೆಯೇ?"

"ಊರಿನ ಸಮಾಚಾರ ಏನು ಬುದ್ದಿ, ಯತಾ ಪರಕಾರ. ಸುಗ್ಗಿ ಈ ಸಲ ಪಸಂದಾಗಿ ಬಂತೊ. ಊರ ಮುಂದಲ ಹನುಮಪ್ಪಂಗೆ ಒಕ್ಕಲು ಮಕ್ಕಳಲ್ಲ ಕಾಣಿಕೆ ಒಪ್ಪಿಸ್ದ್ರು. ಸುಗ್ಗಿ ಕುಣಿತ ಕುಣಿದೊ."

"ಸುಗ್ಗಿ ಹಬ್ಬಕ್ಕೆ ಹೊಲೆಯರನ್ನೂ ಸೇರಿಸಿಕೊಂಡಿದ್ದರೇನೊ?"

"ಇದೇನು ಬುದ್ದಿ ಹಿಂಗೆ ಕೇಳ್ತೀರ? ಎಲ್ಲಾರ ಹೊಲೇರ್ನ ಸೇರಿಸಿ ಕೊಂಡಾರುಂಟ!"

"ನೀವೂ ಕೂಡ ಅವರನ್ನ ಮುಟ್ಟಿಸಿಕೊಳ್ಳುವದಿಲ್ಲವೇನೋ?"

"ಹೊಲೇರು ಅಂದರೆ ನಿಮಗೆ ಮಾತ್ರ ಹೊಲೇರು, ನಮಗಲ್ವಾ?"

"ನೋಡೋ ಇಲ್ಲಿ ಕಾಳ. ನಿಮಗೂ ಅವರಿಗೂ ಏನೋ ವ್ಯತ್ಯಾಸ? ನೀವೂ ತಿನ್ನುತ್ತೀರಿ; ಅವರೂ ತಿನುತ್ತಾರೆ. ಅವರಲ್ಲಿ ಸರ್ವಸಾಧಾರಣವಾಗಿ ಎಲ್ಲರೂ ಕುಡಿಯುತ್ತಾರೆ. ನಿಮ್ಮಲ್ಲೂ ಕೆಲವರು ಕುಡಿಯುತ್ತಾರೆ ನೀವು ಅವರ ಮನೆಗೆ ಊಟಕ್ಕೆ ಹೋಗಬೇಡಿ, ಅವರನ್ನು ಮುಟ್ಟಿಸಿಕೊಂಡ ರೇನೋ ?"

"ಏನೇ ಆಗಲಿ, ಅವರದೇ ಒಂದು ಜಾತಿ ಅಲ್ವಾ ಬುದ್ದಿ. ನಮ್ಮ ನಮ್ಮ ಜಾತಿ ಕಟ್ಟು ನಮಗೆ. ಆ ಕಟ್ಟು ಮೀರಿದರೆ ಪ್ರಳಯ ಆಗ್ಹೋ ದಾತು. ಇಷ್ಟ್ಯಾಕೆ ಬುದ್ದಿ: ನಿಮ್ಮ ಮಾದ ಅವ್ನೆ ಇಲ್ಲವ್ರೋ, ಅವನು ಮಾದಿಗ. ನಮ್ಮೂರಿನಲ್ಲಿ ಮಾದಿಗರದೇ ಒಂದು ಮೂಲೆ; ಹೊಲೆಗೇರಿ ಕಡೇಲಿ. ಹೊಲೇರು ಬಲಗೈನೋರು; ಮಾದಿಗರು ಎಡಗೈನೋರು. ಎಡಗೈನೋರ ಮನೇಲಿ ಬಲಗೈನೋರು ಊಟ ಮಾಡಾಕಿಲ್ಲ, ನೀವೇನೊ ಅಂತೀರಿ."

"ಮಾದ ಮಾದಿಗನೇನೊ? ಅವನೂ ಹೊಲೆಯ ಅಂತಲೇ ಇದ್ದೆ ನಾನು. ಹೊಲೆಯರಿಗೂ ಮಾದಿಗರಿಗೂ ಏನೋ ವ್ಯತ್ಯಾಸ?"

" ಏನೇನೋ ಅದೆ. ಅದೆಲ್ಲಾ ಯಾರಿಗೆ ಗೊತ್ತು ಬುದ್ಧಿ ? ನಮಗೆ ಹೊಲೇರು ಹೆಂಗೆ ದೂರವೋ ಮಾದಿಗರು ಹೊಲೇರಿಗೆ ಹಂಗೆ ದೂರ. ಹೊಲೇರು ಕುಡಿದರೂನೂ, ಮಾದಿಗರ ಹಂಗೆ ಕುಡಿಯೋಕಿಲ್ಲ. ಮಾದಿಗರು ಸತ್ತ ದನ ಕರು ಮಾಂಸ ತಿಂತಾರೆ, ಹೊಲೇರು ಅದನ್ನು ತಿನ್ನಾಕಿಲ್ಲ. ಜಾತಿ ಅಂದರೇನು ಸುಮ್ನಾ ಗೋಯ್ತು ಬುದ್ಧಿ ! "

ಅಸ್ಪೃಶ್ಯರಲ್ಲೇ ಈ ಬಗೆಯ ಭೇದವಿದೆಯೆಂಬುದು ಸುಂದರನಿಗೆ ಈ ವರೆಗೆ ಗೊತ್ತಿರಲಿಲ್ಲ. ಹರಿಜನರ ಸಮಸ್ಯೆ ತಾನು ಭಾವಿಸಿದ್ದುದಕ್ಕಿಂತ ದೊಡ್ಡದಾಗಿ, ತೊಡಕಿನದಾಗಿ ಕಂಡಿತು ಸುಂದರನಿಗೆ. ಮತ್ತೆ ಸ್ವಲ್ಪ ಹೊತ್ತು ಮೌನವಾಗಿ, ಆಲೋಚನಾಮಗ್ನನಾಗಿ ಮಲಗಿದ.

ಆಮೇಲೆ ಮತ್ತೆ ಕಾಳನನ್ನು ಕೇಳಿದ: " ಮಾದನ ವಿಚಾರ ನಿನಗೇನಾದರೂ ಗೊತ್ತೇನೋ ? "

ಕಾಳ ಎಂದ: " ಏನೋ ಬುದ್ಧಿ, ಕೆಲವರು ಹೇಳ್ತಾರೆ; ಆದರೆ ನನಗೆ ಸರಿಯಾಗಿ ತಿಳೀದು. ನಿಮ್ಮ ತಾತ, ನಿಮ್ಮ ತಂದೆ ಮಾದನ್ನ ಚೆನ್ನಾಗಿ ಕಾಪಾಡಿಕೊಂಡು ಬಂದರು. ಹುಟ್ಟಾಳು ಅಂತ ದೂರ ಮಾಡಿಲ್ಲಿಲ್ಲ. "

" ಹುಟ್ಟಾಳು ಅಂದರೇನೊ ? "

"ಚಾಮ ಶಾಮಣ್ಣನವರ ಹತ್ತಿರ ಮಣ್ಣಾಳಾಗಿ ಕೆಲಸಕ್ಕೆ ಸೇರ್ಕೊಂಡ; ತಕೊಂಡಿದ್ದ ಸಾಲ ತೀರಿಸಲಾರ್ದೆ ಜೀತದಾಳಾದ; ಜೀತದಾಳಿನ ಮಗ ಮಾದ ಹುಟ್ಟಾಳಾಗ್ದೆ ಇನ್ನೇನಾದಾನು? ಆದರೂನು, ಹುಟ್ಟಾಳು ಅಂತ ಮಾದನ್ನ ಕಷಕ್ಕೆ ಕಡೆಯಾಗಿ ಕಾಣ್ತಾ ಇರ್ಲಿಲ್ಲ. ಅವನಿಗೆ ನೆಮ್ಮದಿಯಾಗಿ ಇರೋಕೆ ಎನೇನ್ ಬೇಕೋ ಅದ್ನೆಲ್ಲಾ ಕೊಡ್ತಾ ಇದ್ರು ನಿಮ್ಮ ಅಜ್ಜ. ರಾಗಿ ಕೊಡ್ತಾ ಇದ್ರು, ಉಪ್ಪೆಚ್ಚಕ್ಕೆ ದುಡ್ಡು ಕೊಡ್ತಾ ಇದ್ರು, ಉಗಾದಿಗೆ ಬಟ್ಟೆ ತೆಕ್ಕೊಡ್ತಾ ಇದ್ರು. ನಿಮ್ಮಜ್ಜ ನಿಮ್ಮ ತಂದೆ ಇಬ್ಬರೂನು ತುಂಬ ಕಷ್ಟಬಿದ್ದರು ಮಾದನಿಗೆ ಮದುವೆ ಮಾಡಿಸಬೇಕೂ ಅಂತ. ಐವತ್ತು ರೂಪಾಯಿ ತೆರಬೇಕಾದರೂ ಕೊಡೋಕೆ ತಯಾರಾಗಿದ್ದರು. ಅದೇನು ದೊಡ್ಡ ಮನ್ಸು ಬುದ್ಧಿ ನಿಮ್ಮ ತಾತನದು, ನಿಮ್ಮ ತಂದೇದು ! ಪಾಪ, ಅವರೇನು ಮಾಡ್ತಾರು ? ಮಾದನ ಹಣೇಬರ. ಹುಟ್ಟಾಳಿಗೆ ಯಾರೂ ಹೆಣ್ಣು ಕೊಡೊಲ್ಲ ಅಂದರು...."

"ಹುಟ್ಟಾಳಿಗೆ ಯಾರೂ ಹೆಣ್ಣೇ ಕೊಡುವುದಿಲ್ಲವೇನೊ ?" ಎಂದು ಸುಂದರ ನಡುವೆ ಪ್ರಶ್ನೆ ಹಾಕಿದ.

ಕಾಳ ಮುಂದುವರಿಸಿದ: "ಅದೇನೊ ಬುದ್ಧಿ, ನನಗೆ ತಿಳೀದು. ನಮ್ಮೂರಿನ ಮಾದಿಗರೇನೊ 'ಹುಟ್ಟಾಳಿಗೆ ಯಾರು ಹೆಣ್ಣು ಕೊಟ್ಟಾರು' ಅಂದುಬುಟ್ಟರು. ಪಾಪ, ನಿಮ್ಮ ಅಯ್ಯ ಏನು ಮಾಡಾರು ? ಮಾದನಿಗೆ ಹೆಣ್ಣು ನೋಡಾಕೆ ಅಂತ ಊರೂರು ತಿರುಗೋಕಾಯ್ತದ ? ಅಂತೂ ಮಾದನಿಗೆ ಮದುವೆ ಆಗ್ನಿಲ್ಲ."

"ಮಾದನಿಗೆ ಮದುವೆ ಇಲ್ಲ ? ನಿಜವಾಗಿಯೂ ?"

"ಇದೇನು ಬುದ್ಧಿ ಹಿಂಗೆ ಕೇಳ್ತೀರ? ನಿಮಗೆ ಗೊತ್ತಿಲ್ಲ ಅನ್ನಿ ಹಂಗಾರೆ. ಮಾದನಿಗೆ ಮದುವೆ ಆಗ್ನೇ ಇಲ್ಲ. ಒಂಟಿ-ಬಾಳು ಹೆಂಗೆ ನೂಕಾನು ಮಾದ, ಪಾಪ! ಅವನೇನು ನರಮನ್ನ ಅಲ್ವಾ? ಬದುಕ್ನಲ್ಲಿ ಬೇಸರ ಹುಟ್ಟ್ತು. ಒಸಿ ಒಸಿ ಕುಡೀತಾ ಇದ್ದೋನು ಪೂರಾ ಕುಡಿಯೋಕೆ ಹತ್ಬುಟ್ಟ."

"ಅದು ಸರಿ ಕಣಲಾ. ಅವನಿಗೆ ಮದುವೆ ಆಗಲಿಲ್ಲ ಅನ್ನುತಿ. ಮಗಳೆಲ್ಲಿಂದ ಬಂದಳೋ ?"

"ಅದ್ನೆ ನಾನು ಹೇಳಾಕೆ ಹೊಂಟದ್ದು. ಕೆಲವರು ಹೇಳ್ತಾರೆ—'ಯಾರೋ ಒಂದು ಹೆಣ್ಣುಮಗಾನ ತೋಟದಲ್ಲಿ ತಂದು ಬಿಸಾಡಿಬುಟ್ಟಿದ್ದರು, ಮಾದ ಸಾಕಿಕೊಂಡ' ಅಂತ. ಮಾದನೆದುರಿಗೆ ಹಿಂಗೆ ಹೇಳಿ, ಅವನನ್ನ ಕೇಳ್ದೆ ಒಂದು ದಿನ. ಅವನು ರೇಗಿಬುಟ್ಟ—'ಏನು ಕಾಳೇಗೌಡರೆ, ನನ್ನ ಮಗಾ ಬೀದೀಲಿ ಸಿಕ್ಕಿದ್ದು, ಪಾಪಿ ಪರದೇಸಿ ಅಂತ ತಿಳಿದ್ರೋ? ಹೆಣ್ಣಂತೂ ಕೊಡ್ನಿಲ್ಲ, ಒಂದು ಮಗಾದರೂ ಕೊಡಿ, ಸಾಕಿಕೋತೀನಿ ಅಂತ ನಮ್ಮ ಜನಾನ ಕೇಳ್ದೆ. ಯಾರೂ ಕೊಡ್ನಿಲ್ಲ. ನರಸೀಪುರಕ್ಕೆ ಹೋಗಿ ನಮ್ಮ ಸೋದರಮಾವನ್ನ ಕೇಳ್ದೆ. ಅವನ ಹೆಂಡತಿ ಹೆಣ್ಣು ಹಡದು ಸತ್ತುಹೋಗಿದ್ಲು. ತಬ್ಬಲೀನ ಯಾರು ಸಾಕಿದರೇನು ಅಂತ ಮಗಾ ಕೊಟ್ಟ. ತಂದು ಸಾಕಿಕೊಂಡೆ' ಅಂತ ಹೇಳಿದ. ಸುಳ್ಳು ಯಾಕೆ ಹೇಳ್ತಾನೆ, ಪಾಪ." ಎಂದು ಕಾಳ ನಿಲ್ಲಿಸಿದ.

ಕಾಳನಿಂದ ಈ ಸಂಗತಿಯನ್ನು ಕೇಳಿದ ಮೇಲೆ ಸುಂದರನ ಮನಸ್ಸು ಇನ್ನು ಬೇರೆ ಯಾವ ವಿಷಯದ ಕಡೆಗೂ ಹರಿಯದಾಯಿತು. ಚೆನ್ನಿಯ

ವಿಚಾರ ಅವನ ಮನಸ್ಸನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡುಬಿಟ್ಟಿತು. ತಮ್ಮ ಮನೆಯ ಜೀತದಾಳಾದ ಮಾದನ ಮಗಳು ತಮ್ಮ ಕುಟುಂಬಕ್ಕೇ ಸೇರಿದವಳೆಂಬ ಭಾವನೆ ಬಂದು, ಅವಳ ವಿಷಯದಲ್ಲಿ ಅವನು ಮೊದಲಿನಿಂದಲೂ ತೋರುತ್ತಿದ್ದ ಸಹಾನುಭೂತಿ ಮುಮ್ಮಡಿ ನಾಲ್ಮಡಿಯಾಗಿ ಹೆಚ್ಚಿತು; ತನ್ನ ತಂಗಿ ಅಥವಾ ಕಮಲೆ ಚೆನ್ನಿಯ ಸ್ಥಿತಿಯಲ್ಲಿದ್ದಿದ್ದರೆ ಹೇಗೆನ್ನಿಸುತ್ತಿತ್ತೊ ಹಾಗೆ ಎನ್ನಿಸತೊಡಗಿತು ಅವನಿಗೆ; ಚಿಕ್ಕಂದಿನಲ್ಲಿ ಅವಳೊಡನೆ ಅವನಿಗಿದ್ದ ಕೆಳೆಯೊಲುಮೆ ಮರುಕೊಳಿಸಿತು; ಈ ಸಲ ಎಂದಾದರೂ ಒಮ್ಮೆ ಅವಳನ್ನು ನೋಡಬೇಕೆಂದು ಮಾಡಿಕೊಂಡಿದ್ದವನು, ಊರಿಗೆ ಹೋದ ಕೂಡಲೆಯೆ ಅವಳನ್ನು ನೋಡಿಬಿಡಬೇಕೆಂದು ಆಶಿಸಿದನು; ತೋಟಕ್ಕೆ ಹೋಗಿ ಚೆನ್ನಿಯನ್ನು ನೋಡಿಕೊಂಡು ಆಮೇಲೆ ಕಮಲೆಯನ್ನು ನೋಡಲು ಹೋದರಾಯಿತು ಎಂಬ ಆಲೋಚನೆ ಕೂಡ ಬಂದಿತವನಿಗೆ. ಆದರೆ ಕಮಲೆಗಿಂತ ಚೆನ್ನಿ ಹೆಚ್ಚಾದಾಳೆ? ಕಮಲೆಯನ್ನು ಮೊದಲು ನೋಡಬೇಕಾದದ್ದು ತನ್ನ ಕರ್ತವ್ಯ.

ಹೀಗೆ ಆಲೋಚಿಸುತ್ತ ಅವನಿಗೆ ಈ ಸಲ ನಿಜವಾಗಿಯೂ ನಿದ್ದೆಯ ಜೊಂಪು ಹತ್ತಿತ್ತು; ಜೊತೆಗೆ ಕಾಳೇಗೌಡ ಪದಗಳನ್ನು ಹೇಳಲು ಮೊದಲು ಮಾಡಿದ್ದನು. ಆ ಪದಗಳು ಒಂದು ವಿಧವಾದ ಜೋಗುಳವಾಗಿ ಪರಿಣಮಿಸಿ ಮಗುವಿಗೆ ಹೇಗೋ ಹಾಗೆ ಸುಂದರಮೂರ್ತಿಗೆ ಬೇಗನೆ ಸುಖನಿದ್ರೆಯನ್ನು ತಂದುವು.

೧೩

ಚೆನ್ನಿಗೆ ಜ್ವರ ಬಂದು ಐದು ದಿನಗಳಾಗಿದ್ದುವು. ಬಂದ ಜ್ವರ ಆರಿಯೇ ಇರಲಿಲ್ಲ. ಕೃಷ್ಣಪ್ಪನವರು ನಿತ್ಯವೂ ಬೆಳಗ್ಗೆ ತೋಟಕ್ಕೆ ಬಂದು ಚೆನ್ನಿಯ ಸ್ಥಿತಿಯನ್ನು ವಿಚಾರಿಸಿಕೊಂಡು, ಆಸ್ಪತ್ರೆಗೆ ಹೋಗಿ ಔಷಧ ತಂದುಕೊಡುತ್ತಿದ್ದರು; ಮಧ್ಯಾಹ್ನ ತಮ್ಮ ಕಡೆಯ ಮಗ ಸೂರಿಯೊಡನೆ ಗಂಜಿ, ಹಾಲು ಕಳಿಸಿಕೊಡುತ್ತಿದ್ದರು; ಮತ್ತೆ, ಸಂಜೆ ತೋಟಕ್ಕೆ ಹೋಗಿ ಚೆನ್ನಿಯ ಸ್ಥಿತಿಯನ್ನು ವಿಚಾರಿಸಿಕೊಳ್ಳುತ್ತಿದ್ದರು. ಕೃಷ್ಣಪ್ಪನವರು ಹೇಗೂ ಪ್ರತಿನಿತ್ಯ ತೋಟಕ್ಕೆ ಹೋಗುತ್ತಿದ್ದರು; ಆದರೆ, ತಮಗೆ ಬಿಡುವಾದಾಗ ಹೋಗುತ್ತಿದ್ದರು; ಒಂದೊಂದು ದಿನ ಒಂದೊಂದು ವೇಳೆ; ಈಗ ಪ್ರತಿನಿತ್ಯ ದಿನಕ್ಕೆ

ಎರಡು ವೇಳೆ, ಒಂದು ಗೊತ್ತಾದ ಹೊತ್ತಿನಲ್ಲಿ ಹೋಗುತ್ತ, ಚೆನ್ನಿಯ ರೋಗ ಸ್ಥಿತಿಯನ್ನು ವಿಚಾರಿಸಿ ತಾವೇ ಖುದ್ದಾಗಿ ಆಸ್ಪತ್ರೆಗೆ ಹೋಗಿ ಔಷಧ ತಂದು ಕೊಡುತ್ತಿದ್ದುದರಲ್ಲಿ ನಿಜವಾಗಿಯೂ ಒಂದು ವಿಶೇಷವಿತ್ತು. ಒಂದು ಸಂಸಾರದಲ್ಲಿ ಒಬ್ಬರಿಗೊಬ್ಬರಿಗಿರುವ ನೈಜಪ್ರೇಮ ಸ್ಫುಟವಾಗಿ ವ್ಯಕ್ತಗೊಳ್ಳುವುದು ಕಷ್ಟಸಂದರ್ಭಗಳು ಬಂದಾಗ. ಚೆನ್ನಿಗೆ ಕೃಷ್ಣಪ್ಪನವರು ಔಷಧಿ ತಂದುಕೊಡುತ್ತಿದ್ದುದು, ಅವರು ಮಾದನನ್ನೂ ಅವನ ಮಗಳನ್ನೂ ಹೇಗೆ ತಮ್ಮ ಕುಟುಂಬಕ್ಕೆ ಸೇರಿದ ವ್ಯಕ್ತಿಗಳೆಂಬುದಾಗಿ ಎಣಿಸಿದ್ದರೆನ್ನುವುದಕ್ಕೆ ಒಂದು ಈಚಿನ ನಿದರ್ಶನ, ಅಷ್ಟೆ. ಮೊನ್ನೆಮೊನ್ನೆಯ ವರೆಗೂ ನಮ್ಮ ನಾಡಿನ ಹಳ್ಳಿಗಳ ಜೀವನದಲ್ಲಿ ಕಾಣಬರುತ್ತಿದ್ದ ಒಂದು ವಿಶೇಷ ಲಕ್ಷಣ ಇದು: ಧಣಿ ಎಂದರೆ ಕೆಲಸ ಮಾಡಿಸಿಕೊಳ್ಳುವವನು, ಆಳು ಎಂದರೆ ಅವನಿಗಾಗಿ ಕೆಲಸ ಮಾಡುವವನು ಎಂಬುದಿಷ್ಟೆ ಭೇದ. ಧಣಿಯ ಮನೆಯಲ್ಲಿ ಮದುವೆ, ಮುಂಜಿ, ಹಬ್ಬ ಹರಿದಿನವಾದರೆ ಆತನ ಆಳು ಕಾಳೂ ಅವುಗಳಲ್ಲಿ ಸಮಭಾಗಿಗಳು. ಧಣಿ ಬ್ರಾಹ್ಮಣ ಅಥವಾ ವೈಶ್ಯನಾಗಿ ಆಳು ಒಕ್ಕಲಿಗನಾದರೆ ಎಲ್ಲರ ಊಟವಾದ ಮೇಲೆ ಅವರಿಗೆ ತೊಟ್ಟಿಯಲ್ಲಿ ಒಂದು ಕಡೆ ಊಟ; ಹೊಲೆ ಮಾದಿಗರಾದರೆ ಸಂಜೆ ಅವರು ಹೆಡಗೆ ಪಾತ್ರೆಗಳನ್ನು ತಂದು ಊಟ ತೆಗೆದುಕೊಂಡು ಹೋಗಬೇಕು. ಒಕ್ಕಲಿಗರು ಮುಂತಾದವರು ತಮ್ಮ ಮನೆಗಳಲ್ಲಿ ಶುಭಸಂದರ್ಭಗಳಾದರೆ ಹಾರುವರಿಗೆ ಹಣ್ಣು ಕಾಯಿ ತಾಂಬೂಲಗಳ ಮರ್ಯಾದೆ ಮಾಡುವರು; ಸ್ವಯಂ ಪಾಕದ ಸಾಮಗ್ರಿಗಳನ್ನೂ ಕೊಡುವರು. ಧಣಿಯ ಮನೆಯಲ್ಲ ಕಾಯಿಲೆ ಕಸಾಲೆಯಾದರೆ ರೈತರಿಗೆ, ಆಳುಗಳಿಗೆ ಚಿಂತೆ; ಇವರುಗಳ ಮನೆಯಲ್ಲೇ ಆದಿದ್ದರೆ ಧಣಿಗೆ ವ್ಯಾಕುಲ. ಹಳ್ಳಿಯ ಜೀವನದ ಈ ಬಗೆಯ ಜಾತಿ ಮತಾತೀತವಾದ ಅನ್ಯೋನ್ಯಭಾವ ಕೃಷ್ಣಪ್ಪನವರು, ಕಾಳೇಗೌಡ, ಮಾದ ಇವರುಗಳಲ್ಲಿ ಪರಸ್ಪರ ವಿಶೇಷತಃ ನೆಲಸಿತ್ತು. ಹೀಗಿದ್ದುದರಿಂದ ಕೃಷ್ಣಪ್ಪನವರು ತಾವೇ ಸ್ವತಃ ಆಸ್ಪತ್ರೆಗೆ ಹೋಗಿ ಚೆನ್ನಿಗೆ ಔಷಧ ತಂದುಕೊಡುತ್ತಿದ್ದುದರಲ್ಲಿ ಆಶ್ಚರ್ಯವೇನಿರಲಿಲ್ಲ.

ಮಾದ ಬಂದು ಚೆನ್ನಿಗೆ ಜ್ವರ ಎಂದು ಹೇಳಿಕೊಂಡಾಗ ಕೃಷ್ಣಪ್ಪನವರು ತಾವೇ ಮಾರನೆಯ ಸಂಜೆ ಔಷಧಿ ತಂದುಕೊಡುವುದಾಗಿ ಹೇಳಿದ್ದ

ರಲ್ಲಿ ನಂಜುಂಡಶಾಸ್ತ್ರಿಗಳಿಗೆ ವಿಶೇಷವೇನೂ ಕಂಡಿರಲಿಲ್ಲ; ಏನಾದರೂ ಗೋಚರವಾಗಿದ್ದರೆ, 'ಕೃಷ್ಣಪ್ಪನವರು ಎಂತಹ ಕನಿಕರದ ಸ್ವಭಾವದವರು' ಎಂಬ ಮೆಚ್ಚಿಕೆಯ ಭಾವವೇ ಆಗಿದ್ದಿರಬೇಕು. ಆದರೆ ತಮ್ಮ ಮಗನಿಂದ ಸುಂದರಮೂರ್ತಿಯ ವಿಚಾರವಾಗಿ "ಕೇಳಬಾರದ್ದನ್ನು" ಕೇಳಿದ ಕೂಡಲೆ ಕೃಷ್ಣಪ್ಪನವರು ಮಾಡುತ್ತಿದ್ದಷ್ಟು ಕೂಡ ಶಾಸ್ತ್ರಿಗಳ ಮನಸ್ಸಿಗೆ ಘೋರ ಅನಾಚಾರವಾಗಿ ಕಂಡಿತು. ಸುಂದರಮೂರ್ತಿಯ ವಿಚಾರ ಕೃಷ್ಣಪ್ಪನವರಲ್ಲಿ ಪ್ರಸ್ತಾವಿಸುವುದಕ್ಕೆ ಅವರಿಗೆ ಕಾರಣವೊಂದು ಬೇಕಾಗಿತ್ತು. ಸುಂದರ ಊರು ಸೇರಬೇಕಾಗಿದ್ದ ದಿನದ ಹಿಂದಿನ ಸಂಜೆ ಆಸ್ಪತ್ರೆಗೆ ಹೋಗುತ್ತಿದ್ದ ಕೃಷ್ಣಪ್ಪನವರನ್ನು ಶಾಸ್ತ್ರಿಗಳು ದಾರಿಯಲ್ಲಿ ಸಂಧಿಸಿ ಬಹು ಸೂಕ್ಷ್ಮರೀತಿಯಲ್ಲಿ ವಿಚಾರವೆತ್ತಿದರು :

ಶಾಸ್ತ್ರಿಗಳು : "ಆಸ್ಪತ್ರೆಗೆ ಹೊರಟ ಹಾಗೆ ಕಾಣುತ್ತೆ ?"

ಕೃಷ್ಣಪ್ಪನವರು : "ಹೌದು."

"ಮಾದನ ಮಗಳಿಗೆ ಇನ್ನೂ ಗುಣವಿಲ್ಲವೊ?"

"ಇಲ್ಲ."

"ನಾವು ಎಷ್ಟೋ ಅಂತ ಮಾಡುವುದಕ್ಕಾಗುತ್ತೆ, ಹೇಳಿ. ಅದಕ್ಕೂ ಒಂದು ಮಿತಿಯಿದೆ. ಯಾಕೆ ಹೇಳುವುದಕ್ಕೆ ಬಂದೆ ಅಂದರೆ, ಆ ಮಾದಿಗನ ಮಗಳಿಗೆ ನೀವು ಔಷಧಿ ತಂದು ಕೊಡುವುದು ನನಗೇಕೋ ಅಷ್ಟು ಸರಿಯಾಗಿ ಕಾಣುವುದಿಲ್ಲ. ಅವನೇ ತಂದುಕೊಳ್ಳುತಾನೆ ಬೇಕಾದರೆ."

"ಹಾಗಂಟೆ ಶಾಸ್ತ್ರಿಗಳೇ! ಪಾಪ, ಅವನಿಗೆ ಇನ್ನು ಯಾರು ದಿಕ್ಕು ನನ್ನ ಬಿಟ್ಟರೆ? ಅವನು ಆಸ್ಪತ್ರೆಗೆ ಹೊರಟು ಹೋದರೆ ಚೆನ್ನಿಯನ್ನ ನೋಡಿ ಕೊಳ್ಳುವವರು ಯಾರು? ಅವನು ಇಲ್ಲದ ವೇಳೆಯಲ್ಲಿ ಅವಳಿಗೆ ಏನಾದರೂ ಆದರೆ ಗತಿಯೇನು ?"

"ಅವನಿಗೆ ಔಷಧಿಯನ್ನೆ ಕೊಡಿಸಬೇಡಿ ಅಂತ ನಾನು ಹೇಳುವುದಿಲ್ಲ. ಅಷ್ಟು ಕ್ರೂರಾತ್ಮನೆ ನಾನು? ನೀವು ತಂದು ಕೊಡಬೇಕಾಗಿಲ್ಲ, ಕಾಳೇಗೌಡನ ಕೈಲೋ ಇನ್ನು ಯಾರಾದರ ಕೈಲೋ ತರಿಸಿ ಕೊಡಬಹುದಲ್ಲ ಎಂದು ನನ್ನ ತಾತ್ಪರ್ಯ, ಅಷ್ಟೆ."

"ಅದು ಸರಿಯೆ. ಆದರೆ, ನಾನು ತಾನೇ ಏನು ಮಾಡಬೇಕು ಹೇಳಿ.

ಕೇಗಿದ್ದರೂ ಒಂದು ಸಲ ತೋಟಕ್ಕೆ ಹೋಗುತ್ತೇನೆ. ಯಾವಾಗಲೋ ಹೋಗುವ ಬದಲು ಸಂಜೆ ಔಷಧಿ ತೆಗೆದುಕೊಂಡೇ ಹೋಗುತ್ತೇನೆ, ಅಷ್ಟೆ."

"ಆದರೂ ನನಗೆ ಸರಿಯಾಗಿ ಕಾಣುವುದಿಲ್ಲ."

"ಇದರಲ್ಲಿ ನನಗೇನೂ ದೋಷ ಕಾಣುವುದಿಲ್ಲವಲ್ಲ?"

"ನೀವು ಮಾಡುತ್ತಿರುವ ಕಾರ್ಯದಲ್ಲೇ ಅಷ್ಟಾಗಿ ದೋಷವಿಲ್ಲ ಅನ್ನಿ. ಅದಲ್ಲ ಮುಖ್ಯ ವಿಚಾರ. ನಾವು ಮಾಡುವ ಕೆಲಸ ಕಾರ್ಯಗಳು ಪ್ರತಿ ಯೊಂದನ್ನೂ ಬಹು ಎಚ್ಚರಿಕೆಯಿಂದ ಮಾಡಬೇಕು; ಅವು ಇತರರಿಗೆ, ಮುಖ್ಯವಾಗಿ ನಮ್ಮ ಮಕ್ಕಳಿಗೆ, ಆದರ್ಶಪ್ರಾಯವಾಗಿರಬೇಕು. ನಾವು ಮಾಡುವ ಕಾರ್ಯ ಎಷ್ಟೇ ಉತ್ಕೃಷ್ಟವಾಗಿದ್ದು ದೋಷರಹಿತವಾಗಿದ್ದಾಗ್ಯೂ ಅದು ಲೋಕಸಂಪ್ರದಾಯವಿರುದ್ಧವಾಗಿಬಿಟ್ಟರೆ ಕಷ್ಟ: ಜನ ಆಡಿಕೊಳ್ಳು ವುದು ಹಾಗಿರಲಿ, ಮಕ್ಕಳು ನಮ್ಮ ಮೇಲುಪಂಕ್ತಿಯನ್ನೇ ಇಮ್ಮಡಿ ಮುಮ್ಮಡಿ ಹುರುಪಿನಿಂದ ಅನುಸರಿಸಿಬಿಟ್ಟರೆ ಕಷ್ಟ...."

ಇಷ್ಟರಲ್ಲಿ ಕೃಷ್ಣಪ್ಪನವರು ಸಂದೇಹ ಸೂಚಿಸಿದರು: "ಏನೋ ನೀವು ಹೇಳುವುದು ನನಗೆ ಸರಿಯಾಗಿ ಅರ್ಥವಾಗಲಿಲ್ಲ."

ಕೃಷ್ಣಪ್ಪನವರಿಗೆ ನಿಜವಾಗಿಯೂ ಶಾಸ್ತ್ರಿಗಳ ಮಾತು ಸರಿಯಾಗಿ ಅರ್ಥವಾಗಲಿಲ್ಲ. ಏಕೆಂದರೆ, ಶಾಸ್ತ್ರಿಗಳು ವ್ಯಂಜಿಸುತ್ತಿದ್ದಂತಹ "ಲೋಕ ಸಂಪ್ರದಾಯ-ವಿರುದ್ಧ" ಕಾರ್ಯ ಯಾವುದನ್ನೂ ತಾವು ಮಾಡಿದ ಹಾಗೆ ಅವರಿಗೆ ನೆನಪಿರಲಿಲ್ಲ. ಸದ್ಯದಲ್ಲಿ ಚೆನ್ನಿಗೆ ಔಷಧಿ ತಂದು ಕೊಡುತ್ತಿದ್ದುದು ಅಂತಹ ಅಕರಣೀಯ ಕಾರ್ಯ ಎಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಹಾಗೆಂದು ತಮ್ಮ ಅಭಿಪ್ರಾಯವನ್ನು ಅವರು ಶಾಸ್ತ್ರಿಗಳಿಗೆ ತಿಳಿಸಿದರು.

"ನೀವು ಮಾಡುತ್ತಿರುವ ಕಾರ್ಯದಲ್ಲಿ ಅಷ್ಟು ದೋಷವಿಲ್ಲ ಅನ್ನಿ" ಎಂದು ಮತ್ತೆ ಅದೇ ಪಲ್ಲವಿ ನುಡಿದು ಶಾಸ್ತ್ರಿಗಳು ಮುಂದುವರಿಸಿದರು: 'ನೀವು ಈಗ ಮಾದನ ಮಗಳಿಗೆ ಔಷಧಿ ತಂದು ಕೊಡುತ್ತಿದ್ದೀರಿ. ನಿಮ್ಮ ಮಗ ಸುಂದರಮೂರ್ತಿ ನಿಮ್ಮ ಕರುಣೆಯ ಕೆಲಸದ ಮೇಲುಪಂಕ್ತಿಯಿಟ್ಟು ಕೊಂಡು ಅವರ ಉಪಚಾರಕ್ಕೇ ತೊಡಗಿಬಿಟ್ಟರೆ ಏನು ಮಾಡುವುದು?"

"ಈಗ ನಮ್ಮ ಸೂರಿಯೇ ಹಾಲು ಗಂಜಿ ತೆಗೆದುಕೊಂಡು ಹೋಗಿ ಕೊಟ್ಟು, ಉಪಚಾರ ಮಾಡುತ್ತಿಲ್ಲವೆ? ಆದನ್ನ ಸುಂದರನೇ ಮಾಡಿದರೆ ಅದರಲ್ಲಿ

ದೋಷವೇನು ? ಅದು ಶಾಸ್ತ್ರಾಚಾರಕ್ಕೆ ವಿರುದ್ಧವೇ ? ”

“ ಸುಂದರಮೂರ್ತಿ ಅಷ್ಟಕ್ಕೆ ಬಿಡುತ್ತಾನೆಯೆ ? ಮಾದನ ಮಗಳಿಗೆ ತಾನೇ ಔಷಧಿ ಕುಡಿಸಹೋಗಬಹುದು; ಅವಳನ್ನು ಮುಟ್ಟಿಕೊಂಡು ಅವಳಿಗೆ ಉಪಚರಿಸಹೋಗಬಹುದು. ಆಕಸ್ಮಾತ್ತಾಗಿ ಅಸ್ಪೃಶ್ಯರ ಸ್ಪರ್ಶವಾದರೆ ಯತ್ನವಿಲ್ಲ; ಅದಕ್ಕೆ ದೋಷವಿಲ್ಲ. ಆದರೆ, ಉದ್ದೇಶಪೂರ್ವಕವಾಗಿ ಅವರನ್ನು ಮುಟ್ಟಿಸಿಕೊಳ್ಳುವುದು ದೋಷವಲ್ಲವೆಂದು ನೀವು ಹೇಳುವುದಿಲ್ಲವಷ್ಟೆ?”

ಶಾಸ್ತ್ರಿಗಳ ಸಂಭಾಷಣೆಯ ಗುರಿ ಇನ್ನೂ ಕೃಷ್ಣಪ್ಪನವರಿಗೆ ವೇದ್ಯವಾಗಿರಲಿಲ್ಲ.

“ ಖಂಡಿತ ಇಲ್ಲ. ಹಾಗೆಲ್ಲ ಮಾಡಬಾರದು ಎಂದು ಅವನಿಗೆ ಮುಂಚೆಯೇ ತಿಳಿಸಿಬಿಟ್ಟರಾಯಿತು ” ಎಂದು ಉತ್ತರ ಕೊಟ್ಟರು ಕೃಷ್ಣಪ್ಪನವರು.

ಇಷ್ಟು ಹೊತ್ತಿಗೆ ಅವರು ಆಸ್ಪತ್ರೆಯನ್ನು ಸಮೀಪಿಸಿದ್ದರು. ಶಾಸ್ತ್ರಿಗಳು ಯಾವ ಸಂಗತಿಯನ್ನು ತಾವು ಕೃಷ್ಣಪ್ಪನವರಿಗೆ ತಿಳಿಸಬೇಕೆಂದು ಉದ್ದೇಶಿಸಿ ಕೃಷ್ಣಪ್ಪನವರ ಮನಸ್ಸನ್ನು ಸಿದ್ಧಗೊಳಿಸಿದ್ದರೋ ಅದನ್ನು ಇನ್ನು ಹೆಚ್ಚಿನ ಬಳಸುನುಡಿಗಳಿಲ್ಲದೆ ತಿಳಿಸಿಬಿಟ್ಟು, ಏನೋ ಒಂದು ಬಗೆಯ ಸಮಾಧಾನದಿಂದ ತಮ್ಮ ಮಾತನ್ನು ಹೀಗೆ ಮುಗಿಸಿದರು : “ ಈ ಅನಾಚಾರವನ್ನು ಮೊಳಕೆಯಲ್ಲೇ ಚಿವುಟಿಬಿಡುವುದು ಮೇಲೆಂದು ನಾನು ಹೇಳಬೇಕಾದ್ದನ್ನು ಕರ್ತವ್ಯಬುದ್ಧಿಯಿಂದ ಹೇಳಿದ್ದೇನೆ. ನಿಮ್ಮ ಮಗನನ್ನು ಸರಿಯಾದ ಮಾರ್ಗಕ್ಕೆ ತಂದರೆ ನಿಮಗೂ ಕ್ಷೇಮ, ಅವನಿಗೂ ಕ್ಷೇಮ. ಅವನು ತಿಳಿಯದೆ ಈಗ ಒಂದು ಅಕೃತ್ಯ ಮಾಡಿಬಿಟ್ಟಿದ್ದಾನೆ. ಅದಕ್ಕೆ ಏನಾದರೊಂದು ಪ್ರಾಯಶ್ಚಿತ್ತ ಮಾಡಿಸೋಣ, ಇರಲಿ. ಅದು ನಮ್ಮ ಕಣ್ಣೆದುರಿಗೆ ನಮ್ಮ ಊರಿನಲ್ಲೇ ಪುನರಾವರ್ತನೆಯಾದರೆ ಊರಿಗೇ ಕ್ಷೇಮವಲ್ಲ. ಅಂತೂ, ದುಡುಕಬೇಡಿ; ಒಳ್ಳೆಯ ಮಾತಿನಲ್ಲೇ ದಾರಿಗೆ ತನ್ನಿ. ನಯಕ್ಕೆ ಬಗ್ಗದೆ ಹೋದರೆ ಭಯ ಇದ್ದೇ ಇದೆ. ಇನ್ನು ನನಗೆ ಸಂಧ್ಯಾವಂದನೆಗೆ ಹೊತ್ತಾಗುತ್ತೆ. ನಾನು ಬರುತ್ತೇನೆ. ನಾನು ಏನೋ ಹೇಳಿ ನಿಮ್ಮ ಮನಸ್ಸಮಾಧಾನವನ್ನು ಕೆಡಿಸಿ ಬಿಟ್ಟೆ, ಕ್ಷಮಿಸಬೇಕು. ಭಗವಂತನ ಕೃಪೆಯಿಂದ ಎಲ್ಲ ಸರಿಹೋಗುತ್ತೆ, ಯೋಚನೆ ಮಾಡಬೇಡಿ....ಇನ್ನು ಬರುತ್ತೇನೆ” ಎಂದು ಶಾಸ್ತ್ರಿಗಳು ಹಿಂತಿರುಗಿದರು.

ಅನಿರೀಕ್ಷಿತ ವರ್ತಮಾನವನ್ನು ಕೇಳಿದ ಕೂಡಲೆ ಕೃಷ್ಣಪ್ಪನವರು ನಿಜವಾಗಿಯೂ ಕ್ಷಣಕಾಲ ದಂಗುಬಡಿದುಹೋದರು. ಹೊಲೆಯರೂ ಮಾದಿಗರೂ ಎಲ್ಲರಂತೆ ಮನುಷ್ಯರೇ, ದಿಟ; ಅವರಲ್ಲಿ ಮರುಕ ತೋರಿ ಅವರಿಗೆ ಸಹಾಯ ಮಾಡುವುದೇನೋ ಸರಿಯೆ. ಅದನ್ನು ತಾವೇ ಮಾಡುತ್ತಿಲ್ಲವೆ ಈಗ? ಆದರೆ ಅವರನ್ನು ಮುಟ್ಟಿಸಿಕೊಳ್ಳುವುದು, ಅವರೊಡನೆ ಕುಳಿತು ಊಟ ಮಾಡುವುದು ನಿಜವಾಗಿಯೂ ಅನಾಚಾರವೇ. ಮಾರನೆಯ ದಿನ ಬೆಳಗ್ಗೆ ಸುಂದರಮೂರ್ತಿ ಬಂದ ಕೂಡಲೇ "ಮುಂದೆ ಹೀಗೆಲ್ಲ ಮಾಡಬೇಡ" ಎಂದು ತಿಳಿಸಿ, ಶಾಸ್ತ್ರಿಗಳು ಹೇಳಿದ ಪ್ರಾಯಶ್ಚಿತ್ತವನ್ನೂ ಮಾಡಿಸಿಬಿಟ್ಟರಾಯಿತು. ಅದೇನು ಮಹಾ ದೊಡ್ಡ ವಿಷಯ?

ಕೃಷ್ಣಪ್ಪನವರ ತಲೆಯಲ್ಲಿ ಈ ಆಲೋಚನೆ ಕಡೆಯುತ್ತಿದ್ದು, ಡಾಕ್ಟರು 'ರೋಗಿಗೆ ಹೇಗಿದೆ?' ಎಂದು ಕೇಳಿದ ಪ್ರಶ್ನೆಗೆ ಯಾಂತ್ರಿಕವಾಗಿ 'ಸ್ವಲ್ಪ ವಾಸಿ' ಎಂದು ಉತ್ತರ ಕೊಟ್ಟುಬಿಟ್ಟದ್ದರವರು. ಕೂಡಲೆ ತಮ್ಮ ಪ್ರಮಾದವನ್ನರಿತು, 'ಹಾಗೇ ಇದೆ ಡಾಕ್ಟರೆ' ಎಂದು ತಿದ್ದಿಕೊಂಡರು. ಡಾಕ್ಟರು ಬದಲಾಯಿಸಿ ಕೊಟ್ಟ ಔಷಧಿಯನ್ನು ಕೃಷ್ಣಪ್ಪನವರು ಮಾದನಿಗೆ ಕೊಟ್ಟು, ಮನೆಗೆ ಬಂದು ಸಂಧ್ಯಾವಂದನೆಗೆ ಕುಳಿತರು. ಸಂಧ್ಯಾವಂದನೆ ಮಾಡುವಾಗಲೂ ಅವರ ಮನಸ್ಸು ಬೇರೆಯ ಕಡೆಯೇ ಇತ್ತು: 'ಇದೇನು ಸುಂದರ ಹೀಗಾದ?' ಎಂದು ಒಮ್ಮೆ ಅವನ ಕುರಿತ ಚಿಂತೆ; ಮರುಗಳಿಗೆಯೇ, 'ಅಯ್ಯೋ ಪಾಪ. ಚೆನ್ನಿಗೆ ಬೇಗ ವಾಸಿಯಾದರೆ, ದೇವರ ದಯದಿಂದ' ಎಂದು ಅವಳ ಸ್ಥಿತಿ ಕುರಿತು ಮರುಕ; ಬಳಿಕ, 'ಪ್ರಾಯಶ್ಚಿತ್ತಕ್ಕೆ ಏನೇನು ಆಗಬೇಕೊ, ಶಾಸ್ತ್ರಿಗಳನ್ನು ಕೇಳಬೇಕು' ಎಂದು ಯೋಚನೆ. ಸಮಾಜದ ರೂಢಿಯ ಪ್ರಭಾವದ ಹಿಡಿತಕ್ಕೆ ಸಿಲುಕಿದ್ದ ಕರುಣಾಮೂರ್ತಿಗಳಾದ ಕೃಷ್ಣಪ್ಪನವರ ಪೇಚಿನ ಸ್ಥಿತಿಯನ್ನು ಅವರ ಸ್ಥಾನದಲ್ಲಿ ಇದ್ದಂತೆ ಭಾವಿಸಿಕೊಂಡಲ್ಲದೆ ತಿಳಿಯಲಾಗದು.

೧೪

ಕೃಷ್ಣಪ್ಪನವರಿಗೆ ತಿಳಿಯುವುದಕ್ಕೆ ಮೊದಲೇ ಮೇಲಿನ ಸಮಾಚಾರ ಊರಿನಲ್ಲೆಲ್ಲಾ 'ಟಾಂ ಟಾಂ' ಆಗಿಹೋಗಿತ್ತು. ಈ ವಾರ್ತಾವಾಹಿನಿಗೆ ಉಗಮಸ್ಥಾನ ಶಾಸ್ತ್ರಿಗಳ ಮನೆಯ ಜಗಲಿ; ಇನ್ನೂ ನಿರ್ದಿಷ್ಟವಾಗಿ ಹೇಳುವು

ಹಾದರೆ ಪಾರ್ವತಮ್ಮನವರ ಹಲ್ಲಿಲ್ಲದ ಬೊಚ್ಚುಬಾಯಿ! ಆ ಬಾಯಿಂದ ಇನ್ನೊಂದು ಬಾಯಿಗೆ, ಅದರಿಂದ ಮತ್ತೊಂದಕ್ಕೆ, ಹೀಗೆ ಆ ವಾರ್ತಾವಾಹಿನಿ ನಿರರ್ಗಳವಾಗಿ ಹರಿದುಬಿಟ್ಟಿತ್ತು. ಹೆಂಗಸರೇ ಹಳ್ಳಿಗಾಡಿನ 'ನ್ಯೂಸ ಪೇಪರ್!' ಅದಕ್ಕೆ ಉತ್ಪಾದಕರಿದ್ದರೂ ಸಂಪಾದಕರಿಲ್ಲ. ಅದರಲ್ಲಿ ಪ್ರಕಟವಾದ ವಾರ್ತೆ ಎಲ್ಲರಿಗೂ ಒಂದೇ ಸ್ಥಿತಿಯಲ್ಲಿ ದೊರಕುವುದಿಲ್ಲ: ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ, ಒಂದೊಂದು ಪ್ರಮಾಣದಲ್ಲಿ. ವಿಶ್ವನಾಥ ಮನೆಯಲ್ಲಿ ಆಡಿದ ಸಂಗತಿಯನ್ನು ಪಾರ್ವತಮ್ಮ ಅಂದೇ ಮಧ್ಯಾಹ್ನದ ಮೇಲೆ ತಮ್ಮ ಮಹಾಸಭೆಯಲ್ಲಿ ಪ್ರಕಟಮಾಡಿಯೇ ಬಿಟ್ಟರು. 'ನಮ್ಮ ವಿಶ್ವನಾಥನೇ ಕಣ್ಣಾರೆ ಕಂಡಿದ್ದಾನೆ' ಎಂದು ಅವರು ಕಡಾಖಂಡಿತವಾಗಿ ನುಡಿದ ಮೇಲೆ ಶ್ರೋತೃವೃಂದ ಅದನ್ನು ನಂಬದಿರುವುದಾದರೂ ಹೇಗೆ? ನಂಬಿದ ಮೇಲೆ, ಸತ್ಯವಾದ ಸುದ್ದಿಯನ್ನು ಹೊರಗಣ ಪ್ರಪಂಚಕ್ಕೆ ಸಾರದಿರುವುದು ಕರ್ತವ್ಯಲೋಪವಾದೀತು! ಪಾರ್ವತಮ್ಮನವರು ಬಹು ನಿಷ್ಠೆಯಿಂದ ಹೇಳಿದ ಸುದ್ದಿಯನ್ನು ನಾಗಮ್ಮನವರು ಮರುಕ್ಷಣವೇ ನಾಲ್ಕಾರು ಮನೆ ಆಚೆಗೆ ಒಯ್ದರು. ಕೂಡಲೇ ಅಲ್ಲಿಂದ ಸುದ್ದಿ ನೇರವಾಗಿ ಕೋಟೆಯನ್ನು ಹೊಕ್ಕು, ಅಲ್ಲಿ ಹಾರುವರ ಮನೆಗಳಿಗೆಲ್ಲಾ ಹಬ್ಬಿತು. ಕೋಟೆಯಲ್ಲೆಲ್ಲ ಬಹು ಬೇಗ ಪ್ರಸಿದ್ಧವಾಗಿದ್ದರೂ ಕಾವೇರಮ್ಮನವರ ಕಿವಿಗೆ ಬೀಳುವುದಕ್ಕೆ ಸ್ವಲ್ಪ ತಡವೇ ಆಗಿತ್ತು. ಕಾವೇರಮ್ಮನವರಿಗೆ ಗೊತ್ತಾದ ಸುದ್ದಿ ಮೈಲಾರಯ್ಯನವರಿಗೆ ಅಂದಿನ ರಾತ್ರಿಯೇ ಗೊತ್ತಾಯಿತೆಂದು ಬೇರೆ ಹೇಳಬೇಕೇನು? ಅಂತೂ ಮೈಲಾರಯ್ಯನವರಿಗೆ ಕೃಷ್ಣಪ್ಪನವರಿಗೆ ತಿಳಿಯುವುದಕ್ಕಿಂತ ಒಂದು ದಿನ ಮುಂಚೆಯೇ ಸಮಾಚಾರ ತಿಳಿದುಹೋಗಿತ್ತು. ಊರಿನ ಹಾರುವ ಹೆಂಗಸರಿಗೆಲ್ಲರಿಗೂ ಈ ಸಮಾಚಾರ ಗೊತ್ತಿದ್ದರೂ ನರಸಮ್ಮನವರಿಗೆ (ಕೃಷ್ಣಪ್ಪನವರ ಹೆಂಡತಿ) ಯಜಮಾನರು ಹೇಳುವ ವರೆಗೂ ಈ ಸಂಗತಿ ಗೊತ್ತಿರಲಿಲ್ಲ. ಹಿಂದಿನ ಸಂಜೆ, ಪ್ರತಿನಿತ್ಯವೂ ತಮ್ಮ ಮನೆಗೆ ತಪ್ಪದೆ ಬರುತ್ತಿದ್ದ ಸೀತಮ್ಮನೂ ಪಾರ್ವತಮ್ಮನವರೂ ಬರದಿದ್ದುದನ್ನು ನೋಡಿ ನರಸಮ್ಮ ತಾವೇ ಅವರ ಮನೆಗೆ ಹೋಗಿದ್ದರು. ಹೋದಾಗ, ಒಬ್ಬರೂ ಸರಿಯಾಗಿ ಮುಖಕೊಟ್ಟು ಮಾತನಾಡಿಸಲಿಲ್ಲ. ಏಕೆ ಎಂಬುದು ನರಸಮ್ಮನವರಿಗೂ ಸರಿಯಾಗಿ ಅರ್ಥವಾಗಲಿಲ್ಲ. ಅಲ್ಲಿಂದ ಕಾವೇರಮ್ಮನ ಮನೆಗೆ

ಹೋದರೆ ಅಲ್ಲಿಯೂ ಬಹುಮಟ್ಟಿಗೆ ಹಾಗೆಯೇ: ಕಾವೇರಮ್ಮ ಏನೋ ಬಹು ಬಿಗಿಯ ಮೇಲೆ ಮಾತಾಡುತ್ತಿದ್ದರು. ಆದರೆ ಕಮಲೆ, ಮಕ್ಕಳು ಬೇಕಾದಷ್ಟು ಮಾತಾಡಿಸಿದ್ದರಿಂದ ನರಸಮ್ಮನವರಿಗೆ ಕಾವೇರಮ್ಮನ ಮನೆಯಲ್ಲಿ ವಾತಾವರಣದ ಪರಿವರ್ತನೆ ಅಷ್ಟು ಎದ್ದು ಕಾಣಲಿಲ್ಲ. ಮಾರನೆಯ ಸಂಜೆ ಯಜಮಾನರು ತಾವು ಕೇಳಿದ್ದ ಸಂಗತಿಯನ್ನು ನರಸಮ್ಮನವರಿಗೆ ತಿಳಿಸಿದಾಗ ಅವರಿಗೆ ಹೊಳೆಯಿತು: ಸೀತಮ್ಮನ ಮನೆಯಲ್ಲೂ ಕಾವೇರಮ್ಮನ ಮನೆಯಲ್ಲೂ ತಮಗೆ ದೊರೆತ ಸ್ವಾಗತ ಏಕೆ ಅಷ್ಟು ಶುಷ್ಕವಾಗಿತ್ತೆಂದು.

ಈ ವಿಚಾರದಲ್ಲಿ ನಂಜುಂಡಶಾಸ್ತ್ರಿಗಳೇನೊ ಘನವಾದ ರೀತಿಯಲ್ಲೇ ನಡೆದುಕೊಂಡಿದ್ದರೆಂದು ಹೇಳದೆ ಹೋದರೆ ಅವರಿಗೆ ಅನ್ಯಾಯ ಮಾಡಿದಂತಾಗುತ್ತೆ. ಚಂಡಾಲಸಂಪರ್ಕ ಧರ್ಮವಿರುದ್ಧವೆಂದು ಅವರು ತ್ರಿಕರಣ ಪೂರ್ವಕವಾಗಿ ನಂಬಿದ್ದರಾದ್ದರಿಂದಲೂ, ಧರ್ಮ ಬಿಟ್ಟು ಹೋದವರನ್ನು ಸಾಧ್ಯವಾದಲ್ಲಿ ತಿದ್ದಬೇಕಾದ್ದು ಧರ್ಮನಿಷ್ಠರಾದ ತಮ್ಮ ಕರ್ತವ್ಯವೆಂದು ತಿಳಿದಿದ್ದರಿಂದಲೂ, ಮೇಲಾಗಿ ಸಾಧ್ಯವಾದರೆ ಕೃಷ್ಣಪ್ಪನವರ ಮನೆಯ ಸಂಬಂಧ ಬೆಳಸಬೇಕೆಂದು ಅವರು ಹೃತ್ಪೂರ್ವಕವಾಗಿ ಬಯಸುತ್ತಿದ್ದುದರಿಂದಲೂ ಸುಂದರಮೂರ್ತಿಯ ವಿಚಾರವನ್ನು ಊರಿನಲ್ಲೆಲ್ಲ ಹರಡಿಗುಲ್ಲೆಬ್ಬಿಸಬೇಕೆಂದು ಅವರು ಕನಸಿನಲ್ಲಿಯೂ ಬಗೆದಿರಲಿಲ್ಲ. ಅಲ್ಲದೆ ಹೆಂಗಸರ ಮುಖೇನ ಸುದ್ದಿ ಊರಲ್ಲೆಲ್ಲ ಹಬ್ಬುವುದೆಂಬುದಾಗಿಯಾಗಲಿ ಅವರು ಮುಂಗಂಡಿರಲಿಲ್ಲ. ಆದ್ದರಿಂದ, ಕೃಷ್ಣಪ್ಪನವರನ್ನು ಆಸ್ಪತ್ರೆಯ ಬಾಗಿಲಿನಲ್ಲಿ ಬೀಳ್ಕೊಂಡು, ತಮ್ಮ ನಿತ್ಯದ ದಿನಚರಿಯಂತೆ ಹೊಳೆಗೆ ಹೋಗಿ ಬಟ್ಟೆ ಒಗೆದುಕೊಂಡು ಅಲ್ಲಿಯೇ ಸಂಧ್ಯಾವಂದನೆ ಮಾಡಿ, ದಾರಿಯಲ್ಲಿ ಶ್ರೀರಾಮದೇವರ ಗುಡಿಗೆ ಹೋಗಿ ದೇವರ ದರ್ಶನ ಮಾಡಿಕೊಂಡು, ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ ಪೂಜಾರಿ ಶಿವರಾಮಭಟ್ಟರು ಬಂದು ಪಿಸುಮಾತಿನಲ್ಲಿ ನಂಜುಂಡಶಾಸ್ತ್ರಿಗಳನ್ನು ಏನೋ ಕೇಳಿದಾಗ ಅವರು ತುಂಬ ಆಶ್ಚರ್ಯಪಟ್ಟರು. ತಾವು ಕೃಷ್ಣಪ್ಪನವರನ್ನು ಬಿಟ್ಟು ಬೇರೆಯವರಲ್ಲಿ ಈ ವಿಚಾರವನ್ನೇ ಪ್ರಸ್ತಾವಿಸದಿರುವಾಗ ಶಿವರಾಮಭಟ್ಟರಿಗೆ ಹೇಗೆ ಗೊತ್ತಾಯಿತೆಂಬುದೇ ಅವರ ಆಶ್ಚರ್ಯಕ್ಕೆ ಕಾರಣ. ತಮ್ಮ ಮಗ ತಮಗೆ ಹೇಳಿದನೆಂದು ಶಿವರಾಮಭಟ್ಟರು ತಿಳಿಸಿದರು. ಅವನಿಗೆ ಹೇಳಿದವರು ಯಾರು? ತಮ್ಮ ಮಗ ವಿಶ್ವನಾಥನೇ

ಇರಬೇಕೆಂದು ಶಾಸ್ತ್ರಿಗಳಿಗೆ ಹೊಳೆಯಿತು. "ಎಲಾ ಚಾಂಡಾಲ! ನಾನು ಗುಟ್ಟಿನಲ್ಲಿ ಸರಿಮಾಡೋಣ ಎಂದಿದ್ದರೆ ಇವನು ಊರಿಗೆಲ್ಲಾ ಡಂಗುರ ಹೊಡೆದಿರುವ ಹಾಗೆ ಕಾಣುತ್ತಲ್ಲ!" ಎಂದು ತಮ್ಮ ಮಗನನ್ನು ಮನಸ್ಸಿನಲ್ಲೇ ನಿಂದಿಸುತ್ತ ಶಾಸ್ತ್ರಿಗಳು ಮನೆಗೆ ಹಿಂದಿರುಗಿದ್ದರು.

ವಿಶ್ವನಾಥ ಊರಿಗೆಲ್ಲಾ ಸಮಾಚಾರ ಸಾರುವ ಶ್ರಮ ವಹಿಸಿರಲಿಲ್ಲ. ಅವನು ತನ್ನ ಗೆಳೆಯರಲ್ಲಿ— ಅವರಲ್ಲಿ ಕೆಲವರು ಸುಂದರನ ಗೆಳೆಯರೂ ಆಗಿದ್ದರು— ಮಾತ್ರ ಅರುಹಿದ್ದನು; ಆ ಗೆಳೆಯರು ಉಳಿದ ಕೆಲಸ ಮಾಡಿ ಬಿಟ್ಟಿದ್ದರು. ಅವರಲ್ಲಿ ಶಿವರಾಮಭಟ್ಟರ ಮಗ ಸುಬ್ಬಾಭಟ್ಟನೂ ಒಬ್ಬ. ಶಿವರಾಮಭಟ್ಟರ ಕಿವಿಗೆ ಸಮಾಚಾರ ಬಿತ್ತೋ ಇಲ್ಲವೋ, ಕೇಳಬೇಕೆ? ಅವರು ಬಂದ ಭಕ್ತಾದಿಗಳಿಗೆಲ್ಲರಿಗೂ ಯಾವ ಪಕ್ಷಪಾತವೂ ಇಲ್ಲದೆ ಸುದ್ದಿ ತಿಳಿಸಿಬಿಡುತ್ತಿದ್ದರು. ಇಲ್ಲಿ ಒಂದು ವಿವರಣೆ ಅಗತ್ಯ: ಅವರು ಸುದ್ದಿಯನ್ನು ಎಲ್ಲರಿಗೂ ತಿಳಿಸುತ್ತಿದ್ದರು ಎಂದು ಹೇಳಿದರೆ ತಪ್ಪಾಗಬಹುದು. ಯಾರನ್ನಾದರೂ ಕಂಡ ಕೂಡಲೆ, ಅವರು ದೇವರ ದರ್ಶನ ಮಾಡಿದ ಮೇಲೆ ಅವರಿಗೆ ತೀರ್ಥ ಪ್ರಸಾದ ಕೊಡುವಾಗ, "ಸುಂದರಮೂರ್ತಿಯ ವಿಚಾರ ಹೀಗಂತೆ. ನಿಮಗೇನಾದರೂ ತಿಳಿಯೋದೇನು?" ಎಂದು ಪ್ರಶ್ನಿಸುತ್ತಿದ್ದರು. ಪ್ರಶ್ನಿತರಾದವರೆಲ್ಲರೂ, "ನಮಗೆ ತಿಳಿಯದಲ್ಲ! ಹೂಂ, ಹಾಗೇನು?—" "ಹೀಗೂ ಉಂಟೆ! ಏನು ಕಲಿಗಾಲವಪ್ಪ!"— "ಎಲ್ಲ ಕಲಿಪುರುಷನ ಲೀಲೆ! ಮುಖ್ಯ, ವರ್ಣಸಂಕರವಾಗಲೇಬೇಕು. ಅದನ್ನು ಯಾರ ಕೈಯಿಂದಲೂ ತಪ್ಪಿಸುವುದಕ್ಕಾಗುವುದಿಲ್ಲ!"— ಎಂದು ಮುಂತಾಗಿ ಆಶ್ಚರ್ಯದ ಉದ್ಗಾರಗಳನ್ನು ತೆಗೆಯುತ್ತಿದ್ದರೇ ಹೊರತು ಭಟ್ಟರಿಗೆ ಹೆಚ್ಚಿನ ತಿಳಿವಳಿಕೆ ಕೊಡಲು ಯಾರೂ ಸಮರ್ಥರಾಗಿರಲಿಲ್ಲ. ಆದರೂ, ಭಟ್ಟರು ಮಾತ್ರ ಎಲ್ಲರಿಗೂ ಒಂದೇ ರೀತಿ ಪ್ರಶ್ನೆ ಹಾಕುತ್ತಿದ್ದರು. ಸುಂದರಮೂರ್ತಿಯ ವಿಚಾರವಾದ ಆಶ್ಚರ್ಯಕರ ಸಮಾಚಾರ ಮಹಿಳಾಮಂಡಲಿಗೆ ತಿಳಿಯಲು ಶಾಸ್ತ್ರಿಗಳ ಮನೆಯ ಜಗಲಿ ಉಗಮಸ್ಥಾನವಾದರೆ, ಪುರುಷಸಮಾಜಕ್ಕೆ ತಿಳಿಯಲು ಶ್ರೀರಾಮದೇವಾಲಯ ಮೂಲಸ್ಥಾನವಾಯಿತು. ತನ್ನ ಕಣ್ಣೆದುರಿಗೆಯೇ 'ಬದನೆಕಾಯಿ' 'ಬ್ರಹ್ಮರಾಕ್ಷಸ' ವಾಗುತ್ತಿದ್ದುದನ್ನು ಕಂಡು ಶ್ರೀರಾಮದೇವರು ಒಳಗೊಳಗೇ

ನಕ್ಕಿರಬೇಕು! ನಮ್ಮ ಕಾಲವಾದ ತ್ರೇತಾಯುಗದಲ್ಲೇ ಈ ಪಿಸುಣತನ ಜನಕ್ಕೆ ಅಂಟಿಕೊಂಡಿತ್ತು. ಇನ್ನು ಈಗ ಕೇಳಬೇಕೆ? ಎರಡು ಯುಗಗಳು ಮರಳಿವೆ. ಕಲಿಗಾಲದ ಜನವನ್ನು ನೋಡಿ ನೀವೇಕೆ ನಗುತ್ತೀರಿ? ಕೃಷ್ಣಪ್ಪನವರು ಸುಂದರಮೂರ್ತಿಯನ್ನು ಮನೆ ಬಿಟ್ಟು ಅಟ್ಟಿದರೆ ಆಗಲೂ ನಗುವಿರೇನು?" ಎಂದು ಸೀತಾದೇವಿ ರಾಮದೇವರನ್ನು ಹಂಗಿಸಿರಬೇಕು!

೧೫

ಕಾಳೇಗೌಡ ಯಥಾಪ್ರಕಾರ ಗಾಡಿಯನ್ನು ಮೈಲಾರಯ್ಯನವರ ಮನೆಯ ಮುಂದೆ ನಿಲ್ಲಿಸಿದ. ಮನೆಯ ಮುಂದೆ ಗಾಡಿಯೊಂದು ನಿಂತ ಸದ್ದು ಕೇಳಿದ ಕೂಡಲೆ ಹುಡುಗರಿಬ್ಬರು ಒಳಗಿನಿಂದ ಓಡಿ ಬಂದು, "ಓ! ಸುಂದರ ಬಂದ ಕಮಲ! ಸುಂದರ ಬಂದ ಅಮ್ಮಾ!" ಎಂದು ಹಿಗ್ಗಿನಿಂದ ಕೂಗಿಕೊಂಡರು; ಸುಂದರ ಗಾಡಿಯಿಂದ ಇಳಿದ ಕೂಡಲೆ ಒಬ್ಬೊಬ್ಬರು ಅವನ ಒಂದೊಂದು ಕೈ ಹಿಡಿದುಕೊಂಡು ಸುಂದರನನ್ನು ಒಳಕ್ಕೆ ಎಳೆದು ಕೊಂಡೇ ಹೋದರು. ಅಪರೂಪವಾಗಿ ಈ ಸಲ ಮೈಲಾರಯ್ಯ ಎದ್ದಿದ್ದರು. ಸುಂದರ ಒಳಕ್ಕೆ ಹೋದ ಕೂಡಲೆ, "ಬಾ, ಸುಂದರ ಕುಳಿತುಕೋ. ಯಾವಾಗ ಬಂದೆ?" ಎಂದು ಮುಂತಾಗಿ ಕ್ಷೇಮಸಮಾಚಾರವನ್ನು ವಿಚಾರಿಸತೊಡಗಿ ದರು. ಸುಂದರ ಸೋದರಮಾವನ ಪ್ರಶ್ನೆಗಳಿಗೆಲ್ಲ ಸಮಂಜಸವಾಗಿಯೇ ಉತ್ತರ ಹೇಳುತ್ತಿದ್ದರೂ ಅವನ ಮನಸ್ಸೆಲ್ಲ ಕಮಲೆಯ ಮೇಲೆ ಹೋಗಿತ್ತು. ಅವಳು ಏಕೆ ಇಂದು ತಮ್ಮಂದಿರೊಡನೆ ತನಗೆ ಸ್ವಾಗತ ಬಯಸಲು ಹೊರಕ್ಕೆ ಬರಲಿಲ್ಲ, ಕಡೆಗೆ ಹಜಾರದಲ್ಲಿಯಾದರೂ ನಿಂತಿಲ್ಲ? ಎಲ್ಲೋ ಇನ್ನೂ ನಿದ್ದೆ ಮಾಡುತ್ತಿರಬೇಕು. ಆದರೆ, ಎಂದೂ ಇಲ್ಲದ್ದು ಮೈಲಾರಯ್ಯನವರೇ ಎದ್ದು ಕುಳಿತಿರುವಾಗ ಕಮಲೆ ಎದ್ದಿಲ್ಲವೆಂದರೆ ಆಶ್ಚರ್ಯದ ಮಾತು. ಅಲ್ಲದೆ, ಎಂದೂ ಇಲ್ಲದ್ದು ಇಂದು, ಕಾವೇರತ್ತೆ ಮಾಡುತ್ತಿದ್ದ ಮೊದಲ ವಿಚಾರಣೆ ಯನ್ನು ಮಾವನೇ ಮಾಡುತ್ತಿದ್ದಾರೆ. ಇದೂ ಅವನಿಗೆ ಆಶ್ಚರ್ಯವನ್ನುಂಟು ಮಾಡಿತು. "ಮುಖ ತೊಳೆದುಕೊಂಡು ಬಾ. ಕಾಫಿ ಕುಡಿಯೋಣಂತೆ" ಎಂದು ಮಾವ ಹೇಳಿದರು. ಸುಂದರ ಬಚ್ಚಲಮನೆಯ ಕಡೆಗೆ ಹೋಗುವಾಗ ಕಾವೇರತ್ತೆ— "ಕಮಲೂ, ಇನ್ನು ಮೇಲೆ ಸಣ್ಣ ಪುಟ್ಟ ಹುಡುಗಿ ಅಂತ ತಿಳಿದುಕೊಳ್ಳಬೇಡ ನೀನು, ತಿಳಿಯಿತೆ. ಸ್ವಲ್ಪ ಘನಗಂಭೀರ ಲಜ್ಜೆವಿನಯ

ಕಲಿತುಕೊಳ್ಳಬೇಕು. ಸುಂದರನ ಕೂಡ ಮೊದಲಿನ ಹಾಗೆ ಹುಡುಗಾಟಿಕೆ ಆ
ಬಾರದು, ಕಂಡೆಯಾ?'' ಎಂದು ಕಮಲೆಯನ್ನು ಗದರಿಸುತ್ತಿದ್ದುದು ಸುಂದ
ನಿಗೆ ಕೇಳಬಂದಿತು. ಕ್ಷಣಕಾಲ ಮುಂದಕ್ಕೆ ಹೆಜ್ಜೆಯಿಡದೆ ಹಾಗೆಯೇ ನಿಂತ
ಮುಂದಕ್ಕೆ ಏನು ಹೇಳುವರೋ ಕೇಳಬೇಕೆಂದು ಒಮ್ಮೆ ಎನ್ನಿಸಿತು; ಮರ
ಕ್ಷಣವೇ, "ಛೆ! ಅವರು ಏನಾದರೂ ಆಡಿಕೊಳ್ಳಲಿ. ಇನ್ನೊಬ್ಬರ ಮಾತು ಆ
ಸುವುದು ಚೆನ್ನಲ್ಲ" ಎಂದು ತೋರಲಾಗಿ, ಸುಂದರ ಮುಂದಕ್ಕೆ ಹೆಜ್ಜೆಯಿಟ್ಟ
ಬಚ್ಚಲುಮನೆಯೊಳಕ್ಕೆ ಹೋದ. ಚೆಂಬು ಕೈಗೆ ತೆಗೆದುಕೊಂಡ; ತುಂ
ಬಿಸಿ ನೀರು. ಯಾವುದೋ ಮಾಯೆಯಲ್ಲಿ ಬಂದು ಕಮಲೆ ಎಂದಿನಂ
ತನಗೆ ಬಿಸಿನೀರು ಸಿದ್ಧಪಡಿಸಿಟ್ಟಿದ್ದಾಳೆ! ತನ್ನನ್ನು ಕಂಡರೆ ಕಮಲೆಗೆ ಎಂ
ಅಭಿಮಾನ, ಎಷ್ಟು ವಿಶ್ವಾಸ! ಅವನ ಮುಖದ ಮೇಲೆ ನಗೆ ಮೂಡಿತು
ಕೂಡಲೆ ಮಾಯವಾಯಿತು. ಆದರೆ, ತಾನು ಮಾಡಿದ ಅಪರಾಧ ಏನು
ತನ್ನೊಡನೆ ಸಲಿಗೆಯಿಂದ ವರ್ತಿಸಕೂಡದೆಂದು ಕಾವೇರತ್ತೆ ಮಗಳಿಗೆ ಬುದ್ಧಿ
ವಾದ ಹೇಳುವುದಕ್ಕೆ? ಅದರಲ್ಲಿಯೂ ತಪ್ಪಿದ್ದಿರಲಾರದು; ಕಮಲೆ ಮದ
ವೆಗೆ ನೆರೆದಿರುವ ಹುಡುಗಿ; ವಯಸ್ಸಾಗಿದೆ; ತನ್ನ ಹೆಂಡತಿಯೇ ಆಗುವ
ಳಾದರೂ, ಮೊದಲಿನಂತೆ ತೀರ ಸಲಿಗೆಯಿಂದ ನಡೆದುಕೊಳ್ಳುವುದು ವಿಹಿ
ವಾಗಿರಲಾರದು—ಎಂಬ ಸಮಾಧಾನದಿಂದ, ತೊಳೆದುಕೊಂಡ ಮುಖವನ್ನು
ಒರೆಸಿಕೊಳ್ಳುತ್ತ ಹೊರಕ್ಕೆ ಬಂದು ಕುಳಿತುಕೊಂಡ. ಮಾವ ಮೈಲಾ
ರಯ್ಯ—"ಲೇ, ತಾಳ್ಳುಪ್ಪಿಟ್ಟು ಆಗಿದ್ದರೆ ಕಮಲೂ ಕೈಲಿ ಕಳಿಸಿಕೊಡೇ"
ಎಂದು ಕೂಗಿ ಹೇಳಿದರು. ಕಾವೇರತ್ತೆ ತಾವೇ ಬಂದು ಬಾಳೆಯೆಲೆಯ
ಚೂರುಗಳನ್ನು ಹಾಸಿ, ಅದರ ಮೇಲೆ ತಾಳ್ಳುಪ್ಪಿಟ್ಟು ಇಟ್ಟರು.

"ಬಾ, ಸುಂದರ. ತಿಂಡಿ ತೆಗೆದುಕೊ" ಎಂದು ಹೇಳಿ ಮೈಲಾ
ರಯ್ಯ ಮೇಲಕ್ಕೆದ್ದರು. ಇಬ್ಬರೂ ತಿಂಡಿ ತಿನ್ನತೊಡಗಿದರು. ಮೈಸೂ
ನಲ್ಲಿ ತನ್ನ ಓದಿನ ವಿಚಾರವಾಗಿ ಅವರು ನಡುನಡುವೆ ಪ್ರಶ್ನೆ ಹಾಕುತ್ತಿದ್ದರು.

'ಇದೇನೂ! ಇಷ್ಟು ಹೊತ್ತಾದರೂ ಕಾವೇರತ್ತೆ ಇನ್ನೂ ತನ್ನನ್ನು
ಮಾತನಾಡಿಸಿಯೇ ಇಲ್ಲ!'— ಎಂದು ಸುಂದರನಿಗೆ ಆಶ್ಚರ್ಯವಾಯಿತು.
ತಾವೇ ಅವರನ್ನು ಮಾತನಾಡಿಸೋಣ ಎನ್ನುವಷ್ಟರಲ್ಲಿ ನೀಡಲು ಬಂದಿದ್ದ
ಕಾವೇರತ್ತೆಯೇ ಬಾಯಿ ಬಿಟ್ಟರು:

"ಏನೂ ಸುಂದರಾ, ಆರೋಗ್ಯವಾಗಿದ್ದೀ ತಾನೆ? ಏಕೆ, ತುಂಬ ಇಳಿದು ಹೋಗಿರುವ ಹಾಗಿದೆಯಲ್ಲ?" ಎಂದು ಕೇಳಿದರು ಕಾವೇರತ್ತೆ.

ಇದು ಪ್ರತಿಸಲವೂ ಕಾವೇರತ್ತೆ ಹಾಕುತ್ತಿದ್ದ ಪ್ರಶ್ನೆ; ಈ ಸಲವೂ ಅಭ್ಯಾಸಬಲದಿಂದ ಈ ಪ್ರಶ್ನೆ ಅವರ ಬಾಯಿಂದ ಹೊರಬಿದ್ದಿತ್ತು. ಆದರೆ, ಅವರ ಮಾತಿನ ಧ್ವನಿಯಲ್ಲಿ ಎಂದಿನ ವಿಶ್ವಾಸದ ಮಾಧುರ್ಯವಿರಲಿಲ್ಲ. ಇದು ಸುಂದರನಿಗೆ ಗೋಚರವಾಗದೆ ಹೋಗಲಿಲ್ಲ.

ಕಾವೇರತ್ತೆ ಏನು ತಿನ್ನಲು ಕೊಟ್ಟರೂ ಅದರಲ್ಲಿ ತುಂಬ ಸವಿ ಕಾಣು ತ್ತಿತ್ತು ಸುಂದರನಿಗೆ; 'ಕಾವೇರತ್ತೆಯ ಹಾಗೆ ನಿನಗೆ ತಿಂಡಿ ಮಾಡುವುದಕ್ಕೆ ಬರುವುದಿಲ್ಲ ಕಣಮ್ಮ' ಎಂದು ಅವನು ತನ್ನ ತಾಯಿಗೆ ಆಗಿಂದಾಗ್ಗೆ ಹೇಳು ತ್ತಿದ್ದಾಗ ಅವರು 'ನಮ್ಮ ಮನೆಯ ಹೆಣ್ಣಿಗಾಗಿ ನಮ್ಮ ಮನೆಗೂ ಒಬ್ಬ ಸೋದರಳಿಯ ಬರುತ್ತಿದ್ದರೆ ಅವನೂ ಹೀಗೇ ಹೇಳುತ್ತಿದ್ದ' ಎಂದು ಹಾಸ್ಯದ ಉತ್ತರ ಕೊಡುತ್ತಿದ್ದರು. ಅದರಿಂದ ಸುಂದರನಿಗೆ ಸಂತೋಷವೇ ಆಗುತ್ತಿತ್ತು. 'ಕಾವೇರತ್ತೆಗಿಂತ ಮಾತಿನಲ್ಲಿ ನೀನೇ ಜಾಣೆ ಕಣಮ್ಮ' ಎಂದು ಸುಂದರ ಪ್ರತ್ಯುತ್ತರ ಕೊಡುತ್ತಿದ್ದ. ಇದರಿಂದ ಅವನ ತಾಯಿಗೂ ಸಂತೋಷವಾಗುತ್ತಿತ್ತು.

ಆದರೆ, ಕಾವೇರತ್ತೆ ತಂದುಕೊಟ್ಟ ತಿಂಡಿಯಲ್ಲಿ ಮೊದಲನೆಯ ಬಾರಿ ಸುಂದರನಿಗೆ ಅಷ್ಟು ಸವಿ ಕಾಣಲಿಲ್ಲ. ಎಂದಿನಂತೆ ತಾಳ್ಯಪ್ಪಿಟ್ಟಿಗೆ ತುಂಬ ಕಾಯಿ, ಹಸಿಮೆಣಸಿನಕಾಯಿ ಹಾಕಿತ್ತು; ಮೇಲೆ ನಿಂಬೆಕಾಯಿ ಗಾತ್ರದ ಅಚ್ಚ ಹಸುವಿನ ಬೆಣ್ಣೆಯಿತ್ತು; ನಂಜಿಕೊಳ್ಳುವುದಕ್ಕೆ ಸೊಗಸಾದ ನಿಂಬೆಯ ಕಾಯಿ ಉಪ್ಪಿನಕಾಯಿಯೂ ಇತ್ತು; ಜೊತೆಗೆ, ಬಟ್ಟಲಲ್ಲಿ ಹೆಪ್ಪು ಹಾಕಿದ ಎಮ್ಮೆಯ ಮೊಸರಿತ್ತು. ದೊಡ್ಡ ಲೋಟದ ತುಂಬ ಕಾಫಿ ಬರುವುದರಲ್ಲಿತ್ತು.

ಕಾವೇರತ್ತೆಯ ಪ್ರಶ್ನೆಗೆ ಸುಂದರ ಉತ್ತರಕೊಟ್ಟ: "ಆರೋಗ್ಯ ವಾಗಿಲ್ಲದೆ ಏನು? ಕಲ್ಲುಗುಂಡಿನ ಹಾಗಿದ್ದೀನಿ. ಮನೆಯಲ್ಲಿ ಎಲ್ಲ ಆರೋಗ್ಯ ತಾನೆ? ಕಮಲ ಎಲ್ಲಿ, ಕಾಣಲೇ ಇಲ್ಲವಲ್ಲ.?"

"ಒಳಗೆ ಕಾಫಿ ಸೋಸುತ ಇದ್ದಾಳೆ ಅಂತ ಕಾಣುತ್ತೆ. ಇನ್ನಾದರೂ ಅವಳಿಗೆ ಕೆಲಸ ಕಲಿಸದೆ ಹೋದರೆ ಹೇಗಪ್ಪಾ? ಮನೆಗೆಲಸ ಬರದೆ ಹೋದರೆ ಅವಳನ್ನು ಯಾರು ಮದುವೆ ಮಾಡಿಕೊಳ್ಳುತ್ತಾರೆ?"

'ಮನೆಗೆಲಸ ಬರದೆ ಹೋದರೆ ನೀನು ಮದುವೆ ಮಾಡಿಕೊ ತ್ತೀಯ ?' ಎಂದು ಕೇಳಬೇಕಾಗಿತ್ತು ಕಾವೇರತ್ತೆ ! ಎಂತಹ ಬದಲಾ ಅವರ ಮಾತಿನಲ್ಲಿ !!

"ಕಾಫಿ ಸೋಸಿಯಾಗಿದ್ದರೆ ಕಮಲೂ ಕೈಲಿ ಕಳಿಸು" ಎಂದ ಮೈಲಾರಯ್ಯ.

ಕಾವೇರತ್ತೆ ಒಳಕ್ಕೆ ಹೋಗಿ ತಾವೇ ಕಾಫಿ ತಂದರು; ಈಗಲೂ ಕಮ ಹೊರಕ್ಕೆ ಬಂದಿರಲಿಲ್ಲ. ಸುಂದರನಿಗಾದರೋ, ಕಮಲೆಯನ್ನು ನೊ ಬೇಕೆಂಬ ಕುತೂಹಲ ಕ್ಷಣಕ್ಷಣಕ್ಕೆ ಹೆಚ್ಚಾಗುತ್ತಿತ್ತು. ಅವನು ಕಮಲೆಯ ನೋಡಿ ಸುಮಾರು ಒಂದು ವರ್ಷದ ಹತ್ತಿರಕ್ಕೆ ಬಂದಿತ್ತು. ಎಂದಿನ ಅವನು ಕಳೆದ ವರ್ಷ ನವರಾತ್ರಿಯ ರಜಕ್ಕಾಗಲಿ ಕ್ರಿಸ್‌ಮಸ್ ರಜಕ್ಕಾ ಊರಿಗೆ ಬಂದಿರಲಿಲ್ಲ; ನವರಾತ್ರಿಯಲ್ಲಿ ಗೆಳೆಯರ ಬಲವಂತಕ್ಕಾಗಿ ಮೈಸ ನಲ್ಲಿಯೇ ಉಳಿದುಬಿಟ್ಟಿದ್ದ; ಕ್ರಿಸ್‌ಮಸ್ ರಜದಲ್ಲಿ ಮದರಾಸಿಗೆ ಹೋಗಿ ಈ ಅವಧಿಯಲ್ಲಿ ಕಮಲೆ ತುಂಬ ಬೆಳೆದಿರಬೇಕೆಂದು ಅವನಿಗೆ ಎನಿಸುತ್ತಿ

ಕಾಳೇಗೌಡ ಸುಂದರನನ್ನು ಬಿಟ್ಟು ಹೋಗುವಾಗ ಒಂದು ಬ ಯನ್ನು ಮಾತ್ರ ಮೈಲಾರಯ್ಯನವರ ಮನೆಯಲ್ಲೇ ಇಟ್ಟು ಹೋಗಿ ಸುಂದರ ಎದ್ದು ಕೈ ತೊಳೆದುಕೊಂಡು, ಬುಟ್ಟಿಯಿಂದ ಒಂದು ಪೊಟ್ಟ ಹೊರದೆಗೆದು "ರಾಮೂ, ಸೋಮೂ" ಎಂದು ಕೂಗಿದ. ಹುಡು ಒಳಗಿನಿಂದ ಚಪ್ಪಾಳೆ ತಟ್ಟುತ್ತ, ಕುಣಿಯುತ್ತ, ಸುಂದರನ ಬಳಿಗೆ ಬಂದರು. ಸುಂದರ ಪೊಟ್ಟಣವನ್ನು ರಾಮುವಿನ ಕೈಗಿಟ್ಟು "ನೀವಿಬ್ಬ ತಿನ್ನಬೇಕು, ತಿಳಿಯಿತೋ ?" ಎಂದ. "ಕಮಲೆಗೆ ?" ಎಂದ ಸೊ ಶೇಖರ "ಕಮಲೆ ದೊಡ್ಡೋಳು ಅಂತ ಅವಳಿಗಿಲ್ಲ, ಅಲ್ಲವೆ ಸುಂದರಾ ಎಂದ ರಾಮಚಂದ್ರ. "ಹೌದು" ಎಂದು, ಸುಂದರ ಅಡಕೆಹಾ ದೊಡ್ಡ ಪೊಟ್ಟಣ ಹೊರಕ್ಕೆ ತೆಗೆದು "ಕಮಲಾ !" ಎಂದು ಕೂ ಕಮಲೆ ಬರಲಿಲ್ಲ. "ಕಮಲೀ !" ಎಂದು ಮತ್ತೊಮ್ಮೆ ಕೂಗಿದ; ಆ ಕಮಲೆ ಬರಲಿಲ್ಲ. "ಕಮಲಾ, ಸುಂದರ ಕೂಗತಾನಲ್ಲೇ" ಎಂದು ಯಾಗಿ ಕೂಗಿ ಹೇಳಿದರು ಮೈಲಾರಯ್ಯನವರು. ಆದರೂ ಕೂಡ ಕ ಬರಲಿಲ್ಲ. ಕಾವೇರತ್ತೆಯೂ ಬಂದಿರಲಿಲ್ಲ. ಇಬ್ಬರೂ ಹಿತ್ತಲ ಕಡೆ

ಬಹುದೆಂದು ಎಣಿಸಿ, ಸುಂದರ ತಾನೇ ಒಳಕ್ಕೆ ಹೋದ. ಹೋಗುತ್ತಿದ್ದಾಗ, ಕಮಲೆ ಸೆರಗಿನ ಕೊನೆಯಿಂದ ಕಣ್ಣೀರು ಒರಸಿಕೊಳ್ಳುತ್ತ ಅಡಿಗೆಯ ಮನೆಯ ಬಾಗಿಲಿನಿಂದ ಹೊರಬರುವುದರಲ್ಲಿದ್ದಳು.

ಸುಂದರ ಕೂಗಿದ್ದು ಅವಳಿಗೆ ಕೇಳಿಸದೆ ಹೋಗಿರಲಿಲ್ಲ. ಆದರೆ, ತಾಯಿಯ ಛೀಪೆಟ್ಟು ಅವಳ ಕಣ್ಣಲ್ಲಿ ಹನಿ ತಂದಿತ್ತು. ಸುಂದರನೊಡನೆ ಸಲಿಗೆಯಿಂದ ವರ್ತಿಸಕೂಡದೆಂದು ತಾಯಿ ಹೇಳಿದ್ದು ಏಕೆಂದು ಅವಳಿಗೆ ಅರ್ಥವಾಗಿರಲಿಲ್ಲ. ಪಾತ್ರೆ ತೊಳೆಯುವುದಕ್ಕೆಂದು ತಾಯಿ ಹಿತ್ತಿಲ ಕಡೆಗೆ ಹೋದಾಗ ಸುಂದರನ ಕರೆ ಕೇಳಿಸಿತು. ಹೋಗುವುದೋ ಬೇಡವೋ ಎಂದು ತುಸುಹೊತ್ತು ಮನಸ್ಸು ಹಾಗೂ ಹೀಗೂ ತೂಗಾಡುತ್ತಿದ್ದು, ಹೋಗಬೇಕೆಂಬ ನಿರ್ಧಾರಕ್ಕೆ ತಂದೆಯ ಕರೆ ಬೆಂಬಲ ಕೊಟ್ಟಿತು. ಕಣ್ಣೀರನ್ನು ಒರಸಿಕೊಂಡು ಹೊರಬರುವಷ್ಟರಲ್ಲಿ ಸುಂದರನೇ ಎದುರಿಗೆ ಬಂದುಬಿಟ್ಟಿದ್ದ. ಕಣ್ಣೀರು ಒರಸಿಕೊಳ್ಳುತಿದ್ದುದು ಸುಂದರನಿಗೂ ಕಂಡುಹೋಯಿತು.

"ಏಕೆ, ಅಳುತ್ತಿದ್ದೆಯೇನು ?" ಎಂದು ಕೇಳಿದ ಸುಂದರ. "ಇಲ್ಲ." ಎಂದು ಕಮಲೆ ನಗುಮುಖ ತಳೆದಳು.

'ಇಲ್ಲ! ಬರಿಯ ಸುಳ್ಳು!' ಕಣ್ಣೀರನ್ನು ಅವಳು ಸರಿಯಾಗಿ ಒರಸಿಕೊಂಡಿರಲಿಲ್ಲ. ಸ್ವಾಭಾವಿಕವಾಗಿಯೇ ಕೆಂಪಾಗಿದ್ದ, ತುಸು ಅತ್ತು ಕೆಂಪೇರಿದ್ದ ಅವಳ ಕೆನ್ನೆಗಳೆರಡರ ಮೇಲೂ ಒಂದೊಂದು ಕಣ್ಣೀರ ಹನಿ ಮುತ್ತಿನಂತೆ ಹೊಳೆಯುತ್ತಿದ್ದುದು, ಅಡಿಗೆಯ ಮನೆಯ ನಸುಗತ್ತಲೆಯಲ್ಲಿ ಸಹ ಸುಂದರನ ಗೋಚರಕ್ಕೆ ಬಂದಿತು. ಕಮಲೆ ಹೇಳಿದ್ದು ಸುಳ್ಳು ಎನ್ನುವುದಕ್ಕೆ ಬೇರೆ ಸಾಕ್ಷಿಯೇ ಬೇಕಾಗಿರಲಿಲ್ಲ. ಆಗಿನ ಅವಳ ಮುಖದ ನೋಟ, ಸುಂದರನಿಗೆ ಹಾಗೆನಿಸದಿದ್ದರೂ, ಇಬ್ಬನಿ ಕುಳಿತ ಅರೆಬಿರಿದ ಗುಲಾಬಿ ಹೂಗಳನ್ನು ನೆನಪಿಗೆ ತರುವಂತಿದ್ದುವು. ಸುಂದರನಿಗೂ ಆಗ ಹೀಗೆ ತೋರಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಏಕೆಂದರೆ, ಕ್ಷಣಕಾಲ ಅವನ ಮನಸ್ಸು ಕೂಡ ಕಮಲೆಯ ಚೆಲುವನ್ನು ನೋಡಿ ತಣಿಯುವುದರಲ್ಲಿ ತೊಡಗಿತ್ತು.

ತನಗಿಂತ ಆರೇಳು ವರ್ಷ ಚಿಕ್ಕವಳು ಕಮಲೆ ಎಂದು ತನ್ನ ತಾಯಿ ಹೇಳುತ್ತಿದ್ದರು. ಆದ್ದರಿಂದ ಅವಳಿಗೆ ಈಗ ಹದಿಮೂರು ಹದಿನಾಲ್ಕು

ವರ್ಷವಿರಬಹುದು. ಆದರೆ, ಷೋಡಶ ವರ್ಷದ ಕನ್ಯೆಯ ಹಾಗೆ ಕಾಣು ತ್ತಿದ್ದಾಳೆ; ಒಂದು ವರ್ಷದಲ್ಲಿ ಎಷ್ಟು ಬೆಳೆದುಬಿಟ್ಟಿದ್ದಾಳೆ ಕಮಲೆ! ಬಿ. ಎ. ಪ್ಯಾಸಾಗುವ ವರೆಗೂ ಕಮಲೆಯನ್ನು ಮದುವೆಯಾಗುವುದಿಲ್ಲ ಎಂಬ ತನ್ನ ಪ್ರತಿಜ್ಞೆ ಈಗ ಕಮಲೆಯನ್ನು ಕಂಡಾಗ ಮುರಿದು ಹೋದಂತೆ ಭಾಸವಾ ಯಿತು ಸುಂದರನಿಗೆ. ಈ ಸಲ ಮದುವೆಯ ಪ್ರಸ್ತಾಪ ಬಂದರೆ ಸುಮ್ಮ ನಿದ್ದು ಬಿಡುವುದಾಗಿ ನಿರ್ಧರಿಸಿದ ಸುಂದರ.

'ಹಾಳಾದ್ದು ಅಡಿಗೆ ಮನೆಯಲ್ಲಿ ಇನ್ನು ಸ್ವಲ್ಪ ಬೆಳಕಿರಬಾರದಾಗಿತ್ತೆ? ಕಮಲೆಯ ಮುಖದ ಮಾಟ ಇನ್ನೂ ಚೆನ್ನಾಗಿ ಕಾಣುತ್ತಿತ್ತು' ಎಂದು ಎನ್ನಿಸಿತು ಸುಂದರನಿಗೆ, ಮೊದಲು. 'ಈ ಕತ್ತಲೆಕೋಣೆಗೂ ಬೆಳಕು ಚೆಲ್ಲುತ್ತಿದ್ದಾಳೆ ಕಮಲೆ, ಅಲ್ಲವೆ?'—ಎನ್ನಿಸಿತು ತರುವಾಯ. ಹೊರ ಚೆಲುವನ್ನು ಗ್ರಹಿಸಲು, ಹೊರಗಣ್ಣಿಗೆ ಬೆಳಕು ಬೇಕು; ಒಳಚೆಲುವನ್ನು— ಅಂದರೆ ಒಲವನ್ನು ಗ್ರಹಿಸಲು ಒಳಗಣ್ಣಿಗೆ ಹೊರಗಣ ಬೆಳಕೇಕೆ? ಹೃದ ಯದ ಕತ್ತಲೆಯನ್ನೇ ಕಳೆಯುವ ಒಲವು ಕೋಣೆಯ ಕತ್ತಲೆಯನ್ನು ಕಳೆಯ ಲಾರದೆ! ಕಮಲೆಯ ಇರವಿನಿಂದಾಗಿ ಸುತ್ತಮುತ್ತೆಲ್ಲ ಬೆಳಕಾಗಿರುವಂತೆ ಸುಂದರನಿಗೆ ತೋರಿದುದರಲ್ಲಿ ಆಶ್ಚರ್ಯವೇನು?

ಇಬ್ಬರ ಅಂತರ್ಯದಲ್ಲೂ ಒಲವು ಒತ್ತಿ ಒತ್ತಿ ಬರುತ್ತಿತ್ತು, ಬುಗ್ಗೆ ಯಂತೆ ಚಿಮ್ಮುತ್ತಿತ್ತು; ಬಾಯಿ ಕಟ್ಟಿಬಿಟ್ಟಿತ್ತು. ಮಾತಾಡದೆಯೆ ಸುಂದರ ಕೈಲಿದ್ದ ವೀಳೆಯದೆಲೆ ಮತ್ತು ಹೂವಿನ ಪೊಟ್ಟಣವನ್ನು ನೀಡಿದ; ಕಮ ಲೆಯು ಮೌನವಾಗಿಯೇ ಅವನ್ನು ಸ್ವೀಕರಿಸಿ, ಮತ್ತೆ ಅಡಿಗೆಯ ಮನೆ ಯೊಳಕ್ಕೆ ಹೋದಳು.

ಆಗ ಹಿತ್ತಲಬಾಗಿಲಿನಿಂದ ಕಾವೇರತ್ತೆ ಒಳಕ್ಕೆ ಬಂದರು; ಸುಮ್ಮನೆ ಅಡಿಗೆಮನೆಯೊಳಕ್ಕೆ ದಡದಡನೆ ಹೋದರು. "ಏನು, ಗಂಡಹೆಂಡಿರ ಏಕಾಂತ ನಡೆಯುತ್ತಿತ್ತೋ?" ಎಂದು ಅವರು ಕೇಳುವರೆಂದು ಸುಂದರ ನಿರೀಕ್ಷಿಸಿದ; ನಿರೀಕ್ಷಣೆ ನಿಷ್ಫಲವಾಯಿತು. "ಇದು ಯಾಕೆ ಕಾವೇರತ್ತೆ ಹೀಗಿದ್ದಾರೆ?" ಎಂದುಕೊಂಡು ಸುಂದರ ಹೊರಕ್ಕೆ ಬಂದ. "ಬರುತ್ತೇನೆ ಮಾವ" ಎಂದು ಹೇಳಿ, ಬುಟ್ಟಿಗೆ ಕೈಹಾಕಿ ಇನ್ನೊಂದು ಪೊಟ್ಟಣ ತೆಗೆದು ಕೊಂಡು ಹೊರಟ. "ಇದೇನು, ಬುಟ್ಟಿ ಮರೆತೆಯಲ್ಲ?" ಎಂದು ಕೇಳಿದರು

ಮೈಲಾರಯ್ಯನವರು. "ಬದನೆಕಾಯಿ, ಇಲ್ಲಿಗೇನೆ." ಎಂದ ಸುಂದರ.

"ನಿಮ್ಮ ಮನೆಗೆ ?"

"ಬೇರೆ ಇದೆ; ಗಾಡಿಯಲ್ಲೆ ಬಿಟ್ಟುಬಂದಿದ್ದೆ."

ಹೊರಕ್ಕೆ ಹೋಗುತ್ತಿದ್ದವನನ್ನು "ಸುಂದರಾ!" ಎಂದು ಕೂಗಿ ಕರೆದರು ಮೈಲಾರಯ್ಯ. "ಏನೂ?" ಎಂದು ಒಳಕ್ಕೆ ಬಂದ ಸುಂದರ. ಹೇಳಬೇಕು, ಹೇಳಲಾರರು : "ಏನೂ ಅಂದರೆ.... ಏನೂ ಅಂದರೆ.... ಏನೂ ಇಲ್ಲ; ಇರಲಿ. ಊಟಮಾಡಿಕೊಂಡು ಮಧ್ಯಾಹ್ನದ ಮೇಲೆ ಬರುತ್ತೀಯಾನೇ?" ಎಂದು ಕೇಳಿದರು. "ಹೂಂ" ಎಂದು ಸುಂದರ ಹೊರಟ.

ಸುಂದರ ಹೊರಟ ಕೂಡಲೆ ಕಾವೇರತ್ತೆ ಒಳಗಿನಿಂದ ಹಜಾರಕ್ಕೆ ಮೈಲಾರಯ್ಯಬಂದರು. ತಲೆತಗ್ಗಿಸಿಕೊಂಡು, ಯೋಚನೆ ಮಾಡುತ್ತ, ಶತಪಥ ತಿರುಗುತ್ತಿದ್ದರು. "ಕಮಲೆಯನ್ನ ಸುಂದರನಿಗೆ ಕೊಡುವುದಕ್ಕೆ ನಾನು ಒಪ್ಪುವುದಿಲ್ಲ" ಎಂದುಬಿಟ್ಟರು ಇದ್ದಕ್ಕಿದ್ದ ಹಾಗೆ ಕಾವೇರಮ್ಮ. ಬಾಂಬು ಬಿದ್ದದ್ದು ಕೇಳಿದರೆ ಹೇಗೋ ಹಾಗಾಯಿತು ಮೈಲಾರಯ್ಯನವರಿಗೆ! ಚೇತರಿಸಿಕೊಂಡಾದ ಮೇಲೆ, "ಏನಂದೆ?" ಎಂದು ಕೇಳಿದರು ಮೈಲಾರಯ್ಯ. ಯಜಮಾನಿ ತಾನು ಮೊದಲು ಹೇಳಿದ್ದನ್ನೇ ಮತ್ತೆ ಒತ್ತಿ ಹೇಳಿದಳು.

"ಇದೇನೆ, ಹೀಗಂತಿ? ನಿನಗೇನು ಹುಚ್ಚು-ಗಿಚ್ಚೊ!" ಎಂದು ಆಶ್ಚರ್ಯಪಟ್ಟ ಯಜಮಾನ.

"ನಿಮಗೆ ಹುಚ್ಚು-ಗಿಚ್ಚು ಹಿಡಿದಿದ್ದರೆ ಜಾತಿಗೆಟ್ಟ ಸುಂದರನಿಗೆ ಕಮಲೆಯನ್ನ ಕೊಡಿ."

"ಜಾತಿಗೆಡುವುದು ಅಂದರೇನೆ? ಏನು ಅವನಿಗೆ ಬಹಿಷ್ಕಾರ ಹಾಕಿದೆಯೋ ಜಾತಿಗೆಡುವುದಕ್ಕೆ? ಏನೋ ತಿಳಿಯದೆ ಒಂದು ತಪ್ಪು ಕೆಲಸ ಮಾಡಿಬಿಟ್ಟರೆ ಅದನ್ನೇ ದೊಡ್ಡದು ಮಾಡಿಕೊಂಡು ಹೀಗೆಲ್ಲ ಆಡುವುದೆ? ಸುಂದರನಿಗೇ ಕಮಲೇನ್ನ ಕೊಡಬೇಕು, ಅವನಿಗೆ ಬಿ. ಎ. ಆಗುವ ವರೆಗೆ ಕಾದರೂ ಚಿಂತೆಯಿಲ್ಲ ಅಂತ ಹೇಳುತ್ತಿದ್ದವಳೂ ನೀನೆ; ಈಗ ಬೇಡ ಅನ್ನುವವಳೂ ನೀನೆ."

"ಹಾಗಾದರೆ ಸುಂದರನಿಗೆ ಕಮಲೇನ್ನ ಕೊಡಬೇಕು ಅಂತ ನಿಮಗೆ ಮನಸ್ಸಿರಲಿಲ್ಲ ಅನ್ನಿ?"

" ಹಾಗಂದೆನೆ ನಾನು? ನೀನು ಯಾವುದರಲ್ಲೂ ಅತಿ. ಸುಂದರನಿಗೇ ಕಮಲೇನ್ನ ಕೊಡಬೇಕೂ ಅಂತ ನನಗೂ ಮೊದಲಿನಿಂದ ಆಸೆ; ಈಗಲೂ ಆಸೆ. ಆದರೆ, ನಿನ್ನ ಹಾಗೆ ಸದಾ ಅದೇ ಮಾತಾಡುತ್ತ ಕುಣೀತ ಇರಲಿಲ್ಲ ನಾನು. ಈಗ ಇನ್ನೊಂದು ಕಡೆಗೆ ತುಯ್ಯುತಾ ಇದ್ದೀ ನೀನು. ಸುಂದರ ಏನಾಗಿದಾನೆ ಅಂತ ನಿನ್ನ ಮನಸ್ಸಿನಲ್ಲಿ?"

" ಇನ್ನು ಸ್ವಲ್ಪ ದಿನ ತಡೆಯಿರಿ, ಏನಾಗಿದ್ದಾನೆ, ಏನಾಗುತ್ತಾನೆ ಅಂತ ತಿಳಿಯುತ್ತೆ. ಸುಂದರನ ಬುದ್ಧಿ ಬದಲಾಯಿಸಿ ಅವನು ಒಳ್ಳೆಯವನಾಗುವ ತನಕ ಕಮಲೆಗೆ ಮದುವೆ ಇಲ್ಲದೆ ಎಷ್ಟು ದಿನ ಹುಡುಗಿಯನ್ನ ಬೆಳಸಿಕೊಂಡಿರುವುದು? ಸುಂದರನಿಗೇ ಕೊಡುವುದು ಅಂತ ಮಾಡಿಕೊಂಡಿದ್ದರಿಂದ, ಅವನಿಗೆ ಬಿ. ಎ. ಪಾಸಾಗುವ ವರೆಗೂ ಕಾದಿರೋಣ ಅಂತ ಮಾಡಿಕೊಂಡೆವು; ದಿಟ. ಇನ್ನು ಅವನು ಬಿ. ಎ. ಮಾಡಿದರೇನು, ಬಿಟ್ಟರೇನು? ಬೇರೆ ವರ ನೋಡಿ ಈ ವೈಶಾಖಕ್ಕಾದರೂ ಕಮಲೆಯ ಮದುವೆ ಮಾಡಿ."

" ನೋಡು, ಮಧ್ಯಾಹ್ನ ಸುಂದರನ ಕೈಲಿ ಸ್ವಲ್ಪ ಮಾತಾಡುವ ವರೆಗೂ ಸ್ವಲ್ಪ ತಾಳಿಕೊಂಡಿರು."

ಗಂಡ ಹೆಂಡಿರ ವಾಗ್ವಾದ ಇಲ್ಲಿಗೆ ನಿಂತಿತು; ಇದನ್ನು ಕಮಲೆ ಒಳಗೇ ನಿಂತು ಕೇಳುತ್ತಿದ್ದಳು. ಮೊದಲೇ ಉದ್ವೇಗಗೊಂಡಿದ್ದ ಅವಳ ಮುಗ್ಧ ಮನಸ್ಸಿನ ಮೇಲೆ ಈ ಮಾತು-ಕತೆ ಯಾವ ಬಗೆಯ ಪರಿಣಾಮವನ್ನುಂಟು ಮಾಡಿತೆಂಬುದನ್ನು ಬೇರೆ ಹೇಳಬೇಕೇನು?

ಸುಂದರ ಮನೆಗೆ ಹೋಗುತ್ತ ದಾರಿಯಲ್ಲಿ ನಂಜುಂಡಶಾಸ್ತ್ರಿಗಳ ಮನೆಯನ್ನು ಹೊಕ್ಕ ಶಾಸ್ತ್ರಿಗಳು ಸ್ನಾನಮಾಡುತ್ತಿದ್ದರು; ವಿಶ್ವನಾಥ ಹೂವು ಪತ್ರೆ ತರಲು ತೋಟಕ್ಕೆ ಹೋಗಿದ್ದ. ಸುಂದರ ಮನೆಯೊಳಕ್ಕೆ ಕಾಲಿಟ್ಟ ಕೂಡಲೆ "ಚುಂದರಾ ಚುಂದರಾ" ಎಂದು ಸಾತಿ ಕುಣಿಯುತ್ತ ಬಂದಳು. "ಲೇ ಸುಂದರನ್ನ ಮುಟ್ಟಿಸಿಕೊಳ್ಳಬೇಡವೆ ಕತ್ತೆ" ಎಂದು ಸೀತಮ್ಮ ಬಂದು ಸಾತಿಯ ಕೈ ಹಿಡಿದು ಎಳೆದರು.

ಇದೇನು! ಎಂದೂ ಇಲ್ಲದ್ದು ಇಂದು ತನ್ನನ್ನು ಮುಟ್ಟಿಸಿಕೊಳ್ಳಬಾರದು ಎಂದು ಹೇಳುತ್ತಿದ್ದಾರೆ? ರೈಲಿನ ಮೈಲಿಗೆ ಎಂದು ಹಾಗೆ ಹೇಳುತ್ತಿರಬಹುದು. ಆದರೆ ಮಗುವಿಗೇನು ಕಟ್ಟು? ಈ ಮೈಲಿಗೆ ಹಿಂದೆ ಇರ

ಲಿಲ್ಲವಲ್ಲ! ಸುಂದರನಿಗೆ ಅರ್ಥವಾಗಲಿಲ್ಲ.

"ಶಾಸ್ತ್ರಿಗಳೆಲ್ಲಿ?"

"ಒಳಗಿದ್ದಾರೆ."

"ವಿಶ್ವನಾಥ?"

"ತೋಟಕ್ಕೆ ಹೋಗಿದಾನೆ."

"ಎಲ್ಲರೂ ಆರೋಗ್ಯ ತಾನೆ?"

"ಹೂಂ."

ಇದೇನು, ಸೀತಮ್ಮನವರೂ ಇಷ್ಟು ಪೆಡಸಿನಿಂದ ಮಾತಾಡುತ್ತಿದ್ದಾರೆ? ಏಕೆ? ಕಾವೇರತ್ತೆಯ ಮಾತಿಗಿಂತ ಇವರ ಮಾತಿನಲ್ಲಿ ಪೆಡಸು ಹೆಚ್ಚು ಪ್ರಸ್ಫುಟವಾಗಿತ್ತು.

ತನಗೆ ತಿಳಿಯದ ಏನೋ ಘಟನೆ ನಡೆದಿದೆಯೆಂದು ಇಷ್ಟು ಮಾತ್ರ ತೋಚಿತು ಸುಂದರನಿಗೆ. ತಿಂಡಿಯ ಪೊಟ್ಟಣವನ್ನು ಸಾತಿಗಾಗಿ ಕೆಳಗಿಟ್ಟು "ಮತ್ತೆ ಬರುತ್ತೇನೆ" ಎಂದು ಸುಂದರ ಮನೆಯ ಕಡೆ ಹೊರಟ.

ಸ್ವಲ್ಪ ದೂರ ಹೋಗುವುದರಲ್ಲಿ, ಹಿಂದೆ ಏನೋ 'ಟಪ್ ಎಂದು ಬಿದ್ದ ಸದ್ದಾಯಿತು. ಅಪ್ರಯತ್ನವಾಗಿ ಸುಂದರ ಹಿಂದಿರುಗಿ ನೋಡಿದ. ತಾನು ಬಿಟ್ಟು ಬಂದಿದ್ದ ತಿಂಡಿಯ ಪೊಟ್ಟಣ ಚರಂಡಿಯಲ್ಲಿ ಬಿತ್ತು; ನಾಯಿಯೊಂದು ಅದರೆಡೆಗೆ ಧಾವಿಸಿ ಓಡಿ ಬಂದಿತು. ಸುಂದರನಿಗೆ ದಿಗ್ಭ್ರಮೆಯಾಯಿತು, ದುಗುಡವಾಯಿತು. ಸಂದರನಿಗೆ ಅರ್ಥವಾಗುತ್ತ ಬಂದಂತೆ ಬೋಧೆಯಾಯಿತು.

ಮನೆಗೆ ಹೋದ ಮೇಲೆ ಸುಂದರನಿಗೆ ಎಲ್ಲ ವೇದ್ಯವಾಯಿತು—ತಾಯಿಯಿಂದ. ಬೇಕಾದಷ್ಟು 'ಪೂಜೆ'ಯಾಯಿತು ತಂದೆಯಿಂದ.

೧೭

ಸುಂದರ ಮೊದಲು ಬಚ್ಚಲ ಮನೆಗೆ ಹೋಗಿ ಸ್ನಾನ ಮಾಡಿದ. ಸ್ನಾನ ಮಾಡುವುದಕ್ಕೆ ಮುಂಚೆ ತನ್ನ ಬಟ್ಟೆಬರೆಗಳನ್ನೆಲ್ಲ ಹಿತ್ತಿಲ ಕಡೆ ಹೋಗಿ ತೋಯಿಸಿದ. ಇಷ್ಟರಿಂದಲೆ ತಾಯಿ ತಂದೆ ಸುಪ್ರೀತರಾಗಿಹೋದರು. ತಮ್ಮ ಮಗ ಏನೋ ಅರಿಯದೆ ತಪ್ಪು ಕೆಲಸ ಮಾಡಿದ್ದರೂ ಮುಂದೆ ತಮ್ಮ ಮಾತಿ

ನಂತೆ ನಡೆದುಕೊಳ್ಳುವುದರಲ್ಲಿ ಸಂದೇಹವಿಲ್ಲ ಎಂಬ ಮನಸ್ಸಮಾಧಾನ ಹೊಂದಿದರು. "ಬರುತ್ತಾ ಮಾವನ ಮನೆಗೆ ಹೋಗಿದ್ದೆಯೇನು?" ಎಂದು ಕೇಳಿದರು ತಂದೆ. "ಹೂಂ" ಎಂದ ಸುಂದರ. "ಹಾಗಾದರೆ ಅಲ್ಲಿ ಕಾಫಿ ತಿಂಡಿ ಆಗಿದೆ?"—"ಹೂಂ."—"ನಾಳೆಯಾದರೂ ಕಾಫಿ ಕುಡಿಯುವುದಕ್ಕೆ ಮುಂಚೆ ಹೇಳು. ಸ್ನಾನ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು." ಸುಂದರ ಸುಮ್ಮನಿದ್ದ. ತಂದೆ ಹೊರಕ್ಕೆ ಹೊರಟರು. ತಾಯಿ ಪ್ರೀತಿಯಿಂದ ಕೊಟ್ಟ ತಿಂಡಿ ತಿಂದು, ಕಾಪಿ ಕುಡಿದ ಸುಂದರ.

ಕಾಫಿ ಕುಡಿದು ಎದ್ದು ನಿಂತಾಗ, ತಾಯಿ ಎಂದರು: "ಸುಂದರಾ, ನನ್ನ ಮಾತಿನಲ್ಲಿ ನಿನಗೆ ವಿಶ್ವಾಸ ಇದೆಯೋ ಇಲ್ಲವೋ ಅಪ್ಪ? ನನ್ನಲ್ಲಿ ನಿನಗೆ ಭಕ್ತಿ ಇದೆಯೋ ಇಲ್ಲವೋ ಅಪ್ಪ?"

"ಇದೇನಮ್ಮ ಹೀಗೆ ಹೇಳುತ್ತಿ? ನಿನ್ನಲ್ಲಿ ನನಗೆ ಭಕ್ತಿ ವಿಶ್ವಾಸ ಇಲ್ಲವೇ?"

"ಹಾಗಾದರೆ ನಾನು ಹೇಳಿದ ಹಾಗೆ ಕೇಳುತ್ತಿ ತಾನೆ?"

"ಅದೇನಮ್ಮ?"

"ಈ ಪ್ರಾಯಶ್ಚಿತ್ತವೂ ಬೇಡ ಗೀಯಶ್ಚಿತ್ತವೂ ಬೇಡ. ವಿಶ್ವನಾಥ ಹೇಳಿದ್ದೆಲ್ಲ ಸುಳ್ಳು ಎಂದು ಹೇಳಿಬಿಡು. ಇಷ್ಟಕ್ಕೂ ಅವನು ಹೇಳಿದ್ದು ನಿಜ ಅಂತ ನನಗಿನ್ನೂ ನಂಬಿಕೆಯಿಲ್ಲ. ತಾನು ಹೇಳಿದ್ದನ್ನ ವಿಶ್ವನಾಥ ಅದು ಹೇಗೆ ಸಾಧಿಸುತ್ತಾನೆಯೋ ನೋಡೋಣ."

ತನ್ನ ಮೇಲಣ ಪ್ರೇಮವೇ ತಾಯಿಯ ಬಾಯಿಂದ ಈ ಮಾತು ನುಡಿಸುತ್ತಿದೆಯೆಂದು ಸುಂದರ ತಿಳಿದ.

"ಅಮ್ಮ, ನೀನೊಬ್ಬಳು ತಾಯಿಯಾದರೆ ಸತ್ಯ, ಇನ್ನೊಬ್ಬಳು ತಾಯಿ-ತಾಯಿಗೆ ಎರಡು ಬಗೆಯಬಹುದೇನಪ್ಪ?"

ನರಸಮ್ಮನವರಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಸ್ವಲ್ಪಹೊತ್ತು ಸುಮ್ಮನಿದ್ದರು. ತನಗೆ ತೊಂದರೆಯಾಗುವುದನ್ನೂ ಲಕ್ಷಿಸದೆ ಸತ್ಯವನ್ನೇ ಹೇಳುತ್ತಿರುವ ತಮ್ಮ ಮಗ ಎಸಗಿರುವ 'ಅನಾಚಾರ' ಅನಾಚಾರ ಹೇಗೆ ಆದೀತು? ಎಂಬ ಅಸ್ಫುಟವಾದ ಅರಿವೊಂದು ಅವರ ಹೃದಯಾಂತರಾಳದಲ್ಲಿ

ತಲೆದೋರಿತ್ತು. ಆದರೆ, ಆ ಅರಿವಿಗೆ ಅವರ ಮನೋಧರ್ಮವನ್ನು ಮಾರ್ಪಡಿಸುವಷ್ಟು ಶಕ್ತಿ ಕೂಡಿರಲಿಲ್ಲ.

"ಹಾಗಾದರೆ, ವಿಶ್ವನಾಥ ಹೇಳಿದ್ದು ನಿಜ ಅನ್ನು."

ಸುಂದರ ಮೌನವಾಗಿದ್ದ.

"ಹೇಗಾದರೂ ಆಗಲಿ. ಶಾಸ್ತ್ರಿಗಳು ಏನು ಪ್ರಾಯಶ್ಚಿತ್ತ ವಿಧಿಸುತ್ತಾರೋ ಆದನ್ನು ಮಾಡಿಕೊಂಡುಬಿಡಪ್ಪ. ಇಲ್ಲದೆ ಹೋದರೆ ಈ ವೂರಿನಲ್ಲಿ ನಾವು ಮಾನವಾಗಿ ಬದುಕವುದಕ್ಕಾಗುವುದಿಲ್ಲ ಈಗಲೇ ಎಲ್ಲರೂ ನಮ್ಮನ್ನು ದೂರಮಾಡಿದ್ದಾರೆ" ಎಂದು ನರಸಮ್ಮನವರು, ಶಾಸ್ತ್ರಿಗಳ ಮನೆಯವರೂ ಕಾವೇರತ್ತೆಯೂ ಇತರ ನೆರೆಯವರೂ ಒಂದು ಗಾಳಿವರ್ತಮಾನವನ್ನು ಕೇಳಿಯೋ ತಮ್ಮ ವಿಷಯದಲ್ಲಿ ಹೇಗೆ ವರ್ತಿಸಿದರೆಂಬುದನ್ನು ಸುಂದರನಿಗೆ ತಿಳಿಸಿದರು.

"ಅಮ್ಮ, ಹೇಳಿದರೆ ನಿನಗೆ ತಿಳಿಯುವುದೋ ಇಲ್ಲವೊ. ನಮ್ಮ ಜನ ಮೂಢರು; ನಮ್ಮ ಸಮಾಜ ಕುರುಡು. ಜನಕ್ಕೆ ಹೆದರಿ, ಯಾವುದು ನ್ಯಾಯವೋ ಆದನ್ನು ಮಾಡದಿರುವುದಕ್ಕಾಗುತ್ತದೆಯೇನಮ್ಮ? ಆದರೂ, ನನ್ನಿಂದ ನಿಮ್ಮೆಲ್ಲರಿಗೂ ತೊಂದರೆ ತರಲು ನನ್ನ ಮನಸ್ಸು ಒಡಂಬಡುವುದಿಲ್ಲ. ಇರಲಿ, ನೋಡೋಣ, ನೀನು ನಿಶ್ಚಿಂತೆಯಿಂದ ಇರಮ್ಮ," ಎಂದು ತಾಯಿಯನ್ನು ಸಮಾಧಾನ ಪಡಿಸಿ, ತೋಯಿಸಿದ್ದ ಬಟ್ಟೆಗಳನ್ನು ಒಗೆದುಕೊಂಡು ಬರುವುದಕ್ಕೆಂದು ಹೊಳೆಯ ಕಡೆಗೆ ಹೊರಟ.

ಸುಂದರನ ಮನಸ್ಸಿನಲ್ಲಿ ದೊಡ್ಡ ಹೋರಾಟವೇ ನಡೆಯುತ್ತಿತ್ತು. ಈ ಆಂತರಿಕ ಭಾವನಾದ್ವಂದ್ವಯುದ್ಧದ ಎರಡು ಪಕ್ಷಗಳೇನೆಂಬುದನ್ನು ಸೂಚಿಸಬಹುದೇ ಹೊರತು, ಆದರ ಪರಿಣಾಮವಾಗಿ ಅವನ ಮನಸ್ಸಿನಲ್ಲಿ ಉಂಟಾಗಿದ್ದ ಉದ್ವೇಗವನ್ನು ಮಾತಿನಲ್ಲಿ ಬಣ್ಣಿಸಲರಿದು. ತನ್ನ ಕಾರ್ಯಪಥದಲ್ಲಿ ಇನ್ನೂ ಮೊದಲಡಿಯಿಟ್ಟಿಲ್ಲ; ಆಗಲೇ ಎಂಥ ಎಡರು ಬಂದೊಡ್ಡಿದೆ ಎದುರಿನಲ್ಲಿ! ತನ್ನ ಮನೆಯವರಿಗೂ ಕಷ್ಟಗಳನ್ನು ತಂದೊಡ್ಡದೆ, ಜನಕ್ಕೂ ಬೇಕಾದವನಾಗಿ, ತನ್ನ ಉದ್ದಿಷ್ಟ ಕಾರ್ಯಪಥದಲ್ಲಿ ಮುಂದುವರಿಯುವುದು ಅಸಾಧ್ಯವೆಂದು ಕಂಡಿತವನಿಗೆ.

ಕಮಲೆ?.... ಈಗಾಗಲೇ ಕಾವೇರತ್ತೆ ತಮ್ಮ ಮನಸ್ಸು ಬದಲಾಯಿಸಿ

ಬಿಟ್ಟಿದ್ದಾರೆ. ತಾನು ಹೀಗೆಯೇ ಹರಿಜನ ಸಂಬಂಧ ಕಾರ್ಯಗಳಲ್ಲಿ ಪ್ರವೃತ್ತ ನಾಗಿದ್ದರೆ ಮಾವ ಕೂಡ ಮನಸ್ಸು ಬದಲಾಯಿಸುವುದರಲ್ಲಿ ಸಂದೇಹವಿಲ್ಲ. ಕಮಲೆ, ತಾನು – ಇಬ್ಬರೂ ಗಂಡಹೆಂಡಿರಾಗುವುದಕ್ಕೇ ಹುಟ್ಟಿದಂತಿದೆ. ಕಮಲೆಯನ್ನು ಬಿಟ್ಟು ತಾನು ಬಾಳು ನೂಕುವುದು ಕಷ್ಟ: ಅವಳಾದರೂ ತನ್ನನ್ನು ಬಿಟ್ಟಿರಲಾರಳು. ಕಮಲೆಯಲ್ಲಿ ತನಗಿರುವುದು ಮೊದಲ ನೋಟದ ಮೋಹವಲ್ಲ, ಆ ಮೋಹ ಮಾಗಿ ಪ್ರೇಮಕ್ಕೆ ತಿರುಗಿದುದೂ ಅಲ್ಲ. ಅವಳ ಜೀವವೇ ತನ್ನ ಜೀವಕ್ಕೆ ಅಂಟಿಕೊಂಡು ಬಂದಿದೆ. ಅವಳನ್ನು ಕೈಬಿಡುವುದು ಅವಳಿಗೆ ದ್ರೋಹ ಮಾಡಿದಂತೆ; ತನಗೇ ದ್ರೋಹ ಮಾಡಿಕೊಂಡಂತೆ.

ಆದರೆ, ಯಾವುದು ತನ್ನ ಜೀವನದ 'ಕರ್ಮಮಾರ್ಗ'ವಾಗಿ ಕಂಡು ಬಂದಿದೆಯೋ ಅದರಲ್ಲಿ ಮುಂದುವರಿಯುವುದು ತನ್ನ ಕರ್ತವ್ಯ. ಸ್ವಾರ್ಥ ಕ್ಕಾಗಿ, ಸ್ವಂತ ಸುಖಕ್ಕಾಗಿ, ಹಿಂದಡಿಯಿಡುವುದು ಇನ್ನೂ ಹೆಚ್ಚಿನ ದ್ರೋಹ ವಾದೀತು.

ಈ ವಿಚಾರಲಹರಿಯಲ್ಲಿ ಅವನು ಬೇಗನೆ ಹೊಳೆಯನ್ನು ಸೇರಿದ. ಅಲ್ಲಿ ಬಟ್ಟೆಯನ್ನು ಒಗೆಯುವಾಗ ಅವನು ಬಟ್ಟೆಗೆ ಕೊಡುತ್ತಿದ್ದ ಒಂದೊಂದು ಒಗೆತದ ಪೆಟ್ಟೂ, ಕಮ್ಮಾರನ ಚಮ್ಮಟಿಗೆ ಕಾದ ಕಬ್ಬಿಣಕ್ಕೆ ಉದ್ದಿಷ್ಟವಾದ ಆಕಾರ ಕೊಡುವಂತೆ ಅವನ ಕ್ಷುಬ್ಧವಾದ ಉದ್ವಿಗ್ನ ಮನಸ್ಸಿಗೆ ಒಂದು ನಿರ್ಧಾರದ ಸ್ವರೂಪವನ್ನು ಕೊಡುತ್ತಿದೆಯೋ ಎಂಬಂತೆ ಬಲು ಬಿರು ಸಾಗಿತ್ತು.

ಇವನು ಬಟ್ಟೆ ಒಗೆದು ಮುಗಿಸುವ ಹೊತ್ತಿಗೆ ವಿಶ್ವನಾಥಶಾಸ್ತ್ರಿಯೂ ಬಟ್ಟೆ ಒಗೆಯುವುದಕ್ಕಾಗಿ ಹೊಳೆಗೆ ಬಂದ. ಬಂದವನೇ ಇವನಿಗಿಂತ ಎಂಟು ಹತ್ತು ಮಾರು ದೂರದಲ್ಲಿ ಬಟ್ಟೆ ಒಗೆಯುವುದಕ್ಕಾಗಿ ಹೊಳೆಗೆ ಇಳಿದ. ಒಂದು ವರ್ಷದಲ್ಲಿ ಎಂಥ ಮಾರ್ಪಾಟು! ವರ್ಷದ ಹಿಂದೆ ಇಬ್ಬರೂ ಒಟ್ಟಿಗೆ ಹೊಳೆಗೆ ಬರುತ್ತಿದ್ದರು. ಎಷ್ಟೋ ದಿನ ಸುಂದರನ ಬಟ್ಟೆಗಳನ್ನೂ ವಿಶ್ವನಾಥನೇ ಒಗೆದುಕೊಟ್ಟುಬಿಡುತ್ತಿದ್ದ. ಇದನ್ನೆಲ್ಲಾ ನೆನೆದ ಸುಂದರನಿಗೆ ಅಲ್ಲಿ ಹೆಚ್ಚು ಹೊತ್ತು ಉಳಿದಿರುವುದು ಬೇಸರವಾಯಿತು. ಒಗೆದ ಬಟ್ಟೆಗಳನ್ನೆಲ್ಲಾ ಬೇಗನೆ ಮಡಿಸಿಕೊಂಡು ಮನೆಯ ಹಾದಿ ಹಿಡಿದ.

ಸುಂದರನ ಕಾಲು ಮನೆಯ ಹಾದಿ ಹಿಡಿದಿದ್ದರೂ ಮನಸ್ಸು ತೋಟದ

ಹಾದಿ ಹಿಡಿದಿತ್ತು. ಚೆನ್ನಿಯನ್ನು ನೋಡಬೇಕು; ಮಾದನನ್ನು ಮಾತಾಡಿಸ ಬೇಕು; ಅವನಿಂದ ಎಳನೀರು ಕೀಳಿಸಿ ಕುಡಿಯಬೇಕು— ಇದು ಅವನ ಮನಸ್ಸಿನ ಒಲಿತವಾಗಿತ್ತು. ಕಾಲು ಮನಸ್ಸಿಗೆ ಸೋತು ಅವನನ್ನು ತೋಟಕ್ಕೆ ಎಳೆದೊಯ್ದಿತು.

ಸುಂದರ ಚೆನ್ನಿಯನ್ನು ಕಂಡ; ಮಾದನನ್ನು ಮಾತಾಡಿಸಿದ. ಕಂಡ ಚೆನ್ನಿ ಮಾತಾಡುವ ಸ್ಥಿತಿಯಲ್ಲಿರಲಿಲ್ಲ; ಮಾತನಾಡಿಸಿದ ಮಾದನ ಮನಸ್ಸು ಅವನ ಹತೋಟಿಯಲ್ಲಿರಲಿಲ್ಲ. ನಿತ್ಯ ಹೊತ್ತು ಮೂಡುವ ಮುನ್ನ ಎದ್ದು ಗಿಡಗಳಿಗೆ ನೀರು ಕಟ್ಟುತ್ತಿದ್ದವನು ಹತ್ತಾದರೂ ಏಳದೆ ಇದ್ದದ್ದು ಸುಂದರನಿಗೆ ಆಶ್ಚರ್ಯವಾಗಿ ಕಂಡಿತು.

ಚೆನ್ನಿ ನಿಶ್ಚೇಷ್ಟಳಾಗಿ ಬಿದ್ದಿದ್ದಳು. ಉಸಿರು ಹೊಯ್ಯುವ ಚಿಹ್ನೆಯೊಂದನ್ನು ಬಿಟ್ಟುಬಿಟ್ಟರೆ ಚೆನ್ನಿ ಬದುಕಿದ್ದಳು ಎಂದು ಹೇಳಬರುವಂತಿರಲಿಲ್ಲ.

ಮಾದನೂ ಒಂದು ಕಡೆ ಬಿದ್ದುಕೊಂಡಿದ್ದ. ಸುಂದರ ಕೇಳಿದ ಪ್ರಶ್ನೆಗೆಲ್ಲಾ ಮೌನವೇ ಅವನ ಉತ್ತರವಾಗಿತ್ತು. ಮೊದಲು, ಅವನು ಕುಡಿದುಬಿದ್ದಿದ್ದಾನೆಂದು ತೋರಿತು ಸುಂದರನಿಗೆ. ಆದರೆ, ಮಾದ ಸ್ವಲ್ಪ ಕುಡಿದಾಗ, ಮಿತಿಮೀರಿ ಕುಡಿದಾಗ, ಹೇಗೆ ಹೇಗೆ ವರ್ತಿಸುತ್ತಿದ್ದನೆಂಬುದರ ಅರಿವು ಸುಂದರನಿಗಿದ್ದುದರಿಂದ, ಮಾದ ಕುಡಿದಿಲ್ಲವೆಂಬುದು ಖಚಿತವಾಯಿತು. ಮಾದ ಗಳಿಗೆ ಗಳಿಗೆಗೂ ಕೈಮುಗಿದು, ಮೇಲೆ ನೋಡಿ, ಚೆನ್ನಿಯ ಕಡೆಗೆ ಕೈ ತೋರಿಸುತ್ತಿದ್ದ. ಚೆನ್ನಿ ಹಾಸಿಗೆ ಹಿಡಿದು ಮಲಗಿದ್ದಾಳೆಂಬುದು ಸ್ವಯಂ ವ್ಯಕ್ತವಾಯಿತು. ಸುಂದರ ಓರಣವಾಗಿ ಮಡಿಸಿ ಹಿಡಿದುಕೊಂಡಿದ್ದ ಒದ್ದೆಯ ಬಟ್ಟೆಗಳನ್ನು ಒಕ್ಕಡೆ ಬಿಸುಟು, ಚೆನ್ನಿಯ ಕಡೆಗೆ ಧಾವಿಸಿ ಹೋಗಿ ಅವಳ ಬಳಿ ಕುಳಿತು, ಅವಳ ಹಣೆ ಮುಟ್ಟಿ ನೋಡಿದ. ಹಣೆ ಕೆಂಡದ ಮೇಲಣ ಕಾವಲಿಯಂತಿತ್ತು. ಸುಂದರ ತತ್‌ಕ್ಷಣ ಒದ್ದೆಯ ಟವಲನ್ನು ತೆಗೆದುಕೊಂಡು, ಅದನ್ನು ಅಲ್ಲಿಯೇ ಇದ್ದ ಮಡಕೆಯ ನೀರಿನಲ್ಲಿ ಇನ್ನಷ್ಟು ತೋಯಿಸಿ, ಚೆನ್ನಿಯ ಹಣೆಯ ಮೇಲೆ ಹಾಕಿ, ಅವಳನ್ನು ಮಾತಾಡಿಸಲು ಪರಿಪರಿಯಲ್ಲಿ ಪ್ರಯತ್ನಪಟ್ಟ. ಚೆನ್ನಿ ಮರುಮಾತಾಡಲಾರದವಳಾಗಿದ್ದಳು; ಇನ್ನೂ ಕಣ್ಣು ಕೂಡ ಬಿಟ್ಟಿರಲಿಲ್ಲ. ತರುವಾಯ ಸುಂದರನ ಗಮನ ಮಾದನ ಕಡೆಗೆ ಹೊರಳಿತು. ಅವನ ಹಣೆಯನ್ನೂ ಮುಟ್ಟಿ ನೋಡಿದ. ಅವನಿಗೆ ಜ್ವರ

ಏನೂ ಇರಲಿಲ್ಲ. ಅವನು ತನ್ನ ತುಟಿಗಳನ್ನು ನಾಲಗೆಯಿಂದ ಸವರಿಕೊಳ್ಳು ತ್ತಿದ್ದುದನ್ನು ಕಂಡು ಅವನಿಗೆ ನೀರಡಕೆಯಿರಬಹುದೆಂದು ತೋರಿತು. ಸುಂದರ ಅವನಿಗೆ ನೀರು ತಂದು ಕೊಟ್ಟ; ಎದ್ದು ಕುಳಿತು ಕುಡಿಯುವಷ್ಟು ತ್ರಾಣ ಕೂಡ ಮಾದನಿಗೆ ಇದ್ದಂತೆ ಕಾಣಲಿಲ್ಲ. ಸುಂದರ ಮಾದನ ಬಾಯಿಗೇ ನೀರು ಹೊಯ್ದ; ಎರಡು ಮೂರು ಕುಡಿಕೆಯಷ್ಟು ನೀರು ಕುಡಿದು ಮಾದ ತೃಪ್ತಿ ಸೂಚಕವಾದ ನಿಟ್ಟುಸಿರು ಬಿಟ್ಟ.

ಮಾದ ಎದ್ದು ಕುಳಿತುಕೊಳ್ಳಲು ಪ್ರಯತ್ನ ಪಟ್ಟ; ಆಗಲಿಲ್ಲ; ಏನೋ ಮಾತಾಡಲು ಪ್ರಯತ್ನ ಪಟ್ಟ; ಅದೂ ಆಗಲಿಲ್ಲ. ಸುಂದರಮೂರ್ತಿ ಇನ್ನು ಕಾಲವಿಳಂಬ ಮಾಡುವುದು ಸರಿಯಲ್ಲವೆಂದು ಬಗೆದು, ನೆಟ್ಟಗೆ ಆಸ್ಪತ್ರೆಯ ಕಡೆಗೆ ಧಾವಿಸಿದ. ಡಾಕ್ಟರ್ ಸಾಹೇಬರು ಇನ್ನೂ ಆಸ್ಪತ್ರೆಗೆ ಬಂದಿರಲಿಲ್ಲ. ಹತ್ತು ಗಂಟೆಯಾದ ಮೇಲೆ ಬರುವುದೇ ಅವರ ರೂಢಿ. ಅಷ್ಟಕ್ಕೆ ಮುಂಚೆ ರೋಗಿಗಳು ಔಷಧಿಗಾಗಿ ಹೋಗುತ್ತಿದ್ದುದೂ ಅಪರೂಪ. ಸುಂದರ ಅವರ ಮನೆಗೆ ಓಡಿದ. ಇವನು ಏದುತ್ತ ಏದುತ್ತ "ಡಾಕ್ಟರ್ರೇ, ಬೇಗ ಸ್ವಲ್ಪ ನಮ್ಮ ತೋಟಕ್ಕೆ ಬರಬೇಕು" ಎಂದು ಕರೆದ. ಏತಕ್ಕೆ ಎಂಬುದು ಡಾಕ್ಟರಿಗೆ ಕೂಡಲೆ ಗೊತ್ತಾಯಿತು. ಹಿಂದಿನ ಸಂಜೆ ತಾನೆ ಕೃಷ್ಣಪ್ಪನವರು ಚೆನ್ನಿಗೆ ಒಂದೇ ಸಮನಾಗಿದೆ ಎಂದು ಹೇಳಿ ಔಷಧಿ ತೆಗೆದುಕೊಂಡುಹೋಗಿದ್ದುದ ರಿಂದ, ಡಾಕ್ಟರು ಏನೂ ಗಾಬರಿಪಟ್ಟುಕೊಳ್ಳದೆ — "ಇರಲಿ ಬರೋಣಂತೆ. ಯಾವಾಗ ಬಂದೆಯಯ್ಯಾ ಮಿಸ್ಟರ್ ಸುಂದರಮೂರ್ತಿ? ಆರೋಗ್ಯ ತಾನೆ?.... ಸ್ವಲ್ಪ ಕುಳಿತುಕೊಳ್ಳಯ್ಯ.... ಕಾಫಿ ತೆಗೆದುಕೊಂಡು ಹೋಗು ವಂತೆ'' ಎಂದು ಪರಾಯಿ ಏರಿಸುತ್ತ ಸಮಾಧಾನದಿಂದ ನುಡಿದರು. "ಕಾಫಿ ಗೀಫಿ ಇರಲಿ. ಡಾಕ್ಟರೆ, ಎಲ್ಲಾ ಸಮಾಚಾರವನ್ನೂ ನಿಧಾನವಾಗಿ ತಿಳಿಸು ತ್ತೇನೆ. ಚೆನ್ನಿ ಸಾಯುವ ಸ್ಥಿತಿಯಲ್ಲಿದ್ದಾಳೆ. ಮಾದ ಜ್ಞಾನವಿಲ್ಲದೆ ಬಿದ್ದಿ ದ್ದಾನೆ. ಸ್ವಲ್ಪ ಬಂದು ನೋಡಬಾರದೆ?" ಎಂದು ಒತ್ತಾಯಪಡಿಸಿದ. "ಅಲ್ಲ ಕಣಯ್ಯ, ನಿನ್ನೆ ಸಂಜೆ ತಾನೇ ನಿಮ್ಮ ತಂದೆ ಬಂದು ಔಷಧಿ ತೆಗೆದು ಕೊಂಡು ಹೋದರು? ನಾಲ್ಕೈದು ದಿನಗಳಿಂದಲೂ ತೆಗೆದುಕೊಂಡು ಹೋಗುತ್ತಲೇ ಇದ್ದಾರೆ. ಚೆನ್ನಿಗೆ ಒಂದೇ ಸಮ ಎಂದರು. ಮಾದನ ವಿಷಯ ಅವರು ಏನೂ ಹೇಳಲೇ ಇಲ್ಲವಲ್ಲ?.... ಕಾಫಿ ತೆಗೆದುಕೊಂಡು ಹೊರಟು.

ಬಿಡೋಣ. ಸ್ವಲ್ಪ ಕುಳಿತುಕೊ” ಎಂದು ಮತ್ತೆ ಸಾವಧಾನವಾಗಿ ನುಡಿದರು ಡಾಕ್ಟರು. “ನೀವು ಬರುತ್ತೀರೋ ಇಲ್ಲವೋ?” ಎಂದು ಅಸಮಾಧಾನದಿಂದಲೇ ಕೇಳಿದ ಸುಂದರ. “ಬರುವುದಿಲ್ಲ ಕಣಯ್ಯ” ಎಂಬ ಮಾತುಗಳು ಡಾಕ್ಟರರ ತುದಿನಾಲಗೆಗೆ ಬಂದುವು. ಆದರೆ ಅವರಿಗೆ ಸುಂದರಮೂರ್ತಿಯಲ್ಲಿ ಮೊದಲಿನಿಂದಲೂ ವಿಶ್ವಾಸ; ಸಲಿಗೆ, ವಿದ್ಯಾವಂತ ತರುಣ ಎಂಬ ಗೌರವ; ಹೆಚ್ಚಿನದಾಗಿ, ರೋಗಿಗಳನ್ನು ಉಪಚರಿಸುವುದು ತಮ್ಮ ಕಸಬಿನ ಕರ್ತವ್ಯ ಮಾತ್ರವಲ್ಲದೆ, ತಮ್ಮ ಧರ್ಮದ ಅನುಷ್ಠಾನದ ಅವಶ್ಯ ಅಂಗಗಳಲ್ಲಿ ಒಂದು ಎಂಬುದಾಗಿ ಕ್ರೈಸ್ತಮತೀಯರಾದ ಅವರು ತ್ರಿಕರಣಪೂರ್ವಕವಾಗಿ ನಂಬಿದ್ದರು. ಆದ್ದರಿಂದ, ನಾಲಗೆಗೆ ಬಂದ ಮಾತನ್ನು ನುಂಗಿಕೊಂಡು “ನಡೆಯಯ್ಯಾ” ಎಂದು ಬೇಗನೆ ಪೂರ್ತಿ ಉಡುಪು ಧರಿಸಿ, ಬೈಸಿಕಲ್ ತೆಗೆದುಕೊಂಡು ಸುಂದರಮೂರ್ತಿಯೊಡನೆ ಹೊರಟರು.

೧೮

ಡಾಕ್ಟರ್ ಜೇಮ್ಸ್ ದೊರೈಸ್ವಾಮಿಗಳೂ ಸುಂದರಮೂರ್ತಿಯೂ ಬೇಗನೆಯೇ ಗುಡಿಸಿಲನ್ನು ಸೇರಿದರು. ಚೆನ್ನಿಯೂ ಮಾದನೂ ಯಥಾಸ್ಥಿತಿಯಲ್ಲಿಯೇ ಇದ್ದರು. ಡಾಕ್ಟರು ಮೊದಲು ಚೆನ್ನಿಯನ್ನು ಪರೀಕ್ಷೆಮಾಡಿದರು; ಅನಂತರ ಮಾದನನ್ನು ಪರೀಕ್ಷೆ ಮಾಡಿದರು.

“ಚೆನ್ನಿಗೆ ‘ಇನ್-ಫ್ಲೂ-ಎನ್ಜ’ ಇರಬಹುದು. ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಈ ತೋಟದಲ್ಲಿಯೇ ಇದ್ದರೆ ನ್ಯುಮೋನಿಯಾಕ್ಕೆ ತಿರುಗುವುದು ಖಂಡಿತ. ಅಲ್ಲದೆ ಮಾದ ಬೇರೆ ನಿಶ್ಶಕ್ತನಾಗಿ ಬಿದ್ದಿದ್ದಾನೆ. ಇಲ್ಲೇ ಇದ್ದರೆ ಈ ಬಡ ಹುಡುಗಿಯನ್ನು ನೋಡಿಕೊಳ್ಳುವವರು ಯಾರಯ್ಯ? ಯೋಚನೆ ಮಾಡು.” ಎಂದು ಡಾಕ್ಟರು ತಮ್ಮ ಅಭಿಪ್ರಾಯವನ್ನು ಸುಂದರನ ಮುಂದಿಟ್ಟರು.

ಸುಂದರ ನಿಜವಾಗಿಯೂ ಯೋಚನೆ ಮಾಡಬೇಕಾಗಿ ಬಂದಿತು. ಸುಂದರನ ಭಾವನೆಯಲ್ಲಿ ತನ್ನ ತಂಗಿ ಬೇರೆಯಲ್ಲ ಚೆನ್ನಿ ಬೇರೆಯಲ್ಲ. ಅವಳನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಉಪಚರಿಸಬಹುದಲ್ಲವೆ? ಏನು! ತಮ್ಮ ಮನೆಗೆ ಕರೆದುಕೊಂಡು ಹೋಗಿ ಚೆನ್ನಿಯನ್ನು, ಹೊಲೆಯರ

ಹುಡುಗಿಯನ್ನು ( ಹೊಲೆಯನೂ ಅಲ್ಲ – ಮಾದಿಗನ ಮಗಳನ್ನು ) ಉಪಚರಿಸುವುದೆ ! ನಡೆಯದ ಮಾತು; ಅದನ್ನೂ ಯಾರೂ ನಡೆಯಲೀಸರು ! ದೊಡ್ಡ ಪಟ್ಟಣದ ಆಸ್ಪತ್ರೆಗಳಲ್ಲಿರುವಂತೆ ಹಳ್ಳಿಯ ಆಸ್ಪತ್ರೆಯಲ್ಲಿ ರೋಗಿಯನ್ನು ಇಟ್ಟುಕೊಂಡು ಉಪಚರಿಸುವುದಕ್ಕೂ ಅವಕಾಶವಿಲ್ಲ. ತೋಟದಲ್ಲೆ ಬಿಟ್ಟರೆ ಚೆನ್ನಿಯ ಆಸೆಯನ್ನೇ ಬಿಡಬೇಕಾದೀತು ಅಲ್ಲ, ಇಷ್ಟಕ್ಕೂ ಚೆನ್ನಿಗಾಗಿ ತಾನು ಏಕೆ ಹೀಗೆ ಒದ್ದಾಡಬೇಕು ? ತೋಟದಲ್ಲೆ ಇದ್ದು ಕೊಳ್ಳಲಿ. ದೇವರ ಮೇಲೆ ಭಾರ ಹಾಕಿ ನಿತ್ಯ ಔಷಧಿ ತಂದುಕೊಡುವುದು, ಕೈಲಾದ ಉಪಚಾರ ಮಾಡುವುದು ಬದುಕಿದರೆ ಮಾದನ ಪುಣ್ಯ; ಹೋದರೆ.... ಛೆ ! ಅಷ್ಟಕ್ಕೆ ಅವಕಾಶ ಕೊಡಕೂಡದು; ಆವಳನ್ನು ಉಳಿಸಿಕೊಳ್ಳುವುದಕ್ಕೆ ಸರ್ವಪ್ರಯತ್ನವನ್ನೂ ಮಾಡಬೇಕು— ಎಂಬುದಾಗಿ ಸುಂದರ ನಿರ್ಧರಿಸಿದ.

"ಮಾದನಿಗೆ ಏನಾಗಿದೆ ಡಾಕ್ಟರೆ ?" ಎಂದು ಕೇಳಿದ ಸುಂದರ.

"ಏನೂ ಇಲ್ಲ ಕಣಯ್ಯ. ಎರಡು ಮೂರು ದಿನದಿಂದ ಉಪವಾಸ ಬಿದ್ದಿದ್ದಾನೆ ಅಂತ ಕಾಣುತ್ತೆ. ಚೆನ್ನಿಯ ಮೇಲಿನ ಯೋಚನೆ ಒಂದು ಕಡೆ. ಆದ್ದರಿಂದ ಬಹಳ ನಿಶ್ಶಕ್ತನಾಗಿದ್ದಾನೆ ಅಷ್ಟೆ. ಹೊಟ್ಟೆಗೆ ಆಹಾರ ಬಿದ್ದರೆ ಎಲ್ಲ ಸರಿಹೋಗುತ್ತೆ. ಮಾದನ ವಿಚಾರ ಇರಲಿ. ಚೆನ್ನಿಯ ವಿಚಾರ ಏನು ಮಾಡುತ್ತೀಯ ?"

"ಅದೇ ದೊಡ್ಡ ಯೋಚನೆಯಾಗಿದೆ. ಬಗೆಹರಿಯುವುದೇ ಇಲ್ಲ. ನಮ್ಮ ಮನೆಗೆ ಕರೆದುಕೊಂಡು ಹೋಗುವುದೂ ಸಾಧ್ಯವಿಲ್ಲ."

"ಏತಕ್ಕಯ್ಯ ಸಾಧ್ಯವಿಲ್ಲ ?"

"ಬ್ರಾಹ್ಮಣರ ಮನೆಗೆ ಹೊಲೆಯರ ಹುಡುಗಿಯನ್ನು ಕರೆದುಕೊಂಡು ಹೋಗಿ ಇಟ್ಟುಕೊಂಡರೆ ಪ್ರಳಯವಾದೀತು." ಎಂದು ಅರ್ಧ ನಗುತ್ತ ಹೇಳಿದ ಸುಂದರ.

ಆ ವ್ಯಂಗ್ಯನಗೆಯ ಅರ್ಥ, ಅದರ ಹಿಂದಿನ ಬೇಗುದಿ ಡಾಕ್ಟರ ಗ್ರಹಿಕೆಗೆ ಬರಲಿಲ್ಲ. "ಏನು ಸುಂದರಮೂರ್ತಿ, ವಿದ್ಯಾವಂತ ಎನ್ನಿಸಿಕೊಂಡವನು ನೀನೂ ಹೀಗೆ ಹೇಳಬಹುದೆ ?"

"ನನ್ನ ವಿಚಾರ ನಿಧಾನವಾಗಿ ಹೇಳುತ್ತೇನೆ ಡಾಕ್ಟರೆ. ನಿಮ್ಮಿಂದ ಒಂದು ಉಪಕಾರ ಆಗಬೇಕಲ್ಲ."

"ಏನು ?"

"ಚೆನ್ನಿಯನ್ನು ಹೇಗಾದರೂ ಅವಕಾಶ ಮಾಡಿಕೊಂಡು ನಿಮ್ಮ ಆಸ್ಪತ್ರೆಯಲ್ಲಿ ಇರಿಸಿಕೊಳ್ಳಬೇಕು."

"ಅದು ಸಾಧ್ಯವಿಲ್ಲ ಸುಂದರಮೂರ್ತಿ. ನಾನು ಹಾಗೇನಾದರೂ ಮಾಡಿದರೆ ನಿಮ್ಮ ಊರಿನವರೆಲ್ಲಾ ಸೇರಿಕೊಂಡು ನನ್ನ ಮೇಲೆ ಡಿ. ಎಮ್. ಓ. ಗೆ ಮೂಗರ್ಜಿ ಬರೆದುಬಿಡುತ್ತಾರೆ. ಅದರಿಂದ ನನಗೆ ಪರಿಣಾಮದಲ್ಲಿ ಏನೂ ಆಗಲಾರದೆ ಇದ್ದರೂ ಇಲ್ಲದ ತಾಪತ್ರಯ ಯಾಕೆ ಹತ್ತಿಸಿ ಕೊಳ್ಳಬೇಕು?"

ಎಲ್ಲರೂ ಒಂದಲ್ಲ ಒಂದು ವಿಧದಲ್ಲಿ ಸಮಾಜಕ್ಕೆ ಹೇಗೆ ಕಟ್ಟುಬಿದ್ದು ನಡೆಯುತ್ತಾರೆಂಬುದು ಸುಂದರಮೂರ್ತಿಗೆ ವ್ಯಕ್ತವಾಗತೊಡಗಿತು. ತಾನಾದರೂ ಸಮಾಜವನ್ನು ಎಲ್ಲ ಭಾಗದಲ್ಲೂ ಎದುರಿಸಿ ವರ್ತಿಸುವುದು ಅಸಾಧ್ಯವಾಗಿ ಕಂಡಿತು. ಹೆಜ್ಜೆ ಹೆಜ್ಜೆಗೂ ಹಾಗೆ ಎದುರಿಸಲೇಬೇಕಾದ್ದು ಆವಶ್ಯಕವೇ ಎಂಬ ಸಂದೇಹ ಮೂಡಿತು.

"ಇರಲಿ ಡಾಕ್ಟರೆ. ನೀವು ಆಸ್ಪತ್ರೆಗೆ ಹೊರಡಿ, ಹೊತ್ತಾಗುತ್ತೆ. ಈ ಹುಡುಗಿಗೆ ಅನುಕೂಲವಾಗುವ ರೀತಿಯಲ್ಲಿ ನಾನು ಏನಾದರೂ ಯೋಚನೆ ಮಾಡಿ ಅದರಂತೆ ಮಾಡುತ್ತೇನೆ. ಆಮೇಲೆ ನಾನೇ ಮತ್ತೆ ಬರುತ್ತೇನೆ. ಔಷಧಿ ಕೊಡುವಿರಂತೆ." ಎಂದು ಹೇಳಿ ಡಾಕ್ಟರನ್ನು ಕಳಿಸಿ ಕೊಟ್ಟು ಬಂದು ಗುಡಿಸಿಲಿನಲ್ಲಿ ಚೆನ್ನಿಯ ಪಕ್ಕದಲ್ಲಿ ಕುಳಿತುಕೊಂಡ.

ಒಮ್ಮೆ ಗಿಡದಿಂದ ಗಿಡಕ್ಕೆ ಹಾರಾಡುತ್ತಿದ್ದು, ಆದರ ಕಡೆಗಾಲ ಸನ್ನಿಹಿತವಾದ ಜಿಟ್ಟೆ ರೆಕ್ಕೆ ಮುದುಡಿ ನೆಲದ ಮೇಲೆ ಬಿದ್ದುಕೊಂಡಿರುವಂತೆ ಅತ್ತಿತ್ತ ಅಲುಗದೆ ಬಿದ್ದುಕೊಂಡಿದ್ದ ಚೆನ್ನಿಯನ್ನು ನೋಡಿ ಸುಂದರನ ಸೂಕ್ಷ್ಮ ಮನಸ್ಸು ತಲ್ಲಣಿಸಿಹೋಯಿತು. ಅವನು ಸ್ವಲ್ಪ ಹೊತ್ತು ಹಾಗೆಯೇ ಚೆನ್ನಿಯನ್ನು ದಿಟ್ಟಿಸಿ ನೋಡುತ್ತ ಕುಳಿತಿದ್ದ. ಅವಳ ಎದೆ ಬಿರುಸಾಗಿ ಹೊಯ್ದಾಡುತ್ತಿದ್ದು, ಉಸಿರಾಟದ ವೇಗ ತೀವ್ರವಾಗಿತ್ತು.

ಮಾದನ ಕಡೆ ತಿರುಗಿ ನೋಡಿದ. ಅವನು ಸುಮ್ಮನೆ ಮೇಲೆ ನೋಡುತ್ತ ಕೈಮುಗಿದುಕೊಂಡಿದ್ದ. ಚೆನ್ನಿಯನ್ನು ಉಳಿಸಿಕೊಡಮ್ಮ ಎಂದು ಅವನು ಮನಸ್ಸಿನಲ್ಲಿಯೇ ಊರ ಮಾರಮ್ಮನನ್ನು ಬೇಡಿಕೊಳ್ಳು

ತ್ತಿದ್ದನೋ ಏನೋ.

ಏನೋ ನಿರ್ಧರಿಸಿಕೊಂಡ ರೀತಿಯಲ್ಲಿ, ಸುಂದರಮೂರ್ತಿ ತಟ್ಟನೆ ಎದ್ದು ತೋಟದಿಂದ ಹೊರಕ್ಕೆ ಹೊರಟ. ಕಾಳನ ಗುಡಿಸಲ ಕಡೆಗೆ ನಡೆದ.

೬

ಆರಂಬದ ಕಾಲವಲ್ಲದ್ದರಿಂದ, ಇನ್ನೇನೂ ಮಾಡಲು ಕೆಲಸವಿಲ್ಲದೆ ಕಾಳೇಗೌಡ ತನ್ನ ಮನೆಯ ಮುಂದಣ ಸಾರಿಸಿದ ಅಂಗಳದಲ್ಲಿ ಸಣಬಿನ ಹಗ್ಗ ಹೊಸೆಯುತ್ತ ಕುಳಿತಿದ್ದ. ಪಕ್ಕದಲ್ಲಿಯೇ ಕುಳಿತಿದ್ದ ಲಚುಮಿ ಎಸರಿಗೆ ಸೊಪ್ಪು ' ಸೋದಿಸು 'ತ್ತಿದ್ದಳು.

ಸುತ್ತ ಎರಡು ಮೂರು ಫರ್ಲಾಂಗಿನಷ್ಟು ಸುತ್ತಳತೆಯಲ್ಲಿ ಯಾವ ಮನೆಯಾಗಲಿ ಗುಡಿಸಿಲಾಗಲಿ ಇಲ್ಲದೆ ಇದದ್ದರಿಂದ ಕಾಳೇಗೌಡನ ಮನೆ ಏಕಾಂತ ಸ್ಥಳದಲ್ಲಿನ ಆಶ್ರಮದಂತಿತ್ತು. ಕಾಳೇಗೌಡ ಲಚುಮಿಯರ ಬದಲು ಋಷಿ-ಋಷಿಪತ್ನಿ ಕುಳಿತಿದ್ದರೆ, ಕಾಳೇಗೌಡನ ಹುಲ್ಲು ಚಾವಣಿಯ ಮನೆ ( ಅಥವಾ ದೊಡ್ಡ ಗುಡಿಸಿಲು ) ಆಶ್ರಮದಂತೆಯೇ ಕಾಣುತ್ತಿತ್ತು. ಪಕ್ಕದಲ್ಲಿದ್ದ ಹೇರಾಲದ ಮರವೊಂದು ಮನೆಯ ಮೇಲೂ ಸುತ್ತಲೂ ಬಿಳಲು ಗಳನ್ನು ಬಿಟ್ಟದ್ದು ಅದಕ್ಕೆ ಒಂದು ಪ್ರಾಚೀನತೆಯ ಶೋಭೆಯನ್ನು ಕೊಟ್ಟಿತ್ತು. ತುಸು ದೂರದಲ್ಲಿ ಒಂದು ಅತ್ತಿಯ ಮರ, ಎರಡು ಮೂರು ನೇರಳೆ ಮರಗಳು. ಇವೆಲ್ಲವನ್ನೂ ಬಳಸಿ ಬಿದಿರುಮೆಳೆ ಅಲ್ಲಲ್ಲೇ ಹೊಂಗೆಯ ಮರಗಳ ಗುಂಪುಗಳು, ನಾಲ್ಕೈದು ಮಾವಿನ ಮರಗಳು. ವಿಶೇಷವೆಂದರೆ ಎಲ್ಲ ಕಡೆಯೂ ತಾನೇ ತಾನಾಗಿ ಬೆಳೆದಿದ್ದ ಮುತ್ತುಗದ ಗುಂಪಲು. ನಡು ನಡುವೆ ಲಾಂಟಾನ ಗಿಡ, ಪಾಪಾಸುಕಳ್ಳಿ, ಕತ್ತಾಳೆ ಮೊದಲಾದವುಗಳ ಹೊದರುಗಳು. ಗುಡಿಸಲಿಗೆ ಸ್ವಲ್ಪ ದೂರದಲ್ಲೇ ಒಂದು ಹೊಂಡ, ಅದರ ಪಕ್ಕದಲ್ಲಿ ಒಂದು ದೊಡ್ಡ ಬಿದಿರ ಮೆಳೆ. ಇತ್ತ ಎರಡು ಮೂರು ಫರ್ಲಾಂಗಿನ ಆಚೆ ಒಂದು ಕೆರೆ; ಸುತ್ತಮುತ್ತಣ ಗದ್ದೆ ಜಮೀನಿಗೆಲ್ಲ ಈ ಕೆರೆಯೇ ಆಧಾರವಾಗಿತ್ತು. ಅತ್ತ ಮೂರು ಮಾರಿನ, ಆಚೆಯೇ ಹೊಳೆ ಹರಿದು ಹೋಗುತ್ತಿದ್ದರೂ ವ್ಯವಸಾಯಕ್ಕೆ ಅದರಿಂದ ಏನೂ ಪ್ರಯೋಜನವಾಗುತ್ತಿರ ಲಿಲ್ಲ. ಹೀಗಿದ್ದ ಈ ಪ್ರಾಂತದಲ್ಲಿ ಕಾಳೇಗೌಡನ ಗುಡಿಸಿಲಲ್ಲದೆ ಅವನ

ಕೈಕೆಳಗೆ ಕೆಲಸಮಾಡುತ್ತಿದ್ದ ಐದಾರು ಮಂದಿ ಒಕ್ಕಲಾಳುಗಳ ಗುಡಿಸಿಲು ಗಳೂ, ಬೇರೆ ಒಬ್ಬಿಬ್ಬರು ರೈತರುಗಳ ಗುಡಿಸಿಲುಗಳೂ ಇದ್ದುವು. ಇದೆಲ್ಲಾ ಒಟ್ಟು ಸೇರಿ 'ಬಿದಿರುಮೆಳೆ.ಕೊಪ್ಪಲು' ಎಂದು ಹೆಸರು ಹೊಂದಿತ್ತು. ಹೆಸರು ಹೇಳಲು ಇದ್ದದ್ದು ಮಾತ್ರ ಒಂದೇ ಒಂದು, ಬಿದಿರುಮೆಳೆ. ಬಿದಿರುಮೆಳೆ ಕೊಪ್ಪಲಿಗೂ ಕೋಳಲೂರಿಗೂ ಸುಮಾರು ಎರಡು ಮೈಲಿ ದೂರದ ನಡಗೆ. ಊರ ಸರಹದ್ದಿನಲ್ಲೆ ಕೊಪ್ಪಲ ದಾರಿಯಲ್ಲಿ ಆಸ್ಪತ್ರೆ ಕಟ್ಟಡ, ಡಾಕ್ಟರ ಮನೆ ಇದ್ದುವು. ನಡುದಾರಿಯಲ್ಲಿ ಕೃಷ್ಣಪ್ಪನವರ ತೋಟ ಸಿಕ್ಕುತ್ತಿತ್ತು.

ಕೃಷ್ಣಪ್ಪನವರ ಅಜ್ಜಂದಿರು ಕಾಳೇಗೌಡನು ವಾಸವಾಗಿದ್ದ ಗುಡಿಸಿಲಿನಲ್ಲಿಯೇ ವಾಸವಾಗಿದ್ದುಕೊಂಡು, ಆಳುಗಳನ್ನಿಟ್ಟು ಸ್ವಂತವಾಗಿ ಬೇಸಾಯ ಮಾಡಿಸುತ್ತಿದ್ದರು. ಕೃಷ್ಣಪ್ಪನವರ ತಂದೆ ಶಾಮಣ್ಣನವರ ಕಾಲಕ್ಕೆ ಕೊಂಚ ಮಾರ್ಪಾಟಾಯಿತು. ಶಾಮಣ್ಣನವರೂ ಸ್ವಂತವಾಗಿಯೇ ಬೇಸಾಯ ಮಾಡಿಸುತ್ತಿದ್ದರೂ, 'ಕೊಪ್ಪಲ ಮನೆ' ಯಲ್ಲಿ ವಾಸವಾಗಿರಲಿಲ್ಲ; ಬೆಳೆಯುತ್ತಿದ್ದ ತಮ್ಮ ಸಂಸಾರಕ್ಕೆ ಅದು ಸಾಲದಾಗಲು, ಊರಿನಲ್ಲೇ ಭವ್ಯವಾದ ಒಂದು ಏಳು ಅಂಕಣದ ತೊಟ್ಟಿಮನೆ ಕಟ್ಟಿಸಿ, ತಮ್ಮ ವಾಸಸ್ಥಾನವನ್ನು ಅಲ್ಲಿಗೆ ಬದಲಾಯಿಸಿದರು. ಅಂದಿನಿಂದ 'ಶಾನುಭೋಗ ಶಾಮಣ್ಣನವರು' 'ತೊಟ್ಟಿಮನೆ ಶಾಮಣ್ಣ' ನವರಾದರು. ಕೃಷ್ಣಪ್ಪನವರ ಕಾಲಕ್ಕೆ ಊರಿನಲ್ಲಿ ಏಳೆಂಟು ತೊಟ್ಟಿಮನೆಗಳಾಗಿ, ಅವರು ಶಾನುಭೋಗ ಕೃಷ್ಣಪ್ಪನವರಾಗಿಯೇ ಇದ್ದರು. ಶಾಮಣ್ಣನವರು ಕೊಪ್ಪಲು ಬಿಟ್ಟಾಗ, ಅಲ್ಲಿನ ತಮ್ಮ ಗುಡಿಸಿಲ ಮನೆಯನ್ನು ತಮ್ಮ ನಂಬಿಕೆಯ ರೈತ ರಂಗೇಗೌಡನಿಗೇ 'ಇನಾಮು' ಕೊಟ್ಟುಬಿಟ್ಟರು. ರಂಗೇಗೌಡ ಮಕ್ಕಳಿಲ್ಲದೆ ಸತ್ತುಹೋದ; ಅವನ ತಮ್ಮ ಕಾಳೇಗೌಡನೇ ಮನೆಯಲ್ಲಿ ತನ್ನ ಅತ್ತಿಗೆಯೊಡನೆ ಇದ್ದ; ಅಣ್ಣ ಹೋದಾಗ ಅವನಿಗೆ ಇನ್ನೂ ಮದುವೆಯಾಗಿರಲಿಲ್ಲ. 'ಅತ್ತಿಗೆಯನ್ನೇ ಕೂಡಾವಳಿ ಮಾಡಿಕೊ, ಇಲ್ಲದೆ ಹೋದರೆ ಒಂದು ಹೆಣ್ಣು ಕಟ್ಟಿಕೋ; ಹೀಗಿರುವುದು ಮರ್ಯಾದೆ ಅಲ್ಲ' ಎಂದು ಬಂಧುಬಳಗ ಛೀಮಾರಿ ಮಾಡಿದಾಗ, ಕಾಳೇಗೌಡ ಮದುವೆಯಾದ. ಮದುವೆಯಾದ ಮೇಲೆ ಅವನ ಹೆಂಡತಿ ಲಚುಮಿಗೂ ಅವಳ ಓರಗಿತ್ತಿ ಓಬವ್ವನಿಗೂ ಕೆಲಕಾಲವಾದ ಮೇಲೆ ಮನಸ್ತಾಪವುಂಟಾಯಿತು. ಓಬವ್ವ ತುಂಬ ಚೆಲುವೆ; ಆ ಪ್ರಾಂತದ ಒಕ್ಕಲು ಹೆಣ್ಣುಮಕ್ಕಳಲ್ಲಿ ಅವಳಂಥ

ಚೆಲುವೆ ಯಾರೂ ಇರಲಿಲ್ಲ. ಕಾಳೇಗೌಡ ತಾನು ಮದುವೆಯಾಗುವುದಕ್ಕೆ ಮುಂಚೆಯೂ ಆಮೇಲೂ ಅತ್ತಿಗೆಯ ವಿಷಯದಲ್ಲಿ ಬಹಳ ಭಕ್ತಿ ಗೌರವ ಮರ್ಯಾದೆಗಳಿಂದ ನಡೆದುಕೊಳ್ಳುತ್ತಿದ್ದ. ಮೊದಲಿಂದಲೂ ಅತ್ತಿಗೆಯಲ್ಲಿ ಸಲಿಗೆಯಿದ್ದುದರಿಂದಲೂ, ಗಂಡಹೋದ ಮೇಲೆ ಅವಳು ಪರಾಧೀನಳಾದುದರಿಂದಲೂ, ಅವಳ ಕಡೆಯವರಾಗಿ ಅವಳಿಗೆ ಯಾರೂ ದಿಕ್ಕು ಇಲ್ಲದೆ ಹೋದದ್ದರಿಂದಲೂ ಅವಳನ್ನು ತುಂಬ ಆದರದಿಂದಲೇ ಕಾಣುತ್ತಿದ್ದ. ಗಂಡನ ಆ ಆದರದ ನಡೆವಳಿ ಲಚುಮಿಯ ಭಾವನೆಯಲ್ಲಿ ಪಕ್ಷಪಾತದ ವರ್ತನೆಯಾಗಿ ಕಾಣತೊಡಗಿತು. ತನಗಿಂತ ಚಲುವೆಯಾಗಿದ್ದ ಅವಳು ಗಂಡನ ಒಲವನ್ನು ಕಸಿದುಕೊಳ್ಳಬಹುದೆಂಬ ಶಂಕೆಯೂ ಹುಟ್ಟಿತು. ಆ 'ಮಾಯಾಂಗಣೆ' ತನ್ನ ಗಂಡನ ಮನಸ್ಸು ಮುರಿಯುವ ಮೊದಲೇ ಅವಳನ್ನು ಮನೆ ಬಿಟ್ಟು ಹೊರಹೊರಡಿಸಬೇಕೆಂದು ಸಂಕಲ್ಪ ಮಾಡಿದಳು. ಓರಗಿತ್ತಿಗೆ ನಾನಾಬಗೆಯಲ್ಲಿ ಕಿರುಕುಳ ಕೊಡತೊಡಗಿದಳು. ಕಾಳೇಗೌಡ ಯಾವ ಪಕ್ಷವನ್ನೂ ವಹಿಸಿಕೊಳ್ಳಲಾರದೆ ತಟಸ್ಥ ವೃತ್ತಿಯನ್ನವಲಂಬಿಸಿದನು. ಇದರಿಂದ ಲಚುಮಿಯ ಅಸೂಯಾ ಪ್ರವೃತ್ತಿಗೆ ಪ್ರೋತ್ಸಾಹ ದೊರಕದೆ ಹೋದರೂ, ಅವಳ ಛಲಸಾಧನೆಗೆ ಅಡ್ಡಿಯೇನೂ ಉಂಟಾಗಲಿಲ್ಲ. ಒಂದು ದಿನ ರಾತ್ರಿ ಲಚುಮಿ ಓಬವ್ವನನ್ನು ಗಂಡನೆದುರಿಗೆ ಅವಮರ್ಯಾದೆಯ ಮಾತುಗಳಿಂದ ಜರೆದಳು; ಓಬವ್ವ ಕಣ್ಣೀರು ಮಿಡಿದಳು; ಕಾಳೇಗೌಡನ ಎದೆ ಕರಗಿ, ಎಂದೂ ರೇಗದಿದ್ದ ಅವನು ಕಾಳಸರ್ಪದಂತೆ ಕನಲಿ ಹೆಂಡತಿಯನ್ನು ಜಜ್ಜಿಬಡಿದ. ಗಂಡ ಹೆಂಡಿರ ಬಿರುನುಡಿಗಳ ಘೋರ್ಗರೆತದ ಕೋಲಾಹಲದ ನಡುವೆ ಓಬವ್ವ ಆ ಮನೆಯಿಂದ ಕಾಲು ಕಿತ್ತು, ಕಗ್ಗತ್ತಲಿನಲ್ಲಿ, ಉಟ್ಟ ಸೀರೆಯಲ್ಲಿ ಎಲ್ಲೋ ಕಣ್ಮರೆಯಾದಳು. ಅವಳು ಎಲ್ಲಿ ಹೋದಳೆಂದು ಯಾರಿಗೂ ಗೊತ್ತಾಗಲಿಲ್ಲ.

ಓಬವ್ವ ಹಾಗೆ ಕಣ್ಮರೆಯಾದ ಕೂಡಲೆ ಲಚುಮಿಯ ಮನಸ್ಸಿನಲ್ಲಿ ಶಾಂತಿ ಸಮಾಧಾನಗಳು ಮೂಡಿದುವು. ಆದರೆ ಅತ್ತಿಗೆ ಹೊರಟುಹೋದದ್ದು ಕಾಳೇಗೌಡನ ಮನಸ್ಸಿಗೆ ಬಹು ವ್ಯಾಕುಲವನ್ನುಂಟುಮಾಡಿತು. ಅತ್ತಿಗೆಗೆ ತಾನು ತೋರುತ್ತಿದ್ದ ಭಕ್ತಿ, ಆದರ, ಮರುಕಗಳನ್ನು ಇನ್ನು ಯಾರಿಗೆ ತೋರುವುದೆಂದು ಅವನಿಗೆ ಎನ್ನಿಸಿತು. ಆಕೆಯನ್ನು ನೆನೆದಾಗಲೆಲ್ಲ ಅವನ ಹೃದಯದಲ್ಲಿ ಏನೋ ಒಂದು ಕುಟುಕು ವೇದನೆಯಾಗುತ್ತಿತ್ತು. ದೇವರು ತನ್ನ

ಚತೆಯನ್ನು ಮೆಚ್ಚುವುದಿಲ್ಲವೆಂದೂ ತೋರುತ್ತಿತ್ತು; ತನ್ನ ಹೆಂಡತಿಗೆ ಅಸಮಾಧಾನವಾಗಿದ್ದರೂ ಚಿಂತೆಯಿರಲಿಲ್ಲ, ಅತ್ತಿಗೆ ಹಾಗೆ ಮನೆ ಬಿಟ್ಟು ಹೊರಟುಹೋಗುವ ರೀತಿಯಲ್ಲಿ ತಾನು ನಡೆದುಕೊಳ್ಳಬಾರದಾಗಿತ್ತೆಂದು ಯೋಚನೆ ಬರುತ್ತಿತ್ತು. ಹಾಗೆ ಯೋಚನೆ ಬಂದಾಗ, ಅತ್ತಿಗೆಯನ್ನು ಹುಡುಕಿ ಕರೆದುಕೊಂಡು ಬರೋಣವೇ ಎಂದು ಹಂಬಲಿಕೆಯಾಗುವುದು; ಮರು ಗಳಿಗೆಯೇ, ಕರೆದುಕೊಂಡು ಬಂದರೆ ಅತ್ತಿಗೆಗೂ ಸುಖವಿಲ್ಲ, ಸಂಸಾರ ದಲ್ಲಿ ತನಗೂ ನೆಮ್ಮದಿಯಿಲ್ಲ, ದೇವರು ಅವಳನ್ನು ಹೇಗಾದರೂ ಕಾಪಾಡು ತ್ತಾನೆ—ಎಂಬ ಸಮಾಧಾನ ಮಾಡುವುದು. ಈ ಸಮಾಧಾನ ಕೆಲವು ಕಾಲ ಮಾತ್ರ ಇರುತ್ತಿತ್ತು; ಮತ್ತೆ ಅತ್ತಿಗೆಯ ಮೇಲಣ ಮರುಕ ಅವನ ಹೃದಯ ವನ್ನು ಹಿಂಡುತ್ತಿತ್ತು. ತನ್ನ ಹಂಬಲಿಕೆ ತಡೆಯದಾಗಲು, ಒಂದು ದಿನ ಅವನು ಲಚುಮಿಯನ್ನು ಬಹುವಾಗಿ ಬೇಡಿಕೊಂಡ: 'ಅತ್ತಿಗೆಯನ್ನು ತಾನು ಹುಡುಕಿ ಕರೆತಂದರೆ ಅವಳಿಗೆ ಇರಲು ಎಡೆಕೊಡು' ಎಂದು. ಲಚುಮಿ, "ಬೇಕಾದರೆ ನಾನೇ ಮನೆಬಿಟ್ಟು ಹೊರಟುಹೋಗುತೇನಿ. ಓಬವ್ವನನ್ನು ಕಟ್ಟಿ ಕೊಂಡು ನೀನು ಸುಖವಾಗಿ ಸಂಸಾರ ಮಾಡಿಕೊಂಡಿರು" ಎಂದು ಉತ್ತರ ಕೊಟ್ಟಳು. ಇದರಿಂದ ಹೆಂಡತಿಯ ಮನಸ್ಸು ಹೇಗಿದೆ ಎಂಬುದು ಕಾಳನಿಗೆ ಮನದಟ್ಟಾಯಿತು; ಅವಳೊಡನೆ ವಾದಿಸಿ ಪ್ರಯೋಜನವಿಲ್ಲವೆಂದು ತೆಪ್ಪನಾದ. ಆದರೆ, ಓಬವ್ವನ ವಿಚಾರವಾಗಿ ಅವನ ಎದೆಗುದಿ ಮಾತ್ರ ಹಿಂಗಲಿಲ್ಲ. ಎಂದಾದರೊಮ್ಮೆ ಅವಳ ವಿಚಾರವಾದ ಯೋಚನೆ ಬಲವಾದಾಗ, ಏನು ಮಾಡುವುದಕ್ಕೂ ತೋರದೆ ಹೋದರೆ, ಮನೆಬಾಗಿಲ ಮುಂದೆ ಸುಮ್ಮನೆ ಸಣಬಿನ ಹಗ್ಗ ಹೊಸೆಯುತ್ತ ಕುಳಿತುಬಿಡುತ್ತಿದ್ದ. ಎಷ್ಟು ಹೊತ್ತಾದರೂ ಹೊಸೆತ ಮುಗಿಯುತ್ತಲೇ ಇರಲಿಲ್ಲ. ಹಿಟ್ಟು ಆರಿ ತಂಗಳಾಗಿದ್ದರೂ ಮೇಲ ಕ್ಕೇಳುತ್ತಿರಲಿಲ್ಲ. ಗಂಡನ ಯೋಚನೆಗೆ ಕಾರಣ ಏನೆಂಬುದು ಲಚುಮಿಗೆ ಹೊಳೆ ಯದೆ ಇರಲಿಲ್ಲ. "ನಿಮಗೆ ನನ್ನ ಹಿಟ್ಟು ರುಚಿಸೋಕಿಲ್ಲವೇನೋ, ಓಬವ್ವ ಬಂದು ಹಿಟ್ಟು ಮಾಡಬೇಕೇನೋ!" ಎಂದು ಅವಳು ಹಂಗಿಸುತ್ತಿದ್ದಳು. ಓಬವ್ವನನ್ನು ಕರೆದುಕೊಂಡು ಬರುವುದಂತೂ ಇಲ್ಲ, ಇನ್ನು ಹೆಂಡತಿಯ ಕೂಡ ಯಾಕೆ ವಿರಸ ಎಂದು ಹಿಟ್ಟುಣ್ಣಲು ಏಳುತ್ತಿದ್ದನು. ಹೀಗೆಯೇ ಕೆಲವು ತಿಂಗಳು ಕಳೆದುವು. ಓಬವ್ವ ಕೃಷ್ಣಪ್ಪನವರ ತೋಟದ ಕೊಳದಲ್ಲಿ ಬಿದ್ದು

ಸತ್ತಳೆಂದೂ, ಪಿಶಾಚಿಯಾಗಿ ತೋಟದ ಸುತ್ತಮುತ್ತ ಅಲೆಯುತ್ತಿದ್ದಾಳೆಂದೂ, ಹಗಲು ವೇಳೆ ಕೂಡ ಒಬ್ಬಿಬ್ಬರ ಕಣ್ಣಿಗೆ ಬಿದ್ದಿದ್ದಾಳೆಂದೂ ಕೊಪ್ಪಲಿನಲ್ಲೂ ಕೋಳಲೂರಿನಲ್ಲೂ ವದಂತಿ ಹಬ್ಬಿತು. ಆದರೆ ಎಂದೂ ಓಬವ್ವನ ಹೆಣ ಮಾತ್ರ ತೋಟದ ಕೊಳದಲ್ಲಿ ತೇಲಿಬಂದದ್ದನ್ನು ಯಾರೂ ಕಂಡಿರಲಿಲ್ಲ. ಅವಳು ಭಾರಿ ಕಲ್ಲುಗುಂಡು ಕಟ್ಟಿಕೊಂಡು ಮುಳುಗಿಬಿಟ್ಟಿರಬೇಕೆಂದೂ, ಆದ್ದರಿಂದ ಹೆಣ ತೇಲಿಬರಲಿಲ್ಲವೆಂದೂ 'ಪಿಶಾಚಿ-ವಾದಿ' ಗಳ ತರ್ಕ. ಊರವರೆಲ್ಲಾ ಕೃಷ್ಣಪ್ಪನವರನ್ನು ಕೇಳುತ್ತಿದ್ದರು: ಕಾರಣ, ತೋಟ ಅವರದ್ದು. ತೋಟ ಅವರದಾದ ಮಾತ್ರಕ್ಕೆ ತೋಟದಲ್ಲಿ ನಡೆಯುವುದೆಲ್ಲ ಅವರಿಗೆ ಹೇಗೆ ತಿಳಿವಳಿಕೆಗೆ ಬರಬೇಕು? ಅವರೇನು ತೋಟದಲ್ಲಿ ವಾಸವಾಗಿರಲಿಲ್ಲ. ದಿನಕ್ಕೆ ಒಂದು ಸಲ ಯಾವಾಗಲಾದರೂ ಬಿಡುವಾದಾಗ ತೋಟಕ್ಕೆ ಹೋಗುತ್ತಿದ್ದುದುಂಟು. ಅಂಥಾದ್ದೇನಾದರೂ ಅನಾಹುತ ನಡೆದಿದ್ದರೆ ಅದು ಖಂಡಿತ ತಮ್ಮ ನಚ್ಚಿನ ತೋಟದ ಆಳು ಮಾದನ ಗಮನಕ್ಕೆ ಬಂದಿರಬೇಕು. ಆದರೆ ಅವನು ತಮಗೆ ಈ ವಿಚಾರವಾಗಿ ಏನೂ ಹೇಳಿರಲಿಲ್ಲ. ಆದ್ದರಿಂದ ಈ ವಿಷಯ ತಮಗೆ ಏನೂ ತಿಳಿಯದೆಂದೂ ಕೃಷ್ಣಪ್ಪನವರೇ ಹೇಳುತ್ತಿದ್ದರು. ಮಾದನೆದುರಿಗೆಯೇ ಯಾರೋ ಒಂದು ದಿನ ಕೃಷ್ಣಪ್ಪನವರನ್ನು ಪ್ರಶ್ನಿಸಿದಾಗ, "ನಾನು ಕಿಟ್ಟಪ್ಪನವರ ತೋಟಕ್ಕೆ ಕಾವಲಿರುವಾಗ ಯಾವ ನರಪಿಳ್ಳೆನೂ ಸುಳಿಯೋಕಿಲ್ಲ. ನಾನೇ ಪಿಶಾಚ ಇರೋವಾಗ ಇನ್ನು ಯಾವ ಪಿಶಾಚ ಬಂದಾತು" ಎಂದು ಮಾದ ಉತ್ತರ ಕೊಟ್ಟಿದ್ದ. ಆದರೆ, ಮಾದನ ಕಣ್ಣಿಗೂ ಮಣ್ಣೆರಚಿ ಕೆಲವು ತೊಂಡು ಹುಡುಗರು ಬಾಳೆಯೆಲೆ, ಎಳನೀರು ಮುಂತಾದ್ದನ್ನು ಕದಿಯಲು ಕೃಷ್ಣಪ್ಪನವರ ತೋಟಕ್ಕೆ ದಾಳಿಯಿಡುತ್ತಿದ್ದರು. ಹಗಲು ಹೊತ್ತಿನಲ್ಲಿ ಓಬವ್ವನ ಪಿಶಾಚಿ ಕಂಡ ಕಥೆ ಹುಟ್ಟಿಸಿದವರು ಅವರು. ಅಂತೂ ಓಬವ್ವ ಪಿಶಾಚಿಯಾಗಿ ಅಲೆಯುತ್ತಿದ್ದಾಳೆಂದು ಊರಿನವರ ಬಲವಾದ ನಂಬಿಕೆ. ಕಾಳನ ಹೆಂಡತಿ ಕೂಡ ಅತ್ತಿಗೆಯ ಪಿಶಾಚವನ್ನು ತಾನು ಕೆಲವು ಸಲ ಕಣ್ಣಾರೆ ಕಂಡಿದ್ದುದಾಗಿ ಗಂಡನಿಗೆ ಹೇಳುತ್ತಿದ್ದಳು. ಕಾಳ ಅಂತಹದೇನನ್ನೂ ಕಂಡಿರಲಿಲ್ಲ. ಆದರೆ, ಅವನ ಮೊದಲ ಹುಡುಗ ಪುಟ್ಟ ಹುಟ್ಟುವುದಕ್ಕೆ ಕೆಲವು ಕಾಲ ಮುಂಚೆ ನಡುರಾತ್ರಿಯಲ್ಲಿ ಯಾರೋ ತೀವ್ರ ಯಾತನೆಯಿಂದ ನರಳುತ್ತಿದ್ದಂತೆ ಕೇಳಿತವನಿಗೆ. ಸ್ವಲ್ಪ

ಕಿವಿಗೊಟ್ಟು ಆಲಿಸಿದ ಮೇಲೆ ಓಬವ್ವನ ಧ್ವನಿಯಂತೆ ತೋರಹತ್ತಿತ್ತು. ಬರುಬರುತ್ತ ಧ್ವನಿ ಹತ್ತಿರಕ್ಕೆ ಬಂದಂತಾಗಿ ಓಬವ್ವನ ಧ್ವನಿಯೇ ಎಂದು ಅವನಿಗೆ ಸ್ಪಷ್ಟವಾಯಿತು. ಹೊರಕ್ಕೆ ಹೋಗಿ ನೋಡಿಕೊಂಡು ಬರೋಣ ವೆಂದು ಅವನಿಗೆ ಪ್ರಬಲವಾದ ಬಯಕೆಯಾಯಿತು. ಏನೋ ತೋರಿ, ಲಚುಮಿಯನ್ನು ಎಬ್ಬಿಸಿ, "ಓಬವ್ವನ ಧ್ವನಿ ಹಂಗಿಲ್ಲವಾ?" ಎಂದು ಕೇಳಿ ಬಿಟ್ಟ. ಅವಳೂ ಕಿವಿಗೊಟ್ಟು ಆಲಿಸಿ, ಅದು ಓಬವ್ವನದಲ್ಲವೆಂದೂ, ಅವಳ ಪಿಶಾಚವೆಂದೂ ಹೇಳಿದಳು. ಏನಾದರೂ ಆಗಲಿ ನೋಡಿಕೊಂಡು ಬರೋಣ ವೆಂದು ಕಾಳನ ಕುತೂಹಲ: ನಿಜವಾಗಿ ಓಬವ್ವನೇ ಆಗಿಬಿಟ್ಟಿದ್ದರೆ ಅವಳನ್ನು ಒಳಕ್ಕೆ ಕರೆದು, ಇರಲು ಬೇಡಿಕೊಳ್ಳಬೇಕೆಂದು ಅಂತರ್ಯದ ಬಯಕೆ. ಲಾಟೀನು ಹೊತ್ತಿಸಿದ. "ನಿನಗೇನು ಬುದ್ಧಿ ನೆಟ್ಟಗಿದೆಯೋ ಇಲ್ಲವೊ? ಪಿಶಾಚಾನ ಮಾತನಾಡಿಸಿದೋರುಂಟೆ? ಸುಮ್ಮಗೆ ಮಲಗಿಕೊ. ಹೋದರೆ ನನ್ನ ಬಸುರಿನ ಆಣೆ." ಎಂದು ಲಚುಮಿ ಅಡ್ಡನುಡಿದು, ತಡೆಗಟ್ಟಿದಳು. "ಅವ್ವಾ ಮಾರವ್ವಾ, ಮುಂದಿನ ಜಾತ್ರೇಲಿ ನಿಂಗೆ ಎರಡು ಕೋಳಿ ಒಪ್ಪಿಸ್ತೀನೆ. ಅತ್ತಿಗೆ ಉಪದ್ರ್ಯಾನ ನಿಲ್ಲಿಸು ತಾಯಿ" ಎಂದು ಮಾರಮ್ಮ ನಿಗೆ ಹರಕೆ ಹೊತ್ತಳು. ಕಾಳ ಬಸುರಿಯಾಗಿದ್ದ ಹೆಂಡತಿಯ ಕಟ್ಟೋಲು ಮೆಯ ಕಟ್ಟಾಜ್ಞೆಗೆ ತಲೆಬಾಗಿ, ದೀಪ ಆರಿಸಿ ಮಲಗಿಕೊಂಡ. ಈ ಪ್ರಸಂಗ ನಡೆದು ಕೆಲವು ದಿನಗಳಾದ ಮೇಲೆ ಲಚುಮಿ ಪುಟ್ಟನನ್ನು ಹಡೆದಳು. ಕಾಳ ನಿಗೆ ಪುತ್ರೋತ್ಸವವಾದ ಮೇಲೆ ತನ್ನ ಮಡದಿಯ ವಿಷಯದಲ್ಲಿ ಹಿಂದೆ ಇಲ್ಲ ದಿದ್ದ ವಿಶೇಷ ಬಗೆಯ ಪ್ರೇಮಭಾವ ಹುಟ್ಟಿತು. ಪುಟ್ಟ ಬಳೆಬಳೆದಂತೆ ಓಬವ್ವನ ನೆನಪು ಅವನ ಮನಸ್ಸಿನಿಂದ ಅಳಿಸಿಹೋಗುತ್ತ ಬಂತು. ಓಬ ವ್ವನ ಪಿಶಾಚ ಕೂಡ ಕಾಳನ ಮನೆಯ ಸುತ್ತಮುತ್ತ ಹಿಂದೆ ಕಾಣಿಸಿಕೊಳ್ಳು ತ್ತಿದ್ದಂತೆ ಲಚುಮಿಗೆ ಕಾಣಿಸಿಕೊಳ್ಳುವುದು ನಿಂತುಹೋಯಿತು. ತನ್ನ ಹರಕೆ ಫಲಿಸಿತೆಂದು ಲಚುಮಿ ತುಂಬ ಹಿಗ್ಗಿದಳು. ಪುಟ್ಟನಿಗೆ ವರ್ಷ ತುಂಬಿದಾಗ, ಮಾರಿಯ ಜಾತ್ರೆಯಲ್ಲಿ ಅಮ್ಮನಿಗೆ ಎರಡು ಜೊತೆ ಕೋಳಿ ಒಪ್ಪಿಸಿದಳು.

## ೨೦

ಇಂದು ಕಾಳನ ಮನಸ್ಸಿನಲ್ಲಿ ಯಾವ ಬಗೆಯ ಆಲೋಚನೆಯೂ

ಒತ್ತುತ್ತಿರಲಿಲ್ಲ; ಸಮಾಧಾನಮನಸ್ಕನಾಗಿಯೇ ಸಣಬಿನ ಹಗ್ಗ ಹೊಸೆಯು ತ್ತಿದ್ದ. ಬಹಳ ಹಿಂದೆ, ಓಬವ್ವನ ವಿಚಾರವನ್ನು ಇವನು ಮನಸ್ಸಿಗೆ ಹಚ್ಚಿಸಿ ಕೊಂಡಿದ್ದಾಗ, ಯೋಚನೆಯ ಭರದಲ್ಲಿ ಎಷ್ಟು ಬೇಕಾದರೂ ಹಗ್ಗ ಹೊಸೆದು ಬಿಡುತ್ತಿದ್ದ. ಆಗ, ಇವನ ಮನಸ್ಸಿನ ಬಗೆ ಅರಿತ ಲಚುಮಿ ಇವನ ಪಾಡಿಗೆ ಇವನನ್ನು ಬಿಟ್ಟುಬಿಡುತ್ತಿದ್ದಳು; ಇಲ್ಲವೆ ಹಂಗಿಸಿ ಒಂದೆರಡು ಮಾತಾಡು ತ್ತಿದ್ದಳು. ಇತ್ತೀಚೆಗೆ, ಮಾಡಲು ಏನೂ ಕೆಲಸ ಇಲ್ಲದೆ ಹೋದರೆ, ಇಲ್ಲವೆ ಏನೂ ತೋಚದೆ ಹೋದರೆ, ಹಗ್ಗ ಹೊಸೆಯಲು ಕುಳಿತುಕೊಳ್ಳುತ್ತಿದ್ದ. ಇವನು ಹಗ್ಗ ಹೊಸೆಯಲು ಕುಳಿತರೆ ಸರಿ, ಲಚುಮಿ ಬಂದು ತಾನೂ ಏನಾದರೂ ಕೆಲಸಮಾಡುತ್ತ, ಗಂಡನನ್ನು ಮಾತಾಡಿಸುತ್ತ ಪಕ್ಕದಲ್ಲಿ ಕುಳಿತುಬಿಡುತ್ತಿದ್ದಳು. ಲಚುಮಿ ತಲೆಬಗ್ಗಿಸಿಕೊಂಡು ಮಾತಾಡುತ್ತಲೇ ತನ್ನ ಕೆಲಸ ಸಾಗಿಸುವಳು; ಕಾಳನ ವಿಷಯ ಮಾತ್ರ ಹಾಗಲ್ಲ: ಅವನ ಮಾತು ಮುಂದಾದರೆ ಕೈ ಓಡದು; ಅಥವಾ ತನ್ನ ಮಾತು ನಿಂತು ಹೆಂಡತಿಯ ಮಾತು ಮೊದಲಾದರೂ ಕೂಡ, "ತನ್ನ ಹೆಂಡತಿ ಏನು ಚೆನ್ನಾಗಿದಾಳೆ! ಏನು ಚೆನ್ನಾಗಿ ಮಾತನಾಡುತಾಳೆ! ತನ್ನಲ್ಲಿ ಏನು ಪ್ರೀತಿ ಅವಳಿಗೆ!" ಎಂದು ಹೆಂಡತಿಯ ಗುಣಾವಳಿಯ ಪರಿಭಾವನೆಯಲ್ಲೆ ಮಗ್ನನಾಗಿಹೋಗುತ್ತಿದ್ದ; ಸುಖದಾಯಕವಾದ ಈ ಪರಿಭಾವನೆಯಲ್ಲೆ ಮುಳುಗಿದ್ದಾಗ, ಹೆಂಡತಿ ಏನು ಹೇಳಿದಳು ಎನ್ನುವುದರ ಕಡೆ ಕೆಲವೊಮ್ಮೆ ಗಮನ ತಪ್ಪುತ್ತಿತ್ತು. ಇಂಥ ಸಂದರ್ಭಗಳಲ್ಲಂತೂ ಅವನ ಕೈ ಸಂಪೂರ್ಣವಾಗಿ ನಿಂತೇಹೋಗುತ್ತಿತ್ತು.

"ಏನಂದೆ?" ಎಂದ ಕಾಳ.

"ಅದೇನೋ ಗಾದೆ ಹೇಳಿದ ಹಂಗೆ. ರಾತ್ರೀನೆಲ್ಲಾ ರಾಮಣ್ಣ ಕೇಳಿ ಬೆಳಗಾಗ ರಾಮಂಗೂ ಸೀತೆಗೂ ಏನು ಸಂಬಂಧ, ಅಂದರಂತೆ. ನಾನು ಈಟು ಹೊತ್ತು ಹೇಳಿದ್ದೆಲ್ಲಾ ಕೇಳಿಸಲಿಲ್ಲವಾ? ಏನು ಹಗ್ಗ ಹೊಸೆದದ್ದೂ ಹೊಸೆಯದ್ದೇ, ಚೋಟುದ್ದ ಕೂಡ ಆಗ್ನಿಲ್ಲ. ಊರಿಗೆ ಬಂದು ಗಾಡಿ ಬಿಚ್ಚಿದೋನು ಎತ್ತುಗಳನ್ನು ಹೊಳೇಗೆ ಹೈಕಳ ಕೂಡ ಕಳಿಸಿ, ಹಗ್ಗ ಹೊಸೀತಾ ಕುಂತಿದ್ದಿ. ಹೈಕಳು ಎಲ್ಲಾರೂ ಹೊಳೆಗೆ ಮಗುಚಿಕೊಳ್ಳಲು ನೀನೇ ಹೋಗೋಕೇನಾಗಿತ್ತು?"

"ಅವರು ಕೆಲಸ ಕಲಿತುಕೊಳ್ಳುವುದು ಯಾವಾಗ? ಹೊಳೇವೊಳಗೆ

ಮೊಸಳೆ, ಕೆರೇ ಒಳಗೇ ಕಪ್ಪೆ, ತೋಟದೊಳಗೆ ಓಬವ್ವನ ಪಿಶಾಚಿ ಅಂತ ಹೈಕಳ್ನ ಹಟ್ಟೀಲೇ ಮಡಿಕೊಂಡಿದ್ರೆ ಅವಕ್ಕೆ ಕೆಲಸ ಬರ್‍ತದೇನು ? "

" ಅದೇನು ಕೆಲಸ ಕಲಿಸೋದೊ ನಾನು ಬೇರೆ ಕಾಣೆ. ಎಲ್ಲರೂ ಓದು ಬರಾವು ಕಲಿಸಿ ಅಂತ ಹೇಳ್ತಾರೆ, ನೀನು ಕೆಲಸ ಕಲಿಸ್ತೀನಿ ಅಂತಿ. ಪುಟ್ಟಿ ಒಬ್ಬ ಸಾಲದೆ ಕೆಲಸಕ್ಕೆ ? ಕಾಡನ್ನ ಇಸ್ಕೂಲಿಗೆ ಕಳಿಸಿ ಅಂತ ಹೋದ ವರ್ಷ ಉಪಾದ್ರು ಮನೆ ಬಾಗಿಲಿಗೆ ಬಂದು ಕರೆದು ಕೇಳಿದರು. ನೀನು ಒಲ್ಲೆ ಅಂದೆ. ಸುಂದರಪ್ಪನು ಹೇಳಲಿಲ್ಲವಾ ಹೋದ ವರ್ಷ ? ಮೈಸೂರಿನಲ್ಲಿ ಸುಂದರಪ್ಪನ ಜೊತೆ ಒಬ್ಬ ಹೊಲೇರ ಹುಡುಗ ಓದುತಾ ಅವ್ನಂತೆ. ಹೊಲೇರಿಗಿಂತ ಕಾಳಾದವಾ ನಾವು ? "

ಲಚುಮಿಯ ಪ್ರಶ್ನೆಗೆ ಉತ್ತರ ಹೇಳಲು ಕಾಳನಿಗೆ ಏನೂ ತೋರಲಿಲ್ಲ. ಕೈ ಸ್ವಲ್ಪ ಚಟುವಟಿಕೆಗೊಂಡವು. " ಸುಂದರಪ್ಪ ನನಗೂ ಹೇಳಿದ್ದ. ಈವೊತ್ತೂ ಮುಂಜಾನೆ ಗಾಡೀಲಿ ಹೇಳ್ದ. "— ಇಷ್ಟು ಮಾತು ಕಾಳನ ಬಾಯಿಂದ ಹೊರಬಿದ್ದುವು. ಹಗ್ಗದ ಹೊಸೆತ ಮುಂದುವರಿಯಿತು; ಲಚುಮಿ ಮೌನವನ್ನವಲಂಬಿಸಿ ಸೊಪ್ಪು ಸೋದಿಸತೊಡಗಿದಳು.

ಸುಂದರಮೂರ್ತಿಯ ಹೆಸರು ಕಾಳನ ಬಾಯಿಂದ ಹೊರಟು ಎರಡು ನಿಮಿಷ ಕೂಡ ಆಗಿರಲಿಲ್ಲ. ಸುಂದರಮೂರ್ತಿ ಧಾವಿಸುತ್ತ " ಕಾಳ, ಕಾಳ " ಎಂದು ಕೂಗಿಕೊಂಡು ಬಂದು ಎದುರಿನಲ್ಲಿ ನಿಂತ.

ಕಾಳ ಎದ್ದು ನಿಂತ; ಲಚುಮಿ ನೆಲದ ಮೇಲಿನ ಸೊಪ್ಪನ್ನೆಲ್ಲ ಮೊರಕ್ಕೆ ಹಾಕಿಕೊಂಡು, ತಲೆಯ ಮೇಲೆ ಮುಸುಕೆಳೆದುಕೊಂಡು ಸ್ವಲ್ಪ ದೂರ ಹೋಗಿ ನಿಂತಳು. " ಸುಂದರಪ್ಪ, ಈಗ ತಾನೇ ನಿನ್ನ ಹೆಸರು ಹೇಳಿದೆವು. ನಿನಗೆ ನೂರು ವರ್ಷ ಆಯುಸ್ಸು " ಎಂದು ಹಾರೈಕೆ ಮೂಡಿತು ಕಾಳನ ಮನಸ್ಸಿನಲ್ಲಿ. ಆದರೆ, ಸುಂದರಮೂರ್ತಿಯ ಉದ್ವೇಗವನ್ನು ಕಂಡು, ಮೂಡಿದ ಹಾರೈಕೆ ಮಾತು ತಳೆಯದೆ ಮನಸ್ಸಿನಲ್ಲೇ ಉಳಿಯಿತು.

" ಏನು ಸುಂದರಪ್ಪ ಸಮಾಚಾರ ? ದೊಡ್ಡಬುದ್ಧಿಯೋರು ಹೇಳಿಕಳಿಸಿದರೋ ಹೆಂಗೆ ? "

" ಸ್ವಲ್ಪ ತುರ್ತು ಕೆಲಸ ಇದೆ. ಮೊದಲು ಗಾಡಿ ಕಟ್ಟು. " ಎಂದ ಸುಂದರ.

"ಗಾಡಿ ಕಟ್ಟು! ಇದೇನು ಸುಂದರಪ್ಪ? ಏನು ಸಮಾಚಾರ?"—ಆಶ್ಚರ್ಯಕುತೂಹಲಗಳಿಂದ ಕೇಳಿದ ಕಾಳ.

"ನೀನು ಮೊದಲು ಕಟ್ಟಬಾರದೆ. ಆಮೇಲೆ ಎಲ್ಲಾ ಹೇಳ್ತೀನಿ. ಹೇಳೋದೇನು, ಎಲ್ಲಾ ನಿಂಗೇ ಗೊತ್ತಾಗುತ್ತೆ. ನೀನು, ಮೊದಲು ಗಾಡಿ ಕಟ್ಟು, ಒಂದು ನಿಮಿಷ ಕೂಡ ಕಳೆಯೋದಕ್ಕೆ ಈಗ ಸಮಯವಿಲ್ಲ."

ಕಾಳನಿಗೆ ದೊಡ್ಡಬುದ್ಧಿಯೋರ ಆಣತಿ ಎಷ್ಟರಮಟ್ಟಿಗೆ ಕಡ್ಡಾಯವಾಗಿ ಪಾಲನೀಯವೋ ಪುಟ್ಟಬುದ್ಧಿಯೋರ ಆಣತಿಯೂ ಅಷ್ಟೇ ಮಟ್ಟಿಗೆ ಪಾಲನೀಯ ಎಂಬ ಭಾವನೆ. ಸ್ವಾಮಿಭಕ್ತಿಯ ಜೊತೆಗೆ ಸುಂದರ ವಿದ್ಯಾವಂತ ಎಂಬ ಗೌರವ ಬೇರೆ.

"ಇಲ್ಲೆ ಇರಿ ಬುದ್ಧಿ. ಹೈಕಳು ಈಗ ತಾನೇ ಎತ್ತುಗಳನ್ನು ಹೊಳೆಗೆ ಹೊಡೆದುಕೊಂಡು ಹೋಗಿದಾರೆ. ನಾನೇ ಹೋಗಿ ಬಿರ್‍ನೆ ಬರುತ್ತೀನೆ" ಎಂದು, ಏನು ತುರ್ತಿನ ಸಮಾಚಾರವೋ ಎಂದು ಹಳ್ಳ, ದಿಣ್ಣೆ, ಕಲ್ಲು, ಮುಳ್ಳು ಎಂಬ ಪರಿವೆಯಿಲ್ಲದೆ ಕಾಳ ಹೊಳೆಯ ಕಡೆಗೆ ಧಾವಿಸಿದ.

ಇತ್ತ ಸುಂದರ ಕಾಳನ ಮನೆಯ ಮುಂದಣ ಅಂಗಳದಲ್ಲಿ ಹಿಂಗೈ ಕಟ್ಟಿಕೊಂಡು ಶತಪಥ ತಿರುಗಾಡುತ್ತಿದ್ದ. ಚೆನ್ನಿಯನ್ನು ಎಲ್ಲಿಗೆ ಕರೆದುಕೊಂಡು ಹೋಗಿಬಿಡುವುದು, ಎಂಬ ವಿಷಯದಲ್ಲಿ ಅವನ ಮನಸ್ಸು ಇನ್ನೂ ನಿರ್ಧಾರಕ್ಕೆ ಬಂದಿರಲಿಲ್ಲ. ತಮ್ಮ ಮನೆಯಲ್ಲಿ ಚೆನ್ನಿಯನ್ನು ಇರಿಸಿಕೊಳ್ಳಲು ಖಂಡಿತವಾಗಿಯೂ ತನ್ನ ತಂದೆ ತಾಯಿ ಒಪ್ಪಲಾರರು. ಒಂದು ವೇಳೆ ಅವರನ್ನು ಹೇಗಾದರೂ ಮಾಡಿ ಒಪ್ಪಿಸಿದರೂ. ಕೇರಿಯ ಜನ ಇರಿಸಗೊಡಿಸರು. ತಮ್ಮ ಕೇರಿಯಲ್ಲಿ ಹೊಲೆಯನ ನೆರಳು ಹಾಯಗೊಡದವರು ಮಾದಿಗನ ಮಗಳನ್ನು ತಮ್ಮ ಜಾತಿಯವರ ಮನೆಯಲ್ಲಿ ಎಲ್ಲಾದರೂ ಇರಿಸಗೊಡಿಸುವರೆ? ತಂದೆ ತಾಯಿ ಒಪ್ಪಿದ ಭಾಗದಲ್ಲಿ, ಕೇರಿಗೆ ಕೇರಿಯೇ ಅಲ್ಲ, ಊರಿಗೆ ಊರೇ ಕೆರಳಿದರೂ ತಾನು ಎದುರಿಸಲು ಸಿದ್ಧ—ಅಂದು ತಾನು ಒಬ್ಬೊಂಟಿಗನಲ್ಲ, ಕುಟುಂಬವೇ ತನ್ನ ಜೊತೆಗಿರುವುದು. ಆದರೆ ತನ್ನ ತಂದೆ ಒಪ್ಪುವರೆ? ಅವರು ಮೃದುಹೃದಯಿ. ಮಾದ ಮತ್ತು ಚೆನ್ನಿ ಇವರಲ್ಲಿ ಅವರ ವಿಶ್ವಾಸ ತುಂಬ ಎಂದು ಸುಂದರನಿಗೆ ಗೊತ್ತು. ತನ್ನ ತಂದೆ ಇತರರಷ್ಟು ಸಂಕುಚಿತ ಮನಸ್ಸಿನವರಲ್ಲ, ಎಲ್ಲ ಭಾಗದಲ್ಲೂ ಉದಾರಿಗಳೂ ಎಂಬುದೂ ಗೊತ್ತಿತ್ತು.

ಆದರೆ, ಅವರು ಸಮಾಜದ ಕಟ್ಟಳೆ ಮೀರಿ ನಡೆಯುವಷ್ಟು ಕೆಚ್ಚು ತೋರ ಲಾರರೆಂಬುದು ಸುಂದರನ ಶಂಕೆ. ಅಥವಾ ಕಾಳ ಒಪ್ಪಿದರೆ ಕಾಳನ ಮನ ಯಲ್ಲೆ ಏಕೆ ಬಿಡಬಾರದು? ಕಾಳ ಒಪ್ಪಬೇಕಾದರೆ ಲಚುಮಿ ಒಪ್ಪಬೇಕು. ಆಗಲಿ, ಲಚುಮಿಯನ್ನು ಕೇಳಿಬಿಡುವುದು ಎಂದು ನಿರ್ಧರಿಸಿದ ಸುಂದರ.

ಸುಂದರ ಹಾಗೆ ಯೋಚನೆ ಮಾಡುತ್ತಿದ್ದಾಗ ನಡುವೆ "ಬುದ್ಧೀ" ಎಂದು ಮೆಲುದನಿಯೊಂದು ಇವನನ್ನು ಎಚ್ಚರಿಸಿತು. ತಮಟೆ ಹೊಡೆ ದರೂ ಕೇಳದಷ್ಟು ಯೋಚನೆಯಲ್ಲಿ ಮುಳುಗಿದ್ದವನಿಗೆ ಮೆಲುದನಿಯೊಂದು ಎಚ್ಚರಿಸಿದ್ದು ಆಶ್ಚರ್ಯವೇ. ಆ ಮೆಲುದನಿಯಲ್ಲಿ ಚೆನ್ನಿಯ ಪರಿಚಯದ ಧ್ವನಿ ಕೇಳಬಂತು ಅವನಿಗೆ. ತಿರುಗಿ ನೋಡಿದ. ಕೂಗಿದವಳು ಚೆನ್ನಿ ಯಲ್ಲ, ಕಾಳನ ಮಗಳು, ಸುಮಾರು ಹದಿಮೂರು ಹದಿನಾಲ್ಕು ವಯಸ್ಸಿನ ಹುಡುಗಿ: ಕೆಂಪಿ

ನಿಜವಾಗಿಯೂ ಕೆಂಪಿಯ ಧ್ವನಿ ಚೆನ್ನಿಯ ಧ್ವನಿಯನ್ನು ಹೋಲುತ್ತಿರ ಲಿಲ್ಲ. ಸುಂದರ ಚೆನ್ನಿಯ ವಿಷಯವಾಗಿಯೇ ಆಲೋಚನೆ ಮಾಡುತ್ತಿ ದ್ದುದರಿಂದ ಎಳೆಯ ಹೆಣ್ಣಿನ ಧ್ವನಿಯೊಂದು ಕೇಳಿ ಬಂದಾಗ ಹಾಗೆನಿಸಿತು, ಅಷ್ಟೆ. ಅನೇಕ ವೇಳೆ ಮನಸ್ಸು ಮನುಷ್ಯನೊಡನೆ ಆಡುವ ಹುಡುಗಾಟಿಕೆ ಗಳಲ್ಲಿ ಇದು ಒಂದು.

ಚೆನ್ನಿ ಹೆಸರಿಗೆ ತಕ್ಕಹಾಗೆ ನಿಜವಾಗಿ ಚೆನ್ನಾಗಿದ್ದಳು. ಕೆಂಪಿ ಕೆಂಪಗಿರಲಿಲ್ಲ; ಅವಳದ್ದು ಮಾಸಲು ಕೆಂಗಂದು. ತಕ್ಕಮಟ್ಟಿಗೆ ಸುಂದರ ನಾಗಿದ್ದವನು 'ಸುಂದರಮೂರ್ತಿ'ಯಾಗುವ ಪಕ್ಷಕ್ಕೆ, ಕೆಂಗಂದು ಹುಡುಗಿ ಕೆಂಪಿಯಾಗಲು ಅಡ್ಡಿಯೇನಿರಲಿಲ್ಲ.

ಯಾವ ಕುಲದಲ್ಲಿ ಹುಟ್ಟಿದರೇನು? ಹೆಣ್ಣುತನ ಹೂವಾಗಿ ಅರಳು ತ್ತಿರುವುದನ್ನು ನೋಡಲು ಚೆಂದ. ಹಾಲುಲೋಟ ಹಿಡಿದು ನಿಂತಿದ್ದ ಕೆಂಪಿಯನ್ನು ನೋಡಿದಾಗ ಹಾಗೆ ಎನಿಸಿತು ಸುಂದರಮೂರ್ತಿಗೆ. 'ತನ್ನ' ಕಮಲೆಯಂತೆ, ಈ ಕೆಂಪಿಯಂತೆ, ಚೆನ್ನಿ ಒಂದು ಚೆಲು ಹೂವು. ಅದು ಈಗ ಬಾಡಿ ಹೋಗುತ್ತಿದೆ. ಅದು ಬಾಡದಂತೆ ಆರೈಕೆ ಮಾಡುವುದು ತನ್ನ ಕರ್ತವ್ಯ.

ಎಚ್ಚರಗೊಂಡಿದ್ದ ಮನಸ್ಸು ಮತ್ತೆ ಯೋಚನೆಯ ಎಳೆ ಹಿಡಿದಿತ್ತು.

ತಾನು ಬಂದದ್ದನ್ನು ಕಂಡೂ ತಲೆ ಬಗ್ಗಿಸಿ ಶತಪಥ ಹೋಗುತ್ತಿದ್ದ ಸುಂದರ ನನ್ನು ನೋಡಿ, "ಹಾಲು ಮಡಿಗಿವ್ನಿ, ತಕ್ಕೊಳ್ಳಿ ಬುದ್ದಿ" ಎಂದು ಎರಡು ಸಲ ಹೇಳಬೇಕಾಯಿತು ಕೆಂಪಿ.

ಸುಂದರಮೂರ್ತಿ ಬಾಗಿಲ ಕಡೆ ಬರುತ್ತಿದ್ದುದನ್ನು ನೋಡಿ ಕೆಂಪಿ ಒಳಕ್ಕೆ ಹೋದಳು; ಸುಂದರಮೂರ್ತಿ ಕಿರುಜಗಲಿಯ ಮೇಲೆ ಕುಳಿತು ಹಾಲನ್ನು ಚಪ್ಪರಿಸಿ ಕುಡಿಯುತ್ತ ಯೋಚನೆ ಮಾಡುತ್ತಲೇ ಇದ್ದ: 'ಚೆನ್ನಿಯೂ ಹೀಗೆಯೇ ಹಾಲು ತಂದು ಕೊಟ್ಟರೆ ನಮ್ಮವರು ಕುಡಿಯುವು ದಿಲ್ಲವಲ್ಲಾ!' ಎಂದು.

ಇವನು ಹಾಲು ಕುಡಿಯುತ್ತಿದ್ದಾಗ ಲಚುಮಿ ಒಳಗಿನಿಂದ ಬಂದು ಮಾತು ತೆಗೆದಳು:

"ಏಟು ಹೊತ್ತು ಹೋದರು, ಇನ್ನೂ ಬರ್‍ಲಿಲ್ಲ. ಸಮಯದಮಯ ನೋಡದೆ ಅದೇನು ತಳಾರ ಮಾಡ್ತಾರೋ ನಮ್ಮೋರು! ಮನೆಕಡೆ ಎಲ್ಲ ನೆಟ್ಟಗೆ ತಾನೆ? ಎಲ್ಲ ನೆಟ್ಟಗಿದ್ದಾರೆ ಎಂತ ಹೇಳಿದರು ನಮ್ಮೋರು. ತುರ್ತಾಗಿ ಎಲ್ಲಾದರೂ ಹಳ್ಳೀಕಡೆ ಹೊರಡಬೇಕೋ ಹೆಂಗೆ?"

ಹೇಗೂ ಲಚುಮಿಯನ್ನು ಕೇಳಬೇಕು ಅಂತ ನಿರ್ಧರಿಸಿದ್ದ ಸುಂದರ; ಅವಳೇ ಮಾತು ತೆಗೆದದ್ದರಿಂದ ಸುಂದರ ನೇರವಾಗಿ ತನ್ನ ಮನಸ್ಸು ಅವಳ ಮುಂದಿಟ್ಟ.

"ಚೆನ್ನಿಗೆ ಸಕತ್ತು ಕಾಯಿಲೆ."

"ಹ್ಞಾ! ಅಯ್ಯೋ ಪಾಪ!"

"ಸರಿಯಾಗಿ ಉಪಚಾರ ಮಾಡದೆ ಹೋದರೆ ಅವಳು ಬದುಕುವ ಹಾಗಿಲ್ಲ."

"ಆ ಕುಡುಕ ಏನು ಉಪಚಾರ ಮಾಡಾನು. ದೇವರು ಎಲ್ಲಾತ ಅವಳನ್ನ ಕಾಪಾಡಿದರೆ ಕಾಪಾಡಿದ ಹಂಗೆ."

"ದೇವರ ಮೇಲೆ ಭಾರ ಹಾಕಿದರೆ ದೇವರು 'ಚೆನ್ನಿ ನನಗಿರಲಿ, ನಿಮಗೆ ಬೇಡ' ಅಂತ ಅವಳನ್ನ ಕರಕೊಳ್ಳುತ್ತಾನೆ ಅಷ್ಟೆ. ನಿನ್ನಿಂದ ಒಂದು ಸಹಾಯ ಆಗಬೇಕಲ್ಲ ಲಚುಮಿ?"

"ಅದೇನು ಬುದ್ದಿ, ಹೇಳಿ. ಇಂಥ ಸಮಯಕ್ಕಿಂತಲಾ?"

"ಏನೂ ಇಲ್ಲ. ತೋಟದಲ್ಲಿ ಶೀತ, ಅಲ್ಲಿ ಇದ್ದರೆ ಚೆನ್ನಿ ಉಳಿಯೋಕಿಲ್ಲ. ಮನೆಯಲ್ಲಿ ಬೆಚ್ಚಗೆ ಮಲಗಿಸಿ ಉಪಚಾರಮಾಡಬೇಕು ಅಂತ ಡಾಕ್ಟರು ಹೇಳಿದಾರೆ. ನಮ್ಮ ಮನೆಗೆ ಕರೆದುಕೊಂಡು ಹೋಗೋಣ ಅಂದರೆ, ಮನೆಯೋರು ಒಪ್ಪಿದರೂ ಕೇರಿಯೋರೆಲ್ಲ ಉಗಿದೆದ್ದು ಬಿಡುತಾರೆ. ನಿಮ್ಮ ಮನೆ ದೂರವಾಗಿದೆ. ಹೇಳೋರಿಲ್ಲ ಕೇಳೋರಿಲ್ಲ. ನೀವು ಯಾರಿಗೂ ಹೆದರ ಬೇಕಾಗಿಲ್ಲ ನಮ್ಮ ಹಾಗೆ" ಎಂದು ಸುಂದರ ಲಚುಮಿಯು ಮನಸ್ಸಿಗೆ ಮುಟ್ಟುವ ಹಾಗೆ ಬಿಡಿಸಿ ಬಿಡಿಸಿ, ಹೇಳಿದ್ದನ್ನೇ ಬೇರೆ ಮಾತುಗಳಲ್ಲಿ ತಿರುಗಿಸಿ ತಿರುಗಿಸಿ ಹೇಳಿದ.

ಲಚುಮಿ ಒಪ್ಪಲಿಲ್ಲ: "ಬುದ್ದೀ, ನಾವೂ ನಿಮ್ಮ ಹಂಗೇನೆ ಜಾತಿ ನೀತಿ ಕಟ್ಟು ಉಳ್ಳೋರು. ನಾನು ಹಿಂಗೆ ಅಂದೆ ಅಂತ ಕೋಪಿಸಿಕೊಳ್ಳಬೇಡಿ ಬುದ್ದಿ. ಬ್ರಾಂಬರಿಗೆ ಮಾತ್ರ ಜಾತಿ ಕಟ್ಟು, ನಮಗಿಲ್ಲ, ಅಂತ ತಿಳೀಬೇಡಿ. ಕಂಡಿತಾ ನಾವು ಚೆನ್ನೀನ ಮಡಿಕ್ಕೊಳೋಕಾಗಾಕಿಲ್ಲ. ಬೇಕಾದರೆ ಮನೆ ಬಿಟ್ಟು ಎಲ್ಲಾರ ದೂರ ಬೇರೆ ಗುಡಿಸಲು ಹಾಕಿ ಕೊಳ್ತೀವೆ. ಇದು ನಿಮ್ಮ ಮನೆ. ಚೆನ್ನೀನ ತಂದು ಇಲ್ಲಿ ಮಲಗಿಸಿ, ಉಪಚಾರಮಾಡಿಸಿ. ಬೇಡಾ ಅನ್ನೋಕಿಲ್ಲ. ಅವಳಿಗೆ ಹಾಲು ಕಳಿಸಿ ಕೊಡ್ತೀನಿ. ಕುಪ್ಪಸ ಸೀರೆ ಕೊಡಿ ಸ್ತೀನಿ. ಎಲ್ಲಾ ಮಾಡ್ತೀನಿ. ಅಮ್ಮನಿಗೆ ಒಂದು ಕೋಳಿ ಒಪ್ಪಿಸ್ತೇನೆ ಅವಳಿಗೆ ವಾಸಿಯಾದರೆ. ಅವಳ ಜೊತೆ ಇರೋದು ಅಂದರೆ ಮಾರಮ್ಮಾ ಮುನಿಸು ಪ್ರಳಯ ಆಗಿಹೋದಾತು." ಎಂದು ತನ್ನ ಅಭಿಪ್ರಾಯವನ್ನು ಸ್ಪಷ್ಟೋಕ್ತಿ ಯಲ್ಲಿ ತಿಳಿಸಿಬಿಟ್ಟಳು.

ಲಚುಮಿಯ ಮನುಸ್ಸು ಸುಂದರನಿಗೆ ಅರ್ಥವಾಯಿತು. ಅವಳೊಡನೆ ವಾದಿಸಿ ಪ್ರಯೋಜನವಿಲ್ಲವೆಂದು ಅರಿತನು. ಲಚುಮಿಯನ್ನು ಅಲಕ್ಷಿಸಿ, ಕಾಳನನ್ನು ಬಲಾತ್ಕರಿಸುವುದು ಅವನಿಗೆ ಇಷ್ಟವಾಗಲಿಲ್ಲ.

ಈ ಹೊತ್ತಿಗೆ ಕಾಳ ಹೊಳೆಯಿಂದ ಎತ್ತುಗಳನ್ನು ಹೊಡೆದುಕೊಂಡು ಬಂದಿದ್ದ.

'ಪ್ರಯತ್ನ ಮಾಡುವುದು ತನಗೆ ಸೇರಿದ್ದು; ಕಾರ್ಯದ ಹೊಣೆ ತನ್ನದು; ಪರಿಣಾಮ, ಫಲ ಹೇಗಾದರೂ ಆಗಲಿ. ಪ್ರಯತ್ನವೇ ಮಾಡದೆ ಇರುವುದು ಸರಿಯಲ್ಲ. ಇಲ್ಲಿನ ಪ್ರಯತ್ನ ಹೀಗಾಯಿತು. ಮುಂದಿನ ಪ್ರಯತ್ನ

ಹೇಗಾಗುವುದೋ? ಆದದ್ದಾಗಲಿ" ಎಂದು ನಿರ್ಧರಿಸಿ, "ಬೇಗ ಗಾಡಿ ಕಟ್ಟು ಕಾಳ" ಎಂದ.

ಕಾಳೇಗೌದ ಕ್ಷಣದಲ್ಲಿ ಗಾಡಿ ಕಟ್ಟಿದ; ಮೂಕಿಯ ಮೇಲೆ ಏರಿ ಕುಳಿತು, "ಹತ್ತಿ ಬುದ್ಧಿ. ಎಲ್ಲಿಗೆ ಹೊಡೀಲಿ?" ಎಂದು ಕೇಳಿದ.

ಗಾಡಿ ಏರುವುದಕ್ಕೆ ಮುಂಚೆ, "ಲಚುಮೀ, ಚೆನ್ನಿಯನ್ನು ಈ ಗಾಡಿಯಲ್ಲಿ ಮಲಗಿಸಿಕೊಂಡು ನಿನ್ನ ಗಂಡ ಗಾಡಿ ಹೊಡೆಯಲು ಏನಾದರೂ ನಿನ್ನ ಅಭ್ಯಂತರ ಉಂಟೋ? ಇದ್ದರೆ ಹೇಳು, ನಾನೇ ಹೊಡೆದುಕೊಂಡು ಹೋಗುತ್ತೇನೆ." ಎಂದು ಕೇಳಿದ ಸುಂದರಮೂರ್ತಿ.

ಲಚುಮಿ ಉತ್ತರ ಕೊಡದೆ ನಿಂತಿದ್ದಳು; ಕೊಟ್ಟಿದ್ದರೆ, ಹೀಗೆ ಕೊಡಲು ಅವಳ ಮನಸ್ಸು ಸಿದ್ಧವಾಗಿತ್ತು: "ನಾನೇನು ಮನುಷ್ಯಳೋ ಮರವೋ. ಹೊಳೆಕಂಬ ಸೀರಿಲ್ವಾ. ಗಾಡಿ ಎತ್ತು ತೊಳೆದರಾಯ್ತು. ನನ್ನ ಗಂಡ ಮೈತೊಳೆದುಕೊಂಡು ಮಡಿಬಟ್ಟೆ ತೊಟ್ಟರಾಯಿತು"

ಗಾಡಿಯಲ್ಲಿ ಹೋಗುತ್ತ, ಕುತೂಹಲಗೊಂಡಿದ್ದ ಕಾಳನಿಗೆ ಸುಂದರ ಎಲ್ಲವನ್ನೂ ವಿವರಿಸಿ ಹೇಳಿದ. ಕಾಳನ ಮನಸ್ಸು ತೀರ ಕರಗಿ, ಆಗ ಅವನು ಏನು ಮಾಡುವುದಕ್ಕೂ ಸಿದ್ಧನಾಗಿದ್ದ.

ಹದಿನೈದು ನಿಮಿಷದಲ್ಲಿ ಗಾಡಿ ತೋಟವನ್ನು ತಲುಪಿತು. ಅಷ್ಟು ಚುರುಕಾಗಿ ಗಾಡಿ ಹೊಡೆದ ಕಾಳ.

## ೨೧

ಕಾಳ ನಂಜುಂಡಶಾಸ್ತ್ರಿಗಳ ಮನೆಯ ಮುಂದೆಯೇ ಗಾಡಿಯನ್ನು ಹೊಡೆದುಕೊಂಡು ಬಂದ. ಆಗ ತಾನೇ ಶಾಸ್ತ್ರಿಗಳು ಮಧ್ಯಾಹ್ನಿಕವನ್ನು ಮಾಡುತ್ತಿದ್ದವರು 'ಸೂರ್ಯದರ್ಶನ'ಕ್ಕಾಗಿ ಹೊರಕ್ಕೆ ಜಗಲಿಯ ಮೇಲೆ ಬಂದು ನಿಂತು, ಕತ್ತೆತ್ತಿ, ಅಂಗುಲೀಬಂಧದ ರಂಧ್ರದ ಮೂಲಕ ಸೂರ್ಯದೇವನನ್ನು ನೋಡಿ, ಆ ಪರಂಜ್ಯೋತಿಯನ್ನು ಉಪಾಸನೆ ಮಾಡಿ, ಒಳಕ್ಕೆ ಹೋಗುವುದರಲ್ಲಿದ್ದರು. ಕಾಳನ ಗಾಡಿ ಎರಡು ಮಾರು ದೂರದಲ್ಲಿಯೇ ಬರುತ್ತಿದ್ದುದನ್ನು ಕಂಡು, ಕುತೂಹಲರಾಗಿ ಅಲ್ಲಿಯೇ ನಿಂತರು. ಕಾಳ ಎಂದೂ ಸುಮ್ಮಸುಮ್ಮನೆ ಕೃಷ್ಣಪ್ಪನವರ ಮನೆಯ ಕಡೆ ಗಾಡಿ ಹೊಡೆದು

ಕೊಂಡು ಬರುತ್ತಿರಲಿಲ್ಲ. ಏನಾದರೂ ಸಾಮಾನು ತೆಗೆದುಕೊಂಡು ಬರಬೇಕಾದರೆ, ಇಲ್ಲವೆ ಕೃಷ್ಣಪ್ಪನವರು ಪ್ರಯಾಣ ಮಾಡುವುದಿದ್ದರೆ– ಕಾಳ ಗಾಡಿ ಹೊಡೆದುಕೊಂಡು ಬರುತ್ತಿದ್ದ. ಗಾಡಿ ತುಸು ದೂರದಲ್ಲೆ ಇದ್ದುದ್ದರಿಂದ, ಒಳಗೆ ಯಾರು ಇದ್ದಾರೆಂಬುದು ಕಾಣುವಂತಿರಲಿಲ್ಲ. ಚೆನ್ನಿ ಮಲಗಿದ್ದಳು; ಸುಂದರ ಶಾಸ್ತ್ರಿಗಳ ಮನೆಯ ಕಡೆಗಿದ್ದ ಗಾಡಿಯ ಕಮಾನುಪಕ್ಕವನ್ನು ಒರಗಿಕೊಂಡು ಕುಳಿತಿದ್ದ. ಗಾಡಿ ಮುಂದಕ್ಕೆ ಹೊರಟ ಮೇಲೆ ರಸ್ತೆಗೆ ಹೋಗಿ ನೋಡಿದ ಹೊತ್ತು ಅವರಿಬ್ಬರೂ ಕಾಣುವಂತಿರಲಿಲ್ಲ.

"ಕೃಷ್ಣಪ್ಪನವರು ಎಲ್ಲಿಗಾದರೂ ಪ್ರಯಾಣ ಇಟ್ಟುಕೊಂಡಿದ್ದಾರೆಯೋ ಹೇಗೆ ಕಾಳ?" ಎಂದು ಶಾಸ್ತ್ರಿಗಳು ಅವನನ್ನು ಸಂಬೋಧಿಸಿದರು.

ಸಾಧಾರಣವಾಗಿ ಕಾಳ ಇಂಥ ಸಂದರ್ಭಗಳಲ್ಲಿ ತಟ್ಟನೆ ಹಗ್ಗವನ್ನು ಬಿಗಿ ಹಿಡಿದು, ಕ್ಷಣಹೊತ್ತು ಗಾಡಿ ನಿಲ್ಲಿಸಿ, ಉತ್ತರ ಕೊಟ್ಟು, ಮತ್ತೆ ಹಗ್ಗ ಸಡಿಲ ಬಿಡಬೇಕು. ಆದರೆ ಇಂದು ಗಾಡಿ ಹೊಡೆಯುತ್ತಲೇ "ಇಲ್ಲ" ಎಂದು ಕಾಳ ಉತ್ತರ ಕೊಟ್ಟು ಗಾಡಿಯನ್ನು ಮುಂದಕ್ಕೆ ಹೊಡೆದುಕೊಂಡು ಹೋದ.

ಗಾಡಿ ಸರಿಯಾಗಿ ಮನೆಯ ಮುಂದಕ್ಕೆ ಬಂದಾಗ ಅದರ ಸದ್ದು, ಶಾಸ್ತ್ರಿಗಳ ಮಾತು ಇವನ್ನು ಕೇಳಿ ಪಾತಿ ಸಾತಿ "ಬಂತು ಕಾಳನ ಗಾಡಿ, ಎಲ್ಲ ಬನ್ನಿ ಓಡಿ" ಎಂದು ಒಳಗಿನಿಂದಲೇ ಕೂಗಿಕೊಂಡು ಬಂದು, ಚಪ್ಪಾಳೆ ತಟ್ಟುತ್ತ, ಲಂಗದ ನೆರಿ ಚಿಮ್ಮಿಕೊಂಡು ನಡುರಸ್ತೆಗೆ ಹೋದರು.

ಕಾಳನ ಗಾಡಿ ಎಂದರೆ ಊರಿಗೆಲ್ಲ ಅಚ್ಚುಮೆಚ್ಚು. ಅವನ ಹಾಗೆ ಗಾಡಿ ಯಾರೂ ಇಟ್ಟಿರಲಿಲ್ಲ. ಈ ಗಾಡಿಯ ಎತ್ತುಗಳನ್ನು ಅವನು ಎಂದೂ ಉಳುಮೆಗೆ ಹಾಕಿದವನಲ್ಲ. ಚೂಜನಕಟ್ಟೆ ಜಾತ್ರೆಯಲ್ಲಿ ಈ ಎತ್ತಿನ ಜೊತೆಗೆ ಕ್ರಮವಾಗಿ ಮೂರು ಸಲ ಬಹುಮಾನ ಬಂದಿದ್ದು, ಇನ್ನು ಮುಂದಕ್ಕೆ ಇದೇ ಜೊತೆಗೆ ಬಹುಮಾನವಿಲ್ಲವೆಂದು ತೀರ್ಮಾನಿಸಿಬಿಟ್ಟಿದ್ದರು ಅಧಿಕಾರಿಗಳು. ಗಾಡಿಯೂ ಎತ್ತುಗಳೂ ಕೃಷ್ಣಪ್ಪನವರವೇ ಆದರೂ, ಕಾಳನ ಗಾಡಿ, ಕಾಳನ ಎತ್ತುಗಳು ಎಂದೇ ಪ್ರಸಿದ್ಧವಾಗಿದ್ದುವು. ಎಲ್ಲರ ಮೆಚ್ಚುಗೆ ಪಡೆದಿದ್ದ ಈ ಎತ್ತಿನ ಜೋಡಿಗೆ 'ರಾಮ ಲಕ್ಷ್ಮಣ' ಎಂದು ಹೆಸರಿಟ್ಟಿದ್ದ ಕಾಳ.

ಊರಿನಲ್ಲಿ ಹೊಡೆದುಕೊಂಡು ಬರುವಾಗ ಕೃಷ್ಣಪ್ಪನವರ ಪರಿಚಯ

ಸ್ಥರ ಮನೆಯ ಮಕ್ಕಳು ಯಾರೇ ಆಗಲಿ ಓಡಿ ಬಂದು ಗಾಡಿಯನ್ನು ಅ
ಸರಿಸಿದರೆ ಸಾಕು. ಕಾಳ ಗಾಡಿ ನಿಲ್ಲಿಸಿ, ಆ ಹುಡುಗರು ಮಕ್ಕಳನ್ನು ತ
ದೂರ ಗಾಡಿಯಲ್ಲಿ ಕೂರಿಸಿಕೊಂಡಿದ್ದು, ಅವರನ್ನು ಮುದ್ದಾಡಿ, ಕೆಳಗೀ
ಕಳಿಸುತ್ತಿದ್ದ. ಹೀಗೆ ಕಾಳ ಊರಿನ ಅನೇಕ ಮಕ್ಕಳ ಪ್ರೀತಿಗೆ ಪಾ
ನಾಗಿದ್ದ.

ಪಾತಿ ಸಾತಿ ಕುಣಿಕುಣಿಯುತ್ತ ಗಾಡಿ ಹತ್ತುವ ಉತ್ಸುಕತೆಯಿಂ
ಬಂದಾಗ, ಕಾಳ ಗಾಡಿ ನಿಲ್ಲಿಸಲಿಲ್ಲ. ಮುಂದಕ್ಕೆ ಹೊಡೆದುಕೊಂಡು ಹೋ
ಒಳಗೆ ಸುಂದರನಿದ್ದುದನ್ನು ಕಂಡಾಗ, "ಸುಂದರಾ! ಸುಂದರಾ!" ಎಂ
ಗಾಡಿ ಹಿಡಿದು ಅದನ್ನು ಹಿಂಬಾಲಿಸಿದರು.

ಗಾಡಿಯಲ್ಲಿರುವವನು ಸುಂದರನೆಂದು ಶಾಸ್ತ್ರಿಗಳಿಗೆ ಗೊತ್ತಾದ ಮೇ
ಅವರೂ ಜಗುಲಿಯ ಮೆಟ್ಟಲಿಳಿದು ರಸ್ತೆಯ ಅಂಚಿಗೆ ಬಂದು ನಿಂತ
ಒಳಗೆ ಯಾರೋ ಮಲಗಿದ್ದಂತೆ ಕಂಡಿತು. ಯಾರು ಎನ್ನುವುದು ಸರಿಯಾ
ಗೊತ್ತಾಗಲಿಲ್ಲ.

"ಯಾರು ಸುಂದರ, ಒಳಗೆ ಮಲಗಿರೋದು?" ಎಂದು ಕೇಳುತ್ತ
ಗಾಡಿಯನ್ನು ಹಿಂಬಾಲಿಸಿದರು ಸಾತಿ ಪಾತಿ.

"ನೀವು ಮನೇಗೆ ಹೋಗಿ ಅಮ್ಮಾ, ನಿಮ್ಮ ಅಪ್ಪ ಬೈದಾರು" ಎ
ಸುಂದರ.

ಒಳಗೆ ಯಾರೋ ಮಲಗಿದ್ದಾರೆ ಎನ್ನುವುದು ಸ್ಪಷ್ಟವಾಯಿ
ಶಾಸ್ತ್ರಿಗಳಿಗೆ. ಮಲಗಿರಬೇಕಾದರೆ ರೋಗಿಯಿರಬೇಕು. ತಾವು ಕಂಡ ಹಾ
ಕಷ್ಣಪ್ಪನವರ ಮನೆಯಲ್ಲಿ ಯಾರೂ ರೋಗಿಯಿರಲಿಲ್ಲ. ಚೆನ್ನಿಯಿರಬಹು
ಎಂಬ ಸಂದೇಹ ಮೂಡಿತು ಶಾಸ್ತ್ರಿಗಳಿಗೆ. ಮಗನನ್ನು ಕರೆದರು. 'ಏ
ಸಮಾಚಾರ ವಿಚಾರಿಸಿಕೊಂಡು ಬಾ' ಎಂದು ಹೇಳಿ ಕಳಿಸಿದರು. ವಿಶ್ವನಾ
ಶಾಸ್ತ್ರಿ ಗಾಡಿಯ ಹಿಂದೆ ಬೇಗ ಬೇಗ ಹೋದ. ಸಮೀಪಿಸಿದಾಗ, ಒ
ಮಲಗಿದ್ದ ವ್ಯಕ್ತಿ ಚೆನ್ನಿ ಎಂಬುದು ಅವನಿಗೆ ಚೆನ್ನಾಗಿ ಗೊತ್ತಾಯಿ
ವಿಶ್ವನಾಥಶಾಸ್ತ್ರಿ ಚೆನ್ನಿಯನ್ನು ನೋಡಿ ಬಲ್ಲ. ಅವನೂ ಕೂಡ ಕ
ವರ್ಷದ ಬೇಸಗೆ ರಜದಲ್ಲಿ ಊರಿಗೆ ಬಂದಿದ್ದಾಗ ಕೃಷ್ಣಪ್ಪನವರ ತೋ
ಹಲವೊಮ್ಮೆ ಭೇಟಿ ಕೊಟ್ಟಿದ್ದ. ಸಣ್ಣ ಹುಡುಗನಾಗಿದ್ದಾಗ ಎಷ್ಟೋ ವೇ

ಹೋಗಿದ್ದ. ಸ್ವಲ್ಪ ವಯಸ್ಸಾದ ಮೇಲೆ, ಹಾಗೆ ಹೋಗುವುದನ್ನು ಬಿಟ್ಟು ಬಿಟ್ಟಿದ್ದ. ಆದರೆ ಹಿಂದಿನ ವರ್ಷ ಆಕಸ್ಮಾತ್ ಸುಂದರಮೂರ್ತಿಯ ಜೊತೆಗೆ ಹೋಗಿದ್ದಾಗ, ಚೆನ್ನಿಯ ತುಂಬು ಚೆಲುವು ಹದಿನೆಂಟರ ಪ್ರಾಯದ ಅವನ ಮನಸ್ಸನ್ನು ಸೆಳೆಯಿತು. ಆ ಬಳಿಕ ಎಷ್ಟೋ ವೇಳೆ ಚೆನ್ನಿಯನ್ನು ನೋಡುವುದಕ್ಕಾಗಿಯೇ ಅವನು ಕೃಷ್ಣಪ್ಪನವರ ತೋಟಕ್ಕೆ ಹೋದದ್ದುಂಟು. ನೋಡುವುದೂ ದೋಷವೇ, ಪಾಪಕರವೇ? ಚೆಲುವಿಗೆ ಹೊಲೆಯ ದೃಷ್ಟಿ ದೋಷವೆ? ತಾನೇನು ಚೆನ್ನಿಯನ್ನು ಮುಟ್ಟುವುದಿಲ್ಲ— ಎಂದು ಅವನ ಸಮಾಧಾನ. ಅದು ಸರಿಯೆ. ಈ ಸಲ ಊರಿಗೆ ಬಂದ ಕೂಡಲೆ ಚೆನ್ನಿ ಹಾಸಿಗೆ ಹತ್ತಿ ಮಲಗಿದ್ದಾಳೆ ಎಂದು ಗೊತ್ತಾಯಿತು ಆದ್ದರಿಂದ ತೋಟದ ಕಡೆ ಹೋಗಲು ಇಷ್ಟ ಬರಲಿಲ್ಲ.

ಗಾಡಿಯ ಒಳಗೆ ಚೆನ್ನಿ ಮಲಗಿರುವವಳೆಂದು ಖಚಿತವಾದ ಮೇಲೆ, ವಿಶ್ವನಾಥಶಾಸ್ತ್ರಿ ಪಾತಿಯನ್ನೂ ಸಾತಿಯನ್ನೂ ಕೈಹಿಡಿದು ಎಳೆದುಕೊಂಡು ಬಂದ. ಅವರಿಗೆ ಹಿಂದಿರುಗಿ ಬರಲು ಇಷ್ಟವಿಲ್ಲ. ವಿಶ್ವನಾಥ ತನ್ನ ತಂದೆಗೆ ತಾನು ಕಂಡದ್ದನ್ನು ಹೇಳಿದ: "ಖಾಯಿಲೆ ಬಿದ್ದ ಚೆನ್ನಿ ಗಾಡಿಯಲ್ಲಿ ಮಲಗಿದ್ದಳು. ಅವಳ ತಲೆ ಸುಂದರನ ತೊಡೆಯ ಮೇಲಿತ್ತು. ಎಲ್ಲೋ ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಿರುವ ಹಾಗೆ ಕಾಣುತ್ತೆ" ಎಂದ.

"ಇನ್ನು ಆಯಿತು. ಕೃಷ್ಣಪ್ಪನವರ ನಮ್ಮ ಋಣಾನುಬಂಧ ತೀರಿತು. ಅದು ಹಾಳಾಗಿ ಹೋಗಲಿ. ಅವರ ಸಂಬಂಧ ನಮಗೆ ಆದರೆಷ್ಟು ಬಿಟ್ಟರೆಷ್ಟು. ಆದರೆ ಮಾದಿಗರ ಮಗಳನ್ನು ಬ್ರಾಹ್ಮಣರ ಮನೆಯ ಮುಂದೆಯೇ ಗಾಡಿಯಲ್ಲಿ ಮಲಗಿಸಿಕೊಂಡು ಕರೆದುಕೊಂಡು ಬಂದಿದ್ದಾನಲ್ಲಾ, ಎಂಥ ಧಾರ್ಷ್ಟ್ಯ ಸುಂದರಮೂರ್ತಿಯದು! ಇದಕ್ಕೆ ತಕ್ಕ ಶಾಸ್ತಿ ಮಾಡಲೇಬೇಕು. ಹೇಗಿದ್ದರೂ ಚಂಡಾಲದರ್ಶನವಾಯಿತು. ಎಲಾ ವಿಶ್ವನಾಥ, ಸಾತಿ ಪಾತಿಗೆ ಸ್ನಾನ ಮಾಡಿಸುವ ಹಾಗೆ ಹೇಳಿ, ಬಾ ಇಲ್ಲಿ ನನ್ನ ಜೊತೆ. ಅದು ಹೇಗೆ ಕೃಷ್ಣಪ್ಪನವರು ಮಾದಿಗನ ಮಗಳನ್ನು ಮೆಟ್ಟಿಲು ಹತ್ತಿಸುತ್ತಾರೋ ನೋಡಿಬಿಡುತ್ತೇನೆ. ಇದೇನು ಬ್ರಾಹ್ಮಣರ ಕೇರಿಯೋ ಹೊಲೆಗೇರಿಯೋ?" ಎಂದು ಅರ್ಧಾಂತವಾಗಿದ್ದ ಮಾಧ್ಯಾಹ್ನಿಕದ ವಿಚಾರವನ್ನೇ ಮರೆತು ಹೆಗಲ ಮೇಲಿದ್ದ ಉತ್ತರೀಯವನ್ನು ಸರಿಯಾಗಿ ಹೊದೆದುಕೊಂಡು, ಕೃಷ್ಣಪ್ಪನವರ ಕಡೆಗೆ

ಹೊರಟರು. ಅವರು ನಾಲ್ಕೈದು ಮಾರು ಹೋಗಿರುವಷ್ಟರಲ್ಲಿ ಅವರನ್ನು ವಿಶ್ವನಾಥ ಹಿಂಬಾಲಿಸಿದ.

೨೨

ಸುಂದರಮೂರ್ತಿ ಮಹಾತ್ಮ ಗಾಂಧಿಯವರು ಹೇಳಿರುವುದೆಲ್ಲವನ್ನೂ ಓದಿ ಅರಗಿಸಿಕೊಂಡಿಲ್ಲದಿದ್ದರೂ ಅವರು ಜನತೆಗೆ ಸಾರಿದ್ದ ಸತ್ಯ ಮತ್ತು ಅಹಿಂಸೆಯ ತತ್ವಗಳನ್ನು ತನಗೆ ತಿಳಿದ ಮಟ್ಟಿಗೆ ಅರ್ಥಮಾಡಿಕೊಂಡಿದ್ದ. ಇತರರ ಮನಸ್ಸು ನೋಯಿಸುವುದು ಕೂಡ ಹಿಂಸೆ ಎಂದು ಅವನು ತಿಳಿದಿದ್ದ. ತನಗೆ ಹಿಂಸೆಯಾದರೂ ಚಿಂತೆಯಿಲ್ಲ, ಇತರರಿಗೆ ಹಿಂಸೆ ಕೊಡಬಾರದೆಂಬುದು ಅವನ ನಿಶ್ಚಯ. ಆದರೆ ಅಂಥ ಸಂದರ್ಭಗಳಲ್ಲಿ ತನಗೆ ಯಾವುದು ಖಂಡಿತವಾಗಿ ಸತ್ಯ ಎಂದು ತೋರುತ್ತದೋ ಅದನ್ನು ಬಿಟ್ಟು ಹೋಗಬಾರದೆಂದು ಅವನ ನಂಬಿಕೆ. ಇಷ್ಟುಮಟ್ಟಿಗೆ ಆ ಮಹಾತ್ಮನ ಬೋಧೆ ಸುಂದರನ ಹೃದ್ಗತವಾಗಿತ್ತು. ತಂದೆ ಚೆನ್ನಿಯನ್ನು ಜಗಲಿಯ ಮೇಲಣ ಕೋಣೆಯಲ್ಲಾದರೂ ಮಲಗಿಸಲು ಒಪ್ಪುವರೆಂದು ಸುಂದರ ಎಣಿಸಿದ್ದ. ಹಾಗೆ ಅವರು ಅದಕ್ಕೂ ಒಪ್ಪದೆ ಹೋದರೆ ಅವರನ್ನು ಬಲಾತ್ಕಾರಪಡಿಸಲು ಇಷ್ಟಪಡುತ್ತಿರಲಿಲ್ಲ. ಆದರೆ ತನ್ನ ಹಿಡಿದ ಕಾರ್ಯವನ್ನು ಬಿಡಕೂಡದು. ಚೆನ್ನಿಗೆ ಆಯುಸ್ಸು ಇದ್ದರೆ ಬದುಕುತ್ತಾಳೆ, ಇಲ್ಲವೆ ಹೋದರೆ ಸಾಯುತ್ತಾಳೆ. ತಾನು ಮಾಡತಕ್ಕ ಪ್ರಯತ್ನ ಮಾಡಿಬಿಡುವುದು. ತಂದೆಯನ್ನು ಸ್ವಲ್ಪ ಹಣ ಕೇಳಿ, ಚೆನ್ನಿಯನ್ನು ಮೈಸೂರಿಗೊ ಬೆಂಗಳೂರಿಗೊ ಕರೆದುಕೊಂಡು ಹೋಗಿ ಅಲ್ಲಿ ಆಸ್ಪತ್ರೆಯಲ್ಲಿಟ್ಟು, ಚಿಕಿತ್ಸೆ ನಡಸುವುದೆಂದು ತೀರ್ಮಾನಿಸಿದ್ದ.

ಗಾಡಿ ಮನೆಯ ಬಾಗಿಲ ಮುಂದೆ ನಿಂತ ಕೂಡಲೆ ಸುಂದರ ಗಾಡಿಯಿಂದ ಇಳಿದು, ಮನೆಯ ಮುಂದಣ ಕೈಸಾಲೆಯಲ್ಲಿ ನಿಂತು, ತಂದೆಯನ್ನು ಕೂಗಿದ. ಎಷ್ಟು ಹೊತ್ತಾದರೂ ಹೊಳೆಯಿಂದ ಬರಲಿಲ್ಲನೆಂದು ಆತಂಕದಿಂದ ನಿರೀಕ್ಷಿಸುತ್ತಿದ್ದ ನರಸಮ್ಮನವರು ಸುಂದರನ ಧ್ವನಿ ಕೇಳಿ, ಯಜಮಾನರ ಹಿಂದೆಯೇ ಬಂದರು. ತಂದೆ ತಾಯಿ ಇಬ್ಬರೂ ಹೊರಹೊರಟರೋ ಇಲ್ಲವೋ, ತುಂಗೆ ಸೂರಿ ಇವರೂ ಹೊರಬಂದರು.

ಸುಂದರನ ಸಪ್ಪೆಯ ಮುಖವನ್ನು ನೋಡಿ ತಂದೆ "ಏನು ಸಮಾಚಾರ?" ಎಂದು ಕೇಳಿದರು. ಸುಂದರ ತಾನು ಆಕಸ್ಮಾತ್ತಾಗಿ

ತೋಟಕ್ಕೆ ಹೋಗಿ ನೋಡಿದಾಗ ಚೆನ್ನಿ ಇದ್ದ ಸ್ಥಿತಿ, ಡಾಕ್ಟರು ಪಟ್ಟ ಅಭಿಪ್ರಾಯ, ಆಸ್ಪತ್ರೆಯಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲವೆಂದು ಅವರು ಕೊಟ್ಟ ಉತ್ತರ ಎಲ್ಲವನ್ನೂ ಸುಂದರ ವಿವರವಾಗಿ ಹೇಳಿದ. ಚೆನ್ನಿಯ ಸ್ಥಿತಿ ಕಂಡು ಎಲ್ಲರೂ ಕೊರಗಿದರು, ಮರುಗಿದರು. ಕೃಷ್ಣಪ್ಪನವರ ಮನಸ್ಥಿತಿಯನ್ನಂತೂ ವರ್ಣಿಸಲು ಸಾಧ್ಯವಿಲ್ಲ. ಇತ್ತ ಚೆನ್ನಿಯ ಮೇಲಣ ಮರುಕ; ಅತ್ತ ನೆರೆ ಹೊರೆಯ, ಸಮಾಜದ, ಅಂಜಿಕೆ ಹಾಗೂ ಯುಗಯುಗಾಂತರದಿಂದ ರಕ್ತಗತ ವಾಗಿದ್ದ ಬ್ರಾಹ್ಮಣಿಕೆಯ ಪ್ರತಿಷ್ಠೆ. ಏನು ಮಾಡುವುದಕ್ಕೂ, ಏನು ಹೇಳುವು ದಕ್ಕೂ ತೋಚದೆ ಕೈ ಕೈ ಹಿಸುಕಿಕೊಳ್ಳುತ್ತ ನಿಂತಿದ್ದರು.

"ಚೆನ್ನಿಯನ್ನು ಜಗಲಿಯ ಮೇಲೆ ಕೋಣೆಯಲ್ಲಿ ಮಲಗಿಸುವುದರಿಂದ ಏನೂ ಬಾಧಕವಿಲ್ಲ ಅಪ್ಪ. ಎಲ್ಲರೂ ಮಡಿಯಲ್ಲಿ ತಿರುಗಾಡುವ ಹೊತ್ತಿನಲ್ಲಿ ಬೇಕಾದರೆ ಕಿಟಕಿಯ ಬಾಗಿಲನ್ನೂ ಹಾಕಿಬಿಟ್ಟಿರುತ್ತೇನೆ. ನೀವಾರೂ ಅವಳನ್ನು ನೋಡಲೂ ಬೇಡಿ. ಅವಳ ಉಪಚಾರ ನಾನು ಮಾಡುತ್ತೇನೆ. ದೇವರ ದಯದಿಂದ ಅವಳಿಗೆ ಗುಣವಾದರೆ, ಅವಳು ಮತ್ತೆ ತೋಟಕ್ಕೆ ಹೊರಟು ಹೋಗುತ್ತಾಳೆ. ಇದರಲ್ಲಿ ಏನೂ ದೋಷ ಕಾಣುವುದಿಲ್ಲವಲ್ಲ ಅಪ್ಪ" ಎಂದು ಸುಂದರ ಬಹು ವಿನಯದ ಧ್ವನಿಯಲ್ಲಿ ಕೇಳಿಕೊಂಡ.

ಸುಂದರ ಹೇಳಿದ್ದು ಕೃಷ್ಣಪ್ಪನವರ ಮನಸ್ಸಿನ ಮೇಲೆ ಪರಿಣಾಮ ವುಂಟುಮಾಡಿತೆಂದು ಕಾಣುತ್ತದೆ. ಮೊದಲು, "ಆಗಲಿ" ಎಂದರು; ಮತ್ತೆ ಕೂಡಲೆ ಹೀಗೆ ಹೇಳಿದರು: "ನನಗೂ ನಿನಗೂ ಇದರಲ್ಲಿ ದೋಷ ಕಾಣದೆ ಇರಬಹುದು. ಹತ್ತೂ ಜನ ಇದು ದೋಷ, ಅಪರಾಧ, ಪಾಪ ಎಂದರೆ ನಾವು ಅಲ್ಲ ಎಂದು ಸಾಧಿಸಿದರೆ ತಾನೆ ಏನು ಪ್ರಯೋಜನ? ಚೆನ್ನಿಯನ್ನು ನೀನು ತಂಗಿಯಂತೆ ಪ್ರೀತಿಸುತ್ತಿ, ನನಗೆ ಗೊತ್ತು. ಅದರಲ್ಲಿ ಎಳ್ಳಷ್ಟೂ ದೋಷವಿಲ್ಲ. ನೀನು ಪ್ರಕಟವಾಗಿ ಹಾಗೆ ವರ್ತಿಸುವಂತೆ ನಾನು ವರ್ತಿಸುವು ದಕ್ಕಾಗುವುದಿಲ್ಲ. ಅವಳು ಮಾದಿಗನ ಮಗಳಲ್ಲದೆ ಹೋಗಿದ್ದರೆ ಅವಳನ್ನು ಮಗಳಂತೆಯೇ ಮನೆಯಲ್ಲಿಟ್ಟುಕೊಂಡು ಕಾಪಾಡುತ್ತಿದ್ದೆ. ಈಗ ನನಗೆ ದೊಡ್ಡ ಸಂಸಾರದ ಹೊಣೆಯಿದೆ. ಹತ್ತು ಜನದ ಅಭಿಪ್ರಾಯದಂತೆ ನಡೆಯದೆ ಹೋದರೆ ಸಂಸಾರವೊಂದಿಗರು ನೆರೆಹೊರೆಯ ನಡುವೆ ಸೌಮ- ನಸ್ಯದಿಂದ ಇರಲಾಗುವುದಿಲ್ಲ. ನನಗೇನೋ ಬಾಧಕವಿಲ್ಲ. ಆದರೆ ಕೇಂ

ಯವರು ಒಪ್ಪುವುದಿಲ್ಲ. ನನ್ನನ್ನು ಕೇರಿ ಬಿಟ್ಟು ಹೋಗು ಎನ್ನುತ್ತಾರೆ. ಬಿಟ್ಟು ಹೋಗುವುದಿಲ್ಲ ಎಂದು ನಾನು ಹಟ ಸಾಧಿಸಬೇಕು. ಸರಿ, ವಿರಸಕ್ಕೆ ಮೊದಲಾಗುತ್ತೆ. ಹೀಗಿದೆ ನೋಡು ಸುಂದರ, ಸ್ಥಿತಿ."

"ಹಾಗಾದರೆ ಏನು ಮಾಡುವುದು ಎನ್ನುತ್ತಿ ಅಪ್ಪ? ತಕ್ಕ ಚಿಕಿತ್ಸೆ ಯಿಲ್ಲದೆ ಚೆನ್ನಿ ಸಾಯಬೇಕು ಎನ್ನುತ್ತೀಯೇನು?—" ಸುಂದರ ಕೇಳಿದ.

ಈ ಮಾತುಗಳನ್ನು ಕೇಳಿ ಹೃದಯ ಹಿಂಡಿಬಂತು ಕೃಷ್ಣಪ್ಪನವರಿಗೆ. "ಆಗಲಿ." ಎಂದರು ಮತ್ತೆ. "ಸಂಜೆಯ ವರೆಗೂ ಇಲ್ಲಿರಲಿ, ನೋಡೋಣ" ಎಂದು ಮರಳಿ ಒಂದು ಸಂದೇಹವಾಕ್ಯ ನುಡಿದರು.

"ಸಂಜೆಯ ವರೆಗೂ ಬಿಡುವು ಸಿಕ್ಕಿತಲ್ಲ ನೋಡೋಣ" ಎಂದು ಸಮಾಧಾನ ಹೊಂದಿ, ಸುಂದರ ಗಾಡಿಯ ಬಳಿಗೆ ಹೋಗಿ ಚೆನ್ನಿಯನ್ನು ಎರಡು ಕೈಗಳ ಮೇಲೂ ಮಲಗಿಸಿಕೊಂಡು ಎತ್ತಿಕೊಂಡು ಬಂದ.

ನರಸಮ್ಮನವರಿಗೂ ಕೃಷ್ಣಪ್ಪನವರಿಗೂ ಮಗನ ಹೃದಯ ಎಷ್ಟು ಮೃದು ಎಂದು ಒಂದು ಕಡೆ ಮರುಕಗೂಡಿದ ಸಂತೋಷ; ಯಾರೂ ಮಾಡ ಬಾರದ್ದು ಮಾಡುತ್ತಿದ್ದಾನಲ್ಲಾ, ಎಂದು ಇನ್ನೊಂದು ಕಡೆ ದುಗುಡದ ಪೇಚಾಟ.

ಸುಂದರ ಚೆನ್ನಿಯನ್ನು ಎತ್ತಿಕೊಂಡು ಇನ್ನೇನು ಮೆಟ್ಟಿಲು ಹತ್ತ ಬೇಕು—ಅಷ್ಟರಲ್ಲಿ "ಸುಂದರಾ ನಿಲ್ಲು. ಸಾಕು ಈ ಅತ್ಯಾಚಾರ" ಎಂದು ನಂಜುಂಡಶಾಸ್ತ್ರಿಗಳು ಕೈಯೆತ್ತಿ ಉದ್ಘೋಷಿಸುತ್ತ ಧಾವಿಸಿ ಬಂದರು. ಕೋಪದ ಕೆರಳಿನ ಬಿರುನಡಗೆಯ ಭರದಲ್ಲಿ ಸರಿಯಾಗಿ ಹೊದೆದಿದ್ದ ಉತ್ತ ರೀಯ ಅಸ್ತವ್ಯಸ್ತವಾಗಿತ್ತು; ಶಿಖೆಯ ಗಂಟು ಬಿಚ್ಚಿಹೋಗಿತ್ತು. ಆ ಸನ್ನಿ ವೇಶದಲ್ಲಿ ನಂದನಿಗ್ರಹಕ್ಕಾಗಿ ಹೊರಟ ಚಾಣಕ್ಯನಂತೆ ಕಾಣುತ್ತಿದ್ದರು ನಂಜುಂಡಶಾಸ್ತ್ರಿಗಳು!

ಸುಂದರ ಕಿವುಡುಗೇಳಿದವನಂತೆ ಮುಂದುವರಿದು ಒಂದು ಮೆಟ್ಟಿಲು ಹತ್ತಿದ.

"ನಿಲ್ಲು ಸುಂದರಾ. ನಾನು ಹೇಳುವುದನ್ನು ಕೇಳಿ ಬೇಕಾದ್ದನ್ನು ಮಾಡು ಆಮೇಲೆ" ಎಂದರು ನಂಜುಂಡಶಾಸ್ತ್ರಿಗಳು ಅಧಿಕಾರವಾಣಿಯಿಂದ.

"ನಿಂತುಕೊ ಸುಂದರ. ಹಿರಿಯರ ಮಾತು ಕೇಳಬೇಕಾದ್ದು ಧರ್ಮ."

ಎಂದು ಕೃಷ್ಣಪ್ಪನವರು ಮೃದುವಾಗಿ ಆಜ್ಞೆಯಿತ್ತರು.

'ಸಾಯಲಿರುವ ಜೀವದ ಮುಂದೆ ಗೊಡ್ಡು ಬ್ರಾಹ್ಮಣಿಕೆಯ ಅಟ್ಟಹಾಸದ ಪ್ರದರ್ಶದವೇ!' ಎಂದು ಸುಂದರ ಪರಿತಪಿಸಿದ. ಪರಿತಾಪದ ಬೆನ್ನಿನಲ್ಲಿ ಕೋಪ ಉಕ್ಕಿತು. ಇಷ್ಟು ದಿನಕ್ಕೆ ಇಂದು ಸುಂದರಮೂರ್ತಿ ಅತ್ಯಂತ ಕೋಪ ಗೊಂಡ. ಮುಖ ಕೆಂಪೇರಿತು; ನೋಟ ನಿಶ್ಚಲವಾಯಿತು. ಎದುರಿನಲ್ಲಿಯೇ ತಂದೆ ನಿಂತಿದ್ದರು. ಅವರ ಮುಖದಲ್ಲಿ ಅವ್ಯಕ್ತ ಸಹಾನುಭೂತಿ ತುಳುಕುತ್ತಿದ್ದುದು ಅವನ ಅರಿವಿಗೆ ಬಂತು. ನುಡಿಯಲಾರದೆ, ಮುಂದಕ್ಕೆ ಅಡಿಯಿಡಲಾರದೆ, ಕೋಪವನ್ನು ನುಂಗಿಕೊಂಡು ನಿಂತಲ್ಲಿ ನಿಂತ.

ನಂಜುಂಡಶಾಸ್ತ್ರಿಗಳು ಕೃಷ್ಣಪ್ಪನವರನ್ನು ಸಂಬೋಧಿಸಿ ಮುಂದುವರಿಸಿದರು:

"ಕೃಷ್ಣಪ್ಪನವರೇ, ಈಗ ನಾನು ಜಗಚ್ಚಕ್ಷುವಾದ ಸೂರ್ಯಸಾಕ್ಷಿಯಾಗಿ ಹೇಳುತ್ತೇನೆ, ಕೇಳಬೇಕು. ನಾನು ನಿಮ್ಮ ಸಂಬಂಧ ಬೆಳೆಸಬೇಕೆಂದು ಏನೋ ಒಂದು ಚಪಲ ಇಟ್ಟುಕೊಂಡಿದ್ದೆ. ಅದು ಇಂದಿಗೆ ನಿಷ್ಫಲವಾಯಿತು. ಹೋಗಲಿ, ದೈವಚಿತ್ತ. ನೀವು ನಿಮ್ಮ ಮಗನ ಈ ಅನಾಚಾರದ ಕಾರ್ಯಗಳಿಗೆಲ್ಲ ಈ ರೀತಿ ಪ್ರೋತ್ಸಾಹ ಕೊಡುತ್ತೀರೆಂದು ನಂಬಿರಲಿಲ್ಲ. ಅವನ್ನು ಈಗ ನಾನು ಕಣ್ಣಾರೆ ನೋಡುತ್ತಿದ್ದೇನೆ. ನೀವು ಮಾದಿಗನ ಮಗಳನ್ನು ನಿಮ್ಮ ಮನೆಯಲ್ಲಿ ಎಲ್ಲಿಯೋ ಇರಗೊಡಿಸಿದರೂ ಅವಳನ್ನು ಈ ಬೀದಿಗೆ ಬರಮಾಡಿಕೊಂಡಂತಾಯಿತು. ನಿಮ್ಮ ಮಗ ಮಡಿಯ ಹೊತ್ತಿನಲ್ಲೇ ಮಾದಿಗನ ಮಗಳನ್ನು ನಮ್ಮ ಮನೆಯ ಮುಂದೆ ಕರೆದುಕೊಂಡು ಬಂದಿದ್ದಾನಲ್ಲ, ಅವನ ಧಾರ್ಷ್ಟ್ಯ ಎಷ್ಟು ಅಂತೀನಿ! ಅವಳನ್ನು ಒಂದು ಕ್ಷಣವೇ ಆಗಲಿ, ನಿಮ್ಮ ಮನೆಯಲ್ಲಿ ಎಲ್ಲಿಯೋ ಇರಿಸಿಕೊಂಡರೂ ಬ್ರಾಹ್ಮಣರ ವಸತಿಯೇ ಕಲಂಕಿತವಾಗುತ್ತದೆ. ಒಂದೇ, ಎರಡೇ, ಎಲ್ಲಾ ಬ್ರಾಹ್ಮಣ ಕುಟುಂಬಗಳೂ ಎಲ್ಲಿಗೆ ಹೋಗುವುದು? ಎಲ್ಲಿಗೂ ಹೋಗುವುದಕ್ಕಾಗುವುದಿಲ್ಲ. ಆ ಸಂದರ್ಭದಲ್ಲಿ ಎಲ್ಲರೂ ಪ್ರಾಯಶ್ಚಿತ್ತ ಹೊಂದಬೇಕಾಗುತ್ತದೆ. ಉದ್ದೇಶಪೂರ್ವಕವಾಗಿ ಪ್ರತ್ಯಕ್ಷ ಸಂಪರ್ಕ ಹೊಂದಿದ ನಿಮ್ಮ ಪ್ರಾಯಶ್ಚಿತ್ತ ಅತ್ಯಂತ ಗುರುತರವಾಗುತ್ತದೆ. ನೀವು ಮನೆಯಲ್ಲೇ ಇಟ್ಟು ಅವಳಿಗೆ ಶುಶ್ರೂಷೆ ಮಾಡತೊಡಗಿದರೆ, ಅದಕ್ಕೆ ಪ್ರಾಯಶ್ಚಿತ್ತವೇ ಇರಲಾರದು. ಮಠದ

ಪ್ರತಿನಿಧಿಯಾದ ನಾನು ಕಂಡೂ ಕಾಣದಂತೆ ಸುಮ್ಮನಿರಲಾರೆ. ಮಠಾಧಿಕಾರಿಗಳಿಗೆ ಬರಸಿ ಬಹಿಷ್ಕಾರಪತ್ರ ತರಿಸಬೇಕಾಗುತ್ತದೆ. ನಮಗೂ ನಿಮಗೂ ಎಂದಿನಿಂದಲೂ ನಡೆದುಬಂದಿರುವ ಸೌಹಾರ್ದದ ದೃಷ್ಟಿಯಿಂದ ನೀವು ಇಷ್ಟೆಲ್ಲಾ ವಿಪರೀತಕ್ಕೆ ಅವಕಾಶ ಕೊಡಬಾರದು. ನಿಮ್ಮ ಮಾದನ ಮಗಳು ಸಾಯುವ ಸ್ಥಿತಿಯಲ್ಲಿದ್ದರೆ, ಬೇಕಾದಷ್ಟು ಹಣದ ಸಹಾಯ ಮಾಡಿ, ಅವಳ ಜೀವ ಉಳಿಸಿ, ಬೇಡ ಎಂದವರಾರು? ಆದರೆ, ಈಗ ನಿಮ್ಮ ಮಗ ಮಾಡುತ್ತಿರುವುದು, ತಿಳಿದವರಾದ ನೀವು ಅದಕ್ಕೆ ಅವಕಾಶ ಕೊಡುತ್ತಿರುವುದು — ಎರಡೂ ಲೋಕಕ್ಕೆ ಅತಿರೇಕವಾದ್ದು. ಇಷ್ಟರ ಮೇಲೆ ನಿಮ್ಮ ಚಿತ್ತ'' ಎಂದು ಬಿಚ್ಚಿ ಹೋಗಿದ್ದ ತಲೆಯ ಗಂಟನ್ನು ಹಾಕಿಕೊಳ್ಳುತ್ತ ನಿಂತರು. ಶಾಸ್ತ್ರಿಗಳೇನೋ ತಾವು ಬಹು 'ದೊಡ್ಡತನದಿಂದ ಮಾತಾಡಿರು' ವುದಾಗಿ ಗಂಭೀರವಾಗಿ ನಿಂದಿದ್ದರು.

ಶಾಸ್ತ್ರಿಗಳ ಈ ಸಣ್ಣ ಭಾಷಣವನ್ನು ಕೇಳಿ ಸುಂದರನಿಗೆ ಚಿಟ್ಟು ಹಿಡಿದು ಹೋಯಿತು, ಮತ್ತೆ ಮಹಾಕೋಪ ಉಕ್ಕೇರಿತು. ತಂದೆ ಎದುರಿಗಿಲ್ಲದೆ ಹೋಗಿದ್ದರೆ ಖಂಡಿತವಾಗಿಯೂ ಸುಂದರ ಸುಮ್ಮನೆ ಇರುತ್ತಿರಲಿಲ್ಲವೆಂದು ಕಾಣುತ್ತದೆ. ಕೋಪವನ್ನು ನಿಗ್ರಹಿಸಿಕೊಂಡು ''ಏನು ಮಾಡಲಿ?'' ಎಂದು ಕೇಳುವಂತೆ ತಂದೆಯ ಮುಖವನ್ನು ನೋಡಿದ. ಕೃಷ್ಣಪ್ಪನವರೂ ಕ್ಷಣಕಾಲ ಸ್ತಂಭೀಭೂತರಾಗಿದ್ದರು. ಅವರಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಕೊನೆಗೆ ಏನು ಹೊಳೆಯಿತೋ ಏನೋ, ''ಸುಂದರಾ, ನೀನು ಚೆನ್ನಿಯನ್ನು ಕರೆದುಕೊಂಡು ಆಸ್ಪತ್ರೆಗೆ ಹೋಗು, ನಾನು ಹಿಂದಿನಿಂದ ಬರುತ್ತೇನೆ.'' ಎಂದರು.

ಶಾಸ್ತ್ರಿಗಳ ಮುಖದ ಬಿಗಿ ಸಡಿಲವಾಗಿ, ''ಇದೀಗ ಸರಿ'' ಎಂದು ಸಮ್ಮತಿ ಸೂಚಿಸುವ, ಸುಪ್ರಸನ್ನತೆಯ, ಗೆಲವಿನ ಮುದ್ರೆ ಮೂಡಿತು. ತಮ್ಮ ಗೆಲವಿನ ಭಾವವನ್ನು ಮಗನ ಕಡೆ ತಿರುಗಿ ಅವನಿಗೆ ಅರುಹಿದರು. ಅವನೂ ಹಲ್ಲು ಕಿರಿದು, ತಂದೆಯ ಗೆಲುವಿನಲ್ಲಿ ಭಾಗಿಯಾದುದನ್ನು ತೋರ್ಪಡಿಸಿದ.

ಆ ತಂದೆ ಮಕ್ಕಳ ಜೋಡಿಗೂ ಈ ತಂದೆ ಮಕ್ಕಳ ಜೋಡಿಗೂ ಎಷ್ಟು ಅಂತರ! ಅವರೂ ಬ್ರಾಹ್ಮಣರೇ, ಇವರೂ ಬ್ರಾಹ್ಮಣರೇ! ಈ ವ್ಯತ್ಯಾಸ

ಹುಟ್ಟಿಗೆ ಸಂಬಂಧಪಟ್ಟದ್ದೋ, ವಿದ್ಯೆಗೆ ಸಂಬಂಧಪಟ್ಟದ್ದೋ, ಸ್ವಭಾವಕ್ಕೆ ಸಂಬಂಧಪಟ್ಟದ್ದೋ? ಹೇಳುವುದು ಕಷ್ಟ. ಸುಂದರ ಯಾವ ವಿದ್ಯೆ ಕಲಿಯುತ್ತಿದ್ದನೋ ವಿಶ್ವನಾಥನೂ ಅದೇ ವಿದ್ಯೆ ಕಲಿತಿದ್ದ. ನಂಜುಂಡ ಶಾಸ್ತ್ರಿಗಳು ವೈದಿಕವೃತ್ತಿಗೆ ಅವಶ್ಯವಾಗಿದ್ದ ಪ್ರಯೋಗ ಭಾಗಗಳನ್ನೂ ಕರ್ಮಕಾಂಡವನ್ನೂ ಹೆಚ್ಚಾಗಿ ಅಧ್ಯಯನ ಮಾಡಿದ್ದರೇ ಹೊರತು ವೈದಿಕ ಧರ್ಮದ ತಿರುಳಾದ ಉಪನಿಷತ್ತು, ಭಗವದ್ಗೀತೆ ಮುಂತಾದ ಉದ್ಗ್ರಂಥ ಗಳನ್ನು ವ್ಯಾಸಂಗ ಮಾಡಿ ಅವುಗಳ ಹೃದಯವನ್ನು ಕಂಡುಕೊಂಡಿರಲಿಲ್ಲ. ಇಷ್ಟು ಹೊರತಾಗಿ, ವಿದ್ಯೆಯಲ್ಲಿ ನಂಜುಂಡಶಾಸ್ತ್ರಿಗಳಿಗೂ ಕೃಷ್ಣಪ್ಪನವರಿಗೂ ಹೆಚ್ಚು ವ್ಯತ್ಯಾಸ ಇತ್ತು ಎಂದು ಹೇಳುವುದು ಕಷ್ಟವಾಗುತ್ತದೆ. ಆದರೂ ನಂಜುಂಡಶಾಸ್ತ್ರಿಗಳಿಗೆ 'ವಿದ್ವಾಂಸರು' ಎಂಬ ಸನ್ಮಾನವೇನೋ ಇತ್ತು. ಒಂದು ದೃಷ್ಟಿಯಲ್ಲಿ, ಕೃಷ್ಣಪ್ಪನವರಿಗಿಂತ ಶಾಸ್ತ್ರಿಗಳು ಹೆಚ್ಚು ಓದಿದವರು ಎಂದು ಹೇಳಲೇಬೇಕು. ಆದರೆ ಅವರ ಓದಿನಿಂದ ಅವರ ತಲೆಯ ತುಂಬ ಅಸಂಬದ್ಧ ಸಂಸ್ಕೃತ ಶ್ಲೋಕಗಳೂ ವೈದಿಕವೃತ್ತಿಗೆ ಅವಶ್ಯಕವಾದ ಮಂತ್ರ ಗಳೂ ಹಿಡಿದು ತುಂಬಿದ್ದುವೇ ಹೊರತು, ಬುದ್ಧಿ ಚುರುಕುಗೊಂಡಿರಲಿಲ್ಲ, ಮನಸ್ಸು ಹೃದಯಗಳು ವಿಶಾಲವಾಗಿರಲಿಲ್ಲ. ಆದರೂ, ಈಗಿನ ಅವರ ನಡವಳಿಕೆಯಿಂದ ಶಾಸ್ತ್ರಿಗಳು ಸ್ವಭಾವತಃ ಸಂಕುಚಿತ ಬುದ್ಧಿಯುವರೆಂದು ಹೇಳುವುದೂ ಕಷ್ಟ. ಏಕೆಂದರೆ, ಸುಂದರನಂತೆಯೇ ಅವರೂ ಕೂಡ ತಾವು ಈಗ ಮಾಡುತ್ತಿರುವುದು ಸರಿ ಎಂದು ಅವರು ಕಾಯಾವಾಚಾ ಮನಸಾ ನಂಬಿದ್ದರು. ಕೃಷ್ಣಪ್ಪನವರಿಗಾದರೋ ಯಾವ ಬಗೆಯ ವಿದ್ಯೆಯೂ ಇರಲಿಲ್ಲ. ಇಂಗ್ಲಿಷು ಮೂರನೆಯ ತರಗತಿಯ ವರೆಗೆ ಓದಿ, ವ್ಯಾಸಂಗ ಬಿಟ್ಟು, ತಂದೆಯ ಬಳಿ ಶಾನುಭೋಗವೃತ್ತಿಯ ಮರ್ಮಗಳನ್ನು ಕಲಿಯ ತೊಡಗಿದ್ದರು. ಇನ್ನು ಸ್ವಭಾವ ತೆಗೆದುಕೊಂಡರೆ, ಅವರವರ ಮಟ್ಟಿಗೆ ಎಲ್ಲರೂ ಒಳ್ಳೆಯವರೇ. ಪರಂಪರಾಗತವಾದ ಮೂಢ ನಂಬಿಕೆಯ ಹಿಡಿತ ನಂಜುಂಡಶಾಸ್ತ್ರಿಗಳ ಮೇಲೂ, ಅವರ ಮಗನ ಮೇಲೂ ಅತ್ಯಂತ ಪ್ರಬಲ ವಾಗಿದ್ದು, ಕೃಷ್ಣಪ್ಪನವರ ಮೇಲೆ ಅಷ್ಟಾಗಿ ಇರಲಿಲ್ಲವೆಂದು ಹೇಳಬೇಕು. ಆದ್ದರಿಂದಲೇ ಅವರು ತಮ್ಮ ಬುದ್ಧಿಯ ದಾಸರಾಗಿರದೆ ಹೃದಯದ ದಾಸ ರಾಗಿದ್ದರು. ಆದರೂ, ಹೃದಯ ಹೇಳಿದಂತೆ ಕೇಳುವಾಗ, ಸಮಾಜವನ್ನು

ಎದುರಿಸದ ರೀತಿಯಲ್ಲಿ, ಮೇಲೆ ಹಾಕಿಕೊಳ್ಳದ ರೀತಿಯಲ್ಲಿ, ಅದರ ಆಣತಿಯನ್ನು ಪಾಲಿಸುತ್ತಿದ್ದರು. ಸುಂದರನಾದರೂ, ತಾನು ಕಲಿತ ಪಾಶ್ಚಾತ್ಯ ವಿದ್ಯೆಯಿಂದ ತನ್ನ ವಿಚಾರಬುದ್ಧಿಯನ್ನು ಹರಿತ ಮಾಡಿಕೊಂಡಿದ್ದ. ನಂಬಿಕೆ ಮೂಢವೆಂದು ತಿಳಿದಾಗ ಅದು ಕತ್ತರಿಸಿ ಹೋಗುತ್ತಿತ್ತು. ಅವನೂ ತನ್ನ ತಂದೆಯಂತೆಯೇ ಹೃದಯದ ದಾಸ: ಅವನಿಗೆ ವಿಚಾರಬುದ್ಧಿಯ ನೆರವೂ ಇದ್ದದ್ದರಿಂದ ಹೃದಯದ ಆಣತಿಯನ್ನು ವಿಚಾರಬುದ್ಧಿಯ ಬೆಳಕಿನಲ್ಲಿ ಪಾಲಿಸಹೋಗುತ್ತಿದ್ದ. ಆದ್ದರಿಂದ, ತಾನು ಮಾಡುತ್ತಿರುವುದು ಸರಿ ಎಂಬ ಆತ್ಮನಿಷ್ಠೆ ಅವನಲ್ಲಿ ಕ್ರಮಕ್ರಮವಾಗಿ ಬೆಳೆಯುತ್ತಿತ್ತು. ಆದರೆ ವಿಶ್ವನಾಥ ಪಾಶ್ಚಾತ್ಯ ವಿದ್ಯೆಯಿಂದ ನಿಜವಾದ ಪ್ರಯೋಜನ ಹೊಂದಿದಂತೆ ಕಾಣಲಿಲ್ಲ. ತನ್ನಲ್ಲಿ ಇಂಗ್ಲಿಷು ವಿದ್ಯೆಯ ಜೊತೆಗೆ ಸಂಸ್ಕೃತದ ಜ್ಞಾನವೂ ಇದೆಯೆಂಬ ಆತ್ಮಪ್ರತಿಷ್ಠೆ ಪ್ರಬಲಿಸುತ್ತ ಬರುತ್ತಿತ್ತು. ಇದರಿಂದಾಗಿ ಅವನ ಬಾಲ್ಯದ ಒಳ್ಳೆಯತನ ಕ್ರಮಕ್ರಮವಾಗಿ ಮಸುಳಿಸುತ್ತಾ ಬರುತ್ತಿದ್ದು, ಕೆಲವು ವೈಪರೀತ್ಯಗಳಿಗೆ ಎಡೆಕೊಡುತ್ತಿತ್ತು. ಅವನು ಸುಂದರ ಹೇಗಾದರೂ ಇದ್ದುಕೊಳ್ಳಲಿ ಎಂದು ತನ್ನ ಪಾಡಿಗೆ ತಾನಿರುವುದು ಬಿಟ್ಟು, ಅವನ ಮೇಲೆ ದ್ವೇಷಾಸೂಯೆಗಳನ್ನು ಸಾಧಿಸಲು ತೊಡಗಿದ್ದ. ಇದರಿಂದ ಅವನಿಗೆ ಈಷದಪಿ ಪ್ರಯೋಜನವೂ ಇರಲಿಲ್ಲ. ಆದರೆ ಅದರಿಂದ ಅವನಿಗೆ ತೃಪ್ತಿಯಿದ್ದುದರಿಂದ ಅವನ ಈ ವರ್ತನೆ ಒಂದು ವೈಪರೀತ್ಯವಾಗಿ ಪರಿಣಮಿಸುತ್ತಿತ್ತು. ಬಿರುಗಾಳಿಯ ಜೊತೆಯ ಧೂಳಿನಂತೆ, ಅವನ ಈ ಕೀಳು ವರ್ತನೆಯ ಹಿಂದೆಯೇ ಮಿಥ್ಯಾರೋಪಣ ಕಾಲು ಹಾಕುತ್ತಿತ್ತು. ಈಗ, ಚೆನ್ನಿ ಗಾಡಿಯಲ್ಲಿ ಮಲಗಿದ್ದಾಳೆಂದು ಹೇಳುವಾಗ, ಅವಳ ತಲೆ ಸುಂದರನ ತೊಡೆಯ ಮೇಲಿತ್ತು ಎಂದು ಹೇಳಿಬಿಟ್ಟಿದ್ದ. ಆದರೆ ವಾಸ್ತವವಾಗಿ ಹಾಗೆ ಇರಲಿಲ್ಲ. ಆದರೆ, ಸುಂದರ ಹಾಗೆ ಚೆನ್ನಿಯ ತಲೆಯನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡಿದ್ದರೆ ಅದರಲ್ಲಿ ಆಶ್ಚರ್ಯವೇನಿರಲಿಲ್ಲ. ತೊಡೆಯ ಮೇಲೆ ಅವಳ ತಲೆ ಇರಿಸಿಕೊಂಡ ಮಾತ್ರಕ್ಕೆ ಸ್ಪರ್ಶದೋಷ ಹೆಚ್ಚುತ್ತಿರಲಿಲ್ಲ. ಆದರೂ, ಶಾಸ್ತ್ರಿಗಳ ಮನಸ್ಸಿಗೆ ಆ ರೀತಿಯ ನಡವಳಿಕೆ ಹೆಚ್ಚು ಅ-ಸಹ್ಯವಾಗಿ ಕಂಡಿತು. ಮಗ ಸುಳ್ಳು ಹೇಳಿರಲಾರ. ಅಲ್ಲದೆ, ಸುಂದರ ಚೆನ್ನಿಯನ್ನು ಎತ್ತಿಕೊಂಡು ಹೋದುದನ್ನು ತಾವೇ ಕಣ್ಣಾರೆ ಕಾಣಲಿಲ್ಲವೆ?

ಸ್ಥೂಲದಲ್ಲಿ ಹೀಗಿತ್ತು ಆ ತಂದೆಮಕ್ಕಳಿಗೂ ಈ ತಂದೆಮಕ್ಕಳಿಗೂ ವ್ಯತ್ಯಾಸ.

'ಚೆನ್ನಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗು' ಎಂದ ಕೂಡಲೆ ಸುಂದರ ಚೆನ್ನಿಯನ್ನು ಮತ್ತೆ ಗಾಡಿಯಲ್ಲಿ ಮಲಗಿಸಿದ. ಕಾಳನಿಗೆ ಗಾಡಿ ಬಿಡು ಎಂದ. ಕಾಳ ಗಾಡಿಯನ್ನು ಹಿಂಪಕ್ಕೆ ತಿರುಗಿಸಿ, ಎತ್ತುಗಳನ್ನು ಜೋಡಿಸಿದ. "ಮಾದಿಗನ ಮಗಳ ಮೈಲಿಗೆ ಹಾರುವರ ಕೇರಿಯಲ್ಲಿ ಏಕೆ ಇರಬೇಕು, ಬೇಗ ಊರಾಚೆಗೇ ಒಯ್ಯೋಣ. ಎಲ್ಲರೂ ಹೇಳಿದಂತೆ ದುಡಿಯುವ ಎತ್ತು ನಾನು" ಎಂದು ಸವರ್ಣದವರೊಡನೆ ಸಹಕರಿಸುವ ರೀತಿಯಲ್ಲಿ ಕಾಳನ ಎತ್ತುಗಳು ಜೋರು ನಡಿಗೆಯಲ್ಲಿ ಹೋಗತೊಡಗಿದುವು. ಗಾಡಿ ದಡಬಡ ಎಂದು ಅತ್ತಿತ್ತ ತೂಗಾಡತೊಡಗಿತು. "ಗಾಡಿ ಕುಲುಕುತ್ತೆ, ಎತ್ತುಗಳನ್ನು ನಿಧಾನವಾಗಿ ಬಿಡು" ಎಂದು ಸುಂದರ ಕಾಳನಿಗೆ ಹೇಳಿದ. ಸುಂದರನ ಮನಸ್ಸಿನಲ್ಲೇನೋ ತಟ್ಟನೆ ಎತ್ತುಗಳ ಭಾವನೆ ಹೊಳೆಯಿತು. ಹರಿಜನರನ್ನು ಅಸ್ಪೃಶ್ಯರು ಎಂದು ದೂರ ಇಟ್ಟಿರುವುದು ಸರಿಯಲ್ಲವೆಂದು ತನ್ನಂಥ ಅನೇಕ ಮಂದಿ ವಿದ್ಯಾವಂತ ತರುಣರಿಗೆ ಖಚಿತವಾಗಿದ್ದರೂ, ತನ್ನ ತಂದೆಯಂಥ ಅನೇಕ ಮಂದಿ ಸ್ವಭಾವತಃ ವಿಶಾಲಹೃದಯವುಳ್ಳ ಸದ್ಗೃಹಸ್ಥರಿಗೂ ಕೂಡ ಹಾಗೆಯೇ ಸರಿಯಲ್ಲವೆಂದು ಅಸ್ಪಷ್ಟವಾಗಿಯಾದರೂ ಗೋಚರವಾಗುತ್ತಿದ್ದರೂ, ತಾವೆಲ್ಲ ಹೀಗೆ ಸಂಪ್ರದಾಯಕ್ಕೆ ಕಟ್ಟುಬಿದ್ದು ನಡೆದುಕೊಳ್ಳುತ್ತಿರುವುದು ಎತ್ತು ಗಾಡಿ ಎಳೆಯುತ್ತಿರುವಂತೆ ಎಂದು ಸುಂದರನಿಗೆ ತೋರಿತು. ಸಮಾಜ ಗಾಡಿ, ತಾವೇ ಎತ್ತುಗಳು; ಶಾಸ್ತ್ರಿಗಳಂಥವರು ಗಾಡಿ ಹೊಡೆಯುವವರು. 'ಅಯ್ಯೋ ಎತ್ತಿನ ಗಾಡಿಯ ನಡಿಗೆಯೇ!'— ಎಂದುಕೊಳ್ಳುತ್ತ ಸುಂದರ ನಿಧಾನವಾಗಿ ಗಾಡಿಯ ಜೊತೆಗೆ ನಡೆಯುತ್ತ ಹೋದ.

ಗಾಡಿ ಹೊರಟ ಕೂಡಲೆ ಕೃಷ್ಣಪ್ಪನವರು ಒಳಕ್ಕೆ ಹೋಗಿ, ಮಕ್ಕಳಿಗೆ ಬಡಿಸಿ ತಾನೂ ಊಟ ಮಾಡುವಂತೆ ಹೆಂಡತಿಗೆ ಹೇಳಿ, ಅಂಗಿ ರುಮಾಲು ಹಾಕಿಕೊಂಡು ಹೊರಕ್ಕೆ ಬಂದರು. ನಂಜುಂಡಶಾಸ್ತ್ರಿಗಳೂ ವಿಶ್ವನಾಥನೂ ಇನ್ನೂ ನಿಂತಲ್ಲಿಯೇ ನಿಂತಿದ್ದರು.

"ಶಾಸ್ತ್ರಿಗಳಿಗೆ ಅಕಾರಣವಾಗಿ ಮೈಲಿಗೆಯಾದಂತಾಯಿತು. ದಯ

ಬಿಟ್ಟು ಕ್ಷಮಿಸಬೇಕು.'' ಎಂದು ಹೇಳಿ ಕೃಷ್ಣಪ್ಪನವರು ಬಿರಬಿರನೆ ಹೊರಟು ಗಾಡಿಯ ಜೊತೆಗೆ ಸೇರಿಕೊಂಡರು.

'' ಕಲಿಗಾಲ ! ಕಲಿಗಾಲ ! " ಎಂದುಕೊಂಡು ಶಾಸ್ತ್ರಿಗಳು ಮನೆಯ ಕಡೆಗೆ ಹಿಂದಿರುಗಿದರು. " ನಮ್ಮಂಥವರು ಇರುವ ವರೆಗೂ ಏನೂ ಭಯವಿಲ್ಲ ವಪ್ಪ '' ಎಂದು ವಿಶ್ವನಾಥಶಾಸ್ತ್ರಿ ಹೇಳುತ್ತ ತಂದೆಯನ್ನು ಹಿಂಬಾಲಿಸಿದ.

೨೩

ಡಾಕ್ಟರು ಆಸ್ಪತ್ರೆಯ ಬಾಗಿಲನ್ನು ಮುಚ್ಚಿಕೊಂಡು ಮನೆಗೆ ಹೋಗಿ ಆಗ ತಾನೇ ಅಂಗಿ ಬಿಚ್ಚಿ, ಷರಾಯಿ ಕಳಚುತ್ತಾ ಕುರ್ಚಿಯ ಮೇಲೆ ಕುಳಿತಿದ್ದರು. ಸುಂದರ ಕೃಷ್ಣಪ್ಪನವರು ಇಬ್ಬರೂ ಒಟ್ಟಿಗೆ ಬಂದದ್ದನ್ನು ನೋಡಿ " ಚೆನ್ನಿ ಹುಷಾರಾಗಿ ಇದ್ದಾಳೆ ತಾನೆ? ಏನೂ ಗಾಬರಿಯಿಲ್ಲವಲ್ಲಾ? " ಎಂದು ಪ್ರಶ್ನಿಸಿದರು ; '' ದಯಮಾಡಿ, ಕುಳಿತುಕೊಳ್ಳಿ " ಎಂದು ಪಕ್ಕದಲ್ಲಿದ್ದ ಕುರ್ಚಿಗಳಕಡೆ ಕೈತೋರಿಸಿದರು. ಆದರೆ, ಕೃಷ್ಣಪ್ಪ, ಸುಂದರ ನಿಂತೇ ಇದ್ದರು. " ಏನು ಸಮಾಚಾರ? " ಎಂದು ಮತ್ತೆ ಪ್ರಶ್ನಿಸುತ್ತ ಡಾಕ್ಟರು ತಾವೂ ಎದ್ದು ನಿಂತು, ಅಲ್ಲಿಯೇ ಬಟ್ಟೆಯ ನಿಲುವಿನ ಮೇಲಿದ್ದ ಪಂಚೆಯನ್ನು ಎಳೆದು ಕೊಂಡು ಲುಂಗಿ ಸುತ್ತಿಕೊಂಡು, ಒಂದು ಟವಲನ್ನು ಹೆಗಲ ಮೇಲೆ ಹಾಕಿ ಕೊಂಡು ತಾವು ಊಟಕ್ಕೆ ಹೊರಡುತ್ತಿರುವ ಸಿದ್ಧತೆಯನ್ನು ಸೂಚಿಸಿದರು.

'' ತಮಗೆ ಊಟದ ಹೊತ್ತು ಅಂತ ಕಾಣುತ್ತೆ '' ಎಂದು ಕೃಷ್ಣಪ್ಪ ನವರು ಉಪಚಾರದ ಮಾತಾಡಿದರು.

'' ಡಾಕ್ಟರ ಕೆಲಸ ಮಾಡುವವರು ಊಟ ನಿದ್ದೆ ಅಂತ ಇದ್ದರಾಗುತ್ತದೆಯೇ? 'Service of Humanity,' ಮಾನವ ಸೇವೆ, ಅದೇ ಡಾಕ್ಟರನ ಧ್ಯೇಯವಾಗಿರಬೇಕು. ನಮ್ಮ ಕ್ರಿಸ್ತಮತದ ಮುಖ್ಯ ತತ್ವಗಳಲ್ಲೊಂದಾಗಿದೆ, ಅದು.... ''

ಡಾಕ್ಟರ ಬಾಯಿಂದ ಕ್ರಿಸ್ತಮತದ ತತ್ತ್ವಗಳನ್ನು ಸುಂದರ ಹಲವು ಬಾರಿ ಕೇಳಿದ್ದ; ಸ್ನೇಹದ ಸಲಿಗೆಯಲ್ಲಿ '' ನೀವು ಡಾಕ್ಟರ ಕೆಲಸ ಬಿಟ್ಟು ಮಿಷನರಿ ವೃತ್ತಿ ಅವಲಂಬಿಸಿದರೆ ಮೇಲು " ಎಂದು ಅನೇಕ ವೇಳೆ ಪರಿಹಾಸ ಮಾಡಿದ್ದ; ಅದಕ್ಕೆ ಡಾಕ್ಟರು, '' ನಾನು ವೈದ್ಯವೃತ್ತಿಯಲ್ಲಿದ್ದೇ ಮಿಷನರಿ

ಕೆಲಸ ಮಾಡುತ್ತೀನೆ.'' ಎಂದು ನಗುತ್ತ ಉತ್ತರಕೊಟ್ಟಿದ್ದರು.

ಡಾಕ್ಟರು ತಮ್ಮ ಮತದ ವಿಷಯ ಮಾತಾಡುವುದಕ್ಕೆ ಮೊದಲುಮಾಡಿ ಬಿಟ್ಟರೆ ಅದಕ್ಕೆ ನಿಲುಗಡೆಯೇ ಇಲ್ಲವೆಂದು ಸುಂದರ ಚೆನ್ನಾಗಿ ಅರಿತಿದ್ದ. ಈಗ ಅತ್ಯಂತ ತುರ್ತಿನ ಸಂದರ್ಭವಾದ್ದರಿಂದ ಅವರ ಮಾತಿಗೆ ಪ್ರೋತ್ಸಾಹ ಕೊಡುವ ಮನೋಧರ್ಮದಲ್ಲಿರಲಿಲ್ಲ ಸುಂದರ.

''ನಿಮ್ಮ ತತ್ತ್ವಗಳನ್ನು ಕೇಳಲು ನಾನು ಸದಾ ಸಿದ್ಧನಾಗಿದ್ದೇನೆ. ಈಗ ನೀವು ಒಂದು ದೊಡ್ಡ ಉಪಕಾರ ಮಾಡಬೇಕು. ಚೆನ್ನಿಯನ್ನು ಕರೆದು ಕೊಂಡು ಬಂದಿದ್ದೇನೆ. ದೊಡ್ಡಮನಸ್ಸು ಮಾಡಿ ಅವಳನ್ನು ಎಲ್ಲಾದರೂ ಇರಿಸಿಕೊಳ್ಳಬೇಕು'' ಎಂದು ಸುಂದರ ಅತ್ಯಂತ ದೀನನಾಗಿ ಬೇಡಿಕೊಂಡ.

"ಎಲ್ಲಾದರೂ ಎಂದರೆ ಎಲ್ಲಯ್ಯಾ ಇರಿಸಿಕೊಳ್ಳುವುದು ? ನಮ್ಮ ಮನೆಯಲ್ಲೇ ಇರಿಸಿಕೊಳ್ಳಬೇಕು ಅಷ್ಟೆ."

"ನನ್ನ ಅಭಿಪ್ರಾಯವೂ ಅದೇ" ಎಂದು ಕೃಷ್ಣಪ್ಪನವರು ಒಂದು ನೋಟಿನ ತೆಕ್ಕೆಯನ್ನು ಜೇಬಿನಿಂದ ತೆಗೆದು ಹತ್ತಿರದಲ್ಲಿಯೇ ಇದ್ದ ಗುಂಡು ಮೇಜಿನ ಮೇಲಿಟ್ಟರು.

''ಕೃಷ್ಣಪ್ಪನವರೇ, ನಾನು ಈ ಉದ್ದೇಶದಿಂದ ಹೇಳಲಿಲ್ಲ'' ಎಂದರು ಡಾಕ್ಟರು.

''ನನಗೂ ಗೊತ್ತು'' ಎಂದರು ಕೃಷ್ಣಪ್ಪನವರು.

"ಸರಿ ; ಬಾಯಲ್ಲಿ ಸೇವೆ ಸೇವೆ ಎಂದು ಒದರಿ ಸಮಯ ಬಂದಾಗ ಮಾಡದಿದ್ದರೆ ಪರಮಾತ್ಮ ಮೆಚ್ಚುತ್ತಾನೆಯೆ ?'' ಎಂದು ಹೇಳಿ ತಮ್ಮ ಹೆಂಡತಿ ವಿಮಲಮ್ಮನನ್ನು ಕರೆದು, ಒಂದು ಚಾಪೆಯನ್ನೂ ಕಂಬಳಿಯನ್ನೂ ಹಾಸುವ ಹಾಗೆ ಹೇಳಿದರು. ವಿಮಲಮ್ಮ ಸಿಡಿಗುಟ್ಟುತ್ತಾ ಒಂದು ಹರುಕು ಚಾಪೆಯನ್ನೂ ಜೂಲುಕಂಬಳಿಯನ್ನೂ ತಂದು ಮೂಲೆಯಲ್ಲಿ ಹಾಸಿದರು. ಸುಂದರ ಗಾಡಿಯಿಂದ ಚೆನ್ನಿಯನ್ನು ಕರೆತಂದು ಹಾಸಿಗೆಯಮೇಲೆ ಮಲಗಿಸಿದ. ಡಾಕ್ಟರು ಅವಳನ್ನು ಮತ್ತೆ ನಿಧಾನವಾಗಿ ಪರೀಕ್ಷೆಮಾಡಿ "ನೀವು ಕರೆದು ಕೊಂಡು ಬಂದದ್ದು ಒಳ್ಳೆಯದಾಯಿತು'' ಎಂದು ಹೇಳಿ, ಮನೆಯಲ್ಲಿಯೇ ಕಪಾಟಿನಲ್ಲಿದ್ದ ಕೈಗಾವಲು ಔಷಧಿಗಳ ಪೈಕಿ ಒಂದರಿಂದ ಸ್ವಲ್ಪವನ್ನು ರೋಗಿಗೆ ಕುಡಿಸಿ, "ನಿಮಗೆ ಊಟಕ್ಕೆ ಹೊತ್ತಾಗುತ್ತೆ. ಇನ್ನು ನೀವು ಹೊರಡಿ.

ಚೆನ್ನಿಯ ಜವಾಬುದಾರಿ ಇನ್ನು ನನ್ನದು" ಎಂದು ಡಾಕ್ಟರು ಹೇಳಿದರು.

ಕೃಷ್ಣಪ್ಪನವರು "ನಮಸ್ಕಾರ, ಬರ್ತೀನೆ" ಎಂದರು. ಸುಂದರನೂ ಡಾಕ್ಟರಿಗೆ ವಂದನೆ ಹೇಳಿದ. ತಂದೆಮಕ್ಕಳಿಬ್ಬರೂ ಸಮಾಧಾನಚಿತ್ತದಿಂದ ಹೊರಹೊರಟರು.

ಡಾಕ್ಟರು ಬಂದು ನೋಟುಗಳನ್ನು ಎಣಿಸಿದರು, ಹತ್ತು ಐದು ರೂಪಾಯಿಗಳ ನೋಟುಗಳಿದ್ದುವು. "ಚೆನ್ನಿಗೆ ಏನಾದರೂ ತಂದು ಹೊದಿಸು, ಕಂಬಳಿಯನ್ನೆ ತಂದು ಹೊದಿಸು" ಎಂದು ಡಾಕ್ಟರು ಹೆಂಡತಿಗೆ ಕೂಗಿ ಹೇಳಿದರು. ಹೆಂಡತಿ ಹೂಗೊಡಲಿಲ್ಲ. ತಾವೇ ಹೋಗಿ ಒಂದು ಒಳ್ಳೆಯ ಕಂಬಳಿಯನ್ನೆ ತಂದು ಚೆನ್ನಿಗೆ ಹೊದಿಸಿದರು. "ನಮ್ಮ ಸೇವೆ ವ್ಯರ್ಥವಾಗುವುದಿಲ್ಲ. ಇಲ್ಲಿ ನೋಡು" ಎಂದು ನೋಟುಗಳನ್ನು ಬಿಡಿ ಬಿಡಿಯಾಗಿ ಎಣಿಸಿ ಹೆಂಡತಿಯ ಕೈಗೆ ಹಾಕಿದರು. ವಿಮಲಮ್ಮ ಸುಪ್ರೀತಳಾಗಿಹೋದಳು.

೨೪

ಮನೆಗೆ ಬಂದ ಮೇಲೆ ಕೃಷ್ಣಪ್ಪನವರು ಬಟ್ಟೆಗಳನ್ನೆಲ್ಲಾ ನೆನೆಸಿ ಸ್ನಾನಮಾಡಿದರು. ನರಸಮ್ಮನವರು ಯಜಮಾನರು ಬರುವುದಕ್ಕಾಗಿಯೇ ಎಲೆ ಹಾಕಿ ಕಾದಿದ್ದರು. ಸುಂದರನೂ ತನ್ನ ಬಟ್ಟೆಗಳನ್ನೆಲ್ಲಾ ತೋಯಿಸಿ ಮತ್ತೆ ಸ್ನಾನ ಮಾಡಿದ. ಸ್ನಾನ ಮಾಡಿ, ಯಾವುದಾದರೂ ಅಣಿಯಾದ ಪಾತ್ರೆಯಲ್ಲಿ ಮಾದನಿಗೆ ಊಟ ಹಾಕಿಕೊಡಬೇಕೆಂದು ತಾಯಿಯನ್ನು ಕೇಳಿದ. ಕೃಷ್ಣಪ್ಪನವರು ಅಚ್ಚರಿಗೊಂಡು "ಏನು ಸಮಾಚಾರ ?" ಎಂದು ಕೇಳಿದರು. ಸುಂದರ ತಾನು ಮಾದನನ್ನು ಯಾವ ಸ್ಥಿತಿಯಲ್ಲಿ ಕಂಡೆನೆಂಬುದನ್ನೂ ವಿವರಿಸಿ ಹೇಳಿದ. "ಅಯ್ಯೋ ಬಡಪ್ರಾಣಿ! ಎಷ್ಟು ದಿನದಿಂದ ಹೀಗೆ ಉಪವಾಸವೋ ಗೊತ್ತಾಗಲಿಲ್ಲವಲ್ಲಾ. ನನಗೆ ತಿಳಿಯದೆ ಮೋಸ ಹೋದೆನಲ್ಲಾ. ಗೊತ್ತಿದ್ದರೆ ಸೂರಿಯ ಕೈಲಿ ಅವನಿಗೂ ಅನ್ನ ಕಳಿಸಿ ಕೊಡುತ್ತಿದ್ದೆ. ಚೆನ್ನಿಯ ಖಾಯಿಲೆಯನ್ನು ಇಷ್ಟೊಂದು ಮನಸ್ಸಿಗೆ ಹಚ್ಚಿ ಕೊಳ್ಳುತ್ತಾನೆ ಮಾದ ಎಂದು ನಾನು ತಿಳಿದಿರಲಿಲ್ಲ" ಎಂದು ತುಂಬ ಪೇಚಾಡಿದರು ಕೃಷ್ಣಪ್ಪನವರು.

"ಮರೆತೇಬಿಟ್ಟಿರಾ? ಹೋದವರ್ಷ ತುಂಗೆಗೆ ಎರಡು ದಿನ ಸ್ವಲ್ಪ ಹೆಚ್ಚಾಗಿ ಜ್ವರ ಬರುವ ಹೊತ್ತಿಗೆ ನೀವು ಒಂದು ದಿನವೆಲ್ಲಾ ಊಟ ಮಾಡದೆ

ಇರಲಿಲ್ಲವೆ?" ಎಂದು ನರಸಮ್ಮನವರು ಅಡಿಗೆ ಕೋಣೆಗೆ ಹೋದರು.

"ಹೌದು, ಹೆತ್ತ ಕರುಳು ಅಂದರೆ ಹಾಗೆ ಬಾಧಿಸುತ್ತೆ. ಅಂದ ಹಾಗೆ, ತುಂಗೆಗೆ ವಾಸಿಯಾದರೆ ನಂಜನಗೂಡಿಗೆ ಯಾತ್ರೆ ಹೋಗಬೇಕೆಂದು ಹರಸಿಕೊಂಡಿದ್ದೆಯಲ್ಲ, ಎಷ್ಟು ದಿನ ಮುಂದಕ್ಕೆ ತಳ್ಳುವುದು? ಮನೆಯ ಕಡೆ ನೋಡಿಕೊಳ್ಳುವುದಕ್ಕೆ ಯಾರಾದರೂ ಇರಬೇಕಾಗುತ್ತೆ. ಚೆನ್ನಿಗೆ ಹುಷಾರಾದ ಕೂಡಲೆ ನಂಜನಗೂಡಿಗೆ ಹೋಗಿಬಿಟ್ಟು ಬರೋಣ. ಏನನ್ನುತಿ?" ಎಂದು ಅಡಿಗೆಯ ಮನೆಯ ಬಾಗಿಲಲ್ಲಿ ನಿಂತು ಕೃಷ್ಣಪ್ಪನವರು ಹೆಂಡತಿಯನ್ನು ಕೇಳಿದರು.

ಸುಂದರ ತನ್ನ ಮನಸ್ಸಿನಲ್ಲಿ—"ನಂಜುಂಡೇಶ್ವರನ ದಯದಿಂದ ಚೆನ್ನಿಗೂ ವಾಸಿಯಾದರೆ....ಅಯ್ಯೋ, ಹರಕೆಯಿಂದೇನಾದೀತು? ಅವಳಿಗೆ ಆಯುಸ್ಸಿದ್ದರೆ ಬದುಕಿಕೊಳ್ಳುತ್ತಾಳೆ. ಅಥವಾ ದೇವರ ವರಪ್ರಸಾದ ಬೇಕಾದರೆ, ಇದ್ದಲ್ಲಿಂದಲೇ ಬೇಡಿಕೊಂಡರಾಗವೆ? ಮನಃಪೂರ್ವಕವಾದ ಬೇಡಿಕೆ ಸಾಲದೆ? ದೇವರಿಗೆ ಹರಕೆಯ ಲಂಚವೇಕೆ?...." ಎಂದು ಮುಂತಾಗಿ ವಿಚಾರಮಾಡುತ್ತಿದ್ದ.

ಕಟ್ಟಿದ ಅನ್ನವನ್ನು ಹೊರಕ್ಕೆ ತಂದಿಡುತ್ತ ನರಸಮ್ಮನವರೆಂದರು: "ವರ್ಷವೇ ಆಯಿತಂತೆ; ಈಗೇನು ಅವಸರ. ಜಾತ್ರೆಯ ಕಾಲಕ್ಕಾದರೂ ಹೋದರೆ ಒಂದುಂಟು ಎರಡುಂಟು."

"ಮನೆಯ ಕಡೆ ಯಾರಾದರೂ ನೋಡಿಕೊಳ್ಳುವವರಿರಬೇಕೋ ಬೇಡವೊ? ಸುಂದರ ಮೈಸೂರಿಗೆ ಹೋಗುವುದಕ್ಕೆ ಮುಂಚೆಯೇ ನಾವು ನಂಜನಗೂಡಿಗೆ ಹೋದರೆ ಸುಂದರ ಮನೆಗೆ ಕಾವಲಾಗಿರುತ್ತಾನೆ" ಎಂದರು ಕೃಷ್ಣಪ್ಪನವರು. ತಂದೆಯ ಮಾತನ್ನು ಸುಂದರ ಅನುಮೋದಿಸಿದ.

"ಸುಂದರಾ, ನೀನು ಊಟ ಮಾಡಿ ಸ್ವಲ್ಪ ಮಲಗಿಕೊ. ಪ್ರಯಾಣ ಮಾಡಿ ಬಳಲಿದ್ದೀಯೆ. ನಾನು ಅನ್ನ ತೆಗೆದುಕೊಂಡು ಹೋಗಿ ಮಾದನಿಗೆ ಕೊಟ್ಟುಬರುತ್ತೇನೆ" ಎಂದು ಕೃಷ್ಣಪ್ಪನವರು ಅನ್ನದ ಗಂಟು ಕೈಲಿ ಹಿಡಿದುಕೊಂಡರು. ಇದನ್ನು ಕಂಡು ನರಸಮ್ಮನವರು "ಹೊತ್ತಾಯಿತು, ನೀವೂ ಊಟಕ್ಕೇಳಿ. ಸೂರಿಗೇನು ಕೆಲಸ? ಕೊಟ್ಟುಬಿಟ್ಟು ಬರುತ್ತಾನೆ" ಎಂದು ನುಡಿದರು.

"ಅನ್ನ ಮುಂದಿಟ್ಟು ಬಂದರಾಗುತ್ತೆಯೆ? ತಿನ್ನುವುದಕ್ಕೂ ಮಾದನ ಕೈಲಾಗುತ್ತೆಯೋ ಇಲ್ಲವೊ! ನೀನು ಊಟಕ್ಕೇಳು ಸುಂದರ" ಎಂದು ಕೃಷ್ಣಪ್ಪನವರು ಅನ್ನದ ಬುತ್ತಿ ಹಿಡಿದು ಹೊರಟೇಬಿಟ್ಟರು.

ಕೃಷ್ಣಪ್ಪನವರು ಊಹಿಸಿದ್ದಂತೆ ಮಾದ ಎದ್ದು ಕುಳಿತು ತಿನ್ನುವ ಸ್ಥಿತಿಯಲ್ಲಿರಲಿಲ್ಲ. ಅವರು ಎರಡನೆಯ ಯೋಚನೆಯನ್ನೇ ಮಾಡದೆ, ಅನ್ನವನ್ನು ತುತ್ತುತುತ್ತಾಗಿ ಮಾದನಿಗೆ ತಿನ್ನಿಸುತ್ತ ಬಂದರು. ಮೊದಲು, ತನಗೆ ಏನೂ ಬೇಡವೆಂದು ಮಾದ ಸನ್ನೆ ಮಾಡಿದ; ಕೃಷ್ಣಪ್ಪನವರು ತನ್ನನ್ನು ಮುಟ್ಟಿಸಿಕೊಂಡದ್ದಕ್ಕೆ ದೃಷ್ಟಿಯಿಂದಲೇ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದ. ಕೃಷ್ಣಪ್ಪನವರು ಒಂದೆರಡು ಪ್ರೀತಿಯ ಬೈಗುಳನ್ನು ಬೈದ ಮೇಲೆ ನಾಲ್ಕಾರು ತುತ್ತು ನುಂಗಿದ.

ಕೃಷ್ಣಪ್ಪನವರು ಎಂದೂ ಮಾದನ ಗುಡಿಸಿಲೊಳಗೆ ಹೊಕ್ಕು ನೋಡಿರಲಿಲ್ಲ. ಚೆನ್ನಿಯು ಒಂದು ಮಾಸಲು ಬಣ್ಣದ ಹರಕು ಸೀರೆ, ಒಂದೆರಡು ರಂಧ್ರಮಯ ಕುಪ್ಪಸ, ಮಾದನ ಹರುಕು ಕಂಬಳಿ ಒಂದು, ಈಚಲು ಚಾಪೆ ಒಂದು, ಮಡಕೆಕುಡಿಕೆಗಳು ಹಲವಾರು, ಎಣ್ಣೆ ಸೀಸೆಗಳು ಒಂದೆರಡು, ಖಾಲಿ ಶೀಸೆಗಳು ಒಂದೆರಡು, ಒಂದು ಬೀಸುವ ಕಲ್ಲು, ರಾಗಿ ತುಂಬುವ ಗುಡಾಣ ಒಂದು, ಅವನು ಮೊದಲು ಮೂರೂಹೊತ್ತೂ ಬಡಿಯುತ್ತ ಇದ್ದು ಇಂದು ಮೂಲೆಯನ್ನು ಅಲಂಕರಿಸಿದ್ದ ಅವನ ಅಕ್ಕರೆಯ ಹರೆ—ಇಷ್ಟು ಹೊರತಾಗಿ ಅಲ್ಲಿ ಇನ್ನೇನೂ ಸಾಮಗ್ರಿಗಳಿರಲಿಲ್ಲ. ಕೃಷ್ಣಪ್ಪನವರಿಗೆ ಕ್ಷಣಕಾಲ ಕಣ್ಣುಗತ್ತಲೆ ಹಿಡಿಯಿತು, ಮಾದನ ಕುಟೀರದ ಕಡುಬಡತನದ ಚಿತ್ರ ನೋಡಿ. ಅದಕ್ಕೆಲ್ಲ ತಾವೇ ಹೊಣೆಯಲ್ಲವೆ? ಎಂದು ತಮಗೆ ತಾವೇ ಪ್ರಶ್ನೆ ಹಾಕಿಕೊಂಡರು. ಮಾದನೂ ಅವನ ಮಗಳು ಚೆನ್ನಿಯೂ ತಮ್ಮ ಕುಟುಂಬಕ್ಕೆ ಸೇರಿದವರೆಂದು ಎಲ್ಲರೊಡನೆಯೂ ಹೇಳಿಕೊಳ್ಳಲು ಕೃಷ್ಣಪ್ಪನವರು ಹಿಂಜರಿಯುತ್ತಿರಲಿಲ್ಲ. ಹರಿಜನರ ಉದ್ಧಾರ ಕಾರ್ಯ ಏನೆಂಬುದು ಕೂಡ ಅವರ ಅರಿವಿಗೆ ಬಂದಿಲ್ಲದಿದ್ದರೂ ಮಾದ ಮತ್ತು ಅವನ ಮಗಳು ಚೆನ್ನಿ ಸುಖವಾಗಿರಬೇಕೆಂದು ಅವರು ಬಯಸುತ್ತಿದ್ದರು. "ಮಾದ ಮುದುಕನಾಗುತ್ತಾ ಬಂದ. ಅವನು ಸತ್ತುಹೋದರೆ ಚೆನ್ನಿಯ ಗತಿ ಏನು?" ಎಂದು ಅವರು ಅನೇಕ ಸಲ ಚಿಂತಿಸದೆ ಇರಲಿಲ್ಲ. ಮುಂದೆ ಏನಾದರೂ ಆಗಲಿ, ಇಂದಿನ ಮಟ್ಟಿಗೆ, ತಾವು

ಬದುಕಿರುವ ವರೆಗೆ, ಅವರನ್ನು ಸುಖವಾಗಿಟ್ಟಿರಬೇಕೆಂದು ಕೃಷ್ಣಪ್ಪನವರು ತುಂಬ ಪ್ರಯತ್ನಪಡುತ್ತಿದ್ದರು. ಉಗಾದಿ ದೀವಳಿಗೆಗೆ ಮಾದನಿಗೂ ಚೆನ್ನಿಗೂ ಬಟ್ಟೆಗೆಂದು ಹಣ ಕೊಡುತ್ತಿದ್ದರು; ಆದರೂ ಅವನಾಗಲಿ ಚೆನ್ನಿಯಾಗಲಿ ಹೊಸ ಬಟ್ಟೆ ಧರಿಸಿದ್ದನ್ನು ಅವರು ಎಂದೂ ಕಂಡಿರಲಿಲ್ಲ. ತಮ್ಮ ಹಳೆಯ ಪಂಚೆಗಳನ್ನು ಮಾದನ ಮೈಮೇಲೂ, ತಂಗೆಯ ಹಳೆಯ ಲಂಗ ಸೀರೆ ಗಳನ್ನು ಚೆನ್ನಿಯ ಮೈಮೇಲೂ ಕಾಣುತ್ತಿದ್ದರು. ಇವೆಲ್ಲಾ ಅವರಿಗೆ ತಮ್ಮ ಹೆಂಡತಿಯ ದಾನವೆಂದು ಅವರು ತಿಳಿದಿದ್ದರು. ಇಷ್ಟಲ್ಲದೆ, ವರ್ಷಪೂರ್ತಿ ಆಗುವಷ್ಟು ರಾಗಿಯನ್ನೂ ಅಲ್ಪಸ್ವಲ್ಪ ಅಕ್ಕಿಯನ್ನೂ ಕೊಡುತ್ತಿದ್ದರು. ತೋಟದಲ್ಲಿ ಬೆಳೆದ ಹಣ್ಣುಹಂಪಲನ್ನೂ ತರಕಾರಿಯನ್ನೂ ಬೇಕಾದಷ್ಟು ಉಪಯೋಗಿಸಬಹುದೆಂದು ಮಾದನಿಗೆ ಅನುಜ್ಞೆ ಕೊಟ್ಟಿದ್ದರು. ಚೆನ್ನಿಗೆ ಮಾಂಸಾಹಾರವನ್ನು ಕೊಡಕೂಡದೆಂದೂ, ತಾವು ಚಿಕ್ಕಮಕ್ಕಳಿಗೆ ಕಾಫಿ ಕುಡಿಸುವ ರೀತಿಯಲ್ಲಿ ಅವಳಿಗೆ ಹೆಂಡ ಕುಡಿಸಕೂಡದೆಂದೂ ಕಟ್ಟಾಜ್ಞೆ ಮಾಡಿದ್ದರು. "ಮಾಂಸ ಎಂದರೆ ಚೆನ್ನಿಗೆ ಭಾಳ ಹೇಸಿಗೆ ಬುದ್ಧಿ. ನಾನು ಮಾಂಸ ಬೇಯಿಸೋ ದಿನ ಅವಳು ಗುಡಿಸಿಲಿನಾಗೆ ಸುಳಿ ಯೋಕಿಲ್ಲ. ನಾನೇ ಹೆಂಡ ಕುಡಿಯೋದಿಲ್ಲ, ಇನ್ನು ಅವಳಿಗೆ ಕುಡಿ ಸೇನಾ ?" ಎಂದು ಮಾದ ಧಣಿಗೆ ಭರವಸೆಯನ್ನು ಕೊಟ್ಟಿದ್ದ. ಹೆಂಡದ ವಿಚಾರದಲ್ಲಂತೂ ಮಾದನ ಮಾತಿನಲ್ಲಿ ಕೃಷ್ಣಪ್ಪನವರಿಗೆ ಸ್ವಲ್ಪವೂ ನಂಬಿಕೆ ಯಿರಲಿಲ್ಲ; ಅವನ ಮಾತು ಸುಳ್ಳು ಎಂದು ಅವರು ಬಲ್ಲರು. ತಾವು 'ಉಪ್ಪಿಚ್ಚ'ಕ್ಕೆಂದು ಮಾದನಿಗೆ ವಾರಕ್ಕೊಮ್ಮೆ ಕೊಡುತ್ತಿದ್ದ ಒಂದು ರೂಪಾಯನ್ನೂ ಅವನು ಹೆಂಡಕ್ಕೆ ಹಾಕುತ್ತಾನೆಂದು ಅವರು ನಂಬಿದ್ದರು. ಹೆಂಡಕ್ಕೆಂದು ಬಾಯಿಬಿಟ್ಟು ಕೇಳದಿದ್ದರೂ, ಮಾದ ಕೇಳಿ ಕೇಳಿಕೇಳದಾಗ ಅರ್ಧಾಣೆಯನ್ನೊ ಒಂದಾಣೆಯನ್ನೊ ಕೈಗೆ ಹಾಕುತ್ತಿದ್ದರು. ಹಬ್ಬ ಹರಿ ದಿನ ಬಂತೆಂದರೆ ಮಾದ ಹಿಟ್ಟು ಬೇಯಿಸಬೇಕಾಗಿಯೇ ಇರಲಿಲ್ಲ: ಮಧ್ಯಾ ಹ್ನದ ಮೇಲೆ ಬಂದು ಹಬ್ಬದ ಊಟವನ್ನೆಲ್ಲಾ ತೆಗೆದುಕೊಂಡು ಹೋಗಿ ಚೆನ್ನಿಗೆ ಬಡಿಸಿ ತಾನೂ ತಿನ್ನುತ್ತಿದ್ದ. ಎಷ್ಟು ನೆನೆದರೂ ತಾವು ಮಾದ ನನ್ನೂ ಚೆನ್ನಿಯನ್ನೂ ಅಷ್ಟು ಹೀನಸ್ಥಿತಿಯಲ್ಲಿ ಇರಗೊಡಿಸಿದ್ದಂತೆ ಕಾಣ ಬರಲಿಲ್ಲ. ಚೆನ್ನಿಯಾದರೂ ರಸವತ್ತಾಗಿ ಪುಷ್ಟಿಯಾಗಿ ಬೆಳೆಯುತ್ತಿದ್ದುದನ್ನು

ಕಂಡು ಕೃಷ್ಣಪ್ಪನವರು ಹರ್ಷಗೊಂಡಿದ್ದರು, ಮಾದ ಪ್ರಯತ್ನಪಟ್ಟಿದ್ದರೆ ಚೆನ್ನಿಯನ್ನು ಇನ್ನಷ್ಟು ಸುಖಿಯನ್ನಾಗಿ ಮಾಡಬಹುದಾಗಿತ್ತು ಎಂದು ಕೊಂಡರು. ತಾವು ಕೈಲಾದದ್ದನ್ನು ಇದುವರೆಗೂ ಮಾಡಿಯಾಗಿದೆ, ಮಾಡುತ್ತ ಇರುವುದಾಗಿದೆ; ಮಾದ ಮಾಡದೆ ಇದ್ದುದನ್ನು ತಾವು ಏನು ಮಾಡಲಾದೀತು ?—ಎಂದು ಸಮಾಧಾನ ತಂದುಕೊಂಡು, ಎದ್ದು ಹೊಳೆಗೆ ಹೋದರು. ಅಲ್ಲಿ ಪಾತ್ರೆಗಳನ್ನೆಲ್ಲಾ ತೊಳೆದುಕೊಂಡು, ಬಟ್ಟೆಗಳನ್ನೆಲ್ಲಾ ಒಗೆದುಕೊಂಡು, ಮತ್ತೆ ಸ್ನಾನಮಾಡಿ ಮನೆಗೆ ಹಿಂದಿರುಗುವ ವೇಳೆಗೆ ಮೂರರ ಮೇಲಾಗಿತ್ತು.

ನರಸಮ್ಮ ಊಟ ಮಾಡದೆ ಗಂಡನಿಗಾಗಿ ಕಾದಿದ್ದರು. ಬಲು ದಣಿದಿದ್ದ ಸುಂದರ ಮಲಗಿ ನಿದ್ದೆ ಹೋಗುತ್ತಿದ್ದ. ಕೃಷ್ಣಪ್ಪನವರು ತಾವೂ ಊಟಮಾಡಿ ಚಾಪೆಯ ಮೇಲೆ ದಿಂಬಿಗೆ ತಲೆ ಕೊಟ್ಟರು.

ಕೃಷ್ಣಪ್ಪನವರೂ ಸುಂದರನೂ ವಿಶ್ರಾಂತಿಯಿಂದೆದ್ದು, ಕಾಫಿ ಕುಡಿದು, ಮನೆಯ ಹೊರಗೆ ಜಗಲಿಯ ಮೇಲೆ ಕುಳಿತಿದ್ದರು. ಕೆಲಹೊತ್ತು ಇಬ್ಬರೂ ಮೌನವಾಗಿಯೇ ಇದ್ದರು. ಇಬ್ಬರ ಮನಸ್ಸಿನಲ್ಲಿದ್ದುದೂ ಒಂದೇ ಯೋಚನೆ. ಚೆನ್ನಿ ಪುನಃ ಆರೋಗ್ಯವಂತಳಾಗುವುದು. ಕೃಷ್ಣಪ್ಪನವರು ಸುಂದರನನ್ನು ಕುರಿತು—"ಸುಂದರಾ, ಶಾಮಿಗೆ ಕಾಗದ ಬರಿ. ಊರಿಗೆ ಬರುವಾಗ ಬೆಂಗಳೂರಿನಿಂದ ಒಂದು ಜೊತೆ ಒಳ್ಳೆಯ ಹಾಸಿಗೆಯನ್ನು ತರಲಿ. ಚೆನ್ನಾಗಿ ಕಷ್ಟಪಟ್ಟು ಓದಿ ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸಿನಲ್ಲಿ ಪಾಸಾಗಬೇಕೆಂದು ಬುದ್ಧಿವಾದ ಹೇಳಿ ಬರಿ. ಸಾಧ್ಯವಾದರೆ ಗಂಗಮ್ಮನನ್ನು ಕರೆದುಕೊಂಡು ಬರುವಂತೆ ನಿಮ್ಮ ಭಾವನಿಗೂ ಒಂದು ಪಂಕ್ತಿ ಸೇರಿಸು. ಅವನಿಗೆ ನಾಳೆ ಮತ್ತೆ ನಾನು ಬರೆಯುತ್ತೇನೆ. ಅವರೂ ನಮ್ಮೊಡನೆ ನಂಜನಗೂಡಿಗೆ ಬರಬೇಕೆಂದು ನನ್ನ ಚಪಲ. ಶ್ರೀಕಂಠೇಶ್ವರನ ದಯದಿಂದಲಾದರೂ ಗಂಗಮ್ಮನಿಗೆ ಈ ಸಲ ಗಂಡುಮಗುವಾಗಿ ಅದು ಉಳಿದುಕೊಂಡರೆ...." ಎಂದು ಅಷ್ಟಕ್ಕೇ ಮಾತು ನಿಲ್ಲಿಸಿದರು. ಬೆಳೆದ ಮೊಮ್ಮಕ್ಕಳು ಎರಡನ್ನು ಕಳೆದುಕೊಂಡಿದ್ದ ಅವರ ಕೊರಳು ಕಟ್ಟಿ ಬಂದಿತ್ತು.

ಸುಂದರ ಒಳಕ್ಕೆ ಎದ್ದು ಹೋಗಿ ಬರೆವಣಿಗೆಯ ಸಲಕರಣೆಗಳನ್ನು ತಂದು, ತಂದೆ ಹೇಳಿದ ರೀತಿ ಕಾಗದ ಬರೆದ. ಬರೆದು, "ನಾಳೆ ಮತ್ತೆ ಏನು

ಬರೆಯುವುದು? ಈಗಲೇ ಒಂದು ಬರೆದು ಕೊಟ್ಟರೆ ಈ ಲಕೋಟೆಯಲ್ಲಿ ಇಟ್ಟು ಅಂಚೆಗೆ ಹಾಕಿಬಿಡುತ್ತೇನೆ” ಎಂದು ತಂದೆಯನ್ನು ಕೇಳಿದ. ಕೃಷ್ಣಪ್ಪನವರು ಹಾಗೆಯೇ ಮಾಡಿದರು. ಸುಂದರ ಕಾಗದ ತೆಗೆದುಕೊಂಡು ಅಂಚೆ ಕಚೇರಿಗೆ ಹೋದ.

ಇತ್ತ ಸುಂದರ ಹೋದ, ಅತ್ತ ನಂಜುಂಡಶಾಸ್ತ್ರಿಗಳು ಅವನು ಹೊರಟು ಹೋಗುವುದಕ್ಕಾಗಿಯೆ ಕಾದಿದ್ದು ಬಂದರೋ ಎಂಬಂತೆ ಕೃಷ್ಣಪ್ಪನವರ ಮನೆಗೆ ಬಂದರು.

“ಮೇಲಕ್ಕೆ ದಯಮಾಡಿಸಿ ಶಾಸ್ತ್ರಿಗಳೆ. ಬನ್ನಿ, ಕುಳಿತುಕೊಳ್ಳಿ” ಎಂದು ಕೃಷ್ಣಪ್ಪನವರು ತಮ್ಮ ಕೈಚೌಕದಿಂದ ಪಕ್ಕದಲ್ಲಿ ದೂಳು ಝಾಡಿಸಿದರು. ಶಾಸ್ತ್ರಿಗಳು “ಪರವಾಯಿಲ್ಲ” ಎಂದು ನಿಂತಲ್ಲಿಯೇ ನಿಂತಿದ್ದರು. ಕೃಷ್ಣಪ್ಪನವರು ಮತ್ತೊಮ್ಮೆ ಉಪಚಾರ ಮಾಡಿದರು. ಶಾಸ್ತ್ರಿಗಳದು ಅದೇ ಪ್ರತ್ಯುತ್ತರ. ಶಾಸ್ತ್ರಿಗಳು ಹಿಂದೆ ಎಂದೂ ಈ ಬಗೆಯ ಹುಸಿಸಂಕೋಚವನ್ನು ತೋರಿಸಿದ್ದಿರಲಿಲ್ಲವಾದ ಕಾರಣ, ಅವರು ಏಕೆ ಹೀಗೆ ವರ್ತಿಸುತ್ತಿದ್ದಾರೆಂಬುದು ಸೂಕ್ಷ್ಮಜ್ಞರಲ್ಲದಿದ್ದರೂ ಮಂದಬುದ್ಧಿಗಳಲ್ಲದ ಕೃಷ್ಣಪ್ಪನವರಿಗೆ ಹೊಳೆಯದೆ ಇರಲಿಲ್ಲ. “ಶಾಸ್ತ್ರಿಗಳೇ, ನೀವೇನು ಯೋಚನೆ ಮಾಡಬೇಕಾಗಿಲ್ಲ. ನಾನು ಮೈಲಿಗೆಯಾದ ಬಟ್ಟೆಗಳನ್ನೆಲ್ಲಾ ನೆನೆಸಿ, ಸ್ನಾನ ಮಾಡಿ, ಮಡಿಬಟ್ಟೆ ಹಾಕಿಕೊಂಡಿದ್ದೇನೆ. ನನ್ನ ಪೋಷಣೆಯಲ್ಲಿರುವ ಮಾದ ಮತ್ತು ಅವನ ಮಗಳು ಇವರಿಗೆ ಯಾವ ಬಗೆಯ ಕಷ್ಟಗಳೊದಗಿದರೂ ಅದನ್ನು ಪರಿಹರಿಸಲು ಪ್ರಯತ್ನಪಡಬೇಕಾದ್ದು ನನ್ನ ಕರ್ತವ್ಯ ಎಂದು ತಿಳಿದಿದ್ದೇನೆ. ನನ್ನ ಕರ್ತವ್ಯವನ್ನು ನಾನು ನಿರ್ವಹಿಸುತ್ತಿದ್ದೇನೆ. ಇದರಲ್ಲಿ ಏನಾದರೂ ದೋಷವಿದ್ದರೆ ತಾವು ಅಪ್ಪಣೆ ಕೊಡಿಸಬೇಕು. ಅಷ್ಟೇ ಹೊರತು, ನನಗೆ ತಿಳುವಳಿಕೆಯಿರುವ ಮಟ್ಟಿಗೆ ನಾನು ಎಂದೂ ಹೊಲೆ-ಮಾದಿಗರ ಮೈಲಿಗೆ ಬೆರಸಿಕೊಂಡಿಲ್ಲ ಶಾಸ್ತ್ರಿಗಳೇ. ನಾನು ವೈದಿಕನಲ್ಲದಿದ್ದರೂ, ಬ್ರಾಹ್ಮಣಿಕೆಯಲ್ಲಿ ಅಲ್ಪ ಸ್ವಲ್ಪ ಅಭಿಮಾನ ಇದೆ” ಎಂದು ಕೊಂಚ ಖಂಡಿತವಾಗಿಯೇ ನುಡಿದರು ಕೃಷ್ಣಪ್ಪನವರು.

“ನಿಮ್ಮ ವಿಚಾರ ಹೇಳುವುದಕ್ಕೆ ಬರಲಿಲ್ಲ ಕೃಷ್ಣಪ್ಪನವರೇ. ನನಗೋಸ್ಕರ ನಾನು ಏನೂ ಹೇಳುತ್ತಿಲ್ಲ. ಅಸಮಾಧಾನವೇಕೆ? ನಾನು

ಜ್ಞಾಪಿಸುವುದ್ದಕ್ಕೆ ಬಂದದ್ದು, ನಿಮ್ಮ ಸುಂದರನ ವಿಚಾರ...."

"ಅವನೂ ಸ್ನಾನ ಮಾಡಿದ್ದಾನೆ. ಬೆಳಗ್ಗೆಯಿಂದ ಮೂರು ಸಲ ಮಾಡಿದ್ದಾನೆ. ಅವನಿಗೆ ಎಲ್ಲಿ ಕೆಮ್ಮು ನೆಗಡಿ ಹಿಡಿದೀತೋ ಎಂದು ನನಗೆ ಭಯವಾಗಿದೆ."

"ನೀವು ಮನೆಯಲ್ಲಿ ಮೈಲಿಗೆ ಬೆರಸಿಕೊಳ್ಳುವುದಿಲ್ಲ ಎಂದು ನನಗೆ ನಂಬಿಕೆಯಿದೆ ಕೃಷ್ಣಪ್ಪನವರೆ. ಸುಂದರನಿಗೆ ಇಷ್ಟವಿಲ್ಲದಿದ್ದರೂ ನೀವು ಅವನಿಗೆ ಸ್ನಾನಮಾಡಿಸುತ್ತೀರಿ, ನನಗೆ ಗೊತ್ತು. ನಾನು ಹೇಳಿದ್ದು, ಅಥವಾ ಹೇಳಬೇಕೆಂದು ಬಂದದ್ದು, ಪ್ರಾಯಶ್ಚಿತ್ತದ ವಿಚಾರ. ಅನುದ್ದಿಷ್ಟ ವಾಗಿ, ಅಥವಾ ಅನಿವಾರ್ಯವಾಗಿ, ಹೊಲೆಮೈಲಿಗೆಯಾದರೆ ಸ್ನಾನಮಾಡ ಬೇಕಾದ್ದು ಸರಿಯೇ ಸರಿ. ಸ್ವಲ್ಪ ನಿಷ್ಠಾವಂತರಾದರೆ, ನೂತನ ಯಜ್ಞೋ ಪವೀತವನ್ನೂ ಧಾರಣಮಾಡಬೇಕು; ದೋಷಪರಿಹಾರಾರ್ಥವಾಗಿ ಯಥಾ ಶಕ್ತಿ ಗಾಯತ್ರೀ ಜಪ ಮಾಡಬೇಕು. ಇದೆಲ್ಲಾ ನಿಮಗೆ ತಿಳಿದಿರತಕ್ಕದ್ದೆ. ಬರಿಯ ಸ್ನಾನ ಬಾಹ್ಯಶುದ್ಧಿಗಾಗಿ ಮಾತ್ರ. ನಿಮ್ಮ ಸುಂದರ— ನಮ್ಮ ವಿಶ್ವನಾಥ ಹೇಳಿದ, ಸಮಾಚಾರ—ಅವೊತ್ತು ನಾನು ನಿಮಗೆ ಅರಿಕೆ ಮಾಡ ಲಿಲ್ಲವೆ?—ಹೀಗಿರುವುದರಿಂದ ಸುಂದರನಿಗೆ ಅಂತಶ್ಶುದ್ಧೀಕರಣ ಅತ್ಯಗತ್ಯ. ಇದೇನು ಮಹಾ ಖರ್ಚಿನ ವಿಷಯವಲ್ಲ ಏನಲ್ಲ. ನಾಳೆ ಬೆಳಗ್ಗೆ ಎದ್ದೊಡ ನೆಯೇ ಕಾಫಿ ಕುಡಿಯುವುದಕ್ಕೆ ಮುಂಚೆ ಸ್ನಾನ ಮಾಡಿ, ಪಂಚಗವ್ಯ ತೆಗೆದು ಕೊಳ್ಳಬೇಕು. ಮತ್ತೆ ಸ್ನಾನ ಮಾಡಿ, ಆಚಮನ ಮಾಡಿ, ಹೊಸ ಯಜ್ಞೋ ಪವೀತ ಹಾಕಿಕೊಳ್ಳಬೇಕು. ಅನಂತರ, ಸಂಧ್ಯಾವಂದನೆ ಮಾಡಬೇಕು. ನಿತ್ಯ ಮಾಡುವುದಕ್ಕಿಂತ ಹೆಚ್ಚಾಗಿ ಯಥಾಶಕ್ತಿ, ೧೦ಲಕ್ಕೆ ಕಡಮೆಯಿಲ್ಲದೆ, ಗಾಯತ್ರಿ ಮಾಡಬೇಕು ಇಷ್ಟವಿದ್ದು, ದೇವರು ಬುದ್ಧಿ ಕೊಟ್ಟರೆ, ಯಾರಾ ದರೂ ಬ್ರಾಹ್ಮಣನಿಗೆ ಫಲತಾಂಬೂಲ ಸಮೇತ ಯಥಾಶಕ್ತಿ ದಕ್ಷಿಣೆ ದಾನ ಮಾಡಬಹುದು. ಇದಿಷ್ಟು ದೊಡ್ಡದೆ, ಕೈಲಾಗದ್ದೆ?"

"ನೋಡಿ, ನಿಮ್ಮ ಕೈಲಿ ಮುಚ್ಚುಮರೆಯೇನು? ನಮ್ಮ ಸುಂದರ ನಿತ್ಯ ಸಂಧ್ಯಾವಂದನೆ ಮಾಡುವುದನ್ನೆ ಬಿಟ್ಟುಬಿಟ್ಟಿದ್ದಾನೆ. ಇನ್ನು ಈ ಪ್ರಾಯಶ್ಚಿತ್ತಕ್ಕೆ ಒಪ್ಪುತ್ತಾನೆಯೆ? ಗಾಯತ್ರಿ ಮಾಡಿಯಾನು. ಪಂಚಗವ್ಯ ಎಂದರೆ ಮೂಗುಮುಚ್ಚಿಕೊಳ್ಳುತ್ತಾನೆ. ಮುಖ್ಯ ಮಕ್ಕಳನ್ನು ಮೈಸೂರು

ಬೆಂಗಳೂರು ಪಟ್ಟಣಗಳಿಗೆ ಕಾಲೇಜುವ್ಯಾಸಂಗಕ್ಕೆ ಕಳಿಸುವುದೇ ತಪ್ಪು ....”

ಅಷ್ಟರಲ್ಲಿ ಶಾಸ್ತ್ರಿಗಳು ನಡುವೆ ಬಾಯಿ ಹಾಕಿದರು: “ಕಾಲೇಜು ವ್ಯಾಸಂಗ ಏನು ಮಾಡುತ್ತೆ ಹೇಳಿ. ಈಗ ನನ್ನ ಮಗ ವಿಶ್ವನಾಥ ಇಲ್ಲವೆ? ಸ್ವಲ್ಪವೂ ಬದಲಾಯಿಸಿಲ್ಲವಲ್ಲ? ಮುಖ್ಯ, ಸಹವಾಸದೋಷ ನೋಡಿ, ಇದೆಲ್ಲ. ಮನೆಬಿಟ್ಟು ಓಡಿಸುತ್ತೇನೆ ಎಂದು ಸ್ವಲ್ಪ ಬಾಯಿಬೆದರಿಕೆ ಹಾಕಿ, ಸುಂದರ ದಾರಿಗೆ ಬರದೆ ಹೋದರೆ ಆಗ ನನ್ನ ಕೇಳಿ. ಪ್ರಾಯಶ್ಚಿತ್ತ ಮಾಡಿ ಕೊಳ್ಳದೆ ಹೋದರೆ ನಿಮ್ಮ ಕುಟುಂಬದಲ್ಲಿ ಒಬ್ಬನಾಗಿ ನಿಮ್ಮ ಮನೆಯಲ್ಲಿ ವಾಸಮಾಡಿಕೊಂಡಿರಲು ಅವನಿಗೆ ಯೋಗ್ಯತೆ ಸಿದ್ಧಿಸುವುದಿಲ್ಲ. ಆಗಲಾದರೂ ಅವನನ್ನು ನೀವು ಮನೆಬಿಟ್ಟು ಓಡಿಸಬೇಕಾಗುತ್ತೆ. ಹಾಗೂ ಅವನನ್ನು ನೀವು ಮನೆಯಲ್ಲಿ ಇಟ್ಟುಕೊಂಡರೆ, ಬ್ರಾಹ್ಮಣ ಸಮಾಜ ನಿಮಗೆ ಬಹಿಷ್ಕಾರ ಹಾಕಬೇಕಾಗುತ್ತದೆ.” ಎಂದು ಸೂಕ್ಷ್ಮದಲ್ಲಿ ತಮ್ಮ ಮನೋಗತವನ್ನು ಕೃಷ್ಣಪ್ಪನವರಿಗೆ ತಿಳಿಯಪಡಿಸಿ, “ಇನ್ನು ಬರುತ್ತೇನೆ” ಎಂದು ಹೇಳಿ ಹೊರಟು ಹೋದರು.

೨೫

ಬಹಿಷ್ಕಾರ! ಬಹಿಷ್ಕಾರ!! ಈ ಮಾತನ್ನು ಕೃಷ್ಣಪ್ಪನವರು ಇದುವರೆಗೆ ಕೇಳಿರಲಿಲ್ಲ. ಬಹಿಷ್ಕಾರದ ಭೂತ ಅವರ ಮನೋರಂಗದಲ್ಲಿ ವಿಕಟಾಟ್ಟಹಾಸದಿಂದ ಕುಣಿದು ಕುಪ್ಪಳಿಸುತ್ತಿತ್ತು. ಬಹಿಷ್ಕಾರ ಯಾರಿಗೆ? ಏತಕ್ಕಾಗಿ? ಮರಣಶಯ್ಯೆಯಲ್ಲಿ ಮಲಗಿರುವ ಮಾದಿಗನ ಮಗಳಿಗೆ ಜೀವವೆರೆಯುತ್ತಿರುವ ತಮ್ಮ ಮಗನನ್ನು, ಹೊಟ್ಟೆಯಲ್ಲಿ ಹುಟ್ಟಿದ ತಮ್ಮ ಮಗನನ್ನು, ಮನೆಯಲ್ಲಿ ಇಟ್ಟುಕೊಂಡರೆ, ಅಥವಾ ಅವನನ್ನು ಮನೆಬಿಟ್ಟು ಓಡಿಸದೆ ಹೋದರೆ, ತಮಗೆ ಬಹಿಷ್ಕಾರ! ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆಯೆ? ಎತ್ತಿಗಾದರೂ ಕೂಡ ಜ್ವರ ಬಂದರೆ ಬರೆಯೇ ಹೊರತು ಸುಮ್ಮಸುಮ್ಮನೆ ಬರೆಯೆ? ಇದು ಯಾವ ಲೋಕದ ನ್ಯಾಯ? ತಮ್ಮ ಮಗ ಮಾಡಿರುವ ಮಾಡಬಾರದಂಥ ಮಹಾಪರಾಧವಾದರೂ ಏನು? ಹೊಲೆಯನ ಜೊತೆ ಕುಳಿತು ಊಟಮಾಡಿದ್ದು. ತಾವು ಸ್ಮೃತಿಶಾಸ್ತ್ರಗಳನ್ನು ಓದಿದವರಲ್ಲ. ಶಾಸ್ತ್ರಿಗಳು ಓದಿದವರು. ಅವರು ಹೇಳುವ ಮಾತು ಅಸತ್ಯವಾದೀತೆ? ಅಲ್ಲದೆ, ವರ್ಣಾಶ್ರಮಧರ್ಮಕ್ಕೆ ಸೇರಿ

ದವರು, ಅದರಲ್ಲೂ ಅತ್ಯುಚ್ಚ ವರ್ಣದವರಾದ ಬ್ರಾಹ್ಮಣರು, ಪಂಚಮ
ರೊಡನೆ ಯಾವ ಬಗೆಯ ಸಂಪರ್ಕವನ್ನೂ ಇಟ್ಟುಕೊಳ್ಳದಿರುವುದು ತಲೆ
ತಲಾಂತರದಿಂದ ಬಂದಿರುವ ಸಂಪ್ರದಾಯ. ಈ ಸಂಪ್ರದಾಯದಂತೆ,
ಹೊಲೆಯನನ್ನು ಮುಟ್ಟುವುದೇ ಮೈಲಿಗೆಯಾಗಿರುವಾಗ, ಅವನ ಜೊತೆ
ಕುಳಿತು ಊಟಮಾಡುವುದು ಖಂಡಿತವಾಗಿಯೂ ಅನಾಚಾರವೇ ಆಗಿರ
ಬೇಕಲ್ಲವೇ? ಶಾಸ್ತ್ರಿಗಳು ಹೇಳಿದಂತೆ ಸುಂದರ ಪ್ರಾಯಶ್ಚಿತ್ತವನ್ನು ಮಾಡಿ
ಕೊಂಡುಬಿಟ್ಟರೆ ಎಲ್ಲ ಸರಿಹೋಗುತ್ತದೆ. ಅದೇನು ಕಷ್ಟದ ಕೆಲಸವೂ ಅಲ್ಲ.
ಶಾಸ್ತ್ರಿಗಳು ತಮ್ಮ ಮಗನ ಮೇಲೆ ಹೊರಿಸಿದ ದೋಷಾರೋಪಣೆ ಯಥಾ
ರ್ಥವೇ ಅಲ್ಲವೇ ಎಂದು ಅವನನ್ನು ಇನ್ನೊಮ್ಮೆ ವಿಚಾರಿಸಿ, ಯಥಾರ್ಥ
ವಾಗಿದ್ದ ಭಾಗದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡುಬಿಡುವಂತೆ ಮಗನಿಗೆ
ಹೇಳುವುದೆಂದು ಕೃಷ್ಣಪ್ಪನವರು ತಮ್ಮಲ್ಲಿಯೇ ತರ್ಕಮಾಡಿ ತೀರ್ಮಾನಿಸಿ
ಕೊಂಡರು.

ಕೃಷ್ಣಪ್ಪನವರ ತಲೆಯೊಳಗಿನ ಈ ತರ್ಕ ಅರ್ಧಗಂಟೆ ಕಾಲವನ್ನು
ತಿಂದುಹಾಕಿತು. ಕೃಷ್ಣಪ್ಪನವರು ಆಲೋಚನಾಮಗ್ನರಾಗಿ ಜಗಲಿಯ
ಮೇಲೆಯೇ ಕುಳಿತಿದ್ದರು. ಕಂದಾಯದ ಬಾಕಿ ವಿಚಾರವಾಗಿ ಅಹವಾಲು
ಹೇಳಿಕೊಳ್ಳುವುದಕ್ಕೆ ಬಂದಿದ್ದ ಒಬ್ಬಿಬ್ಬರು ರೈತರನ್ನು ಇನ್ನೊಂದು ದಿನ
ಬರುವಂತೆ ಒಂದೇ ಮಾತಿನಲ್ಲಿ ಕಟ್ಟುನಿಟ್ಟಾಗಿ ಹೇಳಿಕಳಿಸಿಬಿಟ್ಟರು. ಕೃಷ್ಣಪ್ಪ
ನವರು ಎಂದೂ ಹೀಗೆ ನಡೆದುಕೊಂಡವರಲ್ಲವೆಂದು ರೈತರು ಮೂಗಿನ ಮೇಲೆ
ಬೆರಳಿಟ್ಟುಕೊಂಡು ಹೋಗಿದ್ದರು.

ಕೃಷ್ಣಪ್ಪನವರು ಕುಳಿತೇ ಇದ್ದರು. ಸುಂದರ ಹಿಂದಿರುಗಿ ಬಂದ.
ತಂದೆ ಮಗನನ್ನು ಬಳಿಗೆ ಕರೆದರು. ಸುಂದರ ಹೋಗಿ ಅವರ ಪಕ್ಕದಲ್ಲಿ
ಕುಳಿತುಕೊಂಡ. ಕೃಷ್ಣಪ್ಪನವರು ಶಾಸ್ತ್ರಿಗಳು ಹೇಳಿದ್ದನ್ನೂ, ತಮ್ಮ
ತೀರ್ಮಾನವನ್ನೂ ನಿಧಾನವಾಗಿ, ಬಹುನಯನುಡಿಯಲ್ಲಿ, ತಮ್ಮ ಮಗನಿಗೆ
ಅರುಹಿದರು. ಶಾಸ್ತ್ರಿಗಳ ಆರೋಪಣೆ ನಿಜವಾದುದೇ ಎಂದು ಇನ್ನೊಮ್ಮೆ,
ಮಗುದೊಮ್ಮೆ, ಕೇಳಿದರು.

"ಶಾಸ್ತ್ರಿಗಳು ಹೇಳಿದ್ದು ನಿಜ."

"ಹಾಗಾದರೆ ನಾಳೆ ಬೆಳಗ್ಗೆ ಪ್ರಾಯಶ್ಚಿತ್ತ ಮಾಡಿಕೊಂಡು ಬಿಡು."

"ನಿಜವಾಗಿಯೂ ದೋಷ, ಪಾಪಕಾರ್ಯ, ಮಾಡಿದ್ದರೆ ಪ್ರಾಯಶ್ಚಿತ್ತ; ಎಲ್ಲ ಭಾಗದಲ್ಲಿಯೂ ಎಲ್ಲರಂತೆ ಶುಚಿಯಾಗಿರುವ ನನ್ನ ಸ್ನೇಹಿತ ರಾಜಪ್ಪನೊಡನೆ ಹೋಟೆಲಿನಲ್ಲಿ ಕುಳಿತು ಊಟ ಮಾಡಿದ್ದು ದೋಷವೆಂದು ನನ್ನ ಮನಸ್ಸಿಗೆ ಒಪ್ಪುವುದಿಲ್ಲ. ಮೈಸೂರಿನಲ್ಲಿ ಹೋಟೆಲುಗಳಲ್ಲಿ ಮಹಾ ಮಹಾ ಬ್ರಾಹ್ಮಣರೆನಿಸಿಕೊಂಡವರು ಹೊಲೆಯರ ಜೊತೆ ಹೊರಗೇ ಕುಳಿತು ಕಾಫಿ ತಿಂಡಿ ತೆಗೆದುಕೊಂಡಿರುವುದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಅವರೆಲ್ಲಾ ನಿತ್ಯವೂ ಪ್ರಾಯಶ್ಚಿತ್ತಮಾಡಿಕೊಳ್ಳುತ್ತಾರೆಯೋ? ಹಾಗೆಯೇ ಕಾಫಿ ಕುಡಿದುಕೊಂಡು ಶ್ರಾದ್ಧ ಮಾಡಿಸುವುದಕ್ಕೆ ಹೋಗುತ್ತಾರೆ. ಇದು ಸರಿಯೋ?"

"ಅದು ಎತ್ತಲಾಗಾದರೂ ಹಾಳಾಗಿ ಹೋಗಲಿ. ಪಟ್ಟಣವಾಸ ಕುಲಗೆಟ್ಟು ಹೋಗಿದೆ. ಹಳ್ಳಿಗಾಡಿನಲ್ಲಿ ನಾವಾದರೂ ಸರಿಯಾಗಿರಬೇಕೋ ಬೇಡವೊ?"

"ಪಟ್ಟಣದಲ್ಲಿ ಬೂಟಾಟಿಕೆಯ ಬ್ರಾಹ್ಮಣಿಕೆ ಮೆರೆದಾಡುತ್ತಿದೆ. ಹಳ್ಳಿಗಾಡಿನಲ್ಲಿ ಹುಸಿ ಬ್ರಾಹ್ಮಣಿಕೆ ಇನ್ನೂ ಅಂಟಿಕೊಂಡಿದೆ. ಇಷ್ಟೇ ವ್ಯತ್ಯಾಸ. ತಮಗೆ ಬೇಕಾದ ವಿಷಯದಲ್ಲಿ ಮಾತ್ರ, ಬ್ರಾಹ್ಮಣರ ಕುಣಿತಕ್ಕೆ ತಕ್ಕ ಹಾಗೆ ಇತರ ಜಾತಿಗಳವರೂ ತಾಳ ಹಾಕುತ್ತಿದ್ದಾರೆ. ಹೀಗಾಗಿ, ನಮ್ಮ ಜನಸಂಖ್ಯೆಯಲ್ಲಿ ಐದನೆಯೊಂದು ಭಾಗದ ಜನ ಅಸ್ಪೃಶ್ಯರೆಂಬ ಅಪಚಾರಕ್ಕೆ ತಲೆಬಾಗಿ, ಪಂಚಮರೆಂಬ ವಂಚನೆಗೆ ಗುರಿಯಾಗಿ, ಆದಿ ಕರ್ನಾಟಕರೆಂಬ ಹೊಸ ಹೆಸರಿಗೆ ಮರುಳಾಗಿ, ತೃಪ್ತರಾಗಿ, ನಮ್ಮ ಮಲವನ್ನೆಲ್ಲಾ ಅವರು ಹೊತ್ತು, ಭೂಲೋಕದಲ್ಲಿಯೇ ನರಕವಾಸವನ್ನನುಭವಿಸುತ್ತಿದ್ದಾರೆ. ತುಳಿಯುವವರಿಗೆ ಎಲ್ಲಿಯ ನೋವು? ತುಳಿಸಿಕೊಂಡವರಿಗೇ ನೋವಿನ ಅನುಭವ. ಶತಮಾನಗಳಿಂದ ತುಳಿಸಿಕೊಂಡ ಇವರಿಗೆ ಆ ನೋವನ್ನು ಹೇಳಿಕೊಳ್ಳಲೂ ಬಾಯಿಲ್ಲದೆ ಮೂಕ ಪಶುಗಳಾಗಿದ್ದಾರೆ. ಮೈಮನಸ್ಸು ಎರಡೂ ಜಡ್ಡುಗಟ್ಟಿ ಹೋಗಿದೆ."

ಕೃಷ್ಣಪ್ಪನವರು ಮಗನ ಮಾತನ್ನು ಕೇಳುತ್ತ ಕಲ್ಲುಬೊಂಬೆಯಂತೆ ಕುಳಿತಿದ್ದರು. "ಏನೋ ನೀನು ಹೇಳುವುದು?" ಎಂದು ಬೆರಗಾಗಿ ಕೇಳಿದರು.

ಸುಂದರ ಅನಿರೀಕ್ಷಿತವಾಗಿ, ಅನುದ್ದಿಷ್ಟವಾಗಿ, ತನ್ನ ಅರಿವಿಲ್ಲದೆಯೇ ಹರಿಜನೋದ್ಧಾರ ಕಾರ್ಯಕ್ಕೆ ಪ್ರಾರಂಭಿಸಿಬಿಟ್ಟಿದ್ದ. ತಾನು ಕಾವಿನಿಂದ ಮಾತಾಡಿದ್ದಂತೆ ತೋರಿತು. ಒಳ್ಳೆಯದೇ ಆಯಿತೆಂದುಕೊಂಡ. ಮನೆಯಲ್ಲಿ ಸುಧಾರಣೆಯಾದರೆ ಊರು ಸುಧಾರಣೆಯಾದಂತೆ, ಊರು ಸುಧಾರಣೆಗೊಂಡರೆ ದೇಶವೇ ಸುಧಾರಿತವಾದಂತೆ ಎಂದು ಅನಿಸಿತವನಿಗೆ. ಇಂದೇ ತನ್ನ ತಂದೆಗೆ ತನ್ನ ಪರವೋದ್ದೇಶವನ್ನು ಸ್ಪಷ್ಟಪಡಿಸಬೇಕೆಂದು ಸುಂದರ ನಿರ್ಧರ ಮಾಡಿ, ಮುಂದುವರಿಸಿದ:

"ಅಪ್ಪ, ನೀನು ಮಹಾತ್ಮಾ ಗಾಂಧಿಯವರ ಹೆಸರು ಕೇಳಿಲ್ಲವೆ?"

"ಕೇಳಿದ್ದೇನೆ."

"ಅವರು ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬೇಕೆಂದು ಬ್ರಿಟಿಷ್ ಆಳರಸರೊಡನೆ ಹೋರಾಡುತ್ತಿದ್ದಾರೆ. ಜನತೆಯನ್ನು ಎಚ್ಚರಗೊಳಿಸಿ ಹುರಿದುಂಬಿಸುತ್ತಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಹೋರಾಟ ಎಂದಿನಿಂದಲೋ ಆರಂಭವಾಗಿದೆ. ಸ್ವರಾಜ್ಯಸಂಪಾದನೆಗಾಗಿಯೇ ಕಾಂಗ್ರೆಸ್ ಎಂಬ ಸಂಸ್ಥೆ ಹುಟ್ಟಿತು. ಈಗ ಗಾಂಧಿಯವರೇ ಕಾಂಗ್ರೆಸ್ಸಿನ ನಾಯಕರು. ನಮ್ಮ ದೇಶಕ್ಕೇ ಅವರು ನಾಯಕರು. ನಮಗೆ ಸ್ವಾತಂತ್ರ್ಯ ಬರಬೇಕಾದರೆ ನಾವು ಮೊದಲು ಸ್ವಾವಲಂಬಿಗಳಾಗಬೇಕು ಎಂದು ಅವರು ಹೇಳುತ್ತಾರೆ. ಇದಕ್ಕಾಗಿ ನಾವೇ ನೂತು ನಾವೇ ನೆಯ್ದ ಬಟ್ಟೆ ಹಾಕಿಕೊಳ್ಳಬೇಕೆಂದು ಅವರು ಹೇಳುತ್ತ ಬಂದರು. ಇಂಥ ಬಟ್ಟೆಗೆ ಖಾದಿ ಎಂದು ಹೆಸರು. ಖಾದಿಯ ಉತ್ಪತ್ತಿಯ ಜೊತೆಗೆ ಗ್ರಾಮಕೈಗಾರಿಕೆಗಳ ಅಭಿವೃದ್ಧಿ ಮಾಡಬೇಕೆಂದು ಅವರು ಬೋಧಿಸುತ್ತಾರೆ. ಇಷ್ಟೇ ಅಲ್ಲದೆ, ನಾವು ಸ್ವಾತಂತ್ರ್ಯ ಪಡೆಯಲು ಅರ್ಹರಾಗಬೇಕಾದರೆ, ನಮ್ಮಲ್ಲಿರುವ ಎಲ್ಲ ದೋಷಗಳನ್ನೂ ಕಳೆದುಕೊಳ್ಳಬೇಕೆನ್ನುತ್ತಾರೆ. ಅಸ್ಪೃಶ್ಯತೆ ಎನ್ನುವುದು ಅಂಥ ದೋಷಗಳಲ್ಲಿ ಒಂದು. ಅದನ್ನು ಹೋಗಲಾಡಿಸಲು ಎಲ್ಲರೂ ಪ್ರಯತ್ನಪಡಬೇಕೆಂದು ಅವರು ಸಾರುತ್ತಾರೆ. ಈಚೀಚೆಗಂತೂ, ಅಸ್ಪೃಶ್ಯರನ್ನು ಮೇಲೆತ್ತುವ ವಿಚಾರಕ್ಕೆ ಅವರು ಅತ್ಯಂತ ಪ್ರಾಮುಖ್ಯತೆ ಕೊಡುತ್ತಿದ್ದಾರೆ. ಅವರೊಬ್ಬರೇ ಎಲ್ಲವನ್ನೂ ನಿರ್ವಹಿಸುವುದಕ್ಕಾಗುತ್ತದೆಯೇ? ಇಲ್ಲ. ಆದ್ದರಿಂದ, ಪ್ರತಿಯೊಬ್ಬರೂ ಈ ಕಾರ್ಯದಲ್ಲಿ ಸಹಕರಿಸಬೇಕೆಂದು

ಕೋರುತ್ತಾರೆ. ಅದರಲ್ಲಿಯೂ, ವಿದ್ಯಾರ್ಥಿಗಳು ತಮ್ಮ ಬೇಸಗೆಯ ಬಿಡುವು ಕಾಲದಲ್ಲಿ ರಾಜಕೀಯವಲ್ಲದ ಈ ಸಾಮಾಜಿಕ ಸುಧಾರಣಾಕಾರ್ಯದಲ್ಲಿ ಕೈಲಾದ ಸೇವೆ ಮಾಡಬೇಕೆಂದು ಒತ್ತಿ ಒತ್ತಿ ಹೇಳುತ್ತಿದ್ದಾರೆ. ನಮಗೆ ಸ್ವಾತಂತ್ರ್ಯ ಬರಲಿ ಬಾರದೆ ಹೋಗಲಿ, ನಾವು ಹರಿಜನರನ್ನು ಈಗ ಕಾಣುತ್ತಿರುವ ರೀತಿಯಲ್ಲಿ ಇನ್ನು ಮುಂದಾದರೂ ಕಾಣುವುದು ಮಹಾಪಾಪವೆಂದು ಅವರೆನ್ನುತ್ತಾರೆ. ಎಲ್ಲರಿಗೂ ಪ್ರವೇಶವಿರುವ ಶಾಲೆ, ದೇವಾಲಯ, ಆಸ್ಪತ್ರೆ, ಕೆರೆ, ಕಟ್ಟೆ, ಬಾವಿ ಇವಕ್ಕೆ ಅವರಿಗೂ ಪ್ರವೇಶವಿರುವಂತೆ ಅವಕಾಶ ಕೊಡಬೇಕೆಂದು ಅವರು ಕೇಳುತ್ತಾರೆ. ಇದೆಲ್ಲಾ ನ್ಯಾಯವಾದುದು. ನನ್ನ ಬಿಡುವು ಹೊತ್ತಿನಲ್ಲಿ ನನ್ನ ಕೈಲಾದ ಮಟ್ಟಿಗೆ ಈ ಕೆಲಸ ಮಾಡಬೇಕೆಂದು ನಿಶ್ಚಯಿಸಿದ್ದೇನೆ" ಎಂದು ಸುಂದರಮೂರ್ತಿ ತನ್ನ ತಂದೆಗೆ ತನ್ನ ಸಂಕಲ್ಪವನ್ನು ವಿವರಿಸಿ ಹೇಳಿದ.

ಕೃಷ್ಣಪ್ಪನವರಿಗೆ ಸುಂದರ ಹೇಳಿದ ಅನೇಕ ಮಾತುಗಳು ಅರ್ಥವಾಗದಿದ್ದರೂ, ಅವನು ಹೇಳಿದ ಮಾತುಗಳ ಒಟ್ಟು ಆಶಯ ಅಭಿಪ್ರಾಯವಾಯಿತು. ಅವನು ಹೇಳಿದ್ದರಲ್ಲಿ ಬಹುಭಾಗ ನ್ಯಾಯವಾಗಿ ಕಂಡಿತು. ಆದರೂ ಕೆಲವು ಶಂಕೆಗಳು ತೋರಿದುವು. ಆ ಶಂಕೆಗಳಲ್ಲಿ ಒಂದು ಪ್ರಕೃತ ಸಂದರ್ಭಕ್ಕೆ ಸಂಬಂಧಪಟ್ಟಿತ್ತು. ಅದನ್ನು ಅವನ ಮುಂದಿಟ್ಟರು.

"ಹೊಲೆಮಾದಿಗರನ್ನು ಸಾಧ್ಯವಾದ ಮಟ್ಟಿಗೆ ಮುಂದಕ್ಕೆ ತರಬೇಕು, ಅವರಿಗೆ ಸಹಾಯ ಮಾಡಬೇಕು ಎನ್ನುವುದು ಸರಿಯೆ. ಆದರೆ ಅವರ ಜೊತೆ ಕುಳಿತು ಊಟ ಮಾಡಬೇಕೆಂದು ಗಾಂಧಿ ಹೇಳುತ್ತಾರೆಯೋ ?" ಎಂದು ಕೃಷ್ಣಪ್ಪನವರು ಮಗನನ್ನು ಪ್ರಶ್ನಿಸಿದರು

"ಅವರು ಏನು ಹೇಳುತ್ತಾರೆಯೋ ನಾನು ಕಾಣೆ. ಊಟ ಮಾಡಿದರೂ ಬಾಧಕವಿಲ್ಲವೆಂದು ನನಗೆ ತೋರುತ್ತೆ. ನನಗೆ ಸರಿ ಎಂದು ಕಂಡಿತು; ಮಾಡಿಬಿಟ್ಟೆ."

"ಶಾಸ್ತ್ರಗಳು ಅದೇ ತಾನೆ ದೋಷ ಎನ್ನುವುದು. ಪ್ರಾಯಶ್ಚಿತ್ತ ಮಾಡಿಕೊಂಡುಬಿಡು."

"ನನಗೆ ದೋಷ ಎಂದು ಮನದಟ್ಟಾಗುವವರೆಗೂ ನಾನು ಮಾಡಿಕೊಳ್ಳುವುದಿಲ್ಲ."

" ನಿನಗೆ ಮುಂದಟ್ಟಾಗುವವರೆಗೂ ಮನೆಯವರೆಲ್ಲ ಊರಿನವರಿಂದ ಬಹಿಷ್ಕೃತರಾಗಿರಬೇಕೆ ?"

" ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಹೋದರೆ ಊರಿನವರೆಲ್ಲ ನಮಗೆ ಬಹಿಷ್ಕಾರ ಹಾಕಿಬಿಡುತ್ತಾರೆಯೋ ?"

" ನೀನು ಅಂಚೆ-ಕಚೇರಿಗೆ ಹೋಗಿದ್ದಾಗ ಶಾಸ್ತ್ರಿಗಳು ಬಂದಿದ್ದರು. ನೀನು ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಹೋದರೆ ಬ್ರಾಹ್ಮಣಸಮಾಜ ನಮಗೆ ಬಹಿಷ್ಕಾರ ಹಾಕುತ್ತದೆ ಎಂದು ಹೇಳಿ ಹೋದರು."

" ಅಪ್ಪ, ನೀನು ಚಿಂತೆ ಮಾಡಬೇಡ. ನಿಮಗೆ ಯಾರಿಗೂ ಬಹಿಷ್ಕಾರ ಹಾಕದ ರೀತಿಯಲ್ಲಿ ನಾನು ನಡೆದುಕೊಳ್ಳುತ್ತೇನೆ. ನನ್ನೊಬ್ಬನಿಂದ ಮನೆಯವರಿಗೆಲ್ಲ ತೊಂದರೆಯಾಗುವುದು ಬೇಡ."

" ಏನು ಮಾಡಬೇಕೆಂದಿದ್ದೀ ?"

" ಈ ಜಗಲಿಯ ಮೇಲಿನ ಕೋಣೆಯಲ್ಲಿ ನಾನು ಪ್ರತ್ಯೇಕವಾಗಿ ಇದ್ದು ಬಿಡುತ್ತೇನೆ. ಹೇಗಿದ್ದರೂ ಚೆನ್ನಿ ಮಾದ ಚೇತರಿಸಿಕೊಳ್ಳುವುದಕ್ಕೆ ಇನ್ನೂ ಕೆಲವು ದಿನ ಬೇಕು. ನಮ್ಮಲ್ಲಿ ಯಾರಾದರೂ ಒಬ್ಬರು ನಿತ್ಯ ಅವರಿಬ್ಬರನ್ನೂ ಎರಡು ಮೂರು ಸಲ ನೋಡಿಕೊಂಡು ಬರಬೇಕು; ಮಾದನಿಗೆ ಎರಡು ಹೊತ್ತೂ ಗಂಜಿಯೋ ಅನ್ನವೋ ತೆಗೆದುಕೊಂಡು ಹೋಗಬೇಕು. ನಾನು ಆ ಕೆಲಸವನ್ನು ಸಂಪೂರ್ಣವಾಗಿ ವಹಿಸಿಕೊಂಡುಬಿಡುತ್ತೇನೆ. ಮನೆಯಲ್ಲಿ ನಾನು ಯಾರ ಸಂಪರ್ಕವನ್ನೂ ಇಟ್ಟುಕೊಳ್ಳದೆ ಇರುವುದರಿಂದ ನಾನು ಪದೇ ಪದೇ ಸ್ನಾನಗೀನ ಮಾಡಬೇಕಾಗಿಯೂ ಇರುವುದಿಲ್ಲ ಎಲ್ಲ ಸರಿಹೋಗುತ್ತೆ. ನೀನು ಚಿಂತೆ ಮಾಡಬೇಡ, ಸುಮ್ಮನಿರಪ್ಪ."

ಸುಂದರನ ಮಾತುಗಳು ಒಂದು ರೀತಿಯಲ್ಲಿ ಒಪ್ಪಿತವಾಗಿ ಕಂಡುವು. ಕೃಷ್ಣಪ್ಪನವರು ಈ ಪ್ರಕರಣವನ್ನು ಬೆಳಸದೆ ಸುಮ್ಮನಾದರು.

ಸುಂದರ ಕೂಡಲೆ ತನ್ನ ಹಾಸಿಗೆ, ಬಟ್ಟೆ, ಪುಸ್ತಕ ಮೊದಲಾದುವನ್ನು ಜಗಲಿಯ ಮೇಲಿನ ಕೊಣೆಗೆ ಸಾಗಿಸಿಯೇ ಬಿಟ್ಟ. ಈ ಸಮಾಚಾರವನ್ನೆಲ್ಲಾ ವಿವರವಾಗಿ ಅರಿತ ಮೇಲೆ, ಏನೋ ಅಶುಭವನ್ನು ಮುಂಗಂಡವರಂತೆ ನರಸಮ್ಮ ನವರು ತುಂಬ ಮರುಗಿದರು. ಹೊಟ್ಟೆಯಲ್ಲಿ ಹುಟ್ಟಿದ ಮಗ ಒಂದೇ ಮನೆಯಲ್ಲಿ ಬೇರೆಯಾಗಿದ್ದುಕೊಂಡು, ಶೂದ್ರನಂತೆ ಜಗಲಿಯ ಮೇಲೆ ತಿನ್ನುವುದು

ಹೆತ್ತ ಕರುಳಿಗೆ ಸಹಿಸದ್ದಾಯಿತು. ಅಂದು ರಾತ್ರಿ ಸುಂದರನಿಗೆ ಜಗಲಿಯ ಮೇಲಿನ ಕೋಣೆಯಲ್ಲಿ ಎಲೆ ಹಾಕಿ ಅನ್ನ ಬಡಿಸುವಾಗ ಅವರ ಕರುಳು ಕಿತ್ತು ಬಂದಂತಾಯಿತು. ಬಿಕ್ಕಿ ಬಿಕ್ಕಿ ಅತ್ತರು. "ನಿನಗೆ ಇಷ್ಟವಿದೆಯೋ ಇಲ್ಲವೋ, ನಿನ್ನ ಮನಸ್ಸಿಗೆ ಒಪ್ಪುತ್ತದೆಯೋ ಇಲ್ಲವೋ, ಅದು ಹೇಗಾದರೂ ಇರಲಿ. ನಾಳೆ ಬೆಳಗ್ಗೆ ಪ್ರಾಯಶ್ಚಿತ್ತ ಮಾಡಿಕೊಂಡುಬಿಡಪ್ಪ. ನನಗೋಸ್ಕರ ಮಾಡಿಕೊಂಡುಬಿಡು. ಮನೆಯಿಂದ ಓಟ್ಟಿದ ಮಗನಿಗೆ ಹಾಕುವ ಹಾಗೆ ನಿನಗೆ ಈ ಬೀದಿಯಲ್ಲಿ ನಾನು ಬಡಿಸಲಾರೆನಪ್ಪ ಕಂದಾ!" ಎಂದರೆ ತೊಳಲಿಕೊಂಡು ಹೇಳಿದರು. ತಾಯಿಯ ಕರುಳಿನ ಮಾತುಗಳನ್ನು ಕೇಳಿದ ಸುಂದರನಿಗೆ ಅನ್ನವೇ ಸರಿಯಾಗಿ ಸೇರಲಿಲ್ಲ. ಮಲಗಿಕೊಂಡಾಗ ನಿದ್ದೆಯೂ ಸರಿಯಾಗಿ ಬರಲಿಲ್ಲ. ತಂದೆಯೇನೋ ತನ್ನ ಏರ್ಪಾಡನ್ನು ಅರೆಮನಸ್ಸಿನಿಂದಲಾದರೂ ಒಪ್ಪಿದ್ದಂತೆ ಕಂಡಿತು ಸುಂದರನಿಗೆ. ಆದರೆ ತಾಯಿ ಇಷ್ಟು ಸಂಕಟ ಪಡುತ್ತಾರಲ್ಲ? ಅವರನ್ನು ಸಂಕಟಪಡಿಸುವುದು ನ್ಯಾಯವೇ? ಎಂಬ ಪ್ರಶ್ನೆ ಮೂಡಿತು. 'ಇದು ಹೊಸದು; ವಿಚಿತ್ರ ನಡವಳಿಕೆ, ದಿಟ; ಬಳಕೆಯಾದರೆ ಸರಿಹೋಗುತ್ತೆ' ಎಂದುಕೊಂಡು ತುಸ ಸಮಾಧಾನ ತಂದುಕೊಂಡ.

ಸುಂದರನ ಊಟವಾದ ಮೇಲೆ ಯಜಮಾನರಿಗೆ ಬಡಿಸುವಾಗ ನರಸಮ್ಮನವರು ತುಂಬ ಪೇಚಾಡಿಕೊಂಡರು. ಕೃಷ್ಣಪ್ಪನವರಿಗೂ ಯೋಚನೆಗಿಟ್ಟುಕೊಂಡಿತು. ಏನು ಮಾಡುವುದೆಂದು ಯೋಚಿಸುತ್ತ ಮಲಗಿದರು.

ಬೆಳಗ್ಗೆ ಸುಂದರ ಸ್ವಲ್ಪ ತಡವಾಗಿ ಎದ್ದ. ಅವನು ಏಳುವುದಕ್ಕೆ ಮುಂಚೆಯೇ ಕೃಷ್ಣಪ್ಪನವರು ಚೆನ್ನಿಯನ್ನೂ ಮಾದನನ್ನೂ ನೋಡಿಕೊಂಡು ಹೊಳೆಯಲ್ಲಿ ಸ್ನಾನಮಾಡಿಕೊಂಡು ಬಂದುಬಿಟ್ಟಿದ್ದರು. ಕೃಷ್ಣಪ್ಪನವರು ಬಂದವರೇ ಸುಂದರನನ್ನು ಕಂಡು, "ಸುಂದರಾ, ನಾನು ಶಾಸ್ತ್ರಿಗಳನ್ನು ಕಂಡು ಮಾತಾಡಿದ್ದೇನೆ. ಅವರು ಒಪ್ಪಿದ್ದಾರೆ. ನೀನು ಹೀಗೆ ಬೀದಿಯ ಬಾಗಿಲ ರೂಮಿನಲ್ಲಿರುವುದು ನಿಮ್ಮ ತಾಯಿಗೆ ಸಮ್ಮತವಿಲ್ಲ. ಮನೆಯೊಳಗೇ ಇದ್ದು ಬಿಡು. ನೀನು ಏನು ಯೋಚನೆ ಮಾಡಬೇಡ. ಮಾದನ ಶುಶ್ರೂಷೆ ನಾನು ನೋಡಿಕೊಳ್ಳುತ್ತೇನೆ. ಚೆನ್ನಿಯ ವಿಚಾರಕ್ಕೆ ಯೋಚನೆ ಇಲ್ಲ.

ಡಾಕ್ಟರಿಗೆ ಹೇಳಿಬಂದಿದ್ದೇನೆ. ಸಂಪೂರ್ಣ ಜವಾಬ್ದಾರಿ ವಹಿಸಿಕೊಂಡಿದ್ದಾರೆ" ಎಂದು ಹೇಳಿದರು. "ಶಾಸ್ತ್ರಿಗಳು ಒಪ್ಪಿದ್ದರೆ ಆಗಬಹುದು. ಮನೆಯೊಳಗೇ ಇರುತ್ತೇನೆ. ಆದರೆ ನೀನು ದಿನಕ್ಕೆ ಎರಡು ಮೂರು ಸಲ ಸ್ನಾನಮಾಡುವುದು ನನಗೆ ಒಪ್ಪಿಗೆಯಿಲ್ಲ. ಮಧ್ಯಾಹ್ನದ ಹೊತ್ತು ನಾನೇ ಮಾದನ ಊಟ-ಉಪಚಾರ ನೋಡಿಕೊಳ್ಳುತ್ತೇನೆ" ಎಂದ ಸುಂದರ. "ಅದಕ್ಕೇನು, ಆಗಲಿ" ಎಂದರು ಕೃಷ್ಣಪ್ಪನವರು.

೨೬

ಇನ್ನು ಹತ್ತು ಹದಿನೈದು ದಿನಗಳಲ್ಲಿ ಕೃಷ್ಣಪ್ಪನವರ ತಂದೆಯ ಶ್ರಾದ್ಧ ಬರುವುದಾಗಿತ್ತು. ಆದ್ದರಿಂದ ನಂಜುಂಡಶಾಸ್ತ್ರಿಗಳನ್ನು ಎದುರುಹಾಕಿಕೊಳ್ಳಲು ಅವರಿಗೆ ಇಷ್ಟವಾಗಿರಲಿಲ್ಲ. ಊರಿನಲ್ಲಿ ಬೇರೆಯ ಜೋಯಿಸರೇನೋ ಇದ್ದರು. ನಂಜುಂಡಶಾಸ್ತ್ರಿಗಳ ಮಾತು ಕೇಳಿ ಅವರೂ ಬಾರದಿರಬಹುದೆಂಬ ಶಂಕೆ ಕೃಷ್ಣಪ್ಪನವರ ಮನವನ್ನು ಕಾಡಿತು. ಇತ್ತ ಮಗನೂ ತಮ್ಮ ಮಾತನ್ನು ನಡಸುವ ಭರವಸೆ ಅವರಿಗೆ ಕಂಡುಬರಲಿಲ್ಲ. ಈ ಪೇಚಿನಿಂದ ಪಾರಾಗುವುದಕ್ಕಾಗಿ ಅವರು ನಂಜುಂಡಶಾಸ್ತ್ರಿಗಳಿಗೆ ಒಂದು ಸುಳ್ಳು ಹೇಳುವುದಾಗಿ ನಿಶ್ಚಯಿಸಿದರು. ಮಾರನೆಯ ದಿನ ಶಾಸ್ತ್ರಿಗಳು ವಿಚಾರಿಸಿದಾಗ, ಸುಂದರ ಪಂಚಗವ್ಯ ತೆಗೆದುಕೊಂಡು ಶುದ್ಧಿಮಾಡಿಕೊಂಡ ಎಂದು ಆ ಸುಳ್ಳನ್ನು ಹೇಳಿಯೇಬಿಟ್ಟರು. ಈ ವಿಷಯ ಸುಂದರನಿಗೆ ತಿಳಿಯದು. ಶಾಸ್ತ್ರಿಗಳನ್ನು ಹೇಗೋ ತಂದೆ ಒಪ್ಪಿಸಿದ್ದಾರೆಂದು ತಿಳಿದು, ಸುಂದರ ಮನೆಯೊಳಕ್ಕೆ ಹೋಗಲು ಒಪ್ಪಿದ.

ಚೆನ್ನಿಗೆ ಗುಣವಾಗುತ್ತ ಬಂದಿತು; ಇತ್ತ ಮಾದನಿಗೂ ಸ್ವಲ್ಪ ಶಕ್ತಿ ಕೂಡಿಕೊಂಡಿತು. ಕೃಷ್ಣಪ್ಪನವರು ಅವನಿಗೆ ಚೆನ್ನಿಯ ಬಗೆಗೆ ಮಾಡಿದ್ದ ಏರ್ಪಾಡೆಲ್ಲವನ್ನೂ ತಿಳಿಸಿದ್ದರು. ಆದರೂ ಅವನಿಗೆ ಚೆನ್ನಿಯ ವಿಚಾರದಲ್ಲಿ ಬಹಳ ವ್ಯಾಕುಲ, ಬಹಳ ಆಲೋಚನೆ. ಒಂದು ದಿನ ಅವನು ಕೃಷ್ಣಪ್ಪನವರನ್ನು ಕುರಿತು—"ಇನ್ನು ನನ್ನ ಕಾಲ ಆಯ್ತು ಅಂತ ಕಾಣತದೆ ನನ್ನೊಡ್ಯಾ. ಅವಳಿಗೆ ತಂದೆ ತಾಯಿ ಎಲ್ಲ ನೀವೆ. ನಾನು ಯಾವಾಗ ತೀರ್ಕೋತೇನೋ ಹೇಳಾಕಾಗಾಕಿಲ್ಲ. ಚೆನ್ನೀಗೊಂದು ಮದ್ವೆ ಮಾಡಬೇಕು. ಅದೆ ನನ್ನ ಮನಸಿ

ಸಾಗ. ಏನ ಮಾಡಲಿ ಬುದ್ಧಿ ? " ಎಂದು ನಿಟ್ಟುಸಿರುಗರೆದ.

" ಅದರ ಯೋಚನೆ ನೀನು ಮಾಡಬೇಡ ಈಗ. ಆ ಕಾಲ ಬಂದಾಗ ನೋಡೋಣ. ನಿಮ್ಮವರ ಪೈಕಿ ಮದುವೆಮಾಡಿಕೊಳ್ಳೋ ಗಂಡು ಯಾರಾದರೂ ಇದ್ದರೆ ಹೇಳು. ಮದುವೆಗೆ ನಾನು ಹಣ ಕೊಡುತೀನಿ " ಎಂದು ಧೈರ್ಯ ಹೇಳಿದರು ಕೃಷ್ಣಪ್ಪನವರು.

" ಜೀತದಾಳು ನನ್ನ ಹುಡಗೀನ ಮದುವೆ ಮಾಡಿಕೊಳ್ಳೋ ಗಂಡು ಎಲ್ಲವನೆ ನನ್ನೊಡ್ಯ ? ಮಾಡಿಕೊಂಡರೆ ಈರ ಮಾಡಿಕೋಬೇಕು."

" ಯಾರೋ ಅವನು ? "

" ಇನ್ಯಾರು, ಸೇಂದಿ ಅಂಗಡಿ ಕೂಲಿ ಆಳು ಈರ. ಅವನ ಹೆಂಡ್ತಿ ಸತ್ತು ಮೂರು ವರ್ಸ ಆಯ್ತು. ಒಂದ್ಸಲ ಕೇಳಿದಾಗ ನೋಡೋಣ ಅಂದ. ಅವನೇನಾರ ಒಲ್ಲೆ ಅಂದ್ರೆ ಪೂಜಾರಪ್ಪನಿಗೆ ಒಪ್ಪಿಸಬೇಕೂ ಅಂತ ಮಾಡಿಕೊಂಡಿವ್ನಿ. ಅಮ್ಮನ ಪೂಜೆ ಮಾಡ್ಕೊಂಡಿರ್ತಾಳೆ. "

ಚೆನ್ನಿ ಹೆಂಡ ಮಾರುವವನ ಹೆಂಡತಿಯಾಗುವುದಾಗಲಿ ಮಾರಮ್ಮನ ಪೂಜಾರಿಣಿಯಾಗುವುದಾಗಲಿ ಕೃಷ್ಣಪ್ಪನವರಿಗೆ ಒಪ್ಪಿಗೆಯಾಗುವ ವಿಷಯವಾಗಿರಲಿಲ್ಲ. ಉತ್ತಮರಲ್ಲಿಯಂತೂ ಚೆನ್ನಿಗೆ ವರ ನೋಡುವುದು ಕನಸಿನ ಮಾತು. ಮಾದಿಗರಲ್ಲಿಯೋ ಹೊಲೆಯರಲ್ಲಿಯೋ ಭೂಮಿ-ಕಾಣಿಯುಳ್ಳವನೊಬ್ಬ ರೈತನಿಗೆ ಚೆನ್ನಿಯನ್ನು ಕೊಡಿಸಿ ಮದುವೆ ಮಾಡಿಸಬೇಕೆಂದು ಕೃಷ್ಣಪ್ಪನವರ ಆಶೆ. ಆದರೆ, ಮಾದ ಹೇಳಿದಂತೆ, ಉತ್ತಮ ಸ್ಥಿತಿಯಲ್ಲಿರುವ ಯಾವ ' ಪಂಚಮವರ್ಣ ' ದವನೂ ಜೀತದಾಳಿನ ಹುಡುಗಿಯನ್ನು ಮದುವೆಯಾಗಲು ಒಪ್ಪುವಂತೆ ಕೃಷ್ಣಪ್ಪನವರಿಗೆ ತೋರಲಿಲ್ಲ. ಅಲ್ಲದೆ, ಅಂಥ ಉತ್ತಮಸ್ಥಿತಿಯಲ್ಲಿದ್ದ ಆಳು ಕೂಡ ಊರಲ್ಲಿ ಯಾರೂ ಇದ್ದಂತೆ ಅವರ ನೆನಪಿಗೆ ಬರಲಿಲ್ಲ. ಚೆನ್ನಿಯ ಭವಿಷ್ಯ ಮಾದನನ್ನು ಬಾಧಿಸುತ್ತಿದ್ದಂತೆ ಅವರನ್ನೂ ಬಾಧಿಸತೊಡಗಿತು. "ಯತ್ನವಿಲ್ಲದಿದ್ದರೆ ಹಾಗೇ ಆಗಲಿ, ನೋಡೋಣ. ಕೂಲಿಗೆ ಬರುವ ಹೊಲೆಮಕ್ಕಳಲ್ಲಿ ಯಾರನ್ನಾದರೂ ಕೇಳಿ ನೋಡು ಎಂದು ಕಾಳನಿಗೂ ಹೇಳಿರುತ್ತೇನೆ. ನೀನು ಯೋಚನೆ ಮಾಡಬೇಡ, ಆ ಕಾಲ ಬಂದಾಗ ನೋಡಿಕೊಳ್ಳೋಣ " ಎಂದು ಅವರು ಮಾದನಿಗೆ ಸಮಾಧಾನ ಹೇಳಿ, ತಾವೂ ಸಮಾಧಾನಗೊಂಡರು.

ಮಾದನನ್ನು ವಿಚಾರಿಸಲು ಸುಂದರನೂ ತೋಟಕ್ಕೆ ಹೋಗಿ ಬರುತ್ತಿದ್ದನಷ್ಟೆ. ಅವನಿಗೂ ಮಾದ ತನ್ನ ಮನದ ಬಯಕೆಯನ್ನು ತಿಳಿಯ ಪಡಿಸಿದ್ದ. ಮಾವ ಇದ್ದಕ್ಕಿದ್ದ ಹಾಗೆ ಸತ್ತುಹೋದರೆ ಚೆನ್ನಿಯ ಗತಿಯೇನು ಎಂದು ಎಂದಿನಿಂದಲೂ ಸುಂದರ ಆಲೋಚಿಸುತ್ತಿದ್ದ. ಮಾದ ಈ ಪ್ರಶ್ನೆ ಯನ್ನು ಎತ್ತಿದ ಮೇಲೆ ಸುಂದರನ ಮನಸ್ಸೂ ಆಲೋಚನೆಗೆ ಸಿಲುಕಿತು. ಆದರೆ ಅವನು ತನ್ನ ತಂದೆಯ ಹಾಗೆ ಚಿಂತೆಗೆಡೆಗೊಡಲಿಲ್ಲ. ಕಾರಣ, ಅವನಿಗೆ ತಟ್ಟನೆ ರಾಚಪ್ಪನ ನೆನಪಾಯಿತು. ರಾಚಪ್ಪನಿಗೆ ಚೆನ್ನಿಯ ವಿಚಾರ ವನ್ನು ತಿಳಿಸಿ, ಅವನನ್ನು ಒಪ್ಪಿಸಿ, ಅವಳನ್ನು ಅವನಿಗೆ ಮದುವೆ ಮಾಡಿ ಕೊಡುವುದಕ್ಕಿಂತಲೂ ಉತ್ತಮವಾದ ಕಾರ್ಯ ಬೇರೆ ಇರಲಾರದೆಂದು ಅವನು ಭಾವಿಸಿದನು. ರಾಚಪ್ಪ ಒಪ್ಪಿದರೆ ಚೆನ್ನಿಯ ಪುಣ್ಯ.

ಕಮಲೆ ತನ್ನ ಹೃದಯವನ್ನು ಆಳದೆ ಹೋಗಿದ್ದಿದ್ದರೆ, ಹರಿಜನೋ ದ್ಧಾರ ಕಾರ್ಯದ ಹುಮ್ಮಸ್ಸಿನಿಂದಲೂ ಸಹಜವಾಗಿಯೇ ಚೆನ್ನಿಯಲ್ಲಿ ಅವನಿಗಿದ್ದ ಕರುಣೆ ಅನುಕಂಪಗಳಿಂದಲೂ ಅವಳನ್ನು ತಾನೇ ಮದುವೆಯಾಗಿ ಬಿಡುವುದಾಗಿ ಸುಂದರ ತೀರ್ಮಾನಿಸಿಬಿಡುತ್ತಿದ್ದನೇನೋ! ಸದ್ಯದಲ್ಲಿ, ಆ ಬಗೆಯ ಆಲೋಚನೆಯ ಸುಳಿವಿನ ಹೊಳಹೂ ಅವನ ಮನಸ್ಸನ್ನು ಸೋಂಕಲಿಲ್ಲ.

## ೨೭

ಬೆಂಗಳೂರಿನಲ್ಲಿ ಶಾಮಿಯ ಪರೀಕ್ಷೆ ಮುಗಿಯಿತು. ಆ ಹೊತ್ತಿಗೆ ಸುಂದರನ ಕಾಗದವೂ ಹೋಯಿತು. ಗಂಗಮ್ಮನ ಗಂಡ ರಾಮಸ್ವಾಮಯ್ಯ ಕಂಟ್ರೋಲರ್ ಕಚೇರಿಯಲ್ಲಿ ಗುಮಾಸ್ತೆಯಾಗಿ ಸೇರಿ, ಈಗ ಅಕೌಂಟೆಂಟ್ ಎಂದು ನೂರ ಇಪ್ಪತ್ತು ರೂಪಾಯಿ ಸಂಬಳ ತರುತ್ತಿದ್ದ. ಮಕ್ಕಳಿಲ್ಲ; ಗಂಡ ಹೆಂಡಿರಿಬ್ಬರ ಸಂಸಾರ; ಶಾಮಿಗೆ ಲೋವರ್ ಸೆಕಂಡರಿ ಪರೀಕ್ಷೆ ಆದ ಕೂಡಲೆ ಅವನನ್ನು ತನ್ನ ಮನೆಯಲ್ಲಿ ಓದಲು ಕರೆದುಕೊಂಡು ಹೋಗಿದ್ದ.

ಊರಿನಿಂದ ಕಾಗದ ಬಂದಿರುವ ಸಮಾಚಾರವನ್ನು ಶಾಮಿ ಅಕ್ಕನಿಗೂ ಭಾವನಿಗೂ ತಿಳಿಸಿದ. ಬಹುದಿನಗಳಿಂದ ನಂಜನಗೂಡಿಗೆ ಹೋಗಬೇಕೆಂಬ ಬಯಕೆ ಗಂಡಹೆಂಡಿರಿಗೆ ಇದ್ದಿತು. ತಾವೂ ಜೊತೆಯಲ್ಲಿ ಬರುವುದಾಗಿ ಮಾವನವರು ಬರೆದಿದ್ದರಿಂದ, ಹಾಗೆಯೇ ಆಗಲೆಂದು ಕೊಳಲೂರಿಗೆ

ಹೋಗುವುದಾಗಿ ರಾಮಸ್ವಾಮಯ್ಯ ನಿಷ್ಕರ್ಷೆ ಮಾಡಿದ. ಹಿರಿಯರ ಶ್ರಾದ್ಧದ ಹೊತ್ತಿಗೇ ಹೋದರೂ ಹೋಗಬಹುದೆಂದು ಗಂಗಮ್ಮನ ಸಲಹೆ ರಾಮ ಸ್ವಾಮಯ್ಯ ಒಪ್ಪಿ, ತಾವು ಅರಸೀಕೆರೆಯ ಮಾರ್ಗವಾಗಿ ಇಂಥ ದಿನ ಬರುವುದಾಗಿಯೂ, ಹೊಳೇನರಸೀಪುರಕ್ಕೆ ಗಾಡಿಯನ್ನು ಕಳಿಸಿರಬೇಕೆಂದೂ ಕಾಗದ ಬರೆದ.

ಸುಂದರ ಕೋರಿದ್ದ ಮೇರೆಗೆ ಶಾಮಿ ಎರಡು ಕ್ವಿಲ್ಟ್ ಹಾಸಿಗೆಗಳನ್ನೂ, ಒಂದು ಚರಕವನ್ನೂ ಕೊಂಡು ಪ್ರಯಾಣಕ್ಕೆ ಸನ್ನದ್ಧನಾದ. ರಾಮ-ಸ್ವಾಮಯ್ಯ ಹೇಳಿದ ಮೇರೆಗೆ, ಒಂದು ದೊಡ್ಡ ಬುಟ್ಟಿಯ ತುಂಬ ಹಣ್ಣು ಹಂಪಲು ತರಕಾರಿಯನ್ನೂ ಕೊಂಡಿಟ್ಟ. ಎಲ್ಲರೂ ಪ್ರಯಾಣ ಮಾಡಿ ಕೃಷ್ಣಪ್ಪನವರ ತಂದೆಯ ಶ್ರಾದ್ಧಕ್ಕೆ ಎರಡು ದಿನ ಮುಂಚಿತವಾಗಿ ಕೊಳ ಲೂರು ಸೇರಿದರು.

ಮಗಳು ಅಳಿಯ ಬಂದರೆಂದು ಕೃಷ್ಣಪ್ಪನವರಿಗೂ ನರಸಮ್ಮನವರಿಗೂ ತುಂಬ ಹಿಗ್ಗು; ಅಕ್ಕ ಭಾವ ಬಂದರೆಂದು ತುಂಗೆಗೂ ಸೂರಿಗೂ ಸಡಗರವೋ ಸಡಗರ. ಅವರ ಆಗಮನದ ವಿಚಾರ ಊರಿಗೇ ಒಂದು ಸುದ್ದಿಯಾಯಿತು.

ಗಂಡನಿಗೆ ಹೇಳಿ ಗಂಗಮ್ಮ ತೆಗೆಸಿ ತಂದಿದ್ದ ಒಂದು ಕಿರಿಗೆಯನ್ನು ತುಂಗೆಗೂ ಒಂದು ಜೊತೆ ಸಣ್ಣ ಫಳಫಳ ಹೊಳೆಯುವ ಜೋಡನ್ನು ಸೂರಿಗೂ ಕೊಟ್ಟಾಗ ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಗಾಡಿ ಇಳಿದ ಕೂಡಲೆ "ಬೆಂಗಳೂರಿಂದ ನನಗೇನು ತಂದಿದ್ದಿ, ನನಗೇನು ತಂದಿದ್ದಿ?" ಎಂದು ತುಂಗೆ ಸೂರಿ ಇಬ್ಬರೂ ಶಾಮಿಯನ್ನು ಪೀಡಿಸಿದಾಗ, ಶಾಮಿ "ನಿಮ್ಮಿಬ್ಬರಿಗೂ ಹೊಸಾಹೊಸ ಹಾಸಿಗೆ ತಂದಿದೇನೆ" ಎಂದನು; ಇಬ್ಬರ ಮುಖವೂ ಅರಳಿದುವು; ಆದರೆ ಸುಂದರ "ಅವು ನಿಮಗಲ್ಲ" ಎಂದಾಗ ಬಾಡಿದುವು. ಆಗ ಗಂಗಮ್ಮ "ನಿಮಗೂ ತಂದಿದೇವೆ, ಅಳಬೇಡಿ" ಎಂದು ಆಮೇಲೆ ಕೊಡಬೇಕೆಂದು ಮಾಡಿಕೊಂಡಿದ್ದ ಕಿರಿಗೆಯನ್ನೂ ಜೋಡನ್ನೂ ಇಬ್ಬರಿಗೂ ಆಗಲೇ ಕೊಟ್ಟು ತೃಪ್ತಿಪಡಿಸಿದಳು. ತುಂಗೆ ಅಳುವಷ್ಟು ಚಿಕ್ಕವಳಲ್ಲದಿದ್ದರೂ ರೇಶ್ಮೆ ಸೀರೆಯನ್ನು ಕಂಡು ಹಿಗ್ಗಿದಳು. ಸೂರಿ ಜೋಡು ಧರಿಸಿ ಅದನ್ನು ಮೆರೆಸಲು ಹೊರಟೇಬಿಟ್ಟ, ಮೈಲಾರಯ್ಯನವರ ಮನೆಗೆ.

ಕೃಷ್ಣಪ್ಪನವರು ಬಿಡಿಸಿ ಹೇಳದೇ ಇದ್ದರೂ ಹಾಸಿಗೆಗಳು ಯಾರಿಗೆ

ಎಂಬುದು ಸುಂದರನ ಗ್ರಹಿಕೆಗೆ ಬಂದಿತ್ತು. ಅದೇ ಸಂಜೆ ಅವನು ಅವುಗಳನ್ನು ತೆಗೆದುಕೊಂಡು ತೋಟಕ್ಕೆ ಹೋಗಿ, ಮಾದನಿಗೆ ಕೊಟ್ಟ: ಒಂದು ಅವನಿಗೆ, ಇನ್ನೊಂದು ಚೆನ್ನಿಗೆ. ಚೆನ್ನಿ ಈಗ ಸಂಪೂರ್ಣವಾಗಿ ಗುಣಹೊಂದಿ ತೋಟಕ್ಕೆ ಬಂದಿದ್ದಳು.

ಅದೇ ಹೊತ್ತಿನಲ್ಲಿ ಕೃಷ್ಣಪ್ಪನವರು ಪೇಟೆಯಿಂದ ಎರಡು ಕಂಬಳಿಗಳನ್ನು ಕೊಂಡು ತಂದುಕೊಟ್ಟರು. ತಂದೆಮಕ್ಕಳಿಬ್ಬರೂ ಒಂದೇ ಬಗೆಯ ಹರ್ಷಭಾವದಲ್ಲಿ ಹಿಂದಿರುಗಿದರು.

## ೨೮

ರಾಮಸ್ವಾಮಯ್ಯನೂ ಗಂಗಮ್ಮನೂ ಬಂದಿರುವ ಸಂಗತಿ ಸೂರಿಯಿಂದ ತಿಳಿದ ಕೂಡಲೆ ಮೈಲಾರಯ್ಯನವರು ಕೃಷ್ಣಪ್ಪನವರ ಮನೆಗೆ ಬಂದು, ಗಂಡ ಹೆಂಡಿರ ಕ್ಷೇಮಸಮಾಚಾರ ವಿಚಾರಿಸಿ, ರಾಮಸ್ವಾಮಯ್ಯನನ್ನೂ ಗಂಗಮ್ಮನನ್ನೂ ತಮ್ಮ ಮನೆಯ ಕಡೆ ಬಿಡುವಾದಾಗ ಬಂದು ಹೋಗಬೇಕೆಂದು ಹೇಳಿಹೋದರು.

ಊರಿಗೆ ಬಂದ ಮೇಲೆ ಕರೆಯದೆಯೇ ಬಂಧುಗಳ ಮನೆಗೆ ಹೋಗಬೇಕಾದ್ದು ಕರ್ತವ್ಯ ಮೈಲಾರಯ್ಯನವರು ಬಂದು ಕರೆದ ಮೇಲೆ ಹೋಗದಿರುವುದೂ, ಹಾಗೆ ಹೋಗುವುದರಲ್ಲಿ ತಡಮಾಡುವುದೂ ಸರಿಯಲ್ಲವೆನಿಸಿ, ಬಂದ ಮಾರನೆಯ ಬೆಳಗ್ಗೆಯೇ ರಾಮಸ್ವಾಮಯ್ಯ ಸುಂದರಮೂರ್ತಿಯನ್ನೂ ಸಂಗಡ ಕರೆದುಕೊಂಡು ಅವರ ಮನೆಗೆ ಹೋದ.

ಆಗ ಮೈಲಾರಯ್ಯನವರು ಮನೆಯಲ್ಲಿರಲಿಲ್ಲ. ತೊಟ್ಟಿಯಲ್ಲಿ ಯಾರೂ ಇರಲಿಲ್ಲ. ಕಮಲೆ ಎಲ್ಲೋ ಹಿತ್ತಿಲಿನಲ್ಲಿ ಇದ್ದಳೆಂದು ಕಾಣುತ್ತದೆ. ಕಾವೇರಮ್ಮನವರು ಅಡುಗೆಯ ಮನೆಯಲ್ಲಿದ್ದರು. ಸುಂದರ ನೇರವಾಗಿ ಅಡುಗೆಯ ಮನೆಗೆ ಹೋಗಿ "ಅತ್ತೆ, ಭಾವ ಬಂದಿದಾನೆ" ಎಂದು ಕಾವೇರಮ್ಮನವರಿಗೆ ತಿಳಿಸಿದ. ಅವರು ಸಾರಿಗೆ ಹುಳಿ ಕಿವಿಚುತ್ತಿದ್ದರು. "ಲೇ, ಕಮಲಾ, ಏನು ಮಾಡುತಾ ಇದೀಯೆ. ಸ್ವಲ್ಪ ಬಾರಮ್ಮಾ, ತೊಟ್ಟಿಯಲ್ಲಿ ಒಂದು ಚಾಪೆ ಹಾಕು" ಎಂದು ಕೂಗಿ ಹೇಳಿದರು. ಕಮಲೆಯೂ 'ಉಪಗರಣೆ' ಬೆಳಗಲು ಅವಕ್ಕೆ ಹುಳಿ ಹಾಕುತ್ತಿದ್ದಳು. ಅವಳಿಗೆ 'ಕಮಲಾ'

ಎಂದು ಕೂಗಿದ್ದಷ್ಟೇ ಸರಿಯಾಗಿ ಕೇಳಿದ್ದು. ಓಡಿ ಬಂದಳು. ಮುಂಗುರುಳು ಕೆದರಿ ಹಾರಾಡುತ್ತಿದ್ದುವು ; ಸೀರೆಯ ಸೆರಗು ಸರಿದು ಹೋಗಿತ್ತು ; ನೀರಿಗೆ ಅಸ್ತವ್ಯಸ್ತವಾಗಿ ನೆಲಗುಡಿಸುತ್ತಿತ್ತು. ಓಡಿ ಬಂದವಳೇ ಅಲ್ಲಿಯೇ ತಟ್ಟನೆ ನಿಂತಳು. ಕೈಯಲ್ಲಿ ಹುಣಿಸೆಹಣ್ಣು ; ಮುಂಗೈಯಿಂದಲೇ ತಲೆಗುರುಳನ್ನು ನೇವರಿಸತೊಡಗಿದಳು. ತಲೆ ತಗ್ಗಿಸಿದಳು; ಅದೇನೋ ಬಿಗುಮಾನ, ಅದೇನೋ ಲಜ್ಜೆ. ಈ ಸಲ ಬೇಸಗೆಗೆ ಸುಂದರ ಊರಿಗೆ ಬಂದ ಮೇಲೆ ಅಯ್ಯ ಅಮ್ಮಾ ಎರಡು ಮೂರು ಸಲ ತಮ್ಮ ತಮ್ಮಲ್ಲಿ ತನ್ನ ಮದುವೆಯ ವಿಚಾರ ಮಾತಾಡಿಕೊಂಡದ್ದು ಅವಳ ಕಿವಿಗೆ ಬಿದ್ದಿತ್ತು. "ಮದುವೆ ಯಾಗುವ ಹುಡುಗಿ, ಇನ್ನು ಮೇಲೆ ಸುಂದರನ ಕೂಡ ಮೊದಲಿನ ಹಾಗೆ ಮಾತುಕತೆ ಆಡಬಾರದಮ್ಮಾ" ಎಂದು ತಾಯಿ ಎಚ್ಚರಿಸಿದ್ದರು. ತನ್ನನ್ನು ಈ ವರ್ಷವೇ ಸುಂದರನಿಗೆ ಕೊಟ್ಟು ಮದುವೆ ಮಾಡಿಬಿಡುತ್ತಾರೆಂದು ತಿಳಿದಿದ್ದಳವಳು. ಆದ್ದರಿಂದಲೇ ಸುಂದರನನ್ನು ಇಂದು ಕಂಡಾಗ ಅವಳಿಗೆ ಹಿಂದೆ ಎಂದೂ ಇಲ್ಲದಿದ್ದ ಲಜ್ಜೆ, ಬಿಗುಮಾನ.

ಹೆಣ್ಣಿನ ಚೆಲುವಿಗೆ ಕಳೆಕೊಡುವುದು ಲಜ್ಜೆ. ಸೃಷ್ಟಿಯ ಚೆಲುವಿನಲ್ಲಿ ಹೆಣ್ಣೊಂದು, ಹೂವೊಂದು. ಹೂವಿನ ಸೌರಭದಂತೆ ಹೆಣ್ಣಿನ ಲಾವಣ್ಯ. ಲಾವಣ್ಯ ಸೌಂದರ್ಯ ಮಾತ್ರವಲ್ಲ; ಅದರಲ್ಲಿಯೇ ಬೇರ್ಪಡಿಸಲಾಗದಂತೆ ಬೆರೆತಿದ್ದು ಅದಕ್ಕೆ ಮೆರುಗು ಕೊಡುವ ಒಂದು ವಿಶೇಷ ಗುಣ. ಲಜ್ಜೆಯಿಂದಲೇ ಲಾವಣ್ಯದ ಸಿದ್ಧಿ.

ಕಮಲೆಯ ಮುಖದಲ್ಲಿ ಹಿಂದೆ ಕಾಣದಿದ್ದ ಲಜ್ಜೆ ಮೂಡಿ ಲಾವಣ್ಯ ವನ್ನು ಚಿಮ್ಮಿಸುತ್ತಿತ್ತು. ಕಮಲೆ ಇಂದು ನಿಜವಾಗಿ ಕನ್ಯೆಯಾಗಿದ್ದಳು. ತಾನೇ ಕೈ ಹಿಡಿಯುವ ಕನ್ಯೆ. ಸುಂದರನ ಹೃದಯದಲ್ಲಿ ಇಂದು ನಿಜವಾದ ಪ್ರೇಮಭಾವ ಮೂಡಿತು.

ನಿಂತಿದ್ದ ಕಮಲೆಯನ್ನು ಕಂಡು, "ತೊಟ್ಟೀಲಿ ಚಾಪೆ ಹಾಸಮ್ಮ" ಎಂದರು ಕಾವೇರಮ್ಮ. ಎಂದೂ ಇಲ್ಲದ್ದು ಇದೇನು ಸುಂದರನಿಗೆ ಈ ಮರ್ಯಾದೆ ತನ್ನಿಂದ ಮಾಡಿಸುವುದು ಎಂದು ಕಮಲೆಗೆ ಆಶ್ಚರ್ಯ. ಹೆಚ್ಚಿನ ಲಜ್ಜೆಯಿಂದ ಸುಮ್ಮನೆ ನಿಂತಿದ್ದಳು. "ನಾನೇ ಚಾಪೆ ಹಾಸಿ ಭಾವ ನನ್ನು ಕೂರಿಸಿ ಬಂದಿದ್ದೇನೆ" ಎಂದು ಸುಂದರ ಹೇಳಿದ ಮೇಲೆ ಮನೆಗೆ

ರಾಮಸ್ವಾಮಯ್ಯ ಬಂದಿರುವುದು ಕಮಲೆಗೆ ಗೊತ್ತಾಯಿತು. ಅಲ್ಲಿ ನಿಲ್ಲದೆ ತಟ್ಟನೆ ತನ್ನ ಕೆಲಸಕ್ಕೆ ತಾನು ಹಿಂದಿರುಗಿದಳು ಕಮಲೆ.

ಕಾವೇರಮ್ಮ ಹೊರಕ್ಕೆ ಬಂದರು. ಸುಂದರನೂ ಒಡನೆಯೆ ಬಂದು "ಅವರು ಎಲ್ಲೋ ಪೇಟೆಯ ಕಡೆ ಹೋಗಿರುವ ಹಾಗೆ ಕಾಣುತ್ತೆ. ಇನ್ನೇನು, ಬರುವ ಹೊತ್ತು. ಸುಂದರ, ಅವರು ಬರುವ ವರೆಗೂ ಸ್ವಲ್ಪ ಕುಳಿತಿರಪ್ಪ" ಎಂದು ಕಾವೇರಮ್ಮ ಅಡುಗೆಯ ಮನೆಗೆ ಹೋಗಿ ಬಂದವರಿಗೆ ತಾಳ್ಯಪ್ಪಿಟ್ಟು ಕಾಫಿ ಮಾಡುವ ಸಿದ್ಧತೆಯಲ್ಲಿ ತೊಡಗಿದರು

ಕಾಫಿಗೆ ನೀರಿಟ್ಟು, ರೊಟ್ಟಿಗೆ ಹಿಟ್ಟು ಕಲಿಸಿ, ಕಾವೇರಮ್ಮ ಏನೋ ನೆನೆದು ಮತ್ತೆ ಹೊರಕ್ಕೆ ಬಂದರು; "ಗಂಗಮ್ಮನೂ ಬಂದಿದ್ದಾಳಂತೆ. ಚೆನ್ನಾಗಿ ದ್ದಾಳೋ?" ಎಂದು ಕೇಳಿದರು. "ಚೆನ್ನಾಗಿದ್ದಾಳೆ" ಎಂದು ರಾಮಸ್ವಾಮಯ್ಯನಿಂದ ಉತ್ತರ ಬಂದಿತು. "ಮನೆಯ ಕಡೆ ಅವಳೂ ಬರಬಹುದಾಗಿತ್ತಲ್ಲ?" ಎಂದು ಮತ್ತೆ ಕೇಳಿದರು.

"ಬರದೇ ಉಂಟೆ. ಯಾವಾಗಲಾದರೂ ಬರುತ್ತಾಳೆ."

"ಹೌದು, ಹೌದು. ಬರುತ್ತಾಳೆ, ಬರದೇ ಏನು. ತವರುಮನೆಗೆ ಬಂದ ಮೇಲೆ ತಾಯಿ ತಂದೆ ಒಡಹುಟ್ಟಿದವರು ಇವರೊಂದಿಗೆ ಮಾತು-ಕತೆ ಪೂರೈಸಬೇಕಲ್ಲ. ಬಿಡುವಾದಾಗ ನಾನೂ ಅತ್ತ ಬಂದು ಯಾವಾಗಲಾದರೂ ಕರೆದು ಬರುತ್ತೇನೆ."

"ಕರೆಯೋದೇನು? ಊರಿಗೆ ಬಂದ ಮೇಲೆ ನಾವೇ ಎಲ್ಲ ನಂಟರ ಮನೆಗೂ ಹೋಗಬೇಕಾದ್ದು ನಮ್ಮ ಕರ್ತವ್ಯ."

"ಅದು ಸರಿಯಪ್ಪ. ಅದು ಪಟ್ಟಣವಾಸದ ಮರ್ಯಾದೆ. ನಾವು ಹಳ್ಳಿಯವರು. ಹಳ್ಳಿಯ ಮರ್ಯಾದೆ ನಡೆಸಬೇಕಲ್ಲ."

ತನ್ನ ಅತ್ತೆ ಅದು ಏನೋ ಹೊಸದಾಗಿ ಸ್ವಲ್ಪ ಮಾತಿನ ಜಾಣತನ ಕಲಿತಿರುವಂತೆ ಸುಂದರನಿಗೆ ತೋರಿತು.

"ಹೊರಟುಹೋಗಬೇಡಿ. ಕುಳಿತುಕೊಳ್ಳಿ, ಸ್ವಲ್ಪ ಕಾಫಿ ತೆಗೆದುಕೊಂಡು ಹೋಗುವಿರಂತೆ. ಅವರೂ ಬರುವ ಹೊತ್ತಾಯಿತು" ಎಂದು ಹೇಳಿ ಕಾವೇರಮ್ಮ ಮತ್ತೆ ಅಡುಗೆಮನೆಗೆ ಹೋದರು.

"ಈ ಕಾಫಿ ಕೊಡುವ ಮರ್ಯಾದೆಯನ್ನು ಹಳ್ಳಿಯವರು ಪಟ್ಟಣ

ದವರಿಂದ ಕಲಿತುಕೊಂಡರು ಅಂತ ಕಾಣುತ್ತೆ." ಎಂದ ರಾಮಸ್ವಾಮಯ್ಯ.

"ಹಳ್ಳಿಯಲ್ಲಿ ಇನ್ನೂ ಹೋಟಲು ಹೆಚ್ಚಿಲ್ಲ. ಆದ್ದರಿಂದ ಇಲ್ಲಿ ಕಾಫಿ ಕೊಡುವುದು ನಿಜವಾಗಿಯೂ ಮರ್ಯಾದೆಯಾಗಿಬಿಟ್ಟಿದೆ. ಹಳ್ಳಿಯವರು ಪಟ್ಟಣಕ್ಕೆ ಬಂದರೆ ನೀನು ಅವರಿಗೆ ಯಾವ ಮರ್ಯಾದೆ ಮಾಡು ಬಿಡು, ಅವರು ಕೇಳುವುದಿಲ್ಲ. ಎರಡು ಹೊತ್ತು ಪಟ್ಟಾಗಿ ಕಾಫಿ ತಿಂಡಿ ಮಾಡಿ ಕೊಡದಿದ್ದರೆ ತಪ್ಪಾಗಿ ತಿಳಿಯುತ್ತಾರೆ."

"ಅದಿರಲಿ. ಎಲ್ಲಿ, ಕಮಲೆ ಕಾಣಿಸುವುದೇ ಇಲ್ಲವಲ್ಲ? ಅವಳನ್ನು ನೋಡಿ ಎರಡು ವರ್ಷವಾಯಿತು. ಆಗ ಲಂಗ ಹಾಕಿಕೊಂಡು ಬಂದು ನನ್ನ ಪಕ್ಕದಲ್ಲಿಯೇ ಕುಳಿತು ನನ್ನನ್ನು ಕೀಟಲೆ ಮಾಡುತಿದ್ದಳು."

"ಎಲ್ಲೋ ಹಿತ್ತಲಿನಲ್ಲಿ ಏನೋ ಕೆಲಸಮಾಡುತಾ ಇದಾಳೆ ಅಂತ ಕಾಣುತ್ತೆ."

ರಾಮಸ್ವಾಮಯ್ಯ ಸುಂದರ ಸ್ವಲ್ಪ ಹೊತ್ತು ಯಾವ ಯಾವದೋ ಬೆಂಗಳೂರು ಮೈಸೂರುಗಳ ವಿಷಯ ಮಾತಾಡುತ್ತ ಕುಳಿತರು.

ಕಾವೇರಮ್ಮ ಎರಡು ಬೆಳ್ಳಿತಟ್ಟೆಗಳಲ್ಲಿ ಬಿಡಿ ಮುತ್ತಗದೆಲೆಯ ಮೇಲೆ ತಿಂಡಿ ತಂದು ಇಟ್ಟರು, "ಕಮಲಾ, ಎರಡು ಲೋಟ ನೀರು ತಂದಿಡಮ್ಮ" ಎಂದು ಗಟ್ಟಿಯಾಗಿ ಹೇಳಿ. "ಅಯ್ಯನೂ ಬರಲಿ" ಎಂದ ರಾಮಸ್ವಾಮಯ್ಯ. "ಸರಿ, ಅವರು ಎಲ್ಲಿ ನಶ್ಯ ತೀಡುತ್ತ ಮಾತಿಗೆ ನಿಂತುಬಿಟ್ಟಿದಾರೋ. ನೀವು ತೆಗೆದುಕೊಳ್ಳಿ" ಎಂದು ಕಾವೇರಮ್ಮ ಒಳಕ್ಕೆ ಹೊರಟರು.

ಕಮಲೆ ಎರಡು ಲೋಟಗಳಲ್ಲಿ ನೀರು ತಂದಿಟ್ಟಳು. ರಾಮಸ್ವಾಮಯ್ಯನಿಗೆ ತಾನು ಹಿಂದೆ ಮಾಡುತ್ತಿದ್ದಂತೆ ಕಮಲೆಯ ಕೈಹಿಡಿದು ಎಳೆದು ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳಬೇಕೆಂದೆನಿಸಿತು. ಆದೇ ಉದ್ದೇಶದಿಂದ ಚಾಚಿದ ಕೈಯನ್ನು ಹಿಂದಕ್ಕೆ ತೆಗೆದುಕೊಂಡನು. ಬೆಳೆದ ಹುಡುಗಿಯೊಂದಿಗೆ ಮೊದಲಿನ ಸಲಿಗೆ ವಹಿಸುವುದು ಸರಿಯಲ್ಲವೆಂದು ತೋರಿರಬೇಕು.

"ಓಹೋ, ಕಮಲೆ ಈಗ ಮದುವೆಗೆ ಸಿದ್ಧವಾಗಿಬಿಟ್ಟಿದಾಳೆ. ಮದುವೆ ಯಾವಾಗಮ್ಮ?"

ಕಮಲೆ ನಾಚಿಕೆಯಿಂದ ಒಳಕ್ಕೆ ಓಡಿಬಿಟ್ಟಳು.

ರಾಮಸ್ವಾಮಯ್ಯ ಸುಂದರ ಉಪಾಹಾರ ತೆಗೆದುಕೊಳ್ಳುತ್ತಿರುವಾಗ

ಮೈಲಾರಯ್ಯನವರು ಬಂದರು. ಪೇಟೆಯಿಂದ ತಂದಿದ್ದ ಸಾಮಾನಿನ ಗಂಟನ್ನು ಒಂದು ಮೂಲೆಯಲ್ಲಿ ಇರಿಸಿ, ಚಾಪೆಯ ಮೇಲೆ ರಾಮಸ್ವಾಮಯ್ಯ ನೊಂದಿಗೆ ಕುಳಿತರು. "ನೀನು ಬಂದದ್ದು ಬಹಳ ಸಂತೋಷವಾಯಿತಯ್ಯ. ಬಡ ಸ್ಕೂಲು ಮೇಷ್ಟರನ್ನ ಮರೆತಿಲ್ಲವಲ್ಲ" ಎಂದರು.

"ಅಂಥಾದ್ದೇನು ದೊಡ್ಡಸ್ತಿಕೆ ನನಗೆ ಬಂದಿರೋದು? ನೀವು ಕರೆ ಯದೆ ಇದ್ದರೂ ಬರುತ್ತಿದ್ದೆ. ಕರೆದೂ ಬರದಿರುತ್ತೇನೆಯೇ?"

ಗಂಡ ಮನೆಗೆ ಬಂದಿರುವುದನ್ನು ಅವರ ಧ್ವನಿಯಿಂದಲೇ ಗುರುತಿಸಿ, ಕಾವೇರಮ್ಮ ಗಂಡನಿಗೂ ತಿಂಡಿ ತಂದು ಮುಂದಿಟ್ಟರು. ಆಮೇಲೆ ಮೂವ ರಿಗೂ ಕಾಫಿ ತಂದು ಕೊಟ್ಟರು.

ಕಾವೇರಮ್ಮ: "ನಮ್ಮ ಕಮಲೆಗೆ ಮದುವೆ ಮಾಡಬೇಕು."

ರಾಮಸ್ವಾಮಯ್ಯ: "ಬೆಳೆದುಬಿಟ್ಟದಾಳೆ ಆಗಲೆ. ನಾನೂ ಹಾಗೆಂದು ಕೊಂಡೆ."

"ಬೆಂಗಳೂರಿನಲ್ಲಿ ಯಾರಾದರೂ ವರ ಇದ್ದರೆ ಹೇಳಪ್ಪ."

"ಇದೇನು ನೀವು ಹೇಳುವುದು? ಮನೆಯಲ್ಲಿ ತುಪ್ಪ ಇಟ್ಟುಕೊಂಡು ಬೆಣ್ಣೆಗೆ ಅಲೆದ ಹಾಗೆ. ಸುಂದರ ಒಲ್ಲೆ ಅಂತಾನೇನು?"

"ಸುಂದರ ದೊಡ್ಡ ಮನಸ್ಸು ಮಾಡಬೇಕಲ್ಲ?" ಎಂದು ಮಾತುಗೂಡಿ ಸಿದರು ಮೈಲಾರಯ್ಯನವರು.

ರಾಮಸ್ವಾಮಯ್ಯ ಸುಂದರನ ಮುಖ ನೋಡಿದರು. ಕಾವೇರತ್ತೆ ಹಾಕಿದ ಪ್ರಶ್ನೆಯಿಂದ ಅವನಿಗೆ ಆಗಲೇ ಆಶ್ಚರ್ಯವಾಯಿತು. ಮಾವ ಅತ್ತೆ ಅದು ಏನೋ ಕಾರಣದಿಂದ ಮನಸ್ಸು ಬದಲಾಯಿಸುತ್ತಿರುವರೆಂದು ಅವನಿಗೆ ತೋರದೆ ಇರಲಿಲ್ಲ. ಅವನು ಕಮಲೆಯನ್ನು ಮನಸ್ಸಿನಲ್ಲಿ ಆಗಲೇ ಮದುವೆ ಯಾಗಿದ್ದ. ಎಂದಿನಂತೆ ಆಗಿದ್ದರೆ ಅವನು ಈಗ ನಾಚಿಕೆಯನ್ನು ನಟಿಸಿ, ಮುಗುಳುನಗೆಯ ಸಮ್ಮತಿಯ ಉತ್ತರ ಕೊಡಬೇಕಾಗಿತ್ತು. ಈಗ ಮನಸ್ಸಿ ನಲ್ಲಿ ಮೂಡಿದ ಆಶ್ಚರ್ಯಸಂದೇಹಗಳಿಂದಾಗಿ ಮುಖವನ್ನು ಬಿಗಿ ಮಾಡಿ ಕೊಂಡೇ ಇದ್ದ.

"ನೋಡಿದೆಯೇನಪ್ಪ, ರಾಮಸ್ವಾಮಯ್ಯ. ಅವನು ಬರುವ ವರ್ಷ ಬಿ. ಎ. ಪ್ಯಾಸು ಮಾಡುತ್ತಾನೆ. ಪಟ್ಟಣವಾಸದ ಹುಡುಗಿಯನ್ನು ಮದುವೆ

ಮಾಡಿಕೊಳ್ಳುವುದು ಬಿಟ್ಟು ಹಳ್ಳಿಯ ಹುಡುಗಿಯ ಕೈಹಿಡಿಯು ತ್ತಾನೆಯೆ ? "

ರಾಮಸ್ವಾಮಯ್ಯನಿಗೆ ನಿಜವಾಗಿಯೂ ಯಾರ ಯಾರ ಮನಸ್ಸು ಹೇಗೆ ಎಂಬುದು ಗೊತ್ತಿರಲಿಲ್ಲ. "ಸುಂದರ ಅಂತಹವನಲ್ಲ. ಒಪ್ಪಿಕೊಳ್ಳುತ್ತಾನೆ, ಒಪ್ಪದೆ ಏನು? ಕಮಲೆಯಂಥ ಚಿನ್ನದ ಬೊಂಬೆ ಕೈಹಿಡಿಯುವುದಕ್ಕೆ ಅವನು ಪುಣ್ಯ ಮಾಡಿರಬೇಕು" ಎಂದು ಮೇಲಕ್ಕೆದ್ದ.

ಕಮಲೆಯನ್ನು ತನಗೆ ಕೊಡುವ ವಿಚಾರದಲ್ಲಿ ಕಾವೇರತ್ತೆ ಮನಸ್ಸು ಬದಲಾಯಿಸಿಬಿಟ್ಟಿದಾರೆ ಎಂಬುದರ ಸುಳಿವು ಸುಂದರನಿಗೆ ಗೊತ್ತಾಗದೆ ಹೋಗಲಿಲ್ಲ. ಹಾಗೆ ಅವರು ಮನಸ್ಸು ಬದಲಾಯಿಸಲು ಕಾರಣವೇನೆಂಬುದೂ ಅವನ ಸೂಕ್ಷ್ಮಮತಿಗೆ ಹೊಳೆಯದೆ ಇರಲಿಲ್ಲ. ಚೆನ್ನಿಯ ಮತ್ತು ಮಾದನ ಆರೈಕೆ ಮಾಡಿದ್ದು ಊರ ಮಾತಾಗಿತ್ತು. ಊರೆಲ್ಲರ ಮನಸ್ಸಿನಂತೆ ಅತ್ತೆಯ ಮನಸ್ಸೂ ಇದ್ದುದರಲ್ಲಿ ಅವರ ತಪ್ಪೇನು ? ಹತ್ತು ಮಂದಿಗೆ ಒಪ್ಪಾಗುವಂತೆ ತನ್ನ ನಡತೆಯನ್ನೇ ತಿದ್ದಿಕೊಂಡರೇ ? ತಿದ್ದಿಕೊಳ್ಳುವುದಕ್ಕೆ ತನ್ನ ನಡತೆ ತಪ್ಪಿರುವುದಾದರೂ ಏನು ? ತಪ್ಪೋ ಸರಿಯೋ, ಕಮಲೆ ಬೇಕಾದರೆ ಹಾಗೇ ನಡೆದುಕೊಳ್ಳಬೇಕು. ಇಲ್ಲವೆ, ಕಮಲೆಯ ಆಸೆಯನ್ನು ಬಿಡಬೇಕು.

ಬೇಡವೆಂದರೂ ಮನಸ್ಸಿನಲ್ಲಿ ಈ ಆಲೋಚನೆ ಸುಳಿಯಿತು. ರಾಮಸ್ವಾಮಯ್ಯ ಎದ್ದು ನಿಂತದ್ದು ಅವನ ಗಮನಕ್ಕೆ ಬರಲಿಲ್ಲ.

"ಬರುತೀಯೋ, ಇಲ್ಲ ಇಲ್ಲೆ ಕುಳಿತಿರುತೀಯೋ ? " ಎಂದು ರಾಮಸ್ವಾಮಯ್ಯ ನಗುತ್ತ ಸುಂದರನನ್ನು ಕೇಳಿದರು.

"ಬರದೆ ನನಗೆ ಇಲ್ಲೇನು ಕೆಲಸ?" ಎಂದು ಸುಂದರನೂ ವ್ಯಂಗ್ಯವಾಗಿ ನಗುತ್ತ ಮೇಲಕ್ಕೆದ್ದ.

"ನನಗೆ ಇಲ್ಲೇನು ಕೆಲಸ?" ಎಂದು ಯಾವುದೋ ಆಲೋಚನೆಯಲ್ಲಿ ಸುಂದರ ಆಡಿದ ಮಾತಿನಲ್ಲಿ ಮುನಿಸಿನ ಛಾಯೆ ತೋರಿತು ಕಾವೇರಮ್ಮನವರಿಗೆ.

"ಅಳಿಯನಾಗೋನಾದರೆ ಮುನಿಸು ತಿಳಿಸಲು ಪ್ರಯತ್ನಪಡಬೇಕು-ಅಳಿಯನಾಗೋನಲ್ಲವಲ್ಲ" ಎಂದುಕೊಂಡಿರಬೇಕು ಕಾವೇರಮ್ಮ.

ಮೈಲಾರಯ್ಯನವರು ನಿರಾಳಮನಸ್ಸಿನಿಂದ ನಶ್ಯ ಸೇದುತ್ತಿದ್ದರು. ರಾಮಸ್ವಾಮಯ್ಯ "ಬರ್ತೀನೆ" ಎಂದಾಗ "ಒಳ್ಳೆಯದು" ಎಂದರು.

೨೯

ಕೊಳಲೂರು ಸುಂದರವಾದ ಹಳ್ಳಿ. ಅದರ ಸೌಂದರ್ಯವೆಂದರೆ ಪ್ರಕೃತಿಸೌಂದರ್ಯ. ಎಲ್ಲ ಹಳ್ಳಿಗಳೂ ಈ ಬಗೆಯ ಸೌಂದರ್ಯವನ್ನು ಹೊಂದಿರುವ ಪುಣ್ಯ ಮಾಡಿಲ್ಲ. ಊರ ಸುತ್ತ ಹೊಲ ಗದ್ದೆಗಳು; ಅಡಕೆ, ತೆಂಗು, ಬಾಳೆ, ಮಾವು, ಹಲಸು, ಮೊದಲಾದ ಫಲವೃಕ್ಷಗಳಿಂದ ಸಮೃದ್ಧವಾದ ತೋಟಗಳು; ಇನ್ನೂ ದೂರದಲ್ಲಿ ನಸುಹಸುರಾಗಿಯೂ, ದೂರದೂರಕ್ಕೆ ಹೋದಂತೆ ನೀಲವರ್ಣದಿಂದಲೂ ಶೋಭಿಸುವ ಸಣ್ಣ ಸಣ್ಣ ಗುಡ್ಡಗಳ ಸಾಲು. ಈ ಗುಡ್ಡಗಳು ಹಳ್ಳಿಗೆ ಸೇರಿದಂತೆ ಇರದಿದ್ದರೂ, ಹಳ್ಳಿಯ ಸುತ್ತಲೂ ಒಂದು ಹರಿದ್ವಲಯವನ್ನು ರಚಿಸಿ, ಗ್ರಾಮದೇವತೆ ಧರಿಸಿದ, ಪಚ್ಚೆನೀಲಿಮಣಿಗಳಿಂದ ಖಚಿತವಾದ ಒಡ್ಯಾಣದಂತೆ ಒಪ್ಪುತ್ತಿದೆ. ಹಳ್ಳಿ ಸ್ವಲ್ಪ ತಗ್ಗಾದ ಪ್ರದೇಶದಲ್ಲಿಯೇ ಇದೆ. ಆದ್ದರಿಂದಲೇ ಹಳ್ಳಿಯಲ್ಲಿ ಅಲ್ಲಲ್ಲಿಯೇ ಸಣ್ಣ ಸಣ್ಣ ಕೆರೆಗಳು, ಕೊಳಗಳು, ಹೊಂಡಗಳು; ಅವುಗಳ ತುಂಬ ಕೆಂಪು, ಬಿಳಿಯ ತಾವರೆಗಳು. ನೀರು ನಿಂತ ಗದ್ದೆಗಳಲ್ಲಿ ಹಚ್ಚಹಸರು ಪಯಿರು; ಹಸುರ ಹೊಡೆಯಿಂದ ಇದ್ದಕ್ಕಿದ್ದಂತೆ ಅಲ್ಲೊಂದು ಇಲ್ಲೊಂದರಂತೆ ನಿರಂತರವಾಗಿ ಹೊರಹೊರಟು ಹಾರಾಡುತ್ತಿರುವ ಬೆಳ್ಳಕ್ಕಿಗಳು.

ಕೊಳಲೂರಿಗೆ ಹೆಚ್ಚಿನ ಸೌಂದರ್ಯವನ್ನು ತಂದಿರುವುದು ಅದನ್ನು ಸೋಕಿಕೊಂಡು ಹರಿಯುತ್ತಿರುವ ಹೊಳೆ; ಅದು ಪ್ರಸಿದ್ಧವಾದ ಕಾವೇರೀ ನದಿಯೇ ಆದರೂ ಹಳ್ಳಿಯ ಜನರಿಗೆ 'ಹೊಳೆ'ಯೇ, ಅದು ಕಾವೇರಿ ಎಂದು ಊರ ಜನಕ್ಕೆ ಹೆಮ್ಮೆ. ಹೊಳೆಯ ಸ್ನಾನ ಊರ ಜನದ ನಿತ್ಯ ಕರ್ಮಗಳಲ್ಲಿ ಒಂದು. ಹೊಳೆಯ ದೆಸೆಯಿಂದ ಊರಿನ ಸೌಂದರ್ಯಕ್ಕೆ ಒಂದು ಪಾವಿತ್ರ್ಯವೂ ಬಂದಿದೆ. ಆದು ಏನೋ ಕಾರಣದಿಂದ ಈ ಸುಂದರವಾದ ಹಳ್ಳಿಯಲ್ಲಿ ಒಂದು ಸುಂದರವಾದ ದೇವಾಲಯ ಇಲ್ಲ. ಇರುವ ಒಂದೆರಡು ಸಣ್ಣ ದೇವಾಲಯಗಳು ಊರ ನಡುವೆ ಕೋಟೆಯಲ್ಲಿ ಇವೆ. ಹೊಳೆಯ ತೀರದಲ್ಲಿಯೇ ಒಂದು ದೊಡ್ಡ ಪ್ರಾಚೀನ ದೇವಾಲಯವಿದ್ದಿದ್ದರೆ ಕೊಳಲೂರು

ತೀರ್ಥಕ್ಷೇತ್ರವೆಂದು ಪ್ರಸಿದ್ಧವಾಗುತ್ತಿದ್ದುದರಲ್ಲಿ ಸಂದೇಹವಿಲ್ಲ. ಆ ಭಾಗ್ಯ ಕೆಲವು ಮೈಲಿಗಳ ಆಚೆ ಇರುವ ರಾಮನಾಥಪುರಕ್ಕೆ ಸಂದಿದೆ. ರಾಮನಾಥ ಪುರದಲ್ಲಿ ವರ್ಷಕ್ಕೊಮ್ಮೆ ರಥೋತ್ಸವವಾಗುತ್ತದೆ; ಒಂದು ಸಣ್ಣಪ್ರಮಾಣದ ದನಗಳ ಪರಿಷೆಯೂ ನೆರೆಯುತ್ತದೆ. ರಾಮನಾಥಪುರದ ಜಾತ್ರೆ ಕೊಳಲೂರಿ ನವರಿಗೆ ದೊಡ್ಡ ಉತ್ಸವ. ಕೊಳಲೂರಿನ ಚಟುವಟಿಕೆಯ ದಿನ ಎಂದರೆ ವಾರದ ಸಂತೆಯ ದಿನ. ಕೊಳಲೂರು ಫಲವತ್ತಾದ ಹಳ್ಳಿಯಾದುದರಿಂದ ಅಲ್ಲಿನ ಸಂತೆಗೆ ಅರಕಲಗೂಡು, ಹಾಸನ, ಹೊಳೆನರಸೀಪುರ ಇಂಥ ದೊಡ್ಡ ಊರುಗಳಿಂದಲೂ ವರ್ತಕರು ಸರಕುಕೊಳ್ಳಲು ಬರುತ್ತಿದ್ದರು.

ಕೊಳಲೂರಿನ ತೋಟಗಳಲ್ಲೆಲ್ಲ ದೊಡ್ಡದೆಂದರೆ ಕೃಷ್ಣಪ್ಪನವರ ತೋಟವೇ. ಅನೇಕ ಆಳುಗಳು ಅಲ್ಲಿ ಕೆಲಸಮಾಡುತ್ತಿದ್ದರು. ಮಾದ ಕೆಲಸದ ಜೊತೆಗೆ ತೋಟದ ಕಾವಲನ್ನೂ ನೋಡಿಕೊಳ್ಳುತ್ತಿದ್ದ. ಕೃಷ್ಣಪ್ಪ ನವರ ತೋಟದ ಮೇಲೆ ಹಲವರಿಗೆ ಕಣ್ಣು. ತೋಟದ ಫಲವನ್ನು ಕದಿಯು ವವರು ಹಲವು ಮಂದಿ. ಮಾದ ಪ್ರಾಯದಿಂದ ಇದ್ದಾಗ ತೋಟಕ್ಕೆ ಬರುವ ಕಳ್ಳರು ಅಂಜುತ್ತಿದ್ದರು. ಅವನಿಗೆ ವಯಸ್ಸಾಗುತ್ತ ಬಂದಂತೆ, ಅವನ ಕುಡಿತ ಹೆಚ್ಚಿದಂತೆ, ತೋಟದಲ್ಲಿ ಕಳ್ಳತನ ಹೆಚ್ಚಾಯಿತು. ನಂಜುಂಡ ಶಾಸ್ತ್ರಿಗಳೇ ಕೃಷ್ಣಪ್ಪನವರ ತೋಟದಿಂದ ಮನೆಗಾಗುವಷ್ಟು ಬಾಳೆಯೆಲೆ ಯನ್ನು ಒದಗಿಸಿಕೊಳ್ಳುತ್ತಿದ್ದರು. ತಮ್ಮ ತೋಟದಲ್ಲಿ ಯಾರು ಯಾರು ಕಳವು ಮಾಡುತ್ತಾರೆಂದು ಕೃಷ್ಣಪ್ಪನವರಿಗೆ ಗೊತ್ತು. ಆದರು ತಿಳಿದೂ ತಿಳಿಯದವರಂತೆ ಸುಮ್ಮನಿದ್ದುಬಿಡುತ್ತಿದ್ದರು. ಕದಿಯುವವರ ಭಾವನೆ ಯಲ್ಲೂ ಕಳ್ಳತನ ಅಲ್ಲ; ದಣಿಯ ದೃಷ್ಟಿಯಲ್ಲೂ ಅಲ್ಲ. ಬೇಕಾದವರು ತಮಗೆ ಬೇಕಾದುದನ್ನು ತೋಟದವರಿಗೆ ಕಾಣದಂತೆ ತೆಗೆದುಕೊಂಡು ಹೋಗುತ್ತಿದ್ದರು, ಅಷ್ಟೆ! ಕೃಷ್ಣಪ್ಪನವರಿಗೆ ಇದರಿಂದ ಭಾರಿ ನಷ್ಟವೇನೂ ಆಗುತ್ತಿರಲಿಲ್ಲ. ಆದ್ದರಿಂದಲೇ ಸುಮ್ಮನಿದ್ದುಬಿಡುತ್ತಿದ್ದರು.

ಕೊಳಲೂರನ್ನು ನೋಡುವುದೆಂದರೆ ಒಪ್ಪೊತ್ತಿನ ಸುತ್ತಾಟ, ಅಷ್ಟೇ. ಆದರೆ, ಮೇಲೆ ಹೇಳಿದ ಅದರ ಸೌಂದರ್ಯವನ್ನು ಸವಿಯುವ ಮನೋ ಧರ್ಮ ಉಳ್ಳವರಿಗೆ ಅದು ಮುಗಿಯದ ಸೌಂದರ್ಯ. ಕೆರೆಯ ಏರಿಯ ಮೇಲೆ ಹೊಂಗೆಯ ನೆಳಲಲ್ಲಿ ಕುಳಿತೊ, ಕೊಳದ ಕಟ್ಟೆಯ ಮೇಲೆ ಕುಳಿತೊ,

ತಾವರೆಯ ಬನವನ್ನು ನೋಡುತ್ತಿರುವುದೇ ಒಂದು ಆನಂದ; ಗದ್ದೆಯ ತವರಿನ ಮೇಲೆ ನಡೆದಾಡುವುದೇ ಒಂದು ಚೆಂದ; ತೋಟದ ತಂಪು ಹಸುರು ಕತ್ತಲೆಯಲ್ಲಿ ಗರಿಕೆಯ ಹಾಸಿಗೆ ಮೇಲೆ ಮಲಗಿಬಿಟ್ಟರೆ ಹೊಟ್ಟೆಗಿಲ್ಲದಿದ್ದರೂ ಮೈಮರೆತು ನಿದ್ದೆಹೋಗಬಹುದು ; ಅಥವಾ ತೋಟದಲ್ಲಿ ಸುಮ್ಮನೆ ಸುತ್ತಾಡುತ್ತ ಇದ್ದರೆ ಸಾಕು, ಬಗೆಬಗೆಯ ಹಕ್ಕಿಗಳ ಇಂಚರವನ್ನು ಆಲಿಸುತ್ತ, ನೂರಾರು ಚೆಲುವಿನ ಚಿಟ್ಟೆಗಳು ಮರಬಳ್ಳಿಗಳ ನಡುವೆ ತೂರಿಬರುವ ಹೊಂಬಿಸಿಲಿನಲ್ಲಿ ಹಾರಾಡುವುದನ್ನು ನೋಡುತ್ತ, ಒಪ್ಪೊತ್ತು ಒಂದು ನಿಮಿಷದಂತೆ ಕಳೆಯುತ್ತದೆ. ಈಚೀಚೆಗೆ ಸುಂದರಮೂರ್ತಿ ಎಷ್ಟೋ ದಿನ ಹೀಗೆ ಹೊತ್ತು ಕಳೆಯುತ್ತಿದ್ದ.

ರಾಮಸ್ವಾಮಯ್ಯನಿಗೆ ಕೊಳಲೂರು ಮಾವನ ಊರಾದರೂ ಅವನು ಅದರ ಸೌಂದರ್ಯವನ್ನು ಸವಿದಿರಲಿಲ್ಲ. ಅವನ ಜೊತೆ ಸುತ್ತಾಡುವವರು ಯಾರೂ ಇರಲಿಲ್ಲ. ಅವನು ಹಿಂದೆ ಒಂದೆರಡು ಸಲ ಬಂದಾಗ ಸುಂದರ ಇನ್ನೂ ಚಿಕ್ಕವನು ಈಗ ಸುಂದರ ತನ್ನ ಹಳ್ಳಿಯ ಸೊಬಗನ್ನು ಕಂಡುಕೊಂಡಿದ್ದವನಾದ್ದರಿಂದ, ಭಾವನಿಗೆ ಅದನ್ನು ಮನಗಾಣಿಸುವ ಉದ್ದೇಶದಿಂದ ಅವನನ್ನು ತನ್ನ ಜೊತೆ ತಿರುಗಾಡಲು ಕರೆದುಕೊಂಡು ಹೋದ. ಒಂದು ದಿನ ಬೆಳಗ್ಗೆ ಊರ ಹೊರಬಾಹೆಯನ್ನು ಸುತ್ತುಹಾಕಿಸಿದ; ಇನ್ನೊಂದು ದಿನ ಹೊಳೆಗೆ ಕರೆದುಕೊಂಡು ಹೋಗಿ ಹೊಳೆಯ ಸ್ನಾನ ಮಾಡಿಸಿದ ; ತಾನು ಹೊಳೆಯಲ್ಲಿ ಈಜುಬಿದ್ದು, ಭಾವ ಸ್ನಾನ ಮಾಡುವಾಗ ಮುಳುಗುವುದಕ್ಕೂ ಹೆದರುತ್ತಿದ್ದುದನ್ನು ಕಂಡು ಹಾಸ್ಯ ಮಾಡಿದ; ಒಂದು ಸಂಜೆ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಡಾಕ್ಟರ ಪರಿಚಯಮಾಡಿಕೊಟ್ಟ. ಹಾಗೆ ಪರಿಚಯಮಾಡಿಕೊಡುವಾಗ, “ಬಹಳ ಒಳ್ಳೆಯವರು, ನಮ್ಮ ಚೆನ್ನಿಯ ಪ್ರಾಣ ಉಳಿಸಿದರು” ಎಂದು ಪ್ರಾಸಂಗಿಕವಾಗಿ ಹೇಳಿದ. ರಾಮಸ್ವಾಮಯ್ಯ “ನಿಮ್ಮ ಚೆನ್ನಿ ಯಾರು ?” ಎಂದು ಕುತೂಹಲದಿಂದ ಕೇಳಿದ. “ನಮ್ಮ ತೋಟದ ಕಾವಲು ಮಾದನ ಮಗಳು. ನಾಳೆಯ ಬೆಳಗ್ಗೆ ನಮ್ಮ ತೋಟಕ್ಕೆ ಹೋಗೋಣ. ಹಾಗೆಯೇ ಚೆನ್ನಿಯನ್ನೂ ನೋಡಿಕೊಂಡು ಬಂದಂತೆ ಆಗುತ್ತೆ” ಎಂದ ಸುಂದರಮೂರ್ತಿ.

ಸುಂದರಮೂರ್ತಿ ಭಾವನನ್ನು ಕರೆದುಕೊಂಡು ತೋಟಕ್ಕೆ ಹೋದ.

ಇಬ್ಬರೂ ತೋಟವನ್ನೆಲ್ಲ ಒಂದು ಸುತ್ತು ಹಾಕಿದರು. "ತೋಟ ಬಹಳ ಚೆನ್ನಾಗಿದೆ. ಒಳ್ಳೆ ತಪೋವನ ಇದ್ದ ಹಾಗೆ ಇದೆ. ರಿಟೈರಾದ ಮೇಲೆ ಇಲ್ಲಿಯೇ ಬಂದು ಇದ್ದು ಬಿಡೋಣವೆನ್ನಿಸುತ್ತದೆ" ಎಂದು ತೋಟದ ಸೊಬಗನ್ನು ತುಂಬ ಮೆಚ್ಚಿಕೊಂಡನು ರಾಮಸ್ವಾಮಯ್ಯ.

ಇಬ್ಬರೂ ಸುತ್ತಾಡಿಕೊಂಡು ಮಾದನ ಗುಡಿಸಿಲೆಡೆಗೆ ಬಂದರು. ಸುಂದರ "ಮಾದ" ಎಂದು ಕೂಗಿ ಕರೆದ. ಮಾದ ಹೊರಕ್ಕೆ ಬಂದು, "ಅಡ್ಬಿದ್ದೆ ಬುದ್ಧಿ" ಎಂದು ಇಬ್ಬರಿಗೂ ಬಾಗಿ ನಮಿಸಿದ. "ಇವರು ಯಾರು ಗೊತ್ತೇನೊ?" ಎಂದು ರಾಮಸ್ವಾಮಯ್ಯನನ್ನು ತೋರಿಸಿ ಸುಂದರ ಕೇಳಿದ. ಮಾದ ಕಣ್ಣಿನ ಮೇಲೆ ಬಿಸಿಲು ಮರೆಮಾಡಿಕೊಳ್ಳುವಂತೆ ಕೈಯಿಟ್ಟುಕೊಂಡು ಚೆನ್ನಾಗಿ ದಿಟ್ಟಿಸಿ ನೋಡಿ, "ಯಾರೋ ನೆಪ್ಪಿಗೆ ಬರ್‍ನಿಲ್ಲವಲ್ಲ. ಕಣ್ಣು ಒಸಿ ಮಂಜು" ಎಂದ.

"ಗಂಗಮ್ಮನ ಗಂಡ, ನಮ್ಮ ಭಾವ ಕಣೋ" ಎಂದು ಪರಿಚಯ ಮಾಡಿಕೊಟ್ಟ ಸುಂದರಮೂರ್ತಿ.

"ಗಂಗವ್ವನ ಯಜಮಾನ್ರಾ! ಚೆನ್ನಾಗಿದ್ದೀರ ಬುದ್ಧಿ? ಯೆಂಡ್ರು ಮಕ್ಕಳು ಚೆನ್ನಾಗವ್ರೆ?"

"ಚೆಂದಾಗಿದಾರೆ ಕಣೋ. ಇನ್ನೂ ಮಕ್ಕಳಿಲ್ಲ. ಒಂದೆರಡು ಎಳನೀರು ಕೀಳಿಸಬೇಕಲ್ಲೋ. ಕೆಂಚ ರಂಗ ಯಾರೂ ಇಲ್ಲವೇನೋ?" ಎಂದ ಸುಂದರ.

"ನೀವು ಬರ್‍ತೀರ ಅಂತ ತಿಳಿದಿದ್ರೆ ಕೀಳಿಸಿ ಮಡಗಿರ್‍ತಿದ್ದೆ. ಹೊತ್ತಾರೇನೇ ಗಿಡಕ್ಕೆಲ್ಲಾ ನೀರು ಹಾಯ್ಸಿ ಹೊಂಟೋದ್ರು ಅವರು. ನಾನು ಮುದುಕನಾದೆ. ಈಗ ಯಾತಕ್ಕೂ ಪ್ರಯೋಜಣ ಇಲ್ಲ ನಾನು. ಬಿಸ್ಲೇರ್‍ತಾ ಆದೆ. ನಿಮ್ಮ ಬಾವಾವರಿಗೆ ಒಂದು ಎಳನೀರೂ ಕೊಡಕಾಗದವ ನಾ ಎಂತ ತೋಟದಾಳು ಬುಡಿ ಬುದ್ಧಿ."

"ಬಿಡು, ನಾನೇ ಮರ ಹತ್ತಿ ಎರಡು ಕೀಳ್ತೀನಿ" ಎಂದು ಸುಂದರ ಮೂರ್ತಿ ಹತ್ತಿರದಲ್ಲೇ ಇದ್ದ ಒಂದು ತೆಂಗಿನಮರವನ್ನು ಹತ್ತಿಯೇಬಿಟ್ಟ. ಸುಂದರ ತೆಂಗಿನಮರ ಹತ್ತಿದ್ದನ್ನು ಕಂಡು ರಾಮಸ್ವಾಮಯ್ಯನಿಗೆ ಗಾಬರಿ. ಮಾದ ಹೆಮ್ಮೆಯಿಂದ ಕತ್ತೆತ್ತಿ ನೋಡುತ್ತಿದ್ದ. ರಾಮಸ್ವಾಮಯ್ಯ

"ಬಿದ್ದುಗಿದ್ದು ಬಿಟ್ಟರೆ ಏನಪ್ಪ ಗತಿ" ಎಂದು ಭಯಪಟ್ಟಾಗ ಮಾದ "ಅಯ್ಯೋ ಬುಡಿ ಬುದ್ದಿ. ಚಿಕ್ಕಂದಿನಿಂದ ತೆಂಗಿನಮರ ಹತ್ತೋದು ಅಂದ್ರೆ ಅವರಿಗೊಂದು ಆಟ. ಮರ ಹತ್ತೋದು, ಎಳನೀರು ಕೆಡವೋದು, ತಾವೊಂದು ಕುಡಿಯೋದು, ಚೆನ್ನಿಗೊಂದು ಕೊಡೋದು. ಇನ್ನೇನು ಕಾಯಿ ಕಿತ್ತರು ಅನ್ನಿ" ಎಂದು ಚಿಕ್ಕ ದಣಿಯನ್ನು ಮೆಚ್ಚಿ ಮಾತಾಡಿದ. "ಚೆನ್ನಿ ಎಲ್ಲೋ ಕರೆಯೋ" ಎಂದು ರಾಮಸ್ವಾಮಯ್ಯ ಕೇಳಿದರು. ಮಾದ "ಏ ಚೆನ್ನಿ, ಕುಡ್ಲು ತಗೊಂಬಾವ್ವ" ಎಂದು ಕೂಗಿ ಹೇಳಿದ. ಚೆನ್ನಿ ಗುಡಿಸಿಲೊಳಗಿನಿಂದ ಒಂದು ಕುಡುಗೋಲನ್ನು ಹಿಡಿದುಕೊಂಡು ಬಂದಳು. ಖಾಯಿಲೆಬಿದ್ದ ಮೇಲೆ ಚೆನ್ನಿ ಬಹಳ ಕ್ಷೈತೆಗೆದುಹೋಗಿದ್ದಳು; ಮೊದಲೇ ಬಿಳುಪು, ಇನ್ನೂ ಬಿಳಚಿಕೊಂಡಿದ್ದಳು. ಆದರೆ ಅವಳ ಚೆಲುವು ಕುಂದಿರಲಿಲ್ಲ. ಈ ತೋಟದಲ್ಲಿ ಬೆಳೆದ ಮಾದನ ಮಗಳನ್ನು ಕಂಡು ಮಾದಿಗರ ಹುಡುಗಿ ಎಂದು ರಾಮಸ್ವಾಮಯ್ಯನಿಗೆ ನಂಬಲಾಗಲಿಲ್ಲ.

ಸುಂದರ ನಾಲ್ಕು ಎಳನೀರನ್ನು ಕಿತ್ತು ಹಾಕಿದ; ಚೆನ್ನಿ ಅವನ್ನು ತೆಗೆದು ಕೊಂಡು ಬಂದು ತಾನೇ ಕೊಚ್ಚಿದಳು. ಎಳನೀರು ಕೊಚ್ಚುವ ಅವಳ ಕೈಚಳಕ ಕಂಡು ರಾಮಸ್ವಾಮಯ್ಯನಿಗೆ ಆಶ್ಚರ್ಯವಾಯಿತು. "ಬ್ರಾಹ್ಮಣರ ಹುಡುಗಿಯಾಗಿ ಬೆಂಗಳೂರಿನಲ್ಲಿ ಇದ್ದಿದ್ದರೆ ಒಳ್ಳೆ ವಿದ್ಯಾವತಿಯಾಗುತ್ತಿದ್ದಳು" ಎಂದು ಮನಸ್ಸಿನಲ್ಲೆ ಮೆಚ್ಚಿಕೊಂಡ ರಾಮಸ್ವಾಮಯ್ಯ.

ಮರ ಇಳಿದುಬಂದು, ಸುಂದರ ಕೊಚ್ಚಿ ಇಟ್ಟಿದ್ದ ಎಳನೀರನ್ನು ಒಂದನ್ನು ಭಾವನಿಗೆ ಕೊಟ್ಟ; ತಾನು ಒಂದನ್ನು ತೆಗೆದುಕೊಂಡ. ಇಬ್ಬರೂ ಕುಡಿದರು. "ಚೆನ್ನಿ, ನೀನು ಒಂದು ತೆಗೆದುಕೊ, ಮಾದ ನೀನು ಒಂದು ತೆಗೆದುಕೊ" ಎಂದು ಸುಂದರ ಅವರಿಬ್ಬರಿಗೂ ಹೇಳಿದ. "ಬೆಂಗಳೂರಿಂದ ಬಂದ ದಣಿಗಳಿಗೆ ಕೊಡಿ ಬುದ್ದಿ, ನಮಗೇನು" ಎಂದು ಮಾದ ಎಳನೀರು ತೆಗೆದುಕೊಳ್ಳಲಿಲ್ಲ; ಚೆನ್ನಿಯೂ ತೆಗೆದುಕೊಳ್ಳಲಿಲ್ಲ. ಸುಂದರ, "ಆದೂ ಸರಿಯೆ, ಬಿಡು" ಎಂದು ಬಲಾತ್ಕಾರಮಾಡಿ ಭಾವನಿಗೆ ಎರಡು ಎಳನೀರನ್ನೂ ಕುಡಿಸಿದ. ರಾಮಸ್ವಾಮಯ್ಯ ಹೊಟ್ಟೆತುಂಬಿ ತೇಗಿದ.

ಎಳನೀರು ಕುಡಿದಾದ ಮೇಲೆ "ಬರ್ತೀನಿ ಕಣೋ ಮಾದ" ಎಂದು ಭಾವನನ್ನೂ ಕರೆದುಕೊಂಡು ಸುಂದರ ಹೊರಹೊರಟ.

ದಾರಿಯಲ್ಲಿ ರಾಮಸ್ವಾಮಯ್ಯ ಹೇಳಿದರು :

"ಚೆನ್ನಿ ಮಾದಿಗರ ಹುಡುಗಿ ಎಂದರೆ ನಂಬುವುದಕ್ಕೇ ಆಗುವುದಿಲ್ಲ ಸುಂದರ."

"ಹೌದು. ಅವಳು ಬ್ರಾಹ್ಮಣರ ಹುಡುಗಿಯಾಗಿ ಹುಟ್ಟಬೇಕಾಗಿತ್ತು."

"ಬ್ರಾಹ್ಮಣರ ಹುಡುಗಿಯಾಗಿದ್ದರೆ ಮದುವೆಯಾಗಿಬಿಡುತ್ತಿದ್ದಿಯೋ?"

"ಬ್ರಾಹ್ಮಣರ ಹುಡುಗಿಯಲ್ಲದಿದ್ದರೂ ಏಕೆ ಮದುವೆಯಾಗಬಾರದು? ಚೆನ್ನಿ ಯಾರಿಗೆ ಕಡಿಮೆಯಾಗಿದ್ದಾಳೆ ರೂಪಿನಲ್ಲಿ? ರೂಪ ಬ್ರಾಹ್ಮಣರ ಸ್ವತ್ತೇನು?"

"ಅಂತೂ ಚೆನ್ನಿಯಲ್ಲಿ ನಿನಗೆ ಮೋಹ ಅಂತ ಕಾಣುತ್ತೆ. ಕಮಲಿಯನ್ನು ಮರೆತುಬಿಟ್ಟೆಯೋ ಹೇಗೆ?"

"ನೀನು ಕೇಳಿದ್ದಕ್ಕೆ ಹೇಳಿದೆ, ಅಷ್ಟೆ. ಚೆನ್ನಿಯಲ್ಲಿ ನನಗೆ ತುಂಬ ಪ್ರೀತಿಯೇನೋ ಇದೆ. ಆದರೆ ಅವಳನ್ನು ಮದುವೆಯಾಗಬೇಕು ಎನ್ನುವ ರೀತಿಯ ಪ್ರೀತಿಯಲ್ಲ. ತುಂಗೆಯ ಹಾಗೆ ಚೆನ್ನಿಯನ್ನು ಪ್ರೀತಿಸುತ್ತೇನೆ. ಸಮಾಜದ ಅಡ್ಡಿ ಇಲ್ಲದಿದ್ದರೆ ಅವಳನ್ನು ಮನೆಗೇ ಕರೆದುಕೊಂಡು ಬಂದು ತಂಗಿಯಂತೆ ನೋಡಿಕೊಳ್ಳುತ್ತ ಇದ್ದೆ."

"ಈಗಲೂ ಮಾದನನ್ನು, ಚೆನ್ನಿಯನ್ನು, ಸಾಕಿ ಸಲಹುತ್ತ ಇರುವವರು ನೀವೇ ತಾನೆ?"

"ಇದು ಏನು ಸಾಕಾಟ ಭಾವ? ವರ್ಷಕ್ಕೆ ಆಗುವಷ್ಟು ರಾಗಿ ಅಳೆಯುತ್ತೇವೆ. ಮೇಲುವೆಚ್ಚಕ್ಕೆ ಒಂದಿಷ್ಟು ದುಡ್ಡು ಕೊಡುತ್ತೇವೆ. ಹಳೆಯ ಬಟ್ಟೆ ಕೊಡುತ್ತೇವೆ. ಯಾವಾಗಲಾದರೂ ಎರಡು ಮೂರು ವರ್ಷಕ್ಕೆ ಒಂದು ಸಲ ಹೊಸ ಬಟ್ಟೆ ತೆಗೆದುಕೊಟ್ಟರೆ ಉಂಟು, ಇಲ್ಲದಿದ್ದರೆ ಇಲ್ಲ. ನಮ್ಮ ಹೆಣ್ಣು ಮಕ್ಕಳಂತೆ ಸ್ವಲ್ಪಮಟ್ಟಿಗಾದರೂ ವಿದ್ಯೆ ಬುದ್ಧಿ ನಯ ನಾಜೂಕು ಕಲಿಯಲು ಅವಕಾಶ ಇದೆಯೆ? ಇತರರೊಂದಿಗೆ ಬೆರೆತು ಮನುಷ್ಯರಂತೆ ಬಾಳಲು ಅವಕಾಶ ಇದೆಯೆ? ಕಾಡು ಹುಡುಗಿಯ ಹಾಗೆ ಬೆಳೆಯುತ್ತಾ ಇದ್ದಾಳೆ."

"ನಿನ್ನ ಈ ಮರುಕ ಎಲ್ಲ ಸರಿಯೆ. ಅವಳನ್ನು ಊರ ಹುಡುಗಿ ಮಾಡಲು ಸಾಧ್ಯವಾಗುತ್ತದೆಯೆ? ನಿಮ್ಮ ಮನೆಗೆ ಕರೆದುಕೊಂಡುಹೋಗಿ ಸಾಕಿಕೊಳ್ಳುತ್ತೀಯೇನು?"

"ಅದರಲ್ಲಿ ತಪ್ಪೇನು? ಮಹಾತ್ಮ ಗಾಂಧಿಯವರು ಒಬ್ಬಳು ಹರಿಜನರ ಹುಡುಗಿಯನ್ನು ಸಾಕಿಕೊಂಡಿರುವರಂತೆ. ನುಡಿದಂತೆ ನಡೆಯುತ್ತಾರೆ ಅವರು. ಆದ್ದರಿಂದಲೇ ಅವರನ್ನು ಮಹಾತ್ಮ ಎಂದು ಲೋಕವೇ ಕೊಂಡಾಡುತ್ತಿದೆ. ನಾವೆಲ್ಲ ಬೇಕಾದಷ್ಟು ಮಾತಾಡುತ್ತೇವೆ; ಕಾರ್ಯತಃ ಮಾಡಿ ತೋರಿಸುವ ಧೈರ್ಯ ಇಲ್ಲ."

ಸುಂದರ ಮಾತು ನಿಲ್ಲಿಸಿ ಸ್ವಲ್ಪ ಹೊತ್ತು ಮೌನವಾಗಿದ್ದ. ತನ್ನ ಊರಿಗೆ ಬಂದಮೇಲೆ ತನ್ನ ಹೃದಯದ ಹಂಬಲಿಕೆಯನ್ನು ಬಿಂಬಿಸುವ ನುಡಿಗಳನ್ನು ಸಹಾನುಭೂತಿಯಿಂದ ಕೇಳುವ ಒಬ್ಬ ವ್ಯಕ್ತಿ ದೊರಕಿರಲಿಲ್ಲ. ಕೃಷ್ಣಪ್ಪನವರು ಚೆನ್ನಿಯ ವಿಚಾರದಲ್ಲಿ ಸುಂದರನಷ್ಟೆ ಮರುಕವುಳ್ಳವರಾದರೂ ಮಗನ ಮುಂದುವರಿದ ಅಭಿಪ್ರಾಯಗಳನ್ನು ಸ್ವೀಕರಿಸುವಷ್ಟು ಅವರು ಮುಂದುವರಿದಿರಲಿಲ್ಲ. ಅವರು ಹುಟ್ಟಿ ಬೆಳೆದ ವಾತಾವರಣ ಅಂತಹುದು. ಭಾವ ತನ್ನ ಭಾವನೆಗಳ ವಿಷಯದಲ್ಲಿ ಸ್ವಲ್ಪ ಸಹಾನುಭೂತಿ ತೋರುವವನಾಗಿ ಕಂಡುಬಂದ. ಮೊದಲು, ಸುಂದರಮೂರ್ತಿ ಬಾಲ್ಯದಲ್ಲಿ ತಾನೂ ಚೆನ್ನಿಯೂ ತೋಟದಲ್ಲಿ ಸ್ಪೃಶ್ಯ-ಅಸ್ಪೃಶ್ಯ ಭಾವನೆಯಿಲ್ಲದೆ ಆಟವಾಡುತ್ತ ಇದ್ದುದನ್ನು ಉತ್ಸಾಹದಿಂದ ಬಣ್ಣಿಸಿದ; ಬೆಳೆಬೆಳೆದಂತೆ, ಚೆನ್ನಿಯನ್ನು ತಾನು ಮುಟ್ಟಿಸಿಕೊಳ್ಳಬಾರದು, ಅಂತೆಯೇ ಹೊಲೆಯರೆನ್ನಿಸಿಕೊಂಡ ಇತರರನ್ನೂ ಮುಟ್ಟಿಸಿಕೊಳ್ಳಬಾರದು ಎಂಬ ಭಾವನೆ ತನ್ನಲ್ಲಿಯೂ ಹೇಗೆ ಬೆಳೆದುಬಂದಿತೆಂಬುದನ್ನು ತಿಳಿಸಿದ. ಬಳಿಕ, ಕಾಲೇಜಿಗೆ ಸೇರಿದ ಮೇಲೆ, ರಾಚಪ್ಪನ ಗೆಳೆತನ ಮಾಡಿಕೊಂಡದ್ದು; ಪಿ. ಸಿ. ರಾಯ್ ಅವರ ಭಾಷಣ ಕೇಳಿ ಅದರಿಂದ ಸ್ಫೂರ್ತಿಗೊಂಡದ್ದು; ಕಾಲೇಜಿನ ಚರ್ಚಾಕೂಟದಲ್ಲಿ ತಾನು ಭಾಗವಹಿಸಿ ಭಾಷಣ ಮಾಡಿದ್ದು; ಅಲ್ಲಿಂದೀಚೆಗೆ, ಹರಿಜನೋದ್ಧಾರ ಕಾರ್ಯದಲ್ಲಿ ತನ್ನ ಕೈಲಾದಷ್ಟು ಸೇವೆ ಮಾಡಬೇಕೆಂದು ನಿಶ್ಚಯಿಸಿಕೊಂಡಿರುವುದು— ಈ ಅಂಶಗಳನ್ನು ಭಾವನಿಗೆ ವಿವರಿಸಿ ಹೇಳಿದ.

ಸುಂದರಮೂರ್ತಿಯ ಮಾತುಗಳನ್ನು ಕೇಳಿ ರಾಮಸ್ವಾಮಯ್ಯನಿಗೆ ಆಶ್ಚರಿಯಾಯಿತು; ಮೆಚ್ಚಿಗೆಯಾಯಿತು. ತಮ್ಮ ಅಭಿಪ್ರಾಯ ತಿಳಿಸಲು ತೊಡಗಿದರು :

"ನೀನು ಹೇಳಿದ್ದೆಲ್ಲವನ್ನೂ ಒಪ್ಪುತ್ತೇನೆ, ಸುಂದರ. ನೀನು ಸ್ವಂತ

ವಾಗಿ ಬೇಕಾದಷ್ಟು ಸ್ವಾರ್ಥತ್ಯಾಗ ಮಾಡು, ನಾನು ಬೇಡ ಅನ್ನುವುದಿಲ್ಲ. ಆದರೆ ನಿನ್ನಂತೆಯೇ ನಡೆಯಲು ಸಿದ್ಧರಾಗಿಲ್ಲದ ನಿನ್ನ ತಾಯಿ, ತಂದೆ, ಅಕ್ಕ, ತಂಗಿ, ತಮ್ಮಂದಿರು, ಬಂಧು ಬಳಗ—ಇವರಿಗೆ ಯಾವ ರೀತಿಯಲ್ಲಿಯೂ ತೊಂದರೆಯಾಗದಂತೆ ನಡೆದುಕೊ. ಅಲ್ಲದೆ, ಚೆನ್ನಿ ನಿಜವಾಗಿಯೂ ಚೆಲುವೆಯಾದ ಹುಡುಗಿ. ಇವನು ಮಾಡುತ್ತಿರುವ ಹರಿಜನೋದ್ಧಾರ ಕಾರ್ಯವೆಲ್ಲ ಒಂದು ಹುಡುಗಿಗಾಗಿ ಎಂದು ಜನ ಆಡಿಕೊಳ್ಳುವಂತೆ ಮಾಡಬೇಡ. ನೀನು ಕುಡಿಯುವುದು ಮಜ್ಜಿಗೆಯಾದರೂ ಈಚಲ ಗಿಡದ ಕೆಳಗೆ ಕುಳಿತು ಅದನ್ನು ಕುಡಿದರೆ ನೋಡಿದವರು ಹೆಂಡ ಎಂದೇ ತಿಳಿಯುತ್ತಾರೆ. ಬೆಂಗಳೂರಿನಲ್ಲಿ ಒಬ್ಬರಿದ್ದಾರೆ. ಅವರು ಆದಿಕರ್ಣಾಟಕರೊಂದಿಗೆ ಇತರರು ಕುಳಿತು ಊಟಮಾಡಬೇಕೆಂದಾಗಲಿ ಸಂಬಂಧ ಬೆಳಸಬೇಕೆಂದಾಗಲಿ ಅವರು ಹೇಳುವುದಿಲ್ಲ. ಗಾಂಧಿಯವರೂ ಹಾಗೆ ಹೇಳುವುದಿಲ್ಲ."

ರಾಮುಸ್ವಾಮಯ್ಯ ಹೇಳಿದ ಅಭಿಪ್ರಾಯಗಳೆಲ್ಲ ಬಹುಭಾಗ ಮೊತ್ತದಲ್ಲಿ ಸರಿ ಎಂದು ಕಂಡಿತು. ಆದರೆ ಜನವನ್ನು ಮೆಚ್ಚಿಸುವುದಕ್ಕಾಗಿ ತನ್ನ ಕೆಲವು ನಂಬಿಕೆಗಳನ್ನು ಬಿಡಲು ಸುಂದರನಿಗೆ ಒಪ್ಪಿಗೆ ಇರಲಿಲ್ಲ.

"ನೀನು ಹೇಳುವುದೆಲ್ಲ ಸರಿ, ಭಾವ. ನಾನು ಇತರರಿಗೆ ಹಾಗೆ ಹೇಳುವುದಿಲ್ಲ. ಆದರೆ, ನನ್ನ ನಂಬಿಕೆಯಂತೆ ನಾನು ಆಚರಿಸಿದಾಗ ಜನ ನನ್ನನ್ನೂ ಅಸ್ಪೃಶ್ಯನನ್ನು ಕಾಣುವಂತೆ ಏಕೆ ಕಾಣಬೇಕು? ನನ್ನ ಸ್ವಂತ ಇಷ್ಟದಿಂದ ನಾನು ಮಾಡುವ ಕೆಲಸಗಳಿಗೆ ಇತರರು ಏಕೆ ಆಕ್ಷೇಪಣೆ ಮಾಡಬೇಕು ? ಸಾಯುವ ಹುಡುಗಿ ಚೆನ್ನಿಯನ್ನು ಜಗಲಿಯ ಮೇಲೆ ಇಟ್ಟುಕೊಂಡು ಉಪಚಾರ ಮಾಡುವುದಕ್ಕೆ ನಂಜುಂಡ ಶಾಸ್ತ್ರಿಗಳು ಅವಕಾಶ ಕೊಡಲಿಲ್ಲ. ಒಂದು ಜೀವಕ್ಕಿಂತ ಅವರಿಗೆ ತಮ್ಮ ಮಡಿ ಹೆಚ್ಚಾಯಿತು."

"ನೀನು ಚೆನ್ನಿಯನ್ನು ಜಗಲಿಯ ಮೇಲೆ ಏಕೆ ಇರಿಸಿಕೊಳ್ಳಬೇಕೆಂದು ನಿಶ್ಚಯಿಸಿದೆ? ಒಳಗೇ ಕರೆದುಕೊಂಡು ಹೋಗಿ ಮಲಗಿಸಬಹುದಾಗಿತ್ತಲ್ಲ?"

"ಅದಕ್ಕೆ ಅಪ್ಪ ಅಮ್ಮನೇ ಒಪ್ಪುತ್ತಿರಲಿಲ್ಲ."

"ಅಪ್ಪ ಅಮ್ಮನಿಗೋಸ್ಕರ ಜಗಲಿ ಎಂದು ನಿಶ್ಚಯಿಸಿದೆ. ಹಾಗೆಯೇ, ಬೀದಿಯವರಿಗಾಗಿ ಕೆಲವನ್ನು ಮಾಡಬೇಕಾಗುತ್ತೆ; ಊರಿನವರಿಗಾಗಿ

ಕೆಲವನ್ನು ಮಾಡಬೇಕಾಗುತ್ತೆ. ಹೇಗೂ ಬೇರೆಯ ಏರ್ಪಾಟುಮಾಡಿ ಚೆನ್ನಿಯನ್ನು ಉಳಿಸಿದೆ. ಸೋತು ಗೆದ್ದೆ. ಇನ್ನು ಮುಂದೆಯೂ ಅಷ್ಟೆ. ನೀನು ಸೋತು ಗೆಲ್ಲಬೇಕು. ಜನವನ್ನು ಏಕೆ ಎದುರುಹಾಕಿಕೊಳ್ಳಬೇಕು? ಈಗಾಗಲೇ ಊರ ಜನ ನಿನ್ನ ವಿಚಾರದಲ್ಲಿ ಏನೇನು ಆಡಿಕೊಳ್ಳುತ್ತಿದಾರೆಯೋ ಯಾರು ಬಲ್ಲರು? ನೀನು ಸ್ವಲ್ಪ ಹುಷಾರಾಗಿರಬೇಕು. ನಿನ್ನ ತಂಗಿಯ ಮದುವೆಯಾಗಬೇಕು, ತಮ್ಮಂದಿರ ಮದುವೆಯಾಗಬೇಕು. ನೀನು ಮಾಡುವ ಕೆಲಸದಿಂದ ಮನೆಯವರಿಗೆ ತೊಂದರೆಯಾಗಬಾರದು. ಅಲ್ಲದೆ, ಇನ್ನೂ ಒಂದು ವಿಚಾರ. ಈಗ ಇದನ್ನೆಲ್ಲ ನೀನು ಹಚ್ಚಿಕೊಂಡರೆ ಓದಿಗೆ ತೊಂದರೆಯಾಗುತ್ತೆ. ಮೊದಲು ಗ್ರ್ಯಾಜ್ಯುಯೇಟ್ ಅನ್ನಿಸಿಕೊ. ನಿನ್ನ ಕಾಲಮೇಲೆ ನೀನು ನಿಂತುಕೊಳ್ಳುವ ಹಾಗಾದ ಮೇಲೆ ಬೇಕಾದ್ದನ್ನು ಮಾಡು.''

ಭಾವನ ಸಲಹೆ ಒಂದು ಸಲ ಸರಿ ಎಂದು ಕಂಡಿತು; ಇನ್ನೊಂದು ಸಲ, ಭಾವನ ಸಲಹೆಯಂತೆ ನಡೆದರೆ ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ವರ್ತಿಸಬೇಕಾಗುವುದೆಂದೂ ತೋರಿತು. ಮನಸ್ಸು ಇಬ್ಬಗೆಯಾಗಿ ಸುಂದರಮೂರ್ತಿ ಮೌನವನ್ನು ಅವಲಂಬಿಸಿದ. ತನ್ನ ಸಲಹೆ ಭಾವ ಮೈದುನನಿಗೆ ಹಿಡಿದಿದೆಯೆಂದು ರಾಮಸ್ವಾಮಯ್ಯನಿಗೆ ಸಂತೋಷವಾಯಿತು. ಮನೆ ಸಮೀಪಿಸಿತು; ಮತ್ತೆ ಎತ್ತಿದ ಮಾತು ಬೇರೆ ಬೇರೆ ವಿಷಯಗಳನ್ನು ಕುರಿತು ಸಾಗಿತು.

## ೩೦

"ಈ ಸಲ ಒಳ್ಳೆ ಸಕಾಲಕ್ಕೆ ಬಂದಿದ್ದೀಯೆ, ಭಾವ'' ಎಂದ ಸುಂದರಮೂರ್ತಿ. ರಾಮಸ್ವಾಮಯ್ಯ ಸುಂದರಮೂರ್ತಿ ಇಬ್ಬರೂ ಜಗಲಿಯ ಮೇಲೆ ಮಾತಾಡುತ್ತ ಕುಳಿತಿದ್ದರು. ದೂರದಲ್ಲಿ ಹರೆಯ ಸದ್ದು ಕೇಳುತ್ತ ಇತ್ತು: ಧಿನಧಿನ್ನ ಧಿಕಧಿತ್ತ, ದಿದ್ಧಿತ್ತ ಧಿಕಧಿನ್ನ.

"ಏನು, ಅಂಥ ವಿಶೇಷ?"

"ನಾಳೆ ದೊಡ್ಡ ಮಾರಮ್ಮನ ಜಾತ್ರೆ."

"ಅಷ್ಟೇ ತಾನೇ, ಅದನ್ನೇನು ಮಹಾ ನೋಡುವುದು."

"ನೋಡಬೇಕು, ಭಾವಯ್ಯ, ನೋಡಬೇಕು. ನಮ್ಮ ಜನದ ಸಂಸ್ಕೃ

ತಿಯ ವಿಕೃತಸ್ವರೂಪದ ಒಂದು ಉದಾಹರಣೆ ಬೇಕಾದರೆ ಇದನ್ನು ನೋಡಲೇಬೇಕು. ಶಾನುಭೋಗರ ಅಳಿಯನಾಗಿ ಅದನ್ನು ನೋಡದೆ ಹೋದವರುಂಟೆ? ಆ ಹಬ್ಬದಲ್ಲಿ ನಾವೂ ಭಾಗಿಗಳು. ಏಕೆಂದರೆ, ಶಾನು ಭೋಗರಿಗೆ 'ತಲೆಯ ಕಾಣಿಕೆ' ಎಂದು ತಂದು ಒಪ್ಪಿಸುತ್ತಾರೆ. ಮಾರಮ್ಮ ನಿಗೆ ಬಲಿಕೊಟ್ಟ ಒಂದೊಂದು ಪ್ರಾಣಿಯ ತಲೆಗೂ ಭಕ್ತರು ಗುಡಿಯ ಪೂಜಾರಿಗೆ ಇಷ್ಟು ಎಂದು ದಕ್ಷಿಣೆ ಸಲ್ಲಿಸುತ್ತಾರೆ. ಅದರಲ್ಲಿ ಒಂದು ಭಾಗ ಶಾನುಭೋಗರಿಗೂ ಸಲ್ಲುತ್ತದೆ. ನಮ್ಮ ತಾತ ಮುತ್ತಾತಂದಿರ ಕಾಲ ದಿಂದಲೂ ತಲೆಗೊಂದು ದುಡ್ಡಿನಂತೆ ಪ್ರತಿ ವರ್ಷವೂ ಕಾಣಿಕೆಸಂದಾಯದ ಮಾಮೂಲು ನಡೆದು ಬಂದಿದೆ. ಕೊಲೆಗೆಲಸದ ಪಾಪದ ಒಂದು ಭಾಗ ಶಾನುಭೋಗರ ಹಿರಿಯ ಮಗನಾದ ನನ್ನ ತಲೆಗೂ ಕಟ್ಟಿದೆ. ನಮ್ಮ ತಾತನ ಕಾಲದಲ್ಲಿ ಈ ಕಾಣಿಕೆ ಹತ್ತಿಪ್ಪತ್ತು ರೂಪಾಯಿನಷ್ಟು ಬರುತ್ತಿತ್ತಂತೆ; ಈಗ ಐದಾರು ರೂಪಾಯಿಗಳಿಗೆ ಇಳಿದಿದೆ. ಎಂದರೆ, ಎಂಟುಹತ್ತು ಕೋಣ, ಇಪ್ಪತ್ತು ಮೂವತ್ತು ಕುರಿ, ಕೋಳಿಗಳಿಗೆ ಲೆಕ್ಕ ಇಲ್ಲ."

"ನಿಮ್ಮ ಒಂದು ಊರಿನಲ್ಲಿ ಇಷ್ಟು ಪ್ರಾಣಿಗಳ ಬಲಿ ಆಗುತ್ತಯೆ?"

"ನಮ್ಮ ಊರಿನವರು ಮಾತ್ರವಲ್ಲ. ಸುತ್ತಮುತ್ತ ಹಳ್ಳಿಗಳಿಂದೆಲ್ಲಾ ಈ ಹಬ್ಬಕ್ಕೆ ಬರುತ್ತಾರೆ; ಬಂದು ಬಲಿ ಒಪ್ಪಿಸುತ್ತಾರೆ."

"ಹೊಲೆಯರು ಮಾತ್ರ ಈ ಹಬ್ಬ ನಡಸುತ್ತಾರೋ?"

"ಮುಖ್ಯವಾಗ ಅವರದ್ದು ಈ ಹಬ್ಬ. ಪ್ರಾಣಿ ಬಲಿ, ಪ್ರಾಣಿಹಿಂಸೆ ಇದನ್ನು ಅವರು ಮಾತ್ರ ಮಾಡುತ್ತಾರೆ ಎಂದು ನಾವು ತಿಳಿದಿದ್ದೇವೆ. ಅವ ರನ್ನು ಬಿಟ್ಟರೆ, ಪ್ರಾಣಿ ಬಲಿಯ ಹರಕೆ ಒಪ್ಪಿಸುವವರು ಶೂದ್ರರು ಹೆಚ್ಚು. ಇತರ ಜನರೂ ಕೆಲವರು ಒಪ್ಪಿಸುತ್ತಾರಂತೆ. ನಾವು ಮಾಡದ ಪಾಪ ಅವರು ಏನು ಮಾಡುತ್ತಾರೆಯೋ ನಾನು ಕಾಣೆ. ಇದಕ್ಕೋಸುಗ ಜನ ಅವರನ್ನು ದೂರ ಇಟ್ಟಿದ್ದಾರೆ. ಇದು ಅನ್ಯಾಯ, ಅಲ್ಲವೆ ಭಾವ?"

"ಹೌದು" ಎಂದು ಒಪ್ಪಿದ ರಾಮುಸ್ವಾಮಯ್ಯ.

ಅಷ್ಟು ಹೊತ್ತಿಗೆ ಒಂದು ಜೊತೆ ಕೊಬ್ಬಿದ ಕೋಣ, ಅದರ ಮುಂಗಡೆ ಆವೇಶದಿಂದ ಹರೆ ಬಾರಿಸುವವರಿಬ್ಬರು, ಕೋಣಗಳನ್ನು ಹೊಡೆದುಕೊಂಡು ಹೋಗುತ್ತ ಇದ್ದವರಿಬ್ಬರು, ಮನೆ ಮನೆ ಬಾಗಿಲಿಗೆ

ಕೆಲವನ್ನು ಮಾಡಬೇಕಾಗುತ್ತೆ. ಹೇಗೂ ಬೇರೆಯ ಏರ್ಪಾಟುಮಾಡಿ ಚೆನ್ನಿಯನ್ನು ಉಳಿಸಿದೆ. ಸೋತು ಗೆದ್ದೆ. ಇನ್ನು ಮುಂದೆಯೂ ಅಷ್ಟೆ. ನೀನು ಸೋತು ಗೆಲ್ಲಬೇಕು. ಜನವನ್ನು ಏಕೆ ಎದುರುಹಾಕಿಕೊಳ್ಳಬೇಕು? ಈಗಾಗಲೇ ಊರ ಜನ ನಿನ್ನ ವಿಚಾರದಲ್ಲಿ ಏನೇನು ಆಡಿಕೊಳ್ಳುತ್ತಿದಾರೆಯೋ ಯಾರು ಬಲ್ಲರು? ನೀನು ಸ್ವಲ್ಪ ಹುಷಾರಾಗಿರಬೇಕು. ನಿನ್ನ ತಂಗಿಯ ಮದುವೆಯಾಗಬೇಕು, ತಮ್ಮಂದಿರ ಮದುವೆಯಾಗಬೇಕು. ನೀನು ಮಾಡುವ ಕೆಲಸದಿಂದ ಮನೆಯವರಿಗೆ ತೊಂದರೆಯಾಗಬಾರದು. ಅಲ್ಲದೆ, ಇನ್ನೂ ಒಂದು ವಿಚಾರ. ಈಗ ಇದನ್ನೆಲ್ಲ ನೀನು ಹಚ್ಚಿಕೊಂಡರೆ ಓದಿಗೆ ತೊಂದರೆಯಾಗುತ್ತೆ. ಮೊದಲು ಗ್ರ್ಯಾಜ್ಯುಯೇಟ್ ಅನ್ನಿಸಿಕೊ. ನಿನ್ನ ಕಾಲಮೇಲೆ ನೀನು ನಿಂತುಕೊಳ್ಳುವ ಹಾಗಾದ ಮೇಲೆ ಬೇಕಾದ್ದನ್ನು ಮಾಡು.''

ಭಾವನ ಸಲಹೆ ಒಂದು ಸಲ ಸರಿ ಎಂದು ಕಂಡಿತು; ಇನ್ನೊಂದು ಸಲ, ಭಾವನ ಸಲಹೆಯಂತೆ ನಡೆದರೆ ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ವರ್ತಿಸಬೇಕಾಗುವುದೆಂದೂ ತೋರಿತು. ಮನಸ್ಸು ಇಬ್ಬಗೆಯಾಗಿ ಸುಂದರ ಮೂರ್ತಿ ಮೌನವನ್ನು ಅವಲಂಬಿಸಿದ. ತನ್ನ ಸಲಹೆ ಭಾವ ಮೈದುನನಿಗೆ ಹಿಡಿದಿದೆಯೆಂದು ರಾಮಸ್ವಾಮಯ್ಯನಿಗೆ ಸಂತೋಷವಾಯಿತು. ಮನೆ ಸಮೀಪಿಸಿತು; ಮತ್ತೆ ಎತ್ತಿದ ಮಾತು ಬೇರೆ ಬೇರೆ ವಿಷಯಗಳನ್ನು ಕುರಿತು ಸಾಗಿತು.

## ೩೦

"ಈ ಸಲ ಒಳ್ಳೆ ಸಕಾಲಕ್ಕೆ ಬಂದಿದ್ದೀಯೆ, ಭಾವ'' ಎಂದ ಸುಂದರ ಮೂರ್ತಿ. ರಾಮಸ್ವಾಮಯ್ಯ ಸುಂದರಮೂರ್ತಿ ಇಬ್ಬರೂ ಜಗಲಿಯ ಮೇಲೆ ಮಾತಾಡುತ್ತ ಕುಳಿತಿದ್ದರು. ದೂರದಲ್ಲಿ ಹರೆಯ ಸದ್ದು ಕೇಳುತ್ತ ಇತ್ತು: ಧಿನಧಿನ್ನ ಧಿಕಧಿತ್ತ, ದಿದ್ಧಿತ್ತ ಧಿಕಧಿನ್ನ.

"ಏನು, ಅಂಥ ವಿಶೇಷ?"

"ನಾಳೆ ದೊಡ್ಡ ಮಾರಮ್ಮನ ಜಾತ್ರೆ."

"ಅಷ್ಟೇ ತಾನೇ, ಅದನ್ನೇನು ಮಹಾ ನೋಡುವುದು."

"ನೋಡಬೇಕು, ಭಾವಯ್ಯ, ನೋಡಬೇಕು. ನಮ್ಮ ಜನದ ಸಂಸ್ಕೃ

ತಿಯ ವಿಕೃತಸ್ವರೂಪದ ಒಂದು ಉದಾಹರಣೆ ಬೇಕಾದರೆ ಇದನ್ನು ನೋಡಲೇಬೇಕು. ಶಾನುಭೋಗರ ಅಳಿಯನಾಗಿ ಅದನ್ನು ನೋಡದೆ ಹೋದವರುಂಟೆ? ಆ ಹಬ್ಬದಲ್ಲಿ ನಾವೂ ಭಾಗಿಗಳು. ಏಕೆಂದರೆ, ಶಾನು ಭೋಗರಿಗೆ 'ತಲೆಯ ಕಾಣಿಕೆ' ಎಂದು ತಂದು ಒಪ್ಪಿಸುತ್ತಾರೆ. ಮಾರಮ್ಮ ನಿಗೆ ಬಲಿಕೊಟ್ಟ ಒಂದೊಂದು ಪ್ರಾಣಿಯ ತಲೆಗೂ ಭಕ್ತರು ಗುಡಿಯ ಪೂಜಾರಿಗೆ ಇಷ್ಟು ಎಂದು ದಕ್ಷಿಣೆ ಸಲ್ಲಿಸುತ್ತಾರೆ. ಅದರಲ್ಲಿ ಒಂದು ಭಾಗ ಶಾನುಭೋಗರಿಗೂ ಸಲ್ಲುತ್ತದೆ. ನಮ್ಮ ತಾತ ಮುತ್ತಾತಂದಿರ ಕಾಲ ದಿಂದಲೂ ತಲೆಗೊಂದು ದುಡ್ಡಿನಂತೆ ಪ್ರತಿ ವರ್ಷವೂ ಕಾಣಿಕೆಸಂದಾಯದ ಮಾಮೂಲು ನಡೆದು ಬಂದಿದೆ. ಕೊಲೆಗೆಲಸದ ಪಾಪದ ಒಂದು ಭಾಗ ಶಾನುಭೋಗರ ಹಿರಿಯ ಮಗನಾದ ನನ್ನ ತಲೆಗೂ ಕಟ್ಟಿದೆ. ನಮ್ಮ ತಾತನ ಕಾಲದಲ್ಲಿ ಈ ಕಾಣಿಕೆ ಹತ್ತಿಪ್ಪತ್ತು ರೂಪಾಯಿನಷ್ಟು ಬರುತ್ತಿತ್ತಂತೆ; ಈಗ ಐದಾರು ರೂಪಾಯಿಗಳಿಗೆ ಇಳಿದಿದೆ. ಎಂದರೆ, ಎಂಟುಹತ್ತು ಕೋಣ, ಇಪ್ಪತ್ತು ಮೂವತ್ತು ಕುರಿ, ಕೋಳಿಗಳಿಗೆ ಲೆಕ್ಕ ಇಲ್ಲ."

"ನಿಮ್ಮ ಒಂದು ಊರಿನಲ್ಲಿ ಇಷ್ಟು ಪ್ರಾಣಿಗಳ ಬಲಿ ಆಗುತ್ತಿಯೆ?"

"ನಮ್ಮ ಊರಿನವರು ಮಾತ್ರವಲ್ಲ. ಸುತ್ತಮುತ್ತ ಹಳ್ಳಿಗಳಿಂದೆಲ್ಲಾ ಈ ಹಬ್ಬಕ್ಕೆ ಬರುತ್ತಾರೆ; ಬಂದು ಬಲಿ ಒಪ್ಪಿಸುತ್ತಾರೆ."

"ಹೊಲೆಯರು ಮಾತ್ರ ಈ ಹಬ್ಬ ನಡಸುತ್ತಾರೋ?"

"ಮುಖ್ಯವಾಗ ಅವರದ್ದು ಈ ಹಬ್ಬ. ಪ್ರಾಣಿ ಬಲಿ, ಪ್ರಾಣಿಹಿಂಸೆ ಇದನ್ನು ಅವರು ಮಾತ್ರ ಮಾಡುತ್ತಾರೆ ಎಂದು ನಾವು ತಿಳಿದಿದ್ದೇವೆ. ಅವ ರನ್ನು ಬಿಟ್ಟರೆ, ಪ್ರಾಣಿ ಬಲಿಯ ಹರಕೆ ಒಪ್ಪಿಸುವವರು ಶೂದ್ರರು ಹೆಚ್ಚು. ಇತರ ಜನರೂ ಕೆಲವರು ಒಪ್ಪಿಸುತ್ತಾರಂತೆ. ನಾವು ಮಾಡದ ಪಾಪ ಅವರು ಏನು ಮಾಡುತ್ತಾರೆಯೋ ನಾನು ಕಾಣೆ. ಇದಕ್ಕೋಸುಗ ಜನ ಅವರನ್ನು ದೂರ ಇಟ್ಟಿದ್ದಾರೆ. ಇದು ಅನ್ಯಾಯ, ಅಲ್ಲವೆ ಭಾವ?"

"ಹೌದು" ಎಂದು ಒಪ್ಪಿದ ರಾಮುಸ್ವಾಮಯ್ಯ.

ಅಷ್ಟು ಹೊತ್ತಿಗೆ ಒಂದು ಜೊತೆ ಕೊಬ್ಬಿದ ಕೋಣ, ಅದರ ಮುಂಗಡೆ ಆವೇಶದಿಂದ ಹರೆ ಬಾರಿಸುವವರಿಬ್ಬರು, ಕೋಣಗಳನ್ನು ಹೊಡೆದುಕೊಂಡು ಹೋಗುತ್ತ ಇದ್ದವರಿಬ್ಬರು, ಮನೆ ಮನೆ ಬಾಗಿಲಿಗೆ

ಒಂದು ಕಾಣಿಕೆ ವಸೂಲು ಮಾಡುವವನೊಬ್ಬ— ಈ ಮೆರೆವಣಿಗೆ ಬಂದಿತು.

"ಈ ಮೆರೆವಣಿಗೆ ಕೋಟೆಯ ಕಡೆಯಿಂದ ಬಂದ ಹಾಗೆ ಕಾಣು ತ್ತದೆಯಲ್ಲ?" ಎಂದು ಪ್ರಶ್ನಿಸಿದ ರಾಮಸ್ವಾಮಯ್ಯ.

"ಹೌದು. ಈ ಮಾರಿಯ ಹಬ್ಬದಲ್ಲಿ ಮಾತ್ರ ಅವರಿಗೆ ಲೈಸೆನ್ಸು; ಸಂಪೂರ್ಣಸ್ವಾತಂತ್ರ್ಯ. ಈ ಹಬ್ಬಕ್ಕೆ ಪೋಲೀಸರ ಉಸ್ತುವಾರಿಯೂ ಇರುತ್ತದೆ. ಹಬ್ಬ ಬಂದು ನೋಡಬೇಕೆಂದು ಅಮಲ್ದಾರರಿಗೂ ಅರಿಕೆ ಮುಟ್ಟುತ್ತದೆ. ಒಟ್ಟಿನ ಮೇಲೆ ಜನರೆಲ್ಲ ಸಹಕರಿಸುತ್ತಾರೆ. ಬಯ್ಯುವುದು ಅಸ್ಪೃಶ್ಯರನ್ನು ಮಾತ್ರ."

ಅಷ್ಟು ಹೊತ್ತಿಗೆ ಒಂದು ದೊಡ್ಡ ಗೂಡೆಯಲ್ಲಿ ಮಾರಮ್ಮನನ್ನು ಹೊತ್ತು ಒಬ್ಬ ಗಂಡಸು, ಪದ ಹೇಳುತ್ತ ಇನ್ನೊಬ್ಬಳು ಹೆಂಗಸು— ಬಹುಶಃ ಅವನ ಹೆಂಡತಿ, ಅವಳೊಂದಿಗೆ ದನಿ ಕೂಡಿಸುತ್ತ ಇಬ್ಬರು ಹೆಣ್ಣು ಮಕ್ಕಳು, ಮಾರಮ್ಮನ ಹಬ್ಬದ ಪೂಜೆಗೆ ಅಕ್ಕಿ, ಅರಿಸಿನ, ಕುಂಕುಮ ಪಡೆಯುವುದಕ್ಕೆ ಮನೆ ಮನೆಯ ಬಾಗಿಲಿಗೆ ಬರುತ್ತಿದ್ದರು.

"ಈಗ ತಾನೇ ಕೋಣ ಹೊಡೆದುಕೊಂಡು ಬಂದಿದ್ದರು, ಇದೇನು ಮತ್ತೆ?" ಎಂದು ರಾಮಸ್ವಾಮಯ್ಯ ಕೇಳಿದ.

"ಇಲ್ಲಿಗೆ ಮುಗಿಯಿತೆ? ಸಂಜೆಯವರೆಗೂ ಒಬ್ಬರು ತಪ್ಪಿ ಒಬ್ಬರು ಬರುತ್ತಲೇ ಇರುತ್ತಾರೆ. ಈ ಹಬ್ಬದ ಮುಂದೆ ರಾಮನವಮಿಯೂ ಇಲ್ಲ, ಶಿವರಾತ್ರಿಯೂ ಇಲ್ಲ."

ಮಾರಮ್ಮ ಶಾನುಭೋಗರ ಮನೆಯ ಬಾಗಿಲಿಗೂ ಬಂದಳು. ಹಾಡು ಹೇಳುತ್ತ ನಿಂತಳು. ರಾಮಸ್ವಾಮಯ್ಯ ಹಾಡನ್ನು ಕುತೂಹಲದಿಂದ ಆಲಿ ಸುತ್ತ ಕುಳಿತ. ಹಾಡಿಕೆ ಹೀಗೆ ಸಾಗಿತು:

ಅರಿಸಿನ ಕಂಬೀ ಸೀರೆ ಕಣಕಾಲ್ ಗಂದರಿಸಿನ
ಕೆಣಕದಿರಯ್ಯ ಕಿಡಿಗಣ್ಣಿ
ಕೆಣಕದಿರಯ್ಯ ಕಿಡಿಗಣ್ಣಿ ಓಣೀಮಾರಿ
ಮಲತೋನ ಮನೆಯ ಮುರಿದಾಳೀ
ಅಕ್ನೂರು ಆಲೂರು ತಂಗ್ನೂರು ಬೇಲೂರು
ಚಿಕ್ಕಕ್ಕನೂರು ಕುಣಿಗಲು। ಕನ್ನಂಬಾಡೀ

ಹೊಕ್ಕು ಬಾರಯ್ಯ ಬಳೆಗಾರಾ
ಹಳಗಿದ ಹೊಲದಾಗೆ ಮರುಗ ಎತ್ತ್ರೋಳ್ ಯಾರೆ
ಹರಳ್ ಹಚ್ಚಿದ್ವಾಲೆ ಕಿವಿಯೋಳೂ। ದೇವೀರಮ್ಮ
ನಿಸ್ತ್ರೀ (ಮಿತ್ರ ?) ನಮ್‌ವ್ಯ್ಯಾಲೆ ದಯವಿರಲೆ
ಹಗಲೆಲ್ಲ ಕುಯ್ದ್ದೀನೆ ಮುಗಿಲು ಚಂದದ ಹೂವ
ಇರುಳೆಲ್ಲ ದಂಡೆ ಹೆಣೆದೇನೆ। ಕಾಳವ್ವ
ಕರೆಯೊ ಈರಣ್ಣನ ಕೊರಳಿಗೆ
ದೊಡ್ಡಾನು ಈರಯ್ಯ ಸಣ್ಣಾನು ಚೆಲುವಯ್ಯ
ಇಬ್ಬರೊಂದು ಕಣಿವೆ ಇಳಿವಾಗ। ಗಂಗೂರ
ಗಬ್ಬದ್ ಹೊಂಬಾಳೆ ಒದರ್‍ಯಾವು
ಅಡಕೆ ಮರದುದ್ದನ್ನ ಬಾಳೆ ಮರದೂದ್ದ ಬಾಳು
ಭಾಗ್ಯವಂತ ಕಾಣೋ ಕರಿರಾಯ। ಗುಡಿ ಮುಂದೆ
ಕವಳದ ಎಡೆ ಗನವಾದೊ
ಎಲೆ ಜಾಣಾ ಚೆಲುವಯ್ಯ ಜಾತರೆಗೆ ಹೋಗ್ವಾಗ
ಜಾರಿ ಬಿದ್ದಾವೆ ಚಿಗುರೆಲೆ। ಸೂಳೇರ್ ಹುಡುಗಿ
ತಾಳೆ ಹೂವೆಂದು ಮುಡಿದಳೇ

ಹಾಡು ಕೇಳಿ ಒಳಗಿನಿಂದ ಗಂಗಮ್ಮ, ತುಂಗೆ, ಸೂರಿ ಎಲ್ಲರೂ ಬಂದು ನಿಂತು ಹಾಡು ಕೇಳಿದರು. ವೀರಮ್ಮನಿಗೂ ಚೋಮನಿಗೂ ಮನೆಯ ಪಡಿ ಒಪ್ಪಿಸಿದ್ದಾಯಿತು. ರಾಮಸ್ವಾಮಯ್ಯನೂ ಎರಡಾಣೆ ಕಾಣಿಕೆ ಕೊಟ್ಟ.

"ಹೀಗೆ ಪಡಿ ಕೊಡುತ್ತ, ಕಾಣಿಕೆ ಕೊಡುತ್ತ, ಯಾವುದೋ ದೇವತೆಯ ಹೆಸರಿನಲ್ಲಿ ನಡೆಯುವ ಪ್ರಾಣಿಬಲಿಗೆ ನಮ್ಮ ಸಮ್ಮತಿಯನ್ನೂ ಕೊಟ್ಟೇ ನಡೆಯುತ್ತ ಬಂದಿದ್ದೇವೆ. ಅಹಿಂಸೆ ಎನ್ನುವುದು ಒಣ ವೇದಾಂತವಾಗಿದೆ. ಬುದ್ಧ, ವರ್ಧಮಾನ, ಈಗ ಮಹಾತ್ಮ ಗಾಂಧಿ— ಇವರ ಉಪದೇಶ ಬೋರೆಗಲ್ಲ ಮೇಲೆ ಮಳೆಗರೆದಂತಾಗಿದೆ."

"ಇದು ಯಾಕೆ ಇದನ್ನೆಲ್ಲ ಹಚ್ಚಿಕೊಂಡು ನಿನ್ನ ತಲೆ ಕೆಡಿಸಿಕೊಳ್ಳುತ್ತೀಯಾ, ಸುಂದರ?'

"ಮಹಾತ್ಮರು ಹರಿಜನರ ಉದ್ಧಾರ ಎಂದು ಒಂದೇ ಸಮ ಹಂಬಲಿಸುತ್ತಿ

ದ್ದಾರೆ. ಈ ಪರಿಸ್ಥಿತಿಯಲ್ಲಿ ಅವರ ಉದ್ಧಾರ ಎಂದಿಗೆ ಆದೀತೋ ದೇವರೇ ಬಲ್ಲ." — ಸುಂದರ ನಿಟ್ಟುಸಿರು ಬಿಟ್ಟ.

"ಯುಗಯುಗಾಂತರದಿಂದ ನಡೆದು ಬಂದ ಸಂಪ್ರದಾಯ. ಒಂದು ದಿನದಲ್ಲಿ ನಿಲ್ಲು ಎಂದರೆ ನಿಂತೀತೆ?"

"ಹಬ್ಬ ಮಾಡಲಿ, ಹಾಡಲಿ, ಕುಣಿಯಲಿ. ಬೇಡ ಎಂದವರು ಯಾರು? ಈ ಮೂಕಪ್ರಾಣಿಗಳ ಬಲಿ ಯಾಕೆ?"

"ನಾವು ಅನ್ನ ತಿನ್ನುವವರು, ಹಣ್ಣು ತಿನ್ನುವವರು. ದೇವರಿಗೆ ಅವುಗಳನ್ನೇ ನೈವೇದ್ಯ ಮಾಡುತ್ತೇವೆ. ಮಾಂಸ ತಿನ್ನುವವರು ತಾನೇ ಕುರಿ ಕೋಳಿಗಳ ಬಲಿ ಕೊಡುವುದು? ತಾವು ತಿನ್ನುವುದನ್ನು ತಮ್ಮ ದೇವರಿಗೆ ಕೊಡುತ್ತಾರೆ. ಮನೆಯಲ್ಲಿ ಕೊಲ್ಲುವುದನ್ನು ಒಂದು ದಿನ ದೇವರ ಹೆಸರು ಹೇಳಿ ಕೊಂದು ತಿನ್ನುತ್ತಾರೆ ಅಷ್ಟೆ."

"ನಾನು ಯೋಚಿಸುತ್ತಿರುವುದೂ ಇದೇ ವಿಚಿತ್ರವನ್ನು ಕುರಿತು. ಹೊಲೆಯರೂ ಮಾಂಸ ತಿನ್ನುತ್ತಾರೆ. ಇತರರೂ ಮಾಂಸ ತಿನ್ನುತ್ತಾರೆ. ಹೊಲೆಯರನ್ನು ಮಾತ್ರ ಅಸ್ಪೃಶ್ಯರೆಂದು ದೂರ ಇಟ್ಟಿದೇವೆ; ಇದು ಯಾವ ನ್ಯಾಯ ಅಂತ?"

"ಮಾರಮ್ಮನ ನ್ಯಾಯ" ಎಂದು ರಾಮಸ್ವಾಮಯ್ಯ ನಗುತ್ತ ಮೇಲೆದ್ದು, "ಬಾ, ಸುಂದರ, ಹಾಗೆಯೇ ಎಲ್ಲಿಯಾದರೂ ತಿರುಗಾಡಿಕೊಂಡು ಬರೋಣ" ಎಂದು ಸುಂದರನನ್ನು ಜೊತೆಯಲ್ಲಿ ಕರೆದುಕೊಂಡು ಹೊರಟ.

ಇಬ್ಬರೂ ಕೋಟೆಯ ನಾಲ್ಕೂ ಬೀದಿಗಳನ್ನು ಸುತ್ತು ಹಾಕಿದರು; ರಾಮದೇವರ ಗುಡಿಗೆ ಹೋಗಿದ್ದರು; ದೇವರ ದರ್ಶನ ಮಾಡಿದರು; ಅಲ್ಲಿಂದ ಹೊರಟು ಬರುವಾಗ ಶಿವರಾಮಭಟ್ಟರ ಮಗ ಸುಬ್ಬಾಭಟ್ಟ ಸುಂದರನನ್ನು ದುರಗುಟ್ಟಿಕೊಂಡು ನೋಡುತ್ತಿದ್ದ; ಅದು ಸುಂದರನ ಗಮನಕ್ಕೆ ಬರಲಿಲ್ಲ. ಕೋಟೆಯಿಂದ ಪೇಟೆಗೆ ಹೋಗುವಾಗ ದಾರಿಯಲ್ಲಿ, ಬಯಲಿಡೆಯಲ್ಲಿ ಎತ್ತರವಾದ ತಾವಿನಲ್ಲಿ ಮಾರಿಯ ಗುಡಿ ಇತ್ತು. ಸುಂದರ 'ಇದೇ ಮಾರಿಯ ಗುಡಿ' ಎಂದು ಭಾವನಿಗೆ ಅದನ್ನು ತೋರಿಸಿ, ಅದರ ಮುಂದೆ ಹಬ್ಬಕ್ಕೆಂದು ಹಾಕಿದ್ದ ಚಪ್ಪರದೆಡೆಗೆ ಅವನನ್ನು ಕರೆದುಕೊಂಡು ಹೋದ.

ಮಾರಿಯ ಗುಡಿ ಎಂದರೆ ಸುತ್ತುವರಿದ ಚೌಕನೆಯ ಪಾಳಿಗೋಡೆ.

ಅಷ್ಟೇ. ನಡುವೆ ಮೂರು ಉದ್ದನೆಯ ಕಲ್ಲುಗಳು: ಅಕ್ಕತಂಗಿಯರಿಬ್ಬರು; ಸ್ವಲ್ಪ ದೂರದಲ್ಲಿ, ಚೋಮ, ಗಂಡುದೇವತೆ, ಭೂತನಾಯಕ. ಇದು ಪೂಜಾರಿಯ ವಿವರಣೆ. ಒಟ್ಟಿನ ಮೇಲೆ ಎಲ್ಲ ಕಲ್ಲುಗುಂಡುಗಳಿಗೂ 'ಬಿಸಲುಮಾರಮ್ಮ'ನೆಂದೇ ಊರವರ ಹೆಸರು. ಈ ಮಾರಮ್ಮನ ಮಹಿಮೆಯ ಕುರಿತು ದಂತಕಥೆಗಳೂ ಅವೆಷ್ಟೋ: ಪೂಜಾರಪ್ಪನ ಮುಂದೆ ನಿಂತರೆ ಅವನು ಹೇಳುವ ಕಥೆಗಳಿಗೆ ಕೊನೆಮೊದಲೇ ಇಲ್ಲ. ದೇವರ ಮುಂದೆ ತೀರ್ಥದ ಹಳ್ಳ; ಹೊರಗಡೆ ಬಾಗಿಲು ಬಳಿ ಮೂರು ಚಾಕನೆಯ ಕಲ್ಲುಗಳು; ಇವೇ ಬಲಿ ಕೊಡುವ ಕಲ್ಲುಗಳು. ಅದರ ಮುಂದೆ ದೊಡ್ಡ ಕಲ್ಲಿನ ದೀಪಗಂಬ.

ಗುಡಿಯ ಮುಂದೆ ಆಗಲೇ ಚಪ್ಪರ ಹಾಕಿ ಮುಗಿದಿತ್ತು. ಮಾವಿನ ಸೊಪ್ಪು, ಬೇವಿನ ಸೊಪ್ಪುಗಳಿಂದ ತೋರಣ ಕಟ್ಟುತ್ತಿದ್ದರು. ಮಾರನೆಯ ದಿನ ನಡೆಯುವ ಜಾತ್ರೆಯ ನೋಟವನ್ನು ಸುಂದರ ಭಾವನಿಗೆ ವರ್ಣಿಸ ತೊಡಗಿದ:

"ಜಾತ್ರೆ ನೆರೆಯುವುದು ಇಲ್ಲಿಯೇ. ಸುತ್ತಮುತ್ತ ಹಳ್ಳಿಗಳಿಂದ ಎರಡು ಸಾವಿರಕ್ಕೆ ಮೀರಿ ಜನ ನೆರೆಯುತ್ತಾರೆ ಬೆಳಗಿನ ಜಾವದಿಂದಲೇ ಜಾತ್ರೆ ನೆರೆಯುವುದಕ್ಕೆ ಮೊದಲಾಗುತ್ತೆ. ಎಲ್ಲರೂ ಕುರಿ ಕೋಳಿ ತರುವುದಿಲ್ಲ. ತಲೆಯ ಮೇಲೆ ತಂಬಿಟ್ಟಿನ ದೀಪ ಹೊತ್ತು ತಂದು ಅಮ್ಮನ ಮುಂದೆ ಇಡುತ್ತಾರೆ. ಸಂಜೆಯಾದ ಮೇಲೆ ಪ್ರಾಣಿಗಳ ಬಲಿಗೆ ಮೊದಲಾಗುತ್ತೆ. ರಾತ್ರಿ ರಾತ್ರಿಯೂ ಇದು ನಡೆಯುತ್ತೆ. ನೈವೇದ್ಯಕ್ಕೆ ಒಪ್ಪಿಸಿದ ಅಕ್ಕಿಯನ್ನೆಲ್ಲಾ ಅನ್ನಮಾಡಿ ರಾಶಿರಾಶಿಯಾಗಿ ಸುರಿದಿರುತ್ತಾರೆ; ಕೊಂದ ಪ್ರಾಣಿಗಳ ರಕ್ತದಲ್ಲಿ ಕೂಳು ಕಲಿಸಿ ದಿಕ್ಕುದಿಕ್ಕಿಗೂ ಎರಚುತ್ತಾರೆ. ಇಷ್ಟು ಹೊತ್ತಿಗೆ ವೀರಭಕ್ತರು ಕೆಲವರು ಹೆಂಡಕುಡಿದು ಬಂದಿರುತ್ತಾರೆ; ಕೆಲವರು ಆವೇಶದಿಂದ ಪದ ಹೇಳುತ್ತ ಹರೆಯ ತಾಳಕ್ಕೆ ತಕ್ಕಹಾಗೆ ಕುಣಿಯುತ್ತಾರೆ; ಆ ವೀರಗುಣಿತ ನೋಡುವುದಕ್ಕೆ ಭಯಂಕರ. ಕೊಂದ ಪ್ರಾಣಿಗಳನ್ನು ಸುಲಿದು ಮಾಂಸದ ರಾಶಿ ಒಂದುಕಡೆ ಬಿದ್ದಿರುತ್ತದೆ. ಕತ್ತರಿಸಿದ ತಲೆಗಳನ್ನು ಪಾಳಿಯ ಮೇಲೆ ಸಾಲಾಗಿ ಇಟ್ಟಿರುತ್ತಾರೆ. ಕುಣಿಯುವ ವೀರರು ಕೆಲವರು ಬಿಚ್ಚುಗತ್ತಿ ತಿರುವುತ್ತಾರೆ; ಇನ್ನು ಕೆಲವರು ಪ್ರಾಣಿಗಳ ಕತ್ತರಿಸಿದ ತಲೆ

ಗಳನ್ನು ತಲೆಯಮೇಲೆ ಹೊತ್ತು ಕುಣಿಯುತ್ತಾರೆ; ಕೆಲವರು ಕೈಯಲ್ಲಿ ಪ್ರಾಣಿಗಳ ಕೊಂಬನ್ನೂ ಕಾಲುಗಳ ಎಲುಬನ್ನೂ ಹಿಡಿದು ಕುಣಿಯುತ್ತಾರೆ. ಕುಣಿಯುವವರಿಗೆ ಮೈಮೇಲೆ ಪ್ರಜ್ಞೆಯೇ ಇರುವುದಿಲ್ಲ. ರಾತ್ರಿಯೆಲ್ಲ ಹುಯಿಲೋ ಹುಯಿಲು. ಸಾಯುಲಿರುವ ಪ್ರಾಣಿಗಳ ನೋವಿನ ಚೀತ್ಕಾರ ಈ ಹುಯಿಲಿನಲ್ಲಿಯೂ ವಿಕಾರವಾಗಿ ಕೇಳಿಬರುತ್ತದೆ; ಅಯ್ಯೋ ಪಾಪ ಎನ್ನಿಸುತ್ತದೆ. ಒಂದು ವರ್ಷ ರಕ್ತದ ಕೋಡಿ ನಮ್ಮ ಮನೆಯವರೆಗೂ ಹರಿದುಬಂದಿದ್ದಿತಂತೆ...."

"ಸುಂದರ, ಸಾಕಪ್ಪ ಸಾಕು ನಿನ್ನ ವರ್ಣನೆ. ನನಗೆ ಈ ಹೊತ್ತು ಅನ್ನ ಸೇರುವುದಿಲ್ಲ. ಮನೆಗೆ ಹೋಗೋಣ, ನಡಿ" ಎಂದ ರಾಮುಸ್ವಾಮಯ್ಯ.

"ನೀನು ಕೇಳಿದರೇ ಅಸಹ್ಯಪಟ್ಟುಕೊಳ್ಳುತ್ತೀಯಲ್ಲ ಭಾವ, ಇನ್ನು ನೋಡಿದರೆ ಹೇಗಿರಬೇಕು? ಅಸಹ್ಯಮಾತ್ರವಲ್ಲ, ಘೋರ, ಭಯಂಕರ. ಸರಕಾರ ಇದನ್ನು ನಿಲ್ಲಿಸಬೇಕು."

"ಜಾತ್ರೆಯನ್ನು ನೀನು ನೋಡಿದ್ದೀಯಾ?"

"ಎಲ್ಲೋ ಬಾಲ್ಯದಲ್ಲಿ ಕಾಳೇಗೌಡನ ಜಾತ್ರೆ ನೋಡಿದ್ದ ನೆನಪು. ನೋಡಿದ್ದಷ್ಟರ ನೆನಪು ಸ್ಪಷ್ಟವಾಗಿದೆ. ನಾಳೆ ಬೇಕಾದರೆ ನೀನೆ ಕಣ್ಣಾರೆ ನೋಡು, ನಾನು ಹೇಳಿದ್ದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ ಎನ್ನುವುದು ನಿನಗೇ ಗೊತ್ತಾಗುತ್ತೆ."

"ನೀನು ಹೇಳಿದ್ದು ಕೇಳಿದರೇ ಜುಗುಪ್ಸೆಯಾಗುತ್ತೆ. ಇನ್ನು ನೋಡುವುದು ನನ್ನಿಂದ ಸಾಧ್ಯವೇ?"

ಇಬ್ಬರೂ ಮನೆಗೆ ಹಿಂದಿರುಗಿದರು.

ಮಾರನೆಯ ರಾತ್ರಿಯಲ್ಲಿ ಸುಂದರ ಹೇಳಿದಂತೆ ಹುಯಿಲು, ಹಾಡು, ಕೇಕೆ— ಇವುಗಳ ವಿಚಿತ್ರ ಮಿಶ್ರಣದ ಸದ್ದಿನ ಗದ್ದಲ ಕೃಷ್ಣಪ್ಪನವರ ಮನೆಗೂ ಕೇಳಿಬರುತ್ತಿತ್ತು. ರಾಮುಸ್ವಾಮಯ್ಯನಿಗೆ ರಾತ್ರಿಯೆಲ್ಲ ನಿದ್ರೆಯೇ ಬರಲಿಲ್ಲ; ಸುಂದರ ಹಿಂದಿನ ದಿನ ಹೇಳಿದ ಮಾತುಗಳ ನೆನಪಿನಿಂದಲೇ ಭೀಭತ್ಸಭಯಾನಕ ದೃಶ್ಯಗಳು ಮೂಡಿ ಮೂಡಿ ನಿದ್ರೆಗೆ ಭಂಗತರುತ್ತಿದ್ದುವು. ಸುಂದರನಿಗೂ ನಿದ್ರೆಯಿಲ್ಲ: ಹರಿಜನರ ಉದ್ಧಾರ ಒಂದು ವಿಷಮಚಕ್ರ. ಎಲ್ಲಿಂದ ಮೊದಲು ಮಾಡುವುದು ಎಂಬುದೇ ಅವನ ಬಗೆಗೆ ತೋರದಾಯಿತು.

ಅವರ ದುರಭ್ಯಾಸಗಳೇ ಅವರ ಹೀನ ಹೇಯ ಹಿಂಸಾಕೃತ್ಯಗಳೇ, ಅವರ ಬಾಳಿನ ನಲಿವು. ಅವನ್ನು ನಿರ್ಮೂಲಮಾಡಬೇಕಾದರೆ ಈ 'ತಾಮಸ ತೋಷ'ದ ಎಡೆಯಲ್ಲಿ ಅವರಿಗೆ ನಿರ್ದುಷ್ಟವಾದ ನಲಿವನ್ನು ಒದಗಿಸ ಬೇಕಲ್ಲವೆ? ಸುಗ್ಗಿಯ ಕುಣಿತದಲ್ಲಿ ಹೊಲೆಯರು ಕಣ ಹಸನು ಮಾಡಬೇಕು, ರಾತ್ರಿಯೆಲ್ಲ ದೀಪ ಉರಿಸಬೇಕು, ಕುಣಿತಕ್ಕೆ ಹರೆ ತಮಟೆ ಬಾರಿಸಬೇಕು; ಒಕ್ಕಲಿಗ ರೈತರು ಕುಣಿತಕ್ಕೆ ಮಾತ್ರ ತಮ್ಮ ಜೊತೆಗೆ ಅವರನ್ನು ಸೇರಿಸಿ ಕೊಳ್ಳುವುದಿಲ್ಲ. ಇನ್ನು, ಊರವರೆಲ್ಲ ತಮ್ಮ ರಾಮನವಮಿ, ರಥೋತ್ಸವ, ರಾಮಭಜನೆ, ಹರಿಕಥೆ ಮೊದಲಾದ ನಲಿವಿನ ಕೂಟಗಳಿಗೆ ಅವರನ್ನು ಸೇರಿಸಿಕೊಳ್ಳುವರೆ? ಅವರಿಗೇ ಇವನ್ನೆಲ್ಲಾ ಪ್ರತ್ಯೇಕವಾಗಿ ಒದಗಿಸಬಹುದು. ಅಂದರೆ ಅಸ್ಪೃಶ್ಯರ ಪ್ರತ್ಯೇಕತೆಯನ್ನು ಶಾಶ್ವತಗೊಳಿಸಿದಂತೆ ಅದನ್ನು ತಾನೆ ಯಾರು ಮಾಡಬೇಕು? ತನ್ನೊಬ್ಬನಿಂದ ಸಾಧ್ಯವಾದೀತೆ? ಊರ ಜನ ಮುಂದೆ ಬರಬೇಕು. ಸರಕಾರ ನೆರವು ನೀಡಬೇಕು. ಈ ಆಲೋಚನೆ ಯಲ್ಲಿ ಸುಂದರನಿಗೆ ನಿದ್ರೆ ಹತ್ತಲಿಲ್ಲ. "ಮಾದನೂ ಚೆನ್ನಿಯನ್ನು ಕರೆದು ಕೊಂಡು ಜಾತ್ರೆಗೆ ಹೋಗಿದ್ದಾನೋ" ಎಂದು ಶಂಕೆ ಮೂಡಿತು. "ಚೆನ್ನಿ ಯನ್ನು ಅಲ್ಲಿಗೆ ಎಂದೂ ಕರೆದುಕೊಂಡು ಹೋಗಕೂಡದು" ಎಂದು ಕೃಷ್ಣಪ್ಪನವರು ಕಟ್ಟುಮಾಡಿದ್ದರು. ಅಲ್ಲದೆ ಚೆನ್ನಿ ಖಾಯಿಲೆಬಿದ್ದಿದ್ದವಳು. ತನ್ನ ತಂದೆಯ ಕಟ್ಟುಮೀರಿ ಅವನು ಹೋಗಿರಲಾರ. ಅಲ್ಲದೆ ಈಗ ಮುದುಕ ಬೇರೆ. ಅಷ್ಟು ಭಕ್ತಿ ಮೂಡಿ ಬಂದು ಆವೇಶ ಹುಟ್ಟಿದರೆ ಹೆಚ್ಚೆಂದರೆ, ಕುಡಿದು ಬಂದು, ಪದ ಹೇಳಿಕೊಳ್ಳುತ್ತ, ಹರೆ ಚಚ್ಚುತ್ತ ಗುಡಿಸಿಲಿನಲ್ಲಿ ಎಚ್ಚರವಾಗಿ ಕುಳಿತಿರಬಹುದು — ಎಂದು ಸುಂದರ ಸಮಾ ಧಾನಗೊಂಡ. ಮುಂಗನಸಿನ ದೋಣಿಯಲ್ಲಿ ನಿದ್ದೆಯ ತಡಿಗೆ ಸಾಗಿಹೋದ.

## ೩೧

ಮನೆಯವರೆಲ್ಲ ನಂಜನಗೂಡಿಗೆ ಪ್ರಯಾಣ ಬೆಳಸಿದರು. ಮೊದಲು ತಾವೂ ಹೊರಡಬೇಕೆಂದು ಮಾಡಿಕೊಂಡಿದ್ದವರು, ಸುಂದರನೊಡನೆ ಊರಿ ನಲ್ಲಿಯೇ ನಿಲ್ಲುವುದಾಗಿ ಕೃಷ್ಣಪ್ಪನವರು ನಿಶ್ಚಯಿಸಿದರು. ತಾವು ಊರಿನಲ್ಲಿ ಇಲ್ಲದಿದ್ದಾಗ ಸುಂದರಮೂರ್ತಿ ತಾನು ಹೇಳಿದ್ದಂತೆ ಏನೇನು ಕಾರ್ಯಮಾಡಿ

ಊರಿನವರ ವಿರೋಧ ಕಟ್ಟಿಕೊಳ್ಳುತ್ತಾನೆಯೋ, ಅದರ ಪರಿಣಾಮವಾಗಿ ಏನು ತೊಂದರೆಗೆ ಸಿಕ್ಕಿಹಾಕಿಕೊಳ್ಳುತ್ತಾನೆಯೋ, ಎಂದು ಅವರ ಅಂಜಿಕೆ. ಅದನ್ನು ಬಾಯಿಬಿಟ್ಟು ಹೇಳಲು ಮಾತ್ರ ಅವರ ಮನಸ್ಸು ಒಪ್ಪಲಿಲ್ಲ.

ಆದರೆ, ರಾಮಸ್ವಾಮಯ್ಯನ ಬಲವಂತಕ್ಕೆ ಕಟ್ಟುಬಿದ್ದು ಅವರೂ ಹೊರಡಲೇಬೇಕಾಯಿತು. "ಮನೆಯ ಕಡೆ ಜೋಕೆ. ಜೊತೆಗೆ ಕಾಳೀಗೌಡ ನನ್ನೂ ರಾತ್ರಿಯ ಹೊತ್ತು ಮನೆಯಲ್ಲಿ ಮಲಗಿಕೊಳ್ಳುವ ಹಾಗೆ ಹೇಳು. ಹಗಲುಹೊತ್ತಿನಲ್ಲೂ ಮನೆ ಬಿಟ್ಟು ಹೆಚ್ಚು ಹೊರಕ್ಕೆ ಹೊಗಲೇಬೇಡ" ಎಂದು ಮಗನಿಗೆ ಸೂಕ್ಷ್ಮವಾಗಿ ಎಚ್ಚರಿಕೆ ಕೊಟ್ಟರು.

ರಾಮಸ್ವಾಮಯ್ಯನನ್ನೂ ಗಂಗಮ್ಮನನ್ನೂ ತನ್ನ ಗಾಡಿಯಲ್ಲೇ ಪ್ರಯಾಣ ಮಾಡಿಸಬೇಕೆಂದು ಕಾಳೀಗೌಡನ ಇಷ್ಟ. ಬಸ್ಸಿನ ಪ್ರಯಾಣ ಕ್ಕಿಂತ ಗಾಡಿಯ ಪ್ರಯಾಣ ಸೊಗಸು ಎಂದು ಸುಂದರನೂ ಹೇಳಿದ್ದ. ಎಲ್ಲ ರಿಗೂ ಒಂದು ಗಾಡಿ ಸಾಕಾಗದೆಂದು ರಾಮಸ್ವಾಮಯ್ಯ ಹೇಳಿದಾಗ, ಇನ್ನೊಂದು ಗಾಡಿ ತರಿಸುವುದಾಗಿ ಕಾಳೀಗೌಡ ಭರವಸೆ ಕೊಟ್ಟ. ಗಾಡಿಯ ಪ್ರಯಾಣ ತನಗೆ ಅಭ್ಯಾಸವಿಲ್ಲವೆಂದೂ, ಅದರಿಂದ ಸಾವಕಾಶವಾಗುವು ದೆಂದೂ ರಾಮಸ್ವಾಮಯ್ಯ ಒಪ್ಪಲಿಲ್ಲ. ಕಡೆಗೆ ಎಲ್ಲರೂ ಬಸ್ಸಿನಲ್ಲೇ ಹೊರಟರು.

ಮೊದಲೆ ಗೊತ್ತಾಗಿದ್ದಂತೆ, ಸುಂದರಮೂರ್ತಿ ತಾನು ಊರಿನಲ್ಲಿಯೇ ನಿಲ್ಲುವುದಾಗಿ ಹೇಳಿದ. ಮನೆಯ ಕಡೆ ಯಾರಾದರೂ ನೋಡಿಕೊಳ್ಳು ವವರು ಇರಬೇಕೆಂದು ಅವನ ವಾದ. ಕಡೆಯ ಗಳಿಗೆಯಲ್ಲಿ, ಮನೆಯನ್ನು ನೋಡಿಕೊಳ್ಳುವ ಜವಾಬುದಾರಿಯನ್ನು ಕಾಳೀಗೌಡನಿಗೆ ವಹಿಸಿದ ಮೇಲೆ, ಭಾವನ ಬಲವಂತಕ್ಕೆ ಸುಂದರನೂ ಹೊರಡಬೇಕಾಯಿತು.

ಭಾವನ ಬಲವಂತದ ಜೊತೆಗೆ, ಸುಂದರನ ಮನಸ್ಸಿನಲ್ಲಿ ಇನ್ನೊಂದು ಆಶೆ ಮೂಡಿತು. ರಾಚಪ್ಪ ತನ್ನ ಹಳ್ಳಿ ತಿರಮಕೂಡಲು ನರಸೀಪುರದ ಹತ್ತಿರ ಎಂದು ಹೇಳಿದ್ದ. ಸಾಧ್ಯವಾದರೆ ತಾನು ಕೆಂಚನಹಳ್ಳಿಗೆ ಹೋಗಿ ರಾಚಪ್ಪನನ್ನು ನೋಡಿಕೊಂಡು ಬರಬೇಕೆನ್ನಿಸಿತು. ಆದ್ದರಿಂದ ಅವನೂ ಎಲ್ಲರ ಜೊತೆಯಲ್ಲಿ ನಂಜನಗೂಡಿಗೆ ಹೊರಟ.

ನಂಜನಗೂಡಿನಲ್ಲಿ ಎಲ್ಲರೂ ಎರಡು ದಿನ ಇರುವುದೆಂದು ನಿರ್ಧರ ವಾಗಿತ್ತು. ಮೈಸೂರಿನ ಮಾರ್ಗವಾಗಿ ನಂಜನಗೂಡನ್ನು ತಲಪಿಯೂ

ಆಯಿತು. ಮೊದಲನೆಯ ದಿನ ದೇವರ ಸೇವೆ ಮುಗಿದು, ಶಿವಕೂಟದಲ್ಲಿ ಊಟವಾದ ಬಳಿಕ, ಸುಂದರಮೂರ್ತಿ ತಾನು ತಿರಮಕೂಡಲು ನರಸೀಪುರದಲ್ಲಿ ತನ್ನ ಕಾಲೇಜು ಸ್ನೇಹಿತರೊಬ್ಬರನ್ನು ನೋಡಿಕೊಂಡು ಮಾರನೆಯ ಸಂಜೆ ರೈಲು ಹೊರಡುವ ಹೊತ್ತಿಗೆ ಹಿಂದಿರುಗಿ ಬರುವುದಾಗಿ ಹೇಳಿ ಹೊರಟುಬಿಟ್ಟ. ಆ ಸ್ನೇಹಿತ ಯಾರು ಎಂದು ಯಾರೂ ಬಿಡಿಸಿ ಕೇಳಲಿಲ್ಲ. ಆದರೆ, ಸುಂದರಮೂರ್ತಿ ತಾನಾಗಿಯೇ ರಾಮಸ್ವಾಮಯ್ಯನಿಗೆ ತಾನು ನೋಡಲಿರುವ ಸ್ನೇಹಿತ ರಾಜಪ್ಪ ಎಂದು ತಿಳಿಸಿದ. ಸುಂದರಮೂರ್ತಿ–ರಾಜಪ್ಪ ಇವರ ಗೆಳೆತನದ ವಿಷಯ ಕೃಷ್ಣಪ್ಪನವರಿಗೆ ಬಹುಶಃ ತಿಳಿದಿರಲಾರದೆಂದೂ, ತಾನೇಕೆ ಆ ವಿಷಯ ಪ್ರಕಟಪಡಿಸಿ ಇಲ್ಲದ ರಗಳೆಗೆ ಎಡೆಗೊಡಬೇಕೆಂದೂ ಆಲೋಚಿಸಿ, ರಾಮಸ್ವಾಮಯ್ಯ ಮುಗುಳುನಗೆ ನಕ್ಕು, "ನಾಳೆಯೂ ದೇವರ ಸೇವೆ ಮಾಡಿಕೊಂಡು ಹೊರಡು" ಎಂದು ಸುಂದರನಿಗೆ ಹೇಳಿದ. "ನಾನು ಈಗ ಮಾಡಹೊರಟಿರುವ ಸೇವೆ ದೇವರ ಸೇವೆಯೇ ಅಲ್ಲವೆ ಭಾವ?" ಎಂದು ಮೆಲುದನಿಯಲ್ಲಿ ಹೇಳಿ, ತಾನೂ ಮುಗುಳುನಗೆ ನಕ್ಕ. ಈ ಭಾವ ಭಾವಮೈದುನರ ಮೆಲುಮಾತನ್ನೂ ಮುಗುಳುನಗೆಯನ್ನೂ ಸರಸ ಎಂದು ಭಾವಿಸಿದರು ಇತರರು. ಸುಂದರ ತಿರಮಕೂಡಲು ನರಸೀಪುರಕ್ಕೆ ಹೊರಟ.

೩೨

ತಿರಮಕೂಡಲು ನರಸೀಪುರದಿಂದ ಕೆಂಚನಹಳ್ಳಿಗೆ ಮೂರು ನಾಲ್ಕು ಮೈಲಿಯಷ್ಟು ಕಾಲುನಡಗೆಯ ದಾರಿ. ನರಸೀಪುರವನ್ನು ತಲಪಿದ ಮೇಲೆ ಸುಂದರಮೂರ್ತಿ ಅಲ್ಲಿ ವಿಚಾರಿಸಿ ಕೆಂಚನಹಳ್ಳಿಯ ದಾರಿಯನ್ನು ಗೊತ್ತುಮಾಡಿಕೊಂಡು, ಸ್ವಲ್ಪ ವೇಗವಾಗಿಯೇ ನಡೆದು ಹೋದ. ಅರ್ಧ ಮುಕ್ಕಾಲು ಗಂಟೆಯಲ್ಲಿ ಹಳ್ಳಿಯನ್ನು ತಲಪಿದ. ಹಳ್ಳಿಯನ್ನು ಹೊಗುವ ಮುನ್ನವೇ ದಾರಿಯಲ್ಲಿ ಕಂಡ ಮುದುಕನೊಬ್ಬನನ್ನು "ರಾಜಪ್ಪನ ಮನೆ ಯಾವುದು?" ಎಂದು ಕೇಳಿದ. "ರಾಜಪ್ಪನಾ? ಮೈಸೂರಿನಲ್ಲಿ ಓದು ತಾನಲ್ಲ ಅವನಾ?" ಎಂದು ಮುದುಕ ಮರು ಪ್ರಶ್ನೆಹಾಕಿದ. "ಹ್ದೂ, ಅವರೇ." "ಆ ತಿಟ್ಟಿನ ಮ್ಯಾಗೆ ಕಂಬಸಾಲಿನ ಕೊಟ್ಟಿಮನೆ ಐತಲ್ಲ, ಅದೇನೆ" ಎಂದು ಹೇಳಿ ಮುದುಕ ಬೆರಗುಗಣ್ಣಾಗಿ ಸುಂದರಮೂರ್ತಿ

ಯನ್ನು ನೋಡುತ್ತ ನಿಂತ.

ಸುಂದರಮೂರ್ತಿ ತೊಟ್ಟಿಯ ಮನೆಯ ಮುಂದೆ ಹೋಗಿ ನಿಂತ. ರಾಚಪ್ಪ ಜಗಲಿಯ ಮೇಲೆಯೇ ಓದುತ್ತ ಕುಳಿತಿದ್ದ.

"ರಾಚಪ್ಪ!"—ಸುಂದರಮೂರ್ತಿ ಕೂಗಿದ.

"ಓಹೋ! ಸುಂದರಮೂರ್ತಿಗಳೇ, ಬನ್ನಿ ಬನ್ನಿ. ಅಲ್ಲ, ಇದೇನು ತಿಳಿಸದೇನೆ ಬಂದು ಬಿಟ್ಟಿರಲ್ಲ?"

"ತಿಳಿಸುವುದು ಹೇಗೆ? ನಿಮ್ಮ ವಿಳಾಸ ಗೊತ್ತಿರಲಿಲ್ಲವಲ್ಲ?"

"ವಿಳಾಸ ತಿಳೀದೇನೆ ಈಗ ಬಂದಿರಾ?"

"ನಾನು ಬರೆದ ಕಾಗದಕ್ಕಿಂತ ನಾನೆ ಬರುವುದು ಸುಲಭ ಎಂದು ತೋರಿತು. ಬಂದುಬಿಟ್ಟೆ."

"ಅದು ದಿಟ. ಇಲ್ಲಿಗೆ ಕಾಗದ ಬರೆದರೂ ಬರುವುದು ಕಷ್ಟ. ನರಸೀಪುರದಿಂದ ವಾರಕ್ಕೊ ಎರಡು ವಾರಕ್ಕೊ ಅಂಚೆಯ ಆಳು ಬಂದು ಕಾಗದ ಕೊಟ್ಟು ಹೋಗುತ್ತಾನೆ. ಅದೂ ಕಾಗದ ಇದ್ದರೆ. ಇಲ್ಲಿ ಓದು ಬರಹ ಬಂದವರು ಯಾರು ಇದಾರೆ ಕಾಗದ ಬರೆಯುವುದಕ್ಕೆ? ಬಂದರೆ ನನಗೇನೆ."

ತುಸಹೊತ್ತು ಇಬ್ಬರೂ ಪರಸ್ಪರ ಕುಶಲ ಕೇಳಿದರು. ಬಳಿಕ ಸಂಭಾಷಣೆ ಮತ್ತೆ ಗಂಭೀರವಾಗಿ ಸಾಗಿತು:

"ಏನು ಬಹಳ ಓದುತ್ತ ಕುಳಿತುಬಿಟ್ಟಿದ್ದಿರಿ. ಮುಂದಿನ ವರ್ಷ ಫಸ್ಟ್‌ಕ್ಲಾಸ್ ಹೊಡೆಯಬೇಕು ಅಂತಲೊ?"

"ಓದದೆ ಹೋದರೆ ಇಲ್ಲಿ ಹೊತ್ತು ಹೋಗುವುದು ಹೇಗೆ?"

"ನಿಮ್ಮ ಜನದ ಪೈಕಿ ನೀವು ಓದಿಗೆ ದತ್ತುವಾಗಿ ಬಿಟ್ಟಿರಿ. ಕಲಿತ ನೀವು ನಿಮ್ಮ ಜನಕ್ಕೆ ಓದು ಬರಹ ಕಲಿಸಬಹುದಲ್ಲ ಬೇಸಗೆ ರಜದಲ್ಲಿ?"

"ನೀವು ಹೇಳಿ ನೋಡಿ ಬೇಕಾದರೆ, ವಯಸ್ಸಾಯಿತು ನಮಗೇಕೆ ಓದುಬರಹ ಅಂತಾರೆ."

"ಮಕ್ಕಳಿಗೆ ಕಲಿಸಬಹುದಲ್ಲ?"

"ಅದಕ್ಕೆ ಸರಕಾರದವರು ಏನಾದರೂ ಏರ್ಪಾಡು ಮಾಡಬೇಕು. ನಾನು ಹೇಳಿಕೊಡುತ್ತೇನೆಂದು ನಿಂತರೂ ಶಾಲೆಗೆ ಬರುವಹಾಗೆ ನನ್ನ

ಮನೆಗೆ ಮಕ್ಕಳು ಕಲಿಯಲು ಬರುತ್ತಾರೆಯೆ? ತಂದೆ ತಾಯಿಗಳು ನನ್ನಲ್ಲಿ ನಂಬಿಕೆ ಇಟ್ಟು ಮಕ್ಕಳನ್ನು ಕಳಿಸುತ್ತಾರೆಯೇ? ಮಕ್ಕಳು ಬರುತ್ತಾರೆ ಎಂದು ಇಟ್ಟುಕೊಳ್ಳೋಣ. ನಾನು ಈ ಬೇಸಗೆಯಲ್ಲಿ ಎರಡು ತಿಂಗಳು ಕಲಿಸಿದರೆ, ಏನು ಆದಹಾಗಾಯಿತು? ಆ ಮೇಲೆ ಮೈಸೂರಿಗೆ ಹೋಗುತ್ತೇನೆ; ಬಿ. ಎ. ಮುಗಿದ ಮೇಲೆ ಯಾವುದಾದರೂ ಉದ್ಯೋಗಕ್ಕೆ ಸೇರಿದರೆ, ಯಾವುದೋ ಊರಿಗೆ ಹೋಗಬೇಕಾಗುತ್ತೆ. ನಾನು ಕಲಿಸಿದ್ದನ್ನು ಮಕ್ಕಳು ಮರೆತಿರುತ್ತಾರೆ. ಸರಕಾರ ಇಲ್ಲವೆ ಹತ್ತು ಜನ ಸೇರಿ ಯಾವುದಾದರೂ ವ್ಯವಸ್ಥಿತ ಕಾರ್ಯಕ್ರಮ ಏರ್ಪಡಿಸಿದಲ್ಲದೆ ಹಿಂದುಳಿದ ಜನದ ಉದ್ಧಾರ ಆಗುವುದಿಲ್ಲ."

ಸುಂದರಮೂರ್ತಿ ಆಲೋಚಿಸುವವನಂತೆ ತುಸ ಹೊತ್ತು ಮೌನವಾಗಿದ್ದ. ಒಂದು ರೀತಿಯಲ್ಲಿ ರಾಚಪ್ಪ ಹೇಳಿದ್ದು ವಾಸ್ತವಸ್ಥಿತಿಯೆಂದು ಅವನಿಗೆ ಮನವರಿಕೆಯಾಯಿತು. ಆದರೆ, ಹಿಂದುಳಿದವರಲ್ಲಿ ಹಿಂದಾದ ತನ್ನ ಜನದ ಬಗ್ಗೆ ರಾಚಪ್ಪನಿಗೆ ಅಭಿಮಾನವಿದ್ದರೂ ಅವರನ್ನು ಮುಂದಕ್ಕೆ ತರಬೇಕೆಂಬ ಬಗ್ಗೆ ಸ್ವಲ್ಪವೂ ಉತ್ಸಾಹವಿದ್ದಂತೆ ಕಾಣಲಿಲ್ಲ. ಅಂದು ಕುಕ್ಕರಹಳ್ಳಿಯ ಕೆರೆಯ ಏರಿಯ ಮೇಲೆ ಕುಳಿತು ಮಾತಾಡಿದ ರಾಚಪ್ಪನೇ ಬೇರೆ, ತನ್ನೆದುರಿನ ವ್ಯಕ್ತಿಯೇ ಬೇರೆ ಎಂದು ತೋರತೊಡಗಿತು ಸುಂದರನಿಗೆ. ತನ್ನ ಜನರನ್ನು, ತನ್ನನ್ನು, ಕಡೆಗಣಿಸುವವರ ನಡುವೆ ಇದ್ದಾಗ ರಾಚಪ್ಪನಿಗೆ ತನ್ನ ಜನದ ಪರವಾಗಿ ಅಭಿಮಾನ, ಉತ್ಸಾಹ, ಏನಾದರೂ ಮಾಡಬೇಕೆಂಬ ಹಂಬಲು ಮೂಡುತ್ತಿದ್ದುದು ಸಹಜ; ತನ್ನ ಜನರ ನಡುವೆಯೇ ಇದ್ದಾಗ ತನ್ನ ಜನರನ್ನು ಮರೆಯದಿದ್ದರೂ ತಾನು ಮುಂದಕ್ಕೆ ಬರಬೇಕು, ಸವರ್ಣ ಹಿಂದೂಗಳು ಎನ್ನಿಸಿಕೊಂಡವರಿಗೆ ತಾನು ಯಾವ ರೀತಿಯಲ್ಲೂ ಕಡಮೆಯಲ್ಲ ಎನ್ನುವುದನ್ನು ತೋರಿಸಿಕೊಡಬೇಕು, ಸರಕಾರದ ಅಧಿಕಾರದ ಸ್ಥಾನದಲ್ಲಿ ಕುಳಿತು ಅವರೆಲ್ಲ ತನ್ನ ಬಳಿ ಬರುವಂತೆ ಆಗಬೇಕು, ಅಧಿಕಾರ ಕೈಗೆ ಬಂದ ಮೇಲೆ ತನ್ನವರ ಏಳಿಗೆಗಾಗಿ ತನ್ನ ಕೈಲಾದಷ್ಟನ್ನು ಮಾಡಬೇಕು, ತನ್ನ ಜನದ ಪ್ರತಿನಿಧಿಯಾಗಿ ತಾನು ಮುಂದಕ್ಕೆ ಬಂದು ತನ್ನ ಜನ ಇತರರೂ ಪ್ರೋತ್ಸಾಹಕೊಟ್ಟದ್ದೇ ಆದರೆ ಮುಂದಕ್ಕೆ ಬರಬಲ್ಲರು ಎನ್ನುವುದನ್ನು ನಿರ್ವಿವಾದವಾಗಿ ಸ್ಥಾಪಿಸಿ ತೋರಬೇಕು—ಎಂಬುದು ರಾಚಪ್ಪನ ಅಂತರ್ಯದ

ಆಸೆಯಾಗಿತ್ತು. ರಾಚಪ್ಪನ ಮಾತುಗಳಲ್ಲಿ ಈ ಸಹಜವಾದ ಸ್ವಾರ್ಥಮನೋ ಭಾವನೆ ಅಡಗಿತ್ತು. ಸ್ವಾರ್ಥಕ್ಕಿಂತ ಹೆಚ್ಚಾಗಿ ಆಲಸ್ಯ, ಔದಾಸೀನ್ಯ, ಎಂದು ತೋರಿತು ಸುಂದರಮೂರ್ತಿಗೆ.

" ರಾಚಪ್ಪ, ನಿಮ್ಮ ಜನದ ಬಗ್ಗೆ ನೀವು ಇಷ್ಟು ಆಲಸ್ಯದಿಂದಿರ ಬಾರದು. ಹೀಗೆ ಹೇಳಿದೆನೆಂದು ಏನೂ ತಿಳಿಯಬೇಡಿ."

" ಆಲಸ್ಯವಲ್ಲ ಸುಂದರಮೂರ್ತಿಗಳೆ. ಇರುವ ಸ್ಥಿತಿ ಇದು. ನಮ್ಮವ ರಿಗೆ ನಾವು ಹೇಳಿದರೆ ಹಿಡಿಸುವುದಿಲ್ಲ. ನೀವು ಹೇಳಿ ನಮ್ಮವರ ಕಣ್ಣು ತೆರೆಯಿಸಬೇಕು."

ಮಾತನಾಡಿ ಪ್ರಯೋಜನವಿಲ್ಲ, ಕಾರ್ಯಮಾಡಬೇಕು ಎಂದು ತೋರಿತು ಸುಂದರಮೂರ್ತಿಗೆ.

" ಆಗಲಿ. ನಾನು ಹೇಳುತ್ತೇನೆ. ಹಳ್ಳಿಯ ಜನರನ್ನು ಕಲೆ ಹಾಕುತ್ತೀರ ? "

" ಆಗತ್ಯವಾಗಿ " ಎಂದು ರಾಚಪ್ಪ ಎದ್ದುಹೋಗಿ ಯಾರಿಗೋ ಹೇಳಿ ಬಂದು ಮತ್ತೆ ಜಗಲಿಯಮೇಲೆ ಕುಳಿತ; ಆತ ಹಳ್ಳಿಯ ತೋಟಿಗೆ ಹೇಳಿದ, ತೋಟಿ ಹರೆ ತೆಗೆದುಕೊಂಡು ಹಳ್ಳಿಯಲ್ಲಿ ಸಾರುತ್ತ ಹೊರಟ : " ಮೈಸೂರಿ ನಿಂದ ದೊಡ್ಡ ಮನಸ್ರು ಬಂದವ್ರೆ. ನಮ್ಮ ಹಳ್ಳಿ ಜನಕ್ಕೆ ಬೋದ್ನೆ ಮಾಡ್ತ ವ್ರಂತೆ. ಹೊತ್ತು ಮುಳ್ಗೋ ಹೊತ್ಗೆ ಎಲ್ಲಾರೂ ತೊಟ್ಟಿ ಮನೆ ಮುಂದೆ ನೆರೀಬೇಕ್ರೊ. "

ಈ ವಡುವೆ ರಾಚಪ್ಪ ಸುಂದರಮೂರ್ತಿಗೆ ಹಾಲು ಹಣ್ಣು ತಂದಿತ್ತು ಸತ್ಕರಿಸಿದ. ಉಪಾಹಾರವಾದ ಮೇಲೆ ಗೆಳೆಯರಿಬ್ಬರೂ ಹಲವಾರು ವಿಷಯ ಕುರಿತು ಮಾತಾಡಿದರು. ಯಾವ ವಿಷಯ ಮಾತಾಡಿದರೂ ಸುಂದರ ಮೂರ್ತಿ ರಾಚಪ್ಪನನ್ನು ತರುಣರು ಮಾಡಬೇಕಾದ ದೇಶಸೇವೆಯ ಕಡೆಗೆ ಎಳೆಯುತ್ತಿದ್ದ.

" ಎಲ್ಲರೂ ದೇಶಸೇವೆ ಹೇಗೆ ಮಾಡುವುದಕ್ಕಾಗುತ್ತೆ ಸುಂದರ ಮೂರ್ತಿಗಳೆ ? "

" ಮಾಡಬಹುದು. ಆಗದೆ ಏನು ? ನನ್ನ ಸ್ನೇಹಿತ ರಾಮರಾವ್ ೧೯೨೪ ರ ಬೆಳಗಾಂ ಕಾಂಗ್ರೆಸ್ಸಿಗೆ ಹೋದ. ಹೋದವನು ಒಬ್ಬನೇ. ಹಿಂದಿ

ಸುಗಿದ ಮೇಲೆ ತನ್ನ ಗೆಳೆಯರಲ್ಲಿ ಅನೇಕರಿಗೆ ದೇಶಸೇವೆಯ ಪ್ರೇಮ ಹುಟ್ಟಿಸಿದ, ಖಾದಿಯ ಹುಚ್ಚು ಹಿಡಿಸಿದ. ಅವನ ಪ್ರಭಾವಕ್ಕೆ ಒಳಗಾಗಿ ಶ್ರೀಧರ ಮೂರ್ತಿ ಮೆಟ್ರಿಕ್ಕಿಗೇ ವಿದ್ಯಾಭ್ಯಾಸ ಮುಕ್ತಾಯ ಮಾಡಿ ಸಬರಮತಿಯಲ್ಲಿ ಹೋಗಿ ನೆಲಸಿದ್ದಾನೆ. ಅವನು ನನಗೆ ಅಲ್ಲಿಂದ ಆಗಾಗ್ಗೆ ಕಾಗದ ಬರೆಯುತ್ತಿರುತ್ತಾನೆ. ನನ್ನನ್ನೂ ದೇಶಸೇವೆಗೆ ಧುಮುಕುವಂತೆ ಅವನು ಎಂದಿನಿಂದಲೂ ಹುರಿದುಂಬಿಸುತ್ತಲೇ ಇದ್ದಾನೆ. ವಿದ್ಯಾಭ್ಯಾಸವನ್ನು ಬಿಟ್ಟು ದೇಶಸೇವೆಗೆ ಹೊರಡಲು ನನಗಿನ್ನೂ ಮನಸ್ಸಿಲ್ಲ. ಕಾಂಗ್ರೆಸ್ ಚಳವಳಿಗಳಲ್ಲಿ ಭಾಗವಹಿಸಿ ಜೈಲಿಗೆ ಹೋಗುವವರು ಮುಂದೆ ನುಗ್ಗುವ ಸೈನಿಕರಿದ್ದ ಹಾಗೆ; ಹಿಂದೆಯೇ ಉಳಿಯ ರಚನಾತ್ಮಕ ಕಾರ್ಯಗಳಲ್ಲಿ ತೊಡಗುವವರು ಅವರನ್ನು ಹಿಂಬಾಲಿಸುವ ಸೈನಿಕರು. ಪ್ರತ್ಯಕ್ಷವಾಗಿ ಸ್ವಾತಂತ್ರ್ಯದ ಹೋರಾಟದಲ್ಲಿ ಭಾಗವಹಿಸದಿದ್ದರೂ ತಮ್ಮ ಮಕ್ಕಳನ್ನು ದೇಶಸೇವೆಯ ಕಾರ್ಯದಲ್ಲಿ ಇರಗೊಡುವ ತಾಯಿತಂದೆಗಳೂ ದೇಶಸೇವಕರೆ. ದೇಶಸೇವೆಯ ಕ್ಷೇತ್ರ ಬಹು ವಿಶಾಲವಾದ್ದೆಂದು ನನಗನ್ನಿಸುತ್ತದೆ. ಹೀಗಿರುವಾಗ, ಎಲ್ಲರೂ ದೇಶಸೇವೆ ಮಾಡುವುದಕ್ಕೆ ಸಾಧ್ಯವಿಲ್ಲ ಎಂದು ಹೇಳಿದರೆ ನಾನು ಒಪ್ಪುವುದಿಲ್ಲ...."

ರಾಚಪ್ಪ ನಡುವೆ ಬಾಯಿ ಹಾಕಿ, "ನೀವು ಹೇಳುವುದು ಸರಿಯೆ. ನೋಡೋಣ, ನಮ್ಮ ಕೈಲಾದದ್ದು ಮಾಡೋಣ, ಅದಕ್ಕೇನು" ಎಂದು ಸುಂದರನ ಪುಟ್ಟ ಭಾಷಣ ಬೆಳೆಯದಂತೆ ಮುಕ್ತಾಯ ಕೊಟ್ಟ.

ಜನ ಸೇರುವ ಹೊತ್ತಿಗೆ ಹಳ್ಳಿಯನ್ನು ನೋಡಿ ಬರಲು ಸುಂದರ ಬಯಸಿದ; ರಾಚಪ್ಪ ಅವನನ್ನು ಕರೆದೊಯ್ದು ಹಳ್ಳಿ ತೋರಿಸಿದ. ಹಳ್ಳಿಗೆಲ್ಲ ಬೀದಿ ಎನಿಸಿಕೊಂಡದ್ದು ಒಂದೇ; ರಾಚಪ್ಪನ ಮನೆ ಇದ್ದ ಬೀದಿಯೇ ಅದು. ರಾಚಪ್ಪನ ಮನೆ ಒಂದೇ ತೊಟ್ಟಿಮನೆ. ಉಳಿದ ಹತ್ತಿಪ್ಪತ್ತು ಸಣ್ಣ ಹೆಂಚಿನ ಮನೆಗಳು. ಉಳಿದವು ಗುಡಿಸಲುಗಳು. ಕೊಳಕೋ, ಹೇಳಿತೀರದು. ಮನೆಗಳ ಮುಂದೆಯೇ ದನಗಳನ್ನು ಕಟ್ಟಿಹಾಕಿತ್ತು. ಜನಕ್ಕೇ ನೆಳಲು ಸಾಲದು, ಇನ್ನು ದನಕ್ಕೆ ನೆಳಲು ಎಲ್ಲಿಂದ ಬರಬೇಕು? ಮನೆಗಳ ಮುಂದೇ ಗೊಬ್ಬರದ ರಾಶಿಗಳು, ತಿಪ್ಪೆಯ ಗುಂಡಿಗಳು. ಬೀದಿಗೆ ಚರಂಡಿ ಇಲ್ಲ, ದೀಪ ಇಲ್ಲ. ಜನಕ್ಕೆ ಮೈಮುಚ್ಚ ಬಟ್ಟೆ ಇಲ್ಲ. ಓಡಾಡುವ ಮಕ್ಕಳಂತೂ ಬಟ್ಟಬತ್ತಲೆ; ಆ ಮಕ್ಕಳ ಒಡನಾಡಿಗಳೆಂದರೆ, ಕೋಳಿಗಳು, ಗುರುಗುಟ್ಟುವ ಹಂದಿಗಳು.

ಹಳ್ಳಿಯಲ್ಲಿ ಅಂಗಡಿ ಮುಂಗಟ್ಟು ಎನ್ನುವುದು ಇಲ್ಲವೇ ಇಲ್ಲ. ಸುಂದರ ತನ್ನ ಊರೇ ಕೊಳಕು ಹಳ್ಳಿ ಎಂದು ತಿಳಿದಿದ್ದ; ಕೆಂಚನಹಳ್ಳಿ ಅವನಿಗೆ ಹೊಲಸಿನ ಮುದ್ದೆಯಾಗಿ ಕಂಡಿತು. ಹಳ್ಳಿಗಳು ಉದ್ಧಾರವಾಗದೆ ಸ್ವಾತಂತ್ರ್ಯ ಬಂದರೆ, ಪ್ರಯೋಜನ ಇಲ್ಲ ಎನಿಸಿತು.

"ರಾಚಪ್ಪ, ನಿಮ್ಮ ಹಳ್ಳಿಯ ಸೇವೆಮಾಡಿ. ಅದಕ್ಕಿಂತ ದೊಡ್ಡ ಸೇವೆ ಬೇರೆ ಇಲ್ಲ."

"ನಾನು ಒಬ್ಬನಿಂದ ಏನಾಗುತ್ತೆ? ಇದಕ್ಕೆಲ್ಲ ಸರಕಾರ ಗಮನ ಕೊಡಬೇಕು. ನಾನು ಹೇಳಿದರೆ ನನ್ನ ಮಾತು ಕೇಳುವವರು ಯಾರು? ಓದಿ ತಲೆ ಕೆಡಿಸಿಕೊಂಡಿದಾನೆ ಇವನು ಅಂತ ಹಾಸ್ಯ ಮಾಡುತಾರೆ."

"ಹೇಳಿದರೆ ಪ್ರಯೋಜನವಿಲ್ಲ ರಾಚಪ್ಪನವರೆ. ಮಾಡಿ ತೋರಿಸ ಬೇಕು."

"ಈಗ ನಮ್ಮ ಮನೆ ಚೊಕ್ಕಟವಾಗಿಲ್ಲವೆ? ಅದನ್ನು ನೋಡಿ ಯಾರೂ ಕಲಿಯುವೊಲ್ಲರು."

"ಅದಲ್ಲ, ರಾಚಪ್ಪ, ನಾನು ಹೇಳುವುದು. ಅದೋ ನೋಡಿ, ಆ ಗೊಬ್ಬರದ ರಾಶಿ ಇದೆ. ಮನೆಮುಂದೆ ಹಾಕಬಾರದು, ಊರ ಹೊರಗೆ ಹಾಕಿ ಎಂದು ಹೇಳಬೇಕು. ಕೇಳಲಿಲ್ಲ, ಮಕ್ಕರಿ ಹಿಡಿದು ನಾವು ಹೊರಕ್ಕೆ ಹಾಕಿ ತೋರಿಸಬೇಕು. ನಮ್ಮ ಕೆಲಸ ಇತರರು ಮಾಡುವ ಹಾಗಾಯಿತೆ ಎಂದು ಜನ ತಮ್ಮ ಕೆಲಸ ತಾವು ಮಾಡಿಕೊಳ್ಳಲು ಮನಸ್ಸು ಮಾಡುತ್ತಾರೆ. ಜನಕ್ಕೆ ತಿಳಿವಳಿಕೆ ಇಲ್ಲ. ಆ ತಿಳಿವಳಿಕೆ ನಾವು ಕೊಡಬೇಕು. ಬೇಕಾದರೆ, ನೋಡಿ, ನಾನು ಹೇಳುವುದು ನಿಜ ಇಲ್ಲವೋ?"

ಹೀಗೆ ಹೇಳಿ, ಸುಂದರಮೂರ್ತಿ ಗೊಬ್ಬರದ ರಾಶಿ ಇದ್ದ ಮನೆಯ ಮುಂದೆ ಹೋಗಿ, ಮನೆಯ ಮುಂದೆ ಜೂಗರಿಸುತ್ತ ಕುಳಿತಿದ್ದವನನ್ನು ಕೂಗಿ ಎಚ್ಚರಿಸಿ, ಒಂದು ಗುದ್ದಲಿ ಒಂದು ಮಕ್ಕರಿ ತರುವ ಹಾಗೆ ಹೇಳಿದ. ಸುಂದರಮೂರ್ತಿಯ ಸುಂದರಾಕೃತಿಯನ್ನೂ ಅವನ ಶುಭ್ರವಾದ ಉಡಿಗೆ ತೊಡಿಗೆಯನ್ನೂ ಹಳ್ಳಿಯ ಮನುಷ್ಯ ದಿಟ್ಟಿಸಿ ನೋಡಿದ; ಇವನು ಗುದ್ದಲಿ ಮಕ್ಕರಿ ಏಕೆ ಕೇಳುತ್ತಾನೆ ಎಂದು ಅವನಿಗೆ ಆಶ್ಚರ್ಯವಾಯಿತು. ಬಿಟ್ಟ ಕಣ್ಣು ತೆರೆದ ಬಾಯಿಂದ ಮೌನವಾಗಿಯೇ ಇದ್ದ. "ಗುದ್ದಲಿ ಮಕ್ಕರಿ ಇಲ್ಲವೆ?"

ಎಂದು ಸುಂದರ ಮತ್ತೆ ಕೇಳಿದ. ಬರಿಯ ಮಾತಿನವನು ಸುಂದರಮೂರ್ತಿ ಎಂದು ರಾಚಪ್ಪ ತಿಳಿದಿದ್ದ; ಆದರೆ ಈಗ ಅವನ ವರ್ತನೆಯನ್ನು ಕಂಡು ರಾಚಪ್ಪನಿಗೆ ನಾಚಿಕೆಯಾಯಿತು.

"ಸುಂದರಮೂರ್ತಿ, ಈ ಕೆಲಸ ನೀವು ಮಾಡಬಾರದು" ಎಂದು ಬೇಡುವ ದನಿಯಲ್ಲಿ ಹೇಳಿದ ರಾಚಪ್ಪ.

"ನಾನು ಮಾಡಿ ತೋರಿಸಬೇಕು, ಇಲ್ಲ ನೀವು ಮಾಡಿ ತೋರಿಸ ಬೇಕು. ಇಲ್ಲದೆ ಹೋದರೆ ಜನ ಕಲಿಯುವುದಿಲ್ಲ. ಜನಕ್ಕೆ ಹೇಳಿ ಕಲಿಸು ವುದಕ್ಕಿಂತ ಮಾಡಿ ಕಲಿಸುವುದು ಮೇಲು ಎಂದು ನನಗೆ ಈಗ ತೋರುತ್ತೆ. ನಾನು ಸಂಜೆ ಮಾತಾಡುವುದಿಲ್ಲ. ಹೇಳಬೇಕೆಂದಿರುವುದನ್ನು ಮಾಡಿಯೇ ತೋರಿಸಿ ಬಿಡುತ್ತೇನೆ."

"ಸುಂದರಮೂರ್ತಿ, ನೀವು ನನ್ನ ಅತಿಥಿ. ಈ ಕೆಲಸಕ್ಕೆ ನಿಮ್ಮನ್ನು ಬಿಡಲಾರೆ, ನಿಮ್ಮ ಊರಿನಲ್ಲಿ ನೀವು ಬೇಕಾದಷ್ಟು ಮಾಡಿ, ನಮ್ಮ ಹಳ್ಳಿಯ ಕೆಲಸ ನನಗೆ ಬಿಡಿ, ನೀವು ನಮ್ಮ ಜನಕ್ಕೆ ಸ್ವಲ್ಪ ಬುದ್ಧಿವಾದ ಹೇಳಿಹೋಗಿ ಸಾಕು. ಉಳಿದುದನ್ನು ನಾನು ಮಾಡುತ್ತೇನೆ."

ರಾಚಪ್ಪನ ಮಾತಿನಿಂದ ಸುಂದರಮೂರ್ತಿಗೆ ಸಮಾಧಾನವಾಯಿತು. ಇಬ್ಬರೂ ಹಿಂದಿರುಗಿದರು. ಗುದ್ದಲಿ ಮಕ್ಕರಿ ಇದ್ದಲ್ಲಿ ಇದ್ದುವು.

ಹೊತ್ತು ಮುಳುಗಿ ರಾತ್ರಿಯಾಗುತ್ತ ಬಂದಿತು. ರಾಚಪ್ಪ ಜಗಲಿಯ ಮೇಲೆ ಚಾಪೆ ಹಾಸಿ, ಎರಡು ಲಾಂದ್ರಗಳನ್ನು ಹೊತ್ತಿಸಿಟ್ಟ. ಸುಮಾರು ಎಂಟು ಗಂಟೆಯ ಹೊತ್ತಿಗೆ ಎಂಟು ಹತ್ತು ಮಂದಿ ಒಬ್ಬೊಬ್ಬರಾಗಿ ಬಂದು ಜಗಲಿಯಮೇಲೆ ಕುಳಿತರು. ಅರ್ಧ ಗಂಟೆಯಾದಮೇಲೆ, ಬಂದಿದ್ದವರ ಪೈಕಿ ಒಬ್ಬ "ಏನು ಹೇಳಿ ಕಳಿಸಿದೆಯಲ್ಲ ರಾಚಪ್ಪ. ಬಂದಿದೀವಿ, ಏನು ಕೆಲ್ಸ ?" ಎಂದು ಪ್ರಶ್ನಿಸಿದ. ರಾಚಪ್ಪ ಸುಂದರಮೂರ್ತಿಯನ್ನು ಕುರಿತು, "ಸಾಕಷ್ಟು ಜನ ಬರಲಿಲ್ಲ. ಇವರನ್ನು ಹಿಂದಕ್ಕೆ ಹೋಗುವ ಹಾಗೆ ಹೇಳಿಬಿಡಲೆ ?" ಎಂದು ಮೆಲ್ಲನೆ ಕೇಳಿದ. "ಹತ್ತು ಜನ ಬರಲಿ, ನೂರು ಜನ ಬರಲಿ, ನಾವು ಮಾಡುವ ಕೆಲಸ ಮಾಡಿಬಿಡೋಣ" ಎಂದು ಸುಂದರಮೂರ್ತಿ ಬಂದವರನ್ನು ಉದ್ದೇಶಿಸಿ ನಾಲ್ಕು ಮಾತು ಹೇಳಿದ.

ಸುಂದರಮೂರ್ತಿ ಹೆಚ್ಚಿನದೇನೂ ಹೇಳಲಿಲ್ಲ. ಅವನು ಹೇಳಿದ

ಮಾತುಗಳ ಸಾರಾಂಶ ಇಷ್ಟು:— "ರಾಚಪ್ಪ ನಿಮ್ಮ ಹಳ್ಳಿಯವರು. ಅವರು ಕಲಿತು ಬಿ. ಎ. ಪ್ಯಾಸು ಮಾಡುವ ಹಾಗಾಗಿದ್ದಾರೆ. ಅವರು ಕಲಿಯುವಾಗಲೂ ಇಲ್ಲಿ ಇಸ್ಕೂಲು ಇರಲಿಲ್ಲ ಕಷ್ಟಪಟ್ಟು ಕಲಿತರು. ನಿಮ್ಮಲ್ಲಿ ಅವರಿಗೆ ತುಂಬ ಪ್ರೀತಿ. ಅವರು ಹೇಳಿದಂತೆ ನೀವು ನಡೆಯಬೇಕು, ಮಾಡಿ ಅಂದದ್ದನ್ನು ಮಾಡಬೇಕು. (ಈ ಮಾತು ಹೇಳಿದಾಗ, "ಅದಕ್ಕೇನು ಅಗತ್ಯವಾಗಿ ಮಾಡ್ತೀವಿ" ಎಂದರು ನೆರೆದಿದ್ದವರು.) ನೀವು ನಿಮ್ಮ ಮಕ್ಕಳಿಗೆ ಓದುವ ಶಾಲೆ ಬೇಕು ಎಂದು ಸರಕಾರವನ್ನು ಕೇಳಬೇಕು. ನೀವು ಚೊಕ್ಕಟವಾಗಿರಬೇಕು; ನಿಮ್ಮ ಹಳ್ಳಿಯನ್ನೂ ಚೊಕ್ಕಟವಾಗಿಟ್ಟುಕೊಳ್ಳಬೇಕು. ಮಾರಮ್ಮನಿಗೆ ಕುರಿ ಕೋಳಿ ಬಲಿಕೊಡಬಾರದು. ಹೆಂಡ ಕುಡಿಯಬಾರದು. (ಈ ಮಾತು ಹೇಳಿದಾಗ ಒಬ್ಬನು, ತೊದಲುತ್ತ, "ನಾನು ಕುಡಿದಿಲ್ಲ ಬುದ್ಧಿ" ಎಂದ.) ಕೆರೆ ಕೊಳಗಳಲ್ಲಿ ದನ ತೊಳೆಯಬಾರದು. ದಾರಿ ನೂತು ನಿಮ್ಮ ಬಟ್ಟೆ ನೀವೇ ಮಾಡಿಕೊಳ್ಳಬೇಕು. ಇದೆಲ್ಲ ನಾನು ಹೇಳುವ ಮಾತಲ್ಲ; ಗಾಂಧಿ ಅಂತ ಒಬ್ಬರು ದೊಡ್ಡ ಮನುಷ್ಯರಿದ್ದಾರೆ. ಅವರು ಹೇಳುವ ಮಾತು."

ಸುಂದರಮೂರ್ತಿ ಮಾತಾಡಿ ಮುಗಿಸಿದಮೇಲೆ, ಮೊದಲು ಬಂದ ಕೂಡಲೆ ಪ್ರಶ್ನಿಸಿದವನು— "ನೀವು ಹೇಳಿದ್ದೆಲ್ಲ ಒಪ್ಪೆ ಬುದ್ದಿ. ನಮ್ಮ ಕೆಲ್ಸ ನಾವು ಮಾಡಿಕೋಬೇಕು ಅಂತ. ನಾನು ನಮ್ಮ ಹೈಕಳಿಗೆ ಹೇಳೋದೂ ಅದೇನೆ" ಎಂದು ಹೇಳಿ, ತಾನು ಬುದ್ಧಿವಂತ ಎನ್ನುವುದನ್ನು ತೋರಿಸಿಕೊಂಡ.

ಬಹಳ ಹೊತ್ತಾಗಿದ್ದುದರಿಂದ ಸುಂದರಮೂರ್ತಿ ರಾತ್ರಿ ಅಲ್ಲಿಯೇ ತಂಗಿದ. ರಾಚಪ್ಪ ಮತ್ತೆ ತಂದುಕೊಟ್ಟ ಹಾಲು ಹಣ್ಣನ್ನು ಭುಂಜಿಸಿದ. ಮಲಗಲು ಒಂದು ಕಂಬಳಿ ದಿಂಬು ತಂದುಕೊಡಬೇಕೆಂದು ರಾಚಪ್ಪನಿಗೆ ಮನಸ್ಸಾಯಿತು. ಎಷ್ಟಾದರೂ ತನ್ನ ಮನೆಯ ಕಂಬಳಿ ದಿಂಬು ಕೊಳಕು ಎಂದೆನಿಸಿ, "ಹಾಸಿಗೆ ಹೊದಿಕೆ ಬೇರೆ ಇಲ್ಲ. ನನ್ನವೇ ಕೊಟ್ಟರೆ ಬಾಧಕ ಇಲ್ಲ ತಾನೆ?" ಎಂದು ಉಪಚಾರದ ಮಾತನ್ನೇನೋ ಆಡಿದ. "ಉರಿ ಬೇಸಗೆಯಲ್ಲಿ ಹಾಸಿಗೆ ಹೊದಿಕೆ ಏಕೆ? ಈ ಚಾಪೆಯೇ ಸಾಕು" ಎಂದು ಸುಂದರ ಚಾಪೆಯಮೇಲೆ ಮಲಗಿದ. ರಾಚಪ್ಪನಿಗೆ ಹಾಸಿಗೆಯ ಮೇಲೆ ಮಲಗಲು ಇಷ್ಟವಾಗಲಿಲ್ಲ. ತಾನೂ ಪಕ್ಕದಲ್ಲೆ ಒಂದು ಚಾಪೆ ಹಾಸಿಕೊಂಡು ಮಲಗಿದ.

ಮಲಗಿ ಆ ಮಾತು ಈ ಮಾತು ಆಡುತ್ತ ಸುಂದರಮೂರ್ತಿ ಚೆನ್ನಿಯ ವಿಚಾರಕ್ಕೆ ಜಗುಳಿದ:

"ರಾಚಪ್ಪ, ನಿಮಗೆ ಮದುವೆ ಆಗಿಲ್ಲ ಅಲ್ಲವೆ?"

"ಇಲ್ಲ."

"ಯಾರೂ ಹೆಣ್ಣು ಕೊಡುತ್ತೇನೆ ಅಂತ ಬಂದಿಲ್ಲವೆ?"

"ನಮ್ಮಲ್ಲಿ ಗಂಡು ಅಂತ ಹುಡುಕಿಕೊಂಡು ಬರುವುದಿಲ್ಲ. ಹಿರಿಯರು ಗಂಡಿಗೆ ಒಂದು ಹೆಣ್ಣು ಗೊತ್ತು ಮಾಡುತ್ತಾರೆ. ಹಿರಿಯರು ಗೊತ್ತು ಮಾಡಿದ ಹೆಣ್ಣನ್ನು ನಾವು ಮದುವೆಯಾಗುತ್ತೇವೆ. ನಾವೇ ಒಂದೊಂದು ಸಲ ಬೇಕಾದ ಹೆಣ್ಣನ್ನು ಮದುವೆಯಾಗುವುದೂ ಉಂಟು."

"ನಿಮಗೆ ಯಾವುದಾದರೂ ಹೆಣ್ಣು ಗೊತ್ತಾಗಿದೆಯೋ?"

"ಇಲ್ಲ."

"ನಮ್ಮ ಊರಲ್ಲಿ ಒಂದು ಹೆಣ್ಣಿದೆ" ಎಂದು ಪ್ರಾರಂಭಿಸಿ, ಸುಂದರ ಮೂರ್ತಿ ಚೆನ್ನಿಯ ವಿಚಾರವನ್ನೆಲ್ಲ ಆದ್ಯಂತವಾಗಿ ಹೇಳಿದ:

"ಚೆನ್ನಿಯ ರೂಪವನ್ನು ವರ್ಣಿಸಲಾರೆ, ಲಕ್ಷ್ಮೀಪತಿ ಆಗಿದ್ದರೆ ಚೆನ್ನಾಗಿ ವರ್ಣಿಸುತ್ತಿದ್ದ. ಖಾಯಿಲೆಯಾಗಿ ಈಗ ಬಡವಾಗಿದಾಳೆ. ನಿಮ್ಮವರಲ್ಲಿ ಅಂಥ ಹೆಣ್ಣು ಇಲ್ಲವೆಂದೇ ಹೇಳಬೇಕು. ನೀವು ಆ ಹುಡುಗಿಯನ್ನ ಮದುವೆ ಮಾಡಿಕೊಂಡರೆ ಒಂದು ಬಡ ಹುಡುಗಿಯನ್ನು ಉದ್ಧಾರ ಮಾಡಿದ ಹಾಗಾಗುತ್ತೆ."

"ನೀವು ಹೇಳಿದ ಹೆಣ್ಣು ನಮ್ಮ ಮನೆ ಸೇರಲು ಹಿರಿಯರು ಒಪ್ಪುವುದಿಲ್ಲ."

"ಏಕೆ. ತಬ್ಬಲಿ ಎಂದೆ?"

"ಅಲ್ಲ. ಹುಡುಗಿಯ ತಂದೆ ಮಾದಿಗ ಎಂದಿರಿ. ನಾವು ಹೊಲೆಯರು. ನಮಗೂ ಅವರಿಗೂ ಕೊಟ್ಟುತರುವುದು ಇಲ್ಲ."

"ಇದು ನನಗೂ ಸ್ವಲ್ಪ ತಿಳಿದಿದೆ. ಆದರೆ, ನೀವು ಓದಿದವರು. ನೀವು ಆ ಹೆಣ್ಣನ್ನ ಮದುವೆಯಾಗಿ ಇತರರಿಗೆ ಮೇಲುಪಂಕ್ತಿ ಹಾಕಬಹುದಲ್ಲ?"

"ಹಾಸ್ಯಕ್ಕೆ ಹೇಳುತ್ತೇನೆ, ಕೋಪಿಸಿಕೊಳ್ಳಬೇಡಿ ಸುಂದರಮೂರ್ತಿ. ಅವಳನ್ನ ನೀವೆ ಮದುವೆಯಾಗಿ ಸಮಾಜದಲ್ಲಿ ದೊಡ್ಡ ಕ್ರಾಂತಿ ಎಬ್ಬಿಸಿ.

ಹೊಲೆಯನೊಬ್ಬ ಮಾದಿಗನ ಮಗಳನ್ನು ಮದುವೆಯಾಗುವುದಕ್ಕಿಂತ ಹಾರುವ ಮದುವೆಯಾದರೆ ಹೆಚ್ಚಿನದಲ್ಲವೆ?"

"ಭೇಷಕ್ ಆಗಬಹುದು. ಆದರೆ.... ನಿಮ್ಮಲ್ಲಿ ಮುಚ್ಚುಮರೆ ಏಕೆ? ನಾನು ಚಿಕ್ಕಂದಿನಿಂದ ಮದುವೆಯಾಗಬೇಕೆಂದಿರುವ ಹುಡುಗಿ ಇದಾಳೆ, ನಮ್ಮ ಸೋದರಮಾವನ ಮಗಳು. ನಾವಿಬ್ಬರೂ ಗಂಡಹೆಂಡಿರಾಗಿ ಹುಟ್ಟಿರುವ ಹಾಗೆ ಕಾಣುತ್ತೆ; ಹಿರಿಯರೂ ನಾವು ಗಂಡಹೆಂಡಿರಾಗಿರಬೇಕೆಂದು ಬಯಸುವ ಹಾಗೂ ಕಾಣುತ್ತೆ. ಆದ್ದರಿಂದ ಸಾಧ್ಯವಿಲ್ಲ. ಇಲ್ಲದೆ ಹೋಗಿದ್ದರೆ, ಹಿರಿಯರನ್ನು ಲೆಕ್ಕಿಸದೆ. ಆ ಹುಡುಗಿಯನ್ನು ಬೆಂಗಳೂರಿಗೊ ಮೈಸೂರಿಗೊ ಕರೆದುಕೊಂಡು ಹೋಗಿ, ವಿದ್ಯಾಭ್ಯಾಸಮಾಡಿಸಿ, ಮದುವೆಯಾಗುವ ಯೋಚನೆ ಮಾಡುತ್ತಿದ್ದೆ. ಆ ಹುಡುಗಿಯನ್ನು ನೋಡಿದವನು ಯಾವನಾದರೂ ಮದುವೆಯಾಗಲು ಬಯಸಿಯಾನು, ಅಂಥ ಚಿನ್ನದಂಥ ಹುಡುಗಿ. ಅಲ್ಲದೆ, ಆ ಹುಡುಗಿಯನ್ನ ತಂಗಿ ಅಂತ ತಿಳಿದಿದೇನೆ. ತಂಗಿಯನ್ನು ಮದುವೆಯಾಗಬಹುದೆ?"

"ಹುಡುಗಿ ಅಷ್ಟು ಚಿನ್ನ ಅಂತ ಹೇಳಿದ ಮೇಲೆ ನನಗೂ ಮದುವೆಯಾಗೋಣ ಅಂತ ಅನ್ನಿಸುತ್ತೆ. ನಮ್ಮ ಅಪ್ಪನ್ನ ಕೇಳಿ ನೋಡ್ತೇನೆ."

ಸುಂದರಮೂರ್ತಿ ತಾನು ಕೆಂಚನಹಳ್ಳಿಗೆ ಬಂದದ್ದು ತುಸ ಸಾರ್ಥಕವಾಯಿತು ಎಂದು ಭಾವಿಸಿದನು. ಅವನು ಅಲ್ಲಿ ಸಾಧಿಸಿದ್ದು ಅಲ್ಪ. ಆದರೂ ಏನೋ ಮಹತ್ಸಾಧನೆ ಮಾಡಿದಂತಹ ತೃಪ್ತಿ ಮೂಡಿ ಮನಸ್ಸು ಬಹು ಹಗುರವಾಯಿತು. ಹಗುರವಾದ ಮನಸ್ಸು ಬೇಗನೆ ಗಾಢ ನಿದ್ರೆಯಲ್ಲಿ ಮುಳುಗಿ, ಹೊಂಗನಸುಗಳಲ್ಲಿ ಓಲಾಡಿತು

ಸುಂದರಮೂರ್ತಿ ಬೆಳಗ್ಗೆ ಎದ್ದು, ಹಾಲು ಕುಡಿದು, ರಾಚಪ್ಪನನ್ನು ಸೌಮನಸ್ಯದಿಂದಲೆ ಬೀಳ್ಕೊಂಡ. ಮಧ್ಯಾಹ್ನದ ವೇಳೆಗೆ ದೇವಸ್ಥಾನದಲ್ಲಿಯೇ ತನ್ನವರನ್ನು ಸೇರಿ, ಎರಡನೆಯ ದಿನದ ದೇವರ ಸೇವೆಯಲ್ಲೂ ಭಾಗಿಯಾಗಿ, ಭಾವನ ಮನಸ್ಸನ್ನು ತೃಪ್ತಿಪಡಿಸಿದ.

೩೩

ಕೃಷ್ಣಪ್ಪನವರು ನಂಜನಗೂಡಿಗೆ ಪ್ರಯಾಣ ಬೆಳಸಿದ್ದ ವೇಳೆಯಲ್ಲಿ ನಂಜುಂಡ ಶಾಸ್ತ್ರಿಗಳ ತಂದೆಯ ಶ್ರಾದ್ಧ ಬಂದಿತ್ತು. ಅವರು ಶ್ರಾದ್ಧ ಹಬ್ಬ

ಹರಿದಿನಗಳಾದರೆ ಆವರಿವರ ತೋಟಕ್ಕೆ ಹೋಗಿ ಯಾಚನೆ ಮಾಡಿ ಬಾಳೆ ಯೆಲೆ ಸಂಗ್ರಹಿಸುವುದು ವಾಡಿಕೆ. ಅವರೇನು? ಹಳ್ಳಿಗಳಲ್ಲಿ ಸಾಧಾರಣ ವಾಗಿ ಯಾರೂ ದುಡ್ಡುಕೊಟ್ಟು ಬಾಳೆಯೆಲೆ ಕೊಳ್ಳುವುದು ಅಪರೂಪ. ಈ ಹಿಂದೆ ನಂಜುಂಡ ಶಾಸ್ತ್ರಿಗಳು ಸಾಧಾರಣವಾಗಿ ಕೃಷ್ಣಪ್ಪನವರ ತೋಟ ದಲ್ಲಿಯೇ ಬಾಳೆಯೆಲೆ ತರುತ್ತಿದ್ದರು. ಈ ಸಲ ಅವರ ತೋಟದಿಂದ ಬಾಳೆ ಯೆಲೆ ತರಲು ಅದೇನೋ ಅವರ ಮನಸ್ಸು ಒಡಂಬಡಲಿಲ್ಲ. ಶ್ರಾದ್ಧದ ದಿನದವರೆಗೂ ಅವರು ಎಲೆಯ ಯೋಜನೆಯನ್ನೇ ಮಾಡಿರಲಿಲ್ಲ. ಆ ದಿನದ ಬೆಳಗ್ಗೆ ಹತ್ತು ಗಂಟೆಯ ಹೊತ್ತಿಗೆ ಅದರ ನೆನಪಾಯಿತು ಅವರಿಗೆ. 'ಎಲ್ಲಿ ಯಾದರೂ ಕೇಳಿ ಬಾಳೆಯೆಲ ತಗೊಂಡು ಬಾ' ಎಂದು ಮಗ ವಿಶ್ವನಾಥ ನಿಗೆ ಆ ಕೆಲಸ ವಹಿಸಿದರು; 'ಕೃಷ್ಣಪ್ಪನವರ ತೋಟದಲ್ಲಿ ಕೇಳಬೇಡ' ಎಂದೂ ಮಗನಿಗೆ ಎಚ್ಚರಿಕೆ ಕೊಟ್ಟರು.

ಬೇಡ ಎಂದುದನ್ನೆ ಮಾಡುವುದು ಮಕ್ಕಳ ಸ್ವಭಾವ. ವಿಶ್ವನಾಥನಿಗೆ ಕೃಷ್ಣಪ್ಪನವರ ತೋಟಕ್ಕೇ ಹೋಗಿ, ಸಾಧ್ಯವಾದರೆ ಕೇಳದೆಯೇ ಬಾಳೆ ಯೆಲೆಯನ್ನು 'ಲಪಟಾಯಿಸಿ'ಕೊಂಡು ತರಬೇಕೆಂಬ ಮನಸ್ಸಾಯಿತು. ವಿಶ್ವನಾಥ ಮಗುವೇನಲ್ಲ; ಹುಡುಗನೂ ಅಲ್ಲ. ಪ್ರಾಯಕ್ಕೆ ಬಂದಿದ್ದವನು. ಆ ಕಾಲದಲ್ಲಿ, ಅವನಿಗೆ ಮದುವೆಯಾಗಿ ಮೂರು ವರ್ಷ ಆಗಬೇಕಾಗಿತ್ತು. ತಂದೆ ಬೇಡ ಎಂದುದನ್ನು ಮಾಡಬೇಕೆಂದು ಅವನನ್ನು ಚೋದಿಸಿದ್ದು ಸುಂದರಮೂರ್ತಿಯ ಮೇಲಣ ಅಸೂಯೆ, ದ್ವೇಷಭಾವ; ಅವನದೇನು ದೊಡ್ಡಿಸ್ತಿಕೆ ಎಂಬ ತಿರಸ್ಕಾರಬುದ್ಧಿ. ಈ ದುಷ್ಟಭಾವನೆ ವಕ್ರಮಾರ್ಗದಲ್ಲಿ ಹರಿಯಿತು. ಅವನು ಕೃಷ್ಣಪ್ಪನವರ ತೋಟಕ್ಕೆ ದಾಳಿಯಿಟ್ಟ.

ವಿಶ್ವನಾಥ ಚಿಕ್ಕಂದಿನಲ್ಲಿ ಸುಂದರನ ಜೊತೆ ಆ ತೋಟಕ್ಕೆ ಆಗಾಗ್ಗೆ ಹೋಗಿ ಬರುತ್ತಿದ್ದುದು ಉಂಟು; ಅವನೊಡನೆ ಅಲ್ಲಿನ ಎಳನೀರಿನ ಸವಿ ಯನ್ನೂ ನೋಡಿದ್ದ. ಬಹಳ ಕಾಲವಾದ ಮೇಲೆ ಕಳೆದ ವರ್ಷವೆ ಅವನು ತೋಟಕ್ಕೆ ಕಾಲಿಟ್ಟದ್ದು. ಇತ್ತೀಚಿನ ಸವಿನೆನಪು ಅವನನ್ನು ಅವರ ತೋಟದ ಕಡೆಗೇ ಸೆಳೆಯಿತು.

ವಿಶ್ವನಾಥ ತೋಟಕ್ಕೆ ಹೋದಾಗ ಅದು ನಿಶ್ಶಬ್ದವಾಗಿತ್ತು. ಕೆಲಸ ದವರು ಬಾಳೆ, ವೀಳೆಯದೆಲೆ ಗಂಬು, ಬದನೆ ಮೊದಲಾದ ಗಿಡಗಳಿಗೆ ನೀರು

ಕಟ್ಟಿ ಹೊರಟುಹೋಗಿದ್ದರು. ಮಾದ ಚೆನ್ನಿ ಇವರು ಅಸ್ವಸ್ಥರಾಗಿದ್ದ ಸಂಗತಿ ಇವನಿಗೂ ಗೊತ್ತಿತ್ತು. ವೈಶಾಖದ ಪ್ರಾರಂಭದ ಬಿರುಬಿಸಿಲು ಏರು ತ್ತಿತ್ತು. ಅವರಿಬ್ಬರೂ ಮೂಲೆಯ ಗುಡಿಸಿಲಿನಲ್ಲಿ ಒರಗಿರುತ್ತಾರೆ, ಯಾರ ಅಡ್ಡಿ ಎಂದು ಅವನ ಎಣಿಕೆ. ಧೈರ್ಯದಿಂದ ತೋಟಕ್ಕೆ ನುಗ್ಗಿ ಬೇಕಾಗು ವಷ್ಟು ಬಾಳೆಯೆಲೆಯನ್ನು ಕೊಯ್ದು ಕಟ್ಟಿಟ್ಟ

ಬಿಸಿಲು; ಬಾಯಾರುತ್ತಿತ್ತು; ತಾನು ಹಿಂದೆ ಇಲ್ಲಿ ಕುಡಿಯುತ್ತ ಇದ್ದ ಎಳನೀರಿನ ಸವಿಯು ಸವಿನೆನಪು ಬಂದಿತು. ತೆಂಗಿನಮರ ಹತ್ತುವ ಅಭ್ಯಾ ಸವೂ ಇತ್ತು. ಒಂದು ಮರವನ್ನೇರಿ ಎರಡು ಎಳನೀರನ್ನು ಕೆಡವಿದ. ಎಳ ನೀರು ಬಿದ್ದು 'ಧಡ್' ಎಂದು ಸದ್ದಾಯಿತು. ಆ ಸದ್ದು ಚೆನ್ನಿಗೆ ಕೇಳಿತು. ಕೋತಿ ಬಂದು ಹಾವಳಿ ಮಾಡುತ್ತಿರಬಹುದು ಎಂದು ಬಗೆದು, ಗುಡಿಸಿಲ ಬಳಿಯೆ ಸುತ್ತಾಡುತ್ತ ಇದ್ದವಳು ಸದ್ದು ಕೇಳಿಬಂದತ್ತ ನಡೆದಳು. ಕತ್ತೆತ್ತಿ ಒಂದೊಂದು ಮರವನ್ನೂ ನೋಡುತ್ತ ಅಲ್ಲಲ್ಲಿಯೇ ಸುಳಿದಾಡುತ್ತಿದ್ದಳು.

ವಿಶ್ವನಾಥ ಮರವನ್ನಿಳಿದ. ಎಳನೀರು ಕೊಚ್ಚಲು ಕುಡುಲಿರಲಿಲ್ಲ. ತಾನು ತಂದಿದ್ದ ಚಾಕುವಿನಿಂದಲೆ ಎಳನೀರ ತೊಟ್ಟಿನ ಕಡೆಯ ಮುಚ್ಚಿಗೆ ಹೆರೆದು, ತಳದ ಮೃದುಭಾಗದಲ್ಲಿ ಕನ್ನ ಕೊರೆದು, ಒಂದು ಎಳನೀರನ್ನು ಎತ್ತಿ ಗಟಗಟನೆ ಕುಡಿದು ಬುರುಡೆಯನ್ನು ಕೆಳಗೆ ಉರುಳಿಸಿದ. ಇನ್ನೊಂದನ್ನು ಕೈಗೆ ಎತ್ತಿಕೊಳ್ಳಹೋದಾಗ, ಎದುರಿಗೆ ಮುಗುಳುನಗೆ ಚೆಲ್ಲುತ್ತ ನಿಂತಿದ್ದ ಚೆನ್ನಿ ಕಣ್ಣಿಗೆ ಬಿದ್ದಳು. ಅವನು ಭೂಮಿಗೆ ಇಳಿದುಹೋದ; ಕಪ್ಪುಮೋರೆಯೂ ಕೆಂಪಡರಿತು "ನೀವಾ, ವಿಸ್ವಪ್ಪಾ ? ಕೋತಿ ಅಂತ ಇದ್ದೆ" ಎಂದು ಚೆನ್ನಿ ಹೇಳಿ ತುಸ ಜೋರಾಗಿಯೇ ನಕ್ಕಾಗ ಅವನಿಗೆ ತುಸ ಧೈರ್ಯ ಬಂದಿತು. ತನ್ನ ಕೀಳುಗೆಲಸವನ್ನು ಮರೆಸುವುದಕ್ಕಾಗಿ, "ತಕೊ, ಇದನ್ನ ನೀನು ಕುಡಿ. ತುಂಬ ಬಿಸಿಲು" ಎಂದು ಕುಡಿಯದೆ ಇಟ್ಟಿದ್ದ ಎಳನೀರ ಕಡೆ ತೋರಿಸಿದ. "ನನಗೆ ಬ್ಯಾಡ, ಬಾಯಾರ್ಕೆ ಆಗದೇನೋ, ನೀವೇ ಕುಡೀರಿ" ಎಂದಳು ಚೆನ್ನಿ. "ಪರವಾಯಿಲ್ಲ; ತಕೋ; ಕುಡಿ"— ಮತ್ತೆ ವಿಶ್ವಾಸದ ಒತ್ತಾ ಯದ ದನಿಯಲ್ಲಿ ಹೇಳಿದ. ನಿಜವಾಗಿಯೂ ಚೆನ್ನಿಗೂ ಬಾಯಾರಿಕೆ ಯಾಗಿತ್ತು. ಆ ಮುಗ್ಧ ಜೀವಕ್ಕೆ ಉಪಚಾರ ಬೇಕಾಗಿರಲಿಲ್ಲ. ಎಳನೀರು ತೆಗೆದುಕೊಂಡು ನಿಧಾನವಾಗಿ ಚಪ್ಪರಿಸಿ ಕುಡಿಯತೊಡಗಿದಳು.

ಚೆನ್ನಿ ಎಳನೀರು ಕುಡಿಯುತ್ತ ಇದ್ದಾಗ ವಿಶ್ವನಾಥ ಚೆನ್ನಿಯನ್ನು ಎಟ್ಟಿಸಿ ನೋಡುತ್ತ ಇದ್ದ: ಚೆನ್ನಿ ಬಹು ಚೆಲುವಾಗಿ ಕಂಡಳು ಅವನ ಪ್ರಾಯದ ಕಣ್ಣಿಗೆ. ಆಸೆ ಮೂಡಿತು; ದೃಷ್ಟಿಯಲ್ಲಿ ಕೊನರಿತು.

"ಕೃಷ್ಣಪ್ಪನವರು ಊರಿನಲ್ಲಿ ಇಲ್ಲ. ಕಾಳೇಗೌಡನ್ನ ಒಸಿ ಬಾಳೆಎಲೆ ಬೇಕು ಅಂತ ಕೇಳ್ದೆ. 'ನೀವೇ ಹೋಗಿ ತೋಟದಲ್ಲಿ ಕುಯ್ದುಕೊಳ್ಳಿ. ಮಾದ ಕೇಳಿದರೆ ನಾನು ಹೇಳಿದೆ ಅಂತ ಹೇಳಿ' ಅಂತ ಹೇಳಿದ. ತೋಟಕ್ಕೆ ಬಂದು ನಿಮ್ಮ ಗುಡಿಸಲತ್ತ ಬಂದೆ. ಒಳಗೆ ಮಾದ ಗೊರಕೆ ಹೊಡೆಯುತ್ತ ಮಲಗಿದ್ದ. ಅಲ್ಲಿ ನೀನೂ ಇರಲಿಲ್ಲ."— ಸುಳ್ಳಿನ ಮುಸುಕಿನಲ್ಲಿ ತನ್ನ ಕೃತ್ಯವನ್ನು ಸರಿಕಾಣುವಂತೆ ಮಾಡಿ ಹೇಳಿದ ವಿಶ್ವನಾಥ.

ಈ ಮಾತನ್ನು ನಂಬದಿದ್ದರೂ ಸುಮ್ಮನಿರುತ್ತಿದ್ದಳು ಚೆನ್ನಿ; ಈಗ ನಂಬಿದಳು. ಮಾದ ನಿಜವಾಗಿಯೂ ಮಲಗಿದ್ದ; ಸ್ವಲ್ಪಕಾಲ ಹಿಂದೆ ತಾನೂ ಗುಡಿಸಿಲ ಬಳಿ ಇರಲಿಲ್ಲ.

"ಬರ್ತೀನೆ" ಎಂದು ಹೇಳಿ ವಿಶ್ವನಾಥ ಬಾಳೆಯೆಲೆಯನ್ನು ತೆಗೆದು ಕೊಂಡು ಮನೆಯ ಕಡೆ ಹೊರಟ.

ಹುತ್ತದಿಂದ ತಲೆ ಹೊರಹಾಕಿ ಮತ್ತೆ ಒಳಸರಿದ ಹಾವಿನಂತೆ, ಅವನ ಆಸೆ ಹೃದಯದಲ್ಲಿಯೆ ಅಡಗಿ ಉಳಿಯಿತು.

೩೪

ಹಿಂದೊಮ್ಮೆ ಕೃಷ್ಣಪ್ಪನವರು ನಂಜನಗೂಡಿಗೆ ಯಾತ್ರೆ ಬೆಳಸಿದ್ದಾಗ ನರಸಮ್ಮ ಕಾವೇರಮ್ಮನನ್ನೂ ಆಹ್ವಾನಿಸಿ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದರು. ಈ ಸಲ ಕರೆಯಲೇ ಇಲ್ಲ. ನಮಗೆ ಒಬ್ಬರು ಬೇಡವಾಗುತ್ತ ಬಂದರೆ ಆ ಬೇಡದವರು ಎನ್ನಿಸಿಕೊಂಡವರು ಮಾಡಿದ ಒಂದೊಂದು ಕಾರ್ಯವೂ— ಅದರ ಹಿಂದೆ ಯಾವ ದುರುದ್ದೇಶ ಇಲ್ಲದಿದ್ದರೂ— ಒಂದು ಅಪರಾಧವಾಗಿ ಭಾಸವಾಗುತ್ತದೆ. ಈ ಸಂದರ್ಭದಲ್ಲೂ ಹಾಗೆಯೇ ಆಯಿತು. ಅವರು ಅತ್ತ ಪ್ರಯಾಣ ಹೊರಟಕೂಡಲೆ ಇತ್ತ ಕಾವೇರಮ್ಮ ನಂಜುಂಡ ಶಾಸ್ತ್ರಿಗಳ ಮನೆಗೆ ಬಂದು ಅವರ ತಾಯಿ, ಹೆಂಡತಿಯ ಕೂಡ ಅದು ಇದು ಮಾತಾಡುತ್ತ ಸುಂದರಮೂರ್ತಿಯ ವಿಚಾರ

ತೆಗೆದಿದ್ದರು. ಅವನ 'ಅನಾಚಾರ' ಮನೆಯ 'ಅನಾಚಾರ', ಕೃಷ್ಣಪ್ಪನವರೂ ನರಸಮ್ಮನವರೂ ಜಾತಿಯ ಕಟ್ಟು ಬಿಟ್ಟವರು ಎಂಬ ಸರ್ವಾನುಮತದ ತೀರ್ಮಾನಕ್ಕೆ ಆ ಮೂವರು ಹೆಂಗಸರೂ ಬಂದಿದ್ದರು. ಅಲ್ಲಿಂದ ಮಾತು ಸಹಜವಾಗಿ ಇವರ ಗೌರಿಯ ಮದುವೆ, ಅವರ ಕಮಲೆಯ ಮದುವೆ—ಈ ವಿಚಾರವಿಮರ್ಶೆಯಲ್ಲಿ ತೊಡಗಿತು. ಕುಲಗೆಟ್ಟ ಮನೆಗೆ ಹೆಣ್ಣು ಕೊಡುವುದಿಲ್ಲವೆಂದು ಪಾರ್ವತಮ್ಮನವರು ಘಂಟಾಘೋಷವಾಗಿ ಸಾರಿದ್ದರು; ಕಾವೇರಮ್ಮನೂ ಅದೇ ಮತವನ್ನು ಪ್ರತಿಧ್ವನಿಸಿದರು ಸುಂದರಮೂರ್ತಿ ಕಾವೇರಮ್ಮನ ದೃಷ್ಟಿಯಿಂದಲೂ ಅವನ ತಮ್ಮ ಶಾಮಿ ಪಾರ್ವತಮ್ಮನವರ ದೃಷ್ಟಿಯಿಂದಲೂ ಸಂಪೂರ್ಣವಾಗಿ ಮರೆಯಾದರು. ಗೌರಿಯ ಮದುವೆ ಹೇಗೂ ಇನ್ನು ಒಂದೆರಡು ವರ್ಷ ತಡೆಯುವುದಾಗಿದ್ದುದರಿಂದ, ಸರಿಯಾದ ಕಡೆಯಿಂದ ಹೆಣ್ಣು ಬಂದರೆ ವಿಶ್ವನಾಥನ ಮದುವೆ ಬೇಗನೆ ಆಗಿಬಿಡಬೇಕೆಂದೂ ಅದಾದಕೂಡಲೆ ಗೌರಿಯ ಮದುವೆಯನ್ನೂ ಮಾಡಬೇಕೆಂದು ಪಾರ್ವತಮ್ಮನವರು ನುಡಿದರು ; ಕಾವೇರಮ್ಮ ಸಂದರ್ಭ ಸರಿಯೆಂದು ಭಾವಿಸಿ ತಮ್ಮ ಕಮಲೆಯ ಮದುವೆಯ ಮಾತನ್ನು ಮುಂದೊತ್ತಿ, ವಿಶ್ವನಾಥನಿಗೆ ಕಮಲೆಯನ್ನು ಏಕೆ ತಂದುಕೊಳ್ಳಬಾರದೆಂದು ಪತಿಯ ಸಲಹೆ ಸೂಚನೆಗಳಿಲ್ಲದೆ ಕೇಳಿಯೇ ಬಿಟ್ಟರು. ಅವನಿಗೂ ಕಮಲೆಗೂ ವರಸಾಮ್ಯ ಬಹುಚೆನ್ನಾಗುವುದೆಂದು ಪಾರ್ವತಮ್ಮ ತಮ್ಮ ನಿಶ್ಚಿತಾಭಿಪ್ರಾಯ ಕೊಟ್ಟರು. ಅಂದಿನ ರಾತ್ರಿ ಈ ಮಾತು ಹೆಂಡತಿಯಿಂದ ನಂಜುಂಡಶಾಸ್ತ್ರಿಗಳ ಕಿವಿಯನ್ನೂ ಮುಟ್ಟಿತು. ಅವರು ದೈವಾನುಕೂಲವಿದ್ದರೆ ಆಗಲಿ ಎಂದಿದ್ದರು. ಮೈಲಾರಯ್ಯನವರ ಭವಿಷ್ಯ ಸಂಬಂಧದ ಪೀಠಿಕೆಯೋ ಎನ್ನುವಂತೆ ಅವರಿಗೆ ನಂಜುಂಡಶಾಸ್ತ್ರಿಗಳಿಂದ ನಿಮಂತ್ರಣವೂ ಹೋಯಿತು. ಅತ್ತ ಕಾವೇರಮ್ಮ ತನ್ನ ಪತಿಯ ಕಿವಿಯನ್ನು ಚೆನ್ನಾಗಿ ನುಲಿದಿದ್ದರು. ಮೈಲಾರಯ್ಯನವರು ನಿಮಂತ್ರಣವನ್ನು ಒಪ್ಪಿಕೊಂಡು ಬಂದಿದ್ದರು. ನಂಜುಂಡಶಾಸ್ತ್ರಿಗಳ ನಿಮಂತ್ರಣ ದೊಡ್ಡ ಗೌರವ ಎಂದು ಕಾವೇರಮ್ಮನ ಎಣಿಕೆ; ಒಪ್ಪದೆಹೋದ ಗಂಡನನ್ನು ಒಪ್ಪಿಸಿದ್ದಳಾಕೆ. ಸುಂದರಮೂರ್ತಿಗೆ ಕಮಲೆಯನ್ನು ಕೊಡವುದೆಂದು ಈ ಮುನ್ನ ಗಂಡಹೆಂಡಿರಿಬ್ಬರೂ ಒಪ್ಪಿದ್ದರಷ್ಟೆ. ಈಗ ಇದ್ದಕ್ಕಿದ್ದಹಾಗೆ ಕಾವೇರಮ್ಮನಿಗೆ ಬ್ರಾಹ್ಮಣಿಕೆಯ ಪೈತ್ಯ ಹೆಚ್ಚಾಗಿ ಆ ನಿರ್ಧಾರ ಬದಲಾಯಿತು. “ ಸುಂದರ

ಮೂರ್ತಿಗೇ ನೀವು ಕಮಲೆಯನ್ನು ಕೊಡಬೇಕೆಂದು ಹಟ ಹಿಡಿದರೆ ನಾನು ಬಾವಿಗೆ ಬೀಳುತ್ತೇನೆ'' ಎಂದು ಬೆದರಿಕೆ ಹಾಕಿದ್ದರು ಕಾವೇರಮ್ಮ. ಕನ್ಯಾ ಪಿತೃವೂ ಸಾಧುಪ್ರಾಣಿಯೂ ಜಡಪ್ರಕೃತಿಯವರೂ ಆದ ವೈಲಾರಯ್ಯ ಹೆಂಡತಿಯ ಮಾತಿಗೆ ಹ್ಞೂಗುಟ್ಟಿದರು.

ಬ್ರಾಹ್ಮಣರ ಊಟವೆಲ್ಲ ಮುಗಿದಮೇಲೆ ವೈಲಾರಯ್ಯನವರು ಹೊರಡ ಬೇಕು, ಆಗ ನಂಜುಂಡಶಾಸ್ತ್ರಿಗಳು "ಶುಭಕಾರ್ಯದ ಪ್ರಸ್ತಾಪ ಈಗ ಬೇಡ. ಇನ್ನೊಂದು ದಿನ ಮಾತಾಡೋಣ" ಎಂದು ಹೇಳಿದರು. ವೈಲಾ ರಯ್ಯನವರು ಹೊರಟರು. ವಿಶ್ವನಾಥನ ಕಿವಿಯ ಮೇಲೆ ಇಷ್ಟೇ ಮಾತು ಬಿದ್ದಿತೇ ಹೊರತಾಗಿ, ಹೆಂಗಸರ ಗುಸುಗುಸು ಪಿಸಪಿಸ ಸೋಕಿರಲಿಲ್ಲ. ತಾನು ಕಮಲೆಯ ಕೈಹಿಡಿಯುವ ಕನಸನ್ನೂ ಅವನು ಕಂಡಿರಲಿಲ್ಲ.

೩೫

ಆದರೆ ಅಂದಿನ ರಾತ್ರಿ ಅವನು ಚೆನ್ನಿಯ ಕನಸು ಕಂಡ.

ವಿಶ್ವನಾಥ ವೈದಿಕರ ಮನೆಯವನು, ಸಂಧ್ಯಾವಂದನೆ ಮಾಡುತ್ತಿದ್ದ, ಕ್ರಾಪು ಬಿಟ್ಟಿರಲಿಲ್ಲ, ವಿಭೂತಿ ಗಂಧಾಕ್ಷತೆ ಇಡುತ್ತಿದ್ದ — ಇವೆಲ್ಲ ದಿಟ. ಆದರೆ, ಇತರ ಯುವಕರಂತೆ ಅವನೂ ಪ್ರಾಯಕ್ಕೆ ಬಂದವನು; ಆಧುನಿಕ ವಿದ್ಯೆ ಕಲಿಯುತ್ತ ಇದ್ದವನು; ಇಂಗ್ಲಿಷ್ ಸಾಹಿತ್ಯದ 'ರೊಮಾನ್ಸ್' ಪ್ರಪಂಚದ ಸೊಗಸನ್ನು ಸವಿದು, ನಮ್ಮ ಜೀವನದಲ್ಲೂ ಇದು ಇದ್ದರೆ ಚೆನ್ನಾದೀತೇ ಎಂದು ಬಯಸಿದ್ದವನು; ತಾನು ಶುಷ್ಕವೈದಿಕ ಗೊಡ್ಡಾಗಿ ಹುಟ್ಟಿದ್ದು ತಪ್ಪಾಯಿತು ಎಂದು ಒಮ್ಮೊಮ್ಮೆ ಮರುಗಿದ್ದವನು; ತಾನು ಮದುವೆಯಾದಂದು ಯಾವ ಚೆಲುವೆಯನ್ನು ಕೈಹಿಡಿಯುವೆನೋ, ತನ್ನ ತಂದೆ ಏಕೆ ಇನ್ನೂ ತನ್ನ ಮದುವೆಯ ಯೋಚನೆಯನ್ನು ಮಾಡಿಲ್ಲ, ಬಂದ ಒಂದೆರಡು ಹೆಣ್ಣನ್ನೂ ನಿರಾಕರಿಸಿ ಬಿಟ್ಟರೇಕೆ ಎಂದು ಒಳಗೊಳಗೇ ಕುದಿ ಯುತ್ತಿದ್ದವನು. ದಿನದಿನಕ್ಕೆ ಅವನಲ್ಲಿ ಪ್ರೇಮದರ್ಶನಕ್ಕಿಂತ ಹೆಚ್ಚಾಗಿ ಕಾಮಕಲ್ಪನೆಯೇ ಮೇಲುಗೈಯಾಗುತ್ತಿತ್ತು. ಚೆಲುವೆ ಚೆನ್ನಿಯನ್ನು ಕಂಡಾಗ ಅವನ ಈ ದೃಷ್ಟಿ ಎವೆ ತೆರೆಯಿತು. ಕನಸಿನಲ್ಲಿ ಚೆನ್ನಿಯೊಡನೆ ಸರಸವಾಡಿದನು, ರಮಿಸಿದನು.

ಮಾರನೆಯ ಸಂಜೆ ತಾನು ಕಂಡ ಕನಸನ್ನು ನನಸಾಗಿಸಬೇಕೆಂದು ಕಾತರಗೊಂಡು ತೋಟದ ಕಡೆ ಧಾವಿಸಿದನು. ಇತ್ತ ಈ ಪವಿತ್ರಮೂರ್ತಿಗೆ ಕಮಲೆಯನ್ನು ಕೊಡುವ ಪ್ರಸ್ತಾಪಮಾಡಲು ವೈಲಾರಯ್ಯನವರು ನಂಜುಂಡಶಾಸ್ತ್ರಿಗಳ ಮನೆಗೆ ಬಂದು ಜಗಲಿಯ ಮೇಲೆ ಕುಳಿತಿದ್ದರು

೩೬

ಮಾದ ಕುಡಿಯುವುದನ್ನು ಕಂಡರೆ ಕೃಷ್ಣಪ್ಪನವರಿಗೆ ಆಗುತ್ತಿರಲಿಲ್ಲ. ಹಿಂದೆ ಎಷ್ಟೋ ವೇಳೆ ಅವನು ಕುಡಿದುಬಿದ್ದಿದ್ದುದನ್ನು ಕಂಡವೇಳೆ, ಅವನನ್ನು ಚೆನ್ನಾಗಿ ಬೈದಿದ್ದರು. ಕುಡಿದ ಮಾರನೆಯ ದಿನ ಅವನ ಬುದ್ಧಿ ನೆಟ್ಟಗಿದ್ದಾಗ ಅವನಿಗೆ ಮೃದುವಾಗಿ ಉಪದೇಶಮಾಡುತ್ತಿದ್ದರು. ಊರಿನ ಜನ, ದೇಶದ ಜನ, ಕುಡಿಯುವುದು ಕೆಟ್ಟದ್ದು; ಆದ್ದರಿಂದ ಮಾದನೂ ಕುಡಿಯಕೂಡದು ಎಂಬ ಪ್ರಚಾರಬುದ್ಧಿಯಿಂದ ಅವರು ಹಾಗೆ ಹೇಳುತ್ತಿರಲಿಲ್ಲ. ತಮ್ಮ ಮಾದ ಕುಡಿದು ತನ್ನ ದೇಹ ಕೆಡಿಸಿಕೊಳ್ಳಬಾರದೆಂಬುದಷ್ಟೆ ಅವರ ಉದ್ದೇಶ. ಅವರು ಬೈದು ಉಪದೇಶಮಾಡಿದಾಗಲೆಲ್ಲ "ಇದೇ ಕಡೇ ಸಲ ಬುದ್ಧಿ. ಇನ್ನ ಕುಡಿಯಾಕಿಲ್ಲ. ಚೆನ್ನಿ ಮೇಗಲ ಆಣೆ, ನಿಮ್ಮ ಪಾದದ ಆಣೆ" ಎಂದು ಅವರ ಕಾಲಿಗೆ ಬೀಳುತ್ತಿದ್ದನು. ಈ 'ಕಡೆಯ ಸಲ' ಎಷ್ಟೋ ಆಗಿ ಹೋಗಿತ್ತು. "ಎಂದೋ ಒಂದು ದಿನ ನೀನು ಕುಡಿದು ಬಂದು ಕೊಳದಲ್ಲಿ ಮುಗುಚಿಕೊಳ್ಳುತ್ತೀಯ. ಜೀವದ ಮೇಲೆ ಆಸೆ ಇದ್ದರೆ ಕುಡಿಯುವುದನ್ನ ಬಿಟ್ಟುಬಿಡು" ಎಂದು ಅನೇಕ ಸಲ ಕೃಷ್ಣಪ್ಪನವರು ಕೊಟ್ಟಿದ್ದ ಎಚ್ಚರಿಕೆ ಅವನ ಮನಸ್ಸಿನಲ್ಲಿ ನಾಟಿತ್ತು: ತಾನು ಹಾಗೆ ಕೊಳಕ್ಕೆ ಬಿದ್ದು ಸತ್ತರೆ ಚೆನ್ನಿಯ ಗತಿ ಏನು ಎನ್ನುವುದು ಒಂದು ಯೋಚನೆ; ಅಲ್ಲದೆ, ಬದುಕಿದ್ದರೆ ಆಗೊಮ್ಮೆ ಈಗೊಮ್ಮೆಯಾದರೂ ದಣಿಗೆ ಕಾಣದಂತೆ ಕದ್ದು ಕುಡಿಯ ಬಹುದು; ಸತ್ತರೆ ಕುಡಿಯುವುದಕ್ಕಿಲ್ಲದೆ ಹೋಗುತ್ತದೆ; ಕುಡಿದು ಸತ್ತರೂ ಚಿಂತೆಯಿಲ್ಲ, ಅಮಲಿನಲ್ಲಿ ಕೊಳದ ಪಾಲಾಗಿ ಸಾಯಕೂಡದು. ಇದು ಅವನ ನಿರ್ಧಾರ. ಹಾಗೆ ನಿರ್ಧರಿಸಿದಂದಿನಿಂದ, ಅವನು ಹೆಂಡದಂಗಡಿಯಿಂದ ಕುಡಿದು ಬರದೆ, ಒಂದು ದೊಡ್ಡ ಶೀಸೆಯಲ್ಲಿ ಹೆಂಡ ತಂದಿಟ್ಟುಕೊಂಡು, ಚೆನ್ನಿಯು ಮಲಗಿದ ಮೇಲೆ ತೃಪ್ತಿಯಾಗುವ ವರೆಗೆ ಕುಡಿದು, ಪದಗಳನ್ನು ಹೇಳಿ

ಕೊಳ್ಳುತ್ತಾ, ಚೆನ್ನಿಗೆ ಎಚ್ಚರವಾಗಬಾರದೆಂದು ಹರಿಬಿಟ್ಟು ಒಂದು ಡಬ್ಬವನ್ನೂ ತಗಡಿನ ತುಂಡನ್ನೂ ತೆಗೆದುಕೊಂಡು ಹರೆಯಂತೆ ಬಾರಿಸುತ್ತ, ಸ್ವರ್ಗಸುಖವನ್ನನುಭವಿಸುತ್ತಿದ್ದನು. ಇದು ಗಲಭೆ ಅಲ್ಲ ಎಂದು ಅವನ ಎಣಿಕೆ. ಈ ಗಲಭೆಯಿಂದ ಚೆನ್ನಿಗೆ ಎಚ್ಚರವಾಗಿ ಅವಳು ಅವನು ಮಲಗುವ ವರೆಗೂ ಮಲಗದೆ ಅವನನ್ನು ಕಾದು ಕುಳ್ಳಿರುತ್ತಿದ್ದಳು.

ಕೃಷ್ಣಪ್ಪನವರು ಊರಿಗೆ ಹೋದ ಸಂಗತಿ ಮಾದನಿಗೂ ತಿಳಿದಿತ್ತು. ಈಗ ಎರಡು ತಿಂಗಳಿಂದ ಹೆಂಡದ ವಾಸನೆಯನ್ನು ಕಾಣದೆ ಅವನ ಜೀವಕ್ಕೆ ತುಂಬ ಕೊರತೆಯೆನಿಸಿತ್ತು. ಅವನು ಬೆಳಗ್ಗೆಯೇ ಹೆಂಡದಂಗಡಿಗೆ ಹೋಗಿ, ಹೆಂಡ ತಂದಿಟ್ಟುಕೊಂಡಿದ್ದು, ಸಂಜೆಯಾದ ಕೂಡಲೆ ಕುಡಿದು ಗುಡಿಸಿಲ ಚಕ್ರವರ್ತಿಯಾದ. ಚೆನ್ನಿ ತಾನೆ ಹಿಟ್ಟಿನ ಮುದ್ದೆ ಬೇಯಹಾಕಿ, ಗುಡಿಸಿಲ ಹೊರಗೆ ಕುಳಿತಿದ್ದಳು.

ವಿಶ್ವನಾಥ ತೋಟಕ್ಕೆ ಬಂದು, ಗುಡಿಸಲನ್ನು ಸಮೀಪಿಸಿದ. ಹೊರಗೆಲ್ಲ ಸಂಜೆಗೆಂಪು ಹರಡಿದ್ದರೂ ತೋಟದಲ್ಲಿ ಆಗಲೇ ನಸುಗತ್ತಲೆ. ಈ ನಸುಗತ್ತಲೆಯಲ್ಲಿ ಚೆನ್ನಿಯ ರೂಪ ಅಸ್ಪಷ್ಟ ಸೌಂದರ್ಯದಿಂದೊಡಗೂಡಿ ವಿಶ್ವನಾಥನಿಗೆ ಹುಚ್ಚು ಹಿಡಿಸಿತು. ಕ್ಷಣಕ್ಷಣಕ್ಕೆ ಹೆಚ್ಚುತ್ತಿದ್ದ ನಸುಗತ್ತಲೆ ಅವನಿಗೆ ಹೆಚ್ಚಿನ ಪ್ರೋತ್ಸಾಹ ಕೊಡುತ್ತಿತ್ತು.

ಮಾದನ ಹಾಡು ಕೆಲೆತ ಅವನು ಕುಡಿದಿದ್ದಾನೆಂಬ ಸಂದೇಹವನ್ನು ಹುಟ್ಟಿಸಿತು. ಈ ಸಂಗತಿಯೂ ಪ್ರೋತ್ಸಾಹ ಕೊಟ್ಟಿತು, ಅವನ ಧೃಷ್ಟತೆಯನ್ನು ಬಲಪಡಿಸಿತು. ಒಟ್ಟಿನಲ್ಲಿ ಸನ್ನಿವೇಶ ಅವನಿಗೆ ಅನುಕೂಲವಾಗಿತ್ತು.

ಮಾದನ ಇರವು ಅವನ ಕಾತರಕ್ಕೆ ಕಡಿವಾಣ ಹಾಕಿತ್ತು. ಸಹಜವಾದ ರೀತಿಯಲ್ಲಿ ಮಾತಾಡಿಸಲು ಮೊದಲುಮಾಡಿದ :

"ಚೆನ್ನೀ."

ಏನೋ ಯೋಚನೆಯಲ್ಲಿದ್ದ ಚೆನ್ನಿ ಗಾಬರಿಯಿಂದ ಮೊಗವೆತ್ತಿ, "ಅದ್ಯಾರು ?" ಎಂದು ಕೇಳಿ, ಎದ್ದು ನಿಂತಳು.

"ನಾನು."

ವಿಶ್ವನಾಥನ ಮುಖಪರಿಚಯವಿತ್ತೇ ಹೊರತು, ಅವನ ಧ್ವನಿ ಪರಿಚಯವಿದ್ದಾಗಿರಲಿಲ್ಲ. ಆದ್ದರಿಂದ ಮತ್ತೆ ಕೇಳಿದಳು :

“ ಆದ್ಯಾರು ಅಂದೆ ? ”

“ ನಾನು, ವಿಶ್ವನಾಥ.”

“ ಓ, ವಿಸ್ವಪ್ನೋರ. ಯಾರೋ ಅಂತಿದ್ದೆ.”

ಅಮಲಿನ ಸುಖಸೋಪಾನದ ತುತ್ತತುದಿಯ ಮೆಟ್ಟಲಿನಲ್ಲಿದ್ದ ಮಾದನಿಗೆ ಈ ಮಾತು ಕೇಳಿಬಂದರೂ ಅವನು ವಾಸ್ತವಪ್ರಪಂಚಕ್ಕೆ ಇಳಿದು ಬರಲು ಸಿದ್ಧನಾಗಿರಲಿಲ್ಲ.

“ ಏನು, ನಿಮ್ಮಪ್ಪ ಕುಡಿದು ಬಿದ್ದಿದಾನೆ ಅಂತ ಕಾಣುತ್ತೆ? ” ಎಂದು ವಿಶ್ವನಾಥ ದನಿ ತಗ್ಗಿಸಿ ಕೇಳಿದ, ತನ್ನ ಸಂದೇಹವನ್ನು ದೃಢಪಡಿಸಿಕೊಳ್ಳುವುದಕ್ಕಾಗಿ.

“ ಬುಟ್ಟಿದ್ದ. ಅದೇನೊ ಮತ್ತೆ ಸುರು ಮಾಡಿದ್ನೆ. ಎಳನೀರು ಮುಟ್ಟಾಕಿಲ್ಲ. ಯೆಂಡ ಅಂದ್ರೆ ಬಲೆ ರುಚಿ ಅವಂಗೆ. ಅದೇನು ಕತ್ಲಾಗೊ ಹೊತ್ನಲ್ಲಿ ಬಂದ್ರಲ್ಲ ? ”

ಹೇಗೆ ಕೈತುಡುಕಿ ಚೆನ್ನಿಯನ್ನು ತನ್ನ ತೋಳ್ಸೆರೆಗೆ ಸಿಲುಕಿಸಿಕೊಳ್ಳುವುದು ಎಂದು ಆಲೋಚಿಸುತ್ತಿದ್ದ ವಿಶ್ವನಾಥನಿಗೆ ‘ ಎಳ-ನೀರು ’ ಎಂದು ಹೇಳಿದ ಕೂಡಲೆ, ಬಲೆ ನೆಯ್ಯುತ್ತ ಆಯ ತಪ್ಪಿದ ಜೇಡನಿಗೆ ಎಳೆ ಸಿಕ್ಕಿದಂತಾಯಿತು.

“ ನಿನ್ನೆ ಬಾಳೆಯೆಲೆ ಕುಯ್ದು, ಎಳ-ನೀರು ಕೆಡವಿದೆನಲ್ಲ, ಆ ಮರದ ಕೆಳಗೆ ನನ್ನ ಚಾಕು ಮರೆತು ಹೋಯಿತು. ಅದರ ನೆನಪಾಯ್ತು. ತಗೊಂಡು ಹೋಗೋಣ ಅಂತ ಬಂದೆ. ಕತ್ತಲೆ ಆಗ್ತಾ ಇದೆ. ಆ ಮರ ಯಾವುದೋ ಗೊತ್ತಾಗವೊಲ್ದು. ಒಸಿ ತೋರೀಯಾ ? ”

“ ಹಿಂಗೇ ಬನ್ನಿ. ಆ ಮೂಲೆ ಮರ ” ಎಂದು ಹೇಳಿ ಚೆನ್ನಿ ಮುಂದೆ ನಡೆದುಹೋದಳು. ವಿಶ್ವನಾಥ ಹಿಂಬಾಲಿಸಿದ. ಚೆನ್ನಿಗೆ ತೋಟದ ಪ್ರತಿಯೊಂದು ಮರ ಗಿಡ ಎಲ್ಲವೂ ಚೆನ್ನಾಗಿ ಗೊತ್ತು. ಆ ಮರ ಗಿಡಗಳಲ್ಲದೆ ಬೇರೆ ಒಡನಾಡಿಗಳೇ ಇರಲಿಲ್ಲ ಅವಳಿಗೆ. ವಿಶ್ವನಾಥ ಯಾವ ಮರದಿಂದ ಹಿಂದಿನ ಬೆಳಗ್ಗೆ ಎಳ-ನೀರು ಕೆಡವಿದ್ದನೋ ಅದನ್ನು ನಿಮಿಷದಲ್ಲಿ ತಲುಪಿದಳು.

ಮರದ ಕೆಳಗೆ ಚಾಕುವನ್ನು ಹುಡುಕಾಡುವವನಂತೆ ವಿಶ್ವನಾಥ ಸ್ವಲ್ಪ ನಟಿಸಿ, “ ಹಾಳಾದ್ದು ಎಲ್ಲಿ ಹೋಯ್ತೊ. ಹೋದರೆ ಹೋಗಲಿ. ಬೆಳಗ್ಗೆ

ಬಂದು ಹುಡುಕಿದರಾಯ್ತು '' ಎಂದು ನಿರಾಶನಾದವನಂತೆ ನುಡಿದ. '' ಎಲ್ಲಿ ಹೋಗ್ತದೆ. ಇಲ್ಲೆ ಬಿದ್ದಿರಬೇಕು " ಚೆನ್ನಿ ಬಾಗಿ ಬಾಗಿ ನೋಡುತ್ತ ಇಲ್ಲದ ಚಾಕುವನ್ನು ಹುಡುಕತೊಡಗಿದಳು.

ಪ್ರೀತಿಯ ಮಾತುಗಳಿಂದ ಒಂದು ಪೀಠಿಕೆ ಹಾಕಿ, ಬಳಿಕ ಚೆನ್ನಿ ಯೊಡನೆ ನಲಿಯಬೇಕೆಂದು ಮನಸ್ಸು ಮಾಡಿದ್ದ ವಿಶ್ವನಾಥ. ಇದುವರೆಗೆ ಆಡಿದ ಅವಳ ಸರಳ ಗ್ರಾಮ್ಯಭಾಷೆಯನ್ನು ಕೇಳಿ ತನ್ನ ಪ್ರೀತಿಯ ಮಾತು ಗಳು ಅವಳಿಗೆ ಅರ್ಥವಾಗವು ಎಂದು ಬಗೆದು, ಪ್ರೀತಿಯನ್ನು ತೋರಿಸುವ ನಿರ್ಧಾರ ಮಾಡಿ, ಅವನು ಹಿಂದಿನಿಂದ ಹೋಗಿ ಅವಳನ್ನು ಬಲವಾಗಿ ಅಪ್ಪಿ ಕೊಂಡನು.

'' ಅಯ್ಯೋ, ಅಪ್ಪಾ ! ಮಾದ, ಮಾದಾ ! ಓಬವ್ವನ ಪಿಶಾಚಿ ಹಿಡ ಕೊಂಡ್ತು, ಬಿಡ್ಸು ಬಾ '' ಎಂದು ಚೆನ್ನಿ ಬಲವಾಗಿ ಚೀರಿದಳು. ಈ ಹೊತ್ತಿಗೆ ಮೈಮರೆತಿದ್ದ ಮಾದನಿಗೆ ಕೂಗು ಕೇಳಲಿಲ್ಲ.

'' ನಾನು, ಚೆನ್ನಿ " ಎಂದು ವಿಶ್ವನಾಥ ಇನ್ನೂ ಬಿಗಿಯಪ್ಪಿಕೊಂಡೆ ನಗುತ್ತ ನುಡಿದನು.

'' ನೀನಾ ! ಅದ್ಯಾಕೆ ಹಿಂಗೆ ಹಿಡ್ಕೊಂಡೆ ? ಬುಡು ನನ್ನ " ಎಂದು ಗಟ್ಟಿಯಾಗಿ ಕೂಗಿ ಹೇಳಿದಳು. ಅವಳ ಏಕವಚನದ ಸಂಬೋಧನೆಯಲ್ಲಿಯೂ ಧ್ವನಿಯಲ್ಲೂ ಅಸಮಾಧಾನ ತುಂಬ ಅಡಗಿತ್ತು.

'' ಹೆದರಿಕೋಬೇಡ. ನಿನ್ನ ಕೂಡ ಒಸಿ ಸರಸ ಆಡೋಣಾ ಅಂತ.... " ನಗುತ್ತಲೇ ನುಡಿದ ವಿಶ್ವನಾಥ.

'' ನೀನು ಬುಡದೆ ಹೋದ್ರೆ ಹುಯ್ಲು ಹಾಕ್ತೇನಿ. ಆಚೇ ತೋಟದ ಕಾವಲು ಬರ್ತಾನೆ. ಸುಮ್ನೆ ಬುಟ್ಬು ಹೋಗು.'' ವಿಶ್ವನಾಥನ ಚೇಷ್ಟೆ ಈಗ ಚೆನ್ನಿಗೆ ಅರ್ಥವಾಯಿತು; ಅವನ ಗಂಡುತನದ ಪುಂಡಾಟಿಕೆ ಅವಳ ಹೊಮ್ಮುತ್ತಿದ್ದ ಹೆಣ್ಣುತನಕ್ಕೆ ಸಂಪೂರ್ಣವಾಗಿ ಅರಿವಾಯಿತು.

ವಿಶ್ವನಾಥ ಅಷ್ಟಕ್ಕೆ ಸುಮ್ಮನಾಗದೆ ಅವಳ ಕೆನ್ನೆ ತುಟಿಗಳಿಗೆ ಮುತ್ತಿಡ ಹೋದ ಚೆನ್ನಿಗೆ ರೋಷವುಕ್ಕಿತು. " ಅಯ್ಯೋ ಪಿಶಾಚಿ " ಎಂದು ಅವನ ಕೆನ್ನೆಯನ್ನು ಚೆನ್ನಾಗಿ ಪರಚಿದಳು, ಬಲವಾಗಿ ಹಿಡಿದಿದ್ದ ಮುಂಗೈಯನ್ನು ಕಚ್ಚಿದಳು.

ಅಷ್ಟು ಹೊತ್ತಿಗೆ ಪಕ್ಕದ ತೋಟದ ಕಾವಲ ಮಾಚಯ್ಯ "ಮಾದ ಮಾದ! ಚೆನ್ನೀ ಚೆನ್ನೀ! ಅದೇನು?''ಎಂದು ಕೂಗಿಕೊಂಡು ಓಡಿಬಂದ.

ವಿಶ್ವನಾಥನ ಕೆನ್ನೆ ಕೈಗಳು ಚುರಚುರಗುಟ್ಟುತ್ತಿದ್ದುವು. ಅವನು ಈ ಹುಲಿಮರಿಯನ್ನು ಒಲಿಸಿಕೊಳ್ಳುವುದು ತನಗಾಗದು ಎಂದು ತಿಳಿದು ಹಿಂದಿರುಗಬೇಕೆಂದು ಮನಸ್ಸು ಮಾಡಿದ್ದನು. ಮಾಚಯ್ಯನ ಧ್ವನಿ ಕೇಳಿ ಅವನು ಮಾನ ಉಳಿಸಿಕೊಳ್ಳುವುದಕ್ಕಾಗಿ ಓಡಿ ಮರೆಯಾದನು.

ಚೆನ್ನಿ ಗುಡಿಸಿಲಿಡೆಗೆ ಸರ್ರನೆ ಹಿಂದಿರುಗಿದಳು. "ಏನು ಸಮಾಚಾರ? ಯಾಕೆ ಕೂಗಿಕೊಂಡೆ?" ಎಂದು ಮಾಚಯ್ಯ ಕೇಳಿದ ಪ್ರಶ್ನೆಗೆ, "ಇಲ್ಲಿ ತಿರಗಾಡ್ತಾ ಇಡೆ. ಓಬವ್ವನ ಪಿಶಾಚ ಕಂಡ ಹಂಗಾಯ್ತು'' ಎಂದು ಅವಳು ಹೇಳಿದಳು. "ನಾನು ಇಲ್ಲಿ ಒರ್ತಾ ಇದ್ದಾಗ ಅದೇನೋ ಸರಸರ ಅಂದ ಹಾಗಾಯ್ತು. ನಾ ಬಂದ ಮ್ಯಾಗೆ ಅದ್ಯಾವ ಪಿಶಾಚ ನಿಂತೀತು. ಮಾದ ಕುಡಿದು ಬಿದ್ದಿದಾನೆ ಅಂತ ಕಾಣ್ತದೆ. ಏನಾರ ಅಗ್ಗಿ, ದೀಪ ಹಚ್ಚಿಸಿ ಗುಡ್ಲೊಳಕ್ಕೆ ಹೋಗವ್ವ, ಕತ್ಲಾಯ್ತು. ಏನಾರ ಹೆದರಿಕೆ ಅದ್ರೆ ಹೇಳು, ನಾ ಇಲ್ಲೆ ಮಲಗ್ತೀನಿ'' ಎಂದು ಭರವಸೆ ಕೊಟ್ಟ ಮಾಚಯ್ಯ. "ಏನು ಬೇಡ ಮಾಚಪ್ಪ, ನೀ ಹೋಗು. ನನಗೇನು ಇದು ಹೊಸದಾ?" ಎಂದು ಚೆನ್ನಿ ಧೈರ್ಯಗೊಂಡು ಹೇಳಿದ ಮೇಲೆ ಮಾಚಯ್ಯ ಹೊರಟುಹೋದ.

ಕೃಷ್ಣಪ್ಪನವರ ತೋಟದಲ್ಲಿ ಮತ್ತೆ ಓಬವ್ವನ ಪಿಶಾಚಿ ಕಾಣಿಸಿಕೊಂಡಿತ್ತೆಂಬ ಸುದ್ದಿ ಊರಿನಲ್ಲೆಲ್ಲ ಮಾರನೆಯ ದಿನವೆ ಪ್ರಸಿದ್ಧವಾಯಿತು.

ವಿಶ್ವನಾಥನ ಪೈಶಾಚ ಕೃತ್ಯವನ್ನು ಮಾತ್ರ ಚೆನ್ನಿ ಅದು ಏನು ಕಾರಣದಿಂದಲೋ ಏನೋ ಹೊರಗೆಡವಲಿಲ್ಲ. ತನ್ನ ದೆಸೆಯಿಂದ ವಿಶ್ವನಾಥನ ಮಾನ ಏಕೆ ಹೋಗಬೇಕೆಂಬ ಔದಾರ್ಯಬುದ್ಧಿ ಇದ್ದರೂ ಇದ್ದೀತು. ಅಥವಾ ತನ್ನ ಮಾನವೇ ಹೋದೀತೋ ಎಂಬ ಹೆದರಿಕೆಯೋ? ಅಂತೂ ಅವಳು ಏನೂ ಅರಿಯದ ಹೆಣ್ಣಾದರೂ ವಿವೇಕದಿಂದಲೂ ಕೂಡಿದ್ದಳೆಂಬುದಕ್ಕೆ ಸಾಕ್ಷಿಯಾಗಿತ್ತು.

೩೭

ಮೈಲಾರಯ್ಯನವರಿಗೆ ತಮ್ಮ ಮಗಳು ಕಮಲೆಯನ್ನು ಸೋದರ ಸಂಬಂಧಕ್ಕೇ ಕೊಡಬೇಕೆಂಬ ಇಷ್ಟ ಬಲವಾಗಿದ್ದರೂ ಹೆಂಡತಿಯ ಬಲ

ವಂತಕ್ಕೆ ಒಳಗಾಗಿ ನಂಜುಂಡಶಾಸ್ತ್ರಿಗಳ ಮಗ ವಿಶ್ವನಾಥನಿಗೆ ಕೊಡಲು ತೀರ್ಮಾನಿಸಿಬಿಟ್ಟರು. ವಿಶ್ವನಾಥ ಕೂಡದು ಎಂದು ಅವರು ಹಟ ಹಿಡಿದಿದ್ದರೆ, ಕಾವೇರಮ್ಮನ ಬಳಗ ಒಬ್ಬಿಬ್ಬರ ವರಗಳನ್ನು ಆಶ್ರಯಿಸಬೇಕಾಗಿತ್ತು. ಆ ವರಗಳೂ ಹಳ್ಳಿಗಾಡಿನವರೇ; ಉಡತೊಡಲು ತಕ್ಕಮಟ್ಟಿನ ಆಸ್ತಿವಂತರೆನಿಸಿದರೂ ವಿದ್ಯೆಯ ಗಂಧವೇ ಇರಲಿಲ್ಲ. ಕೃಷ್ಣಪ್ಪನವರು ಆಸ್ತಿವಂತರಾಗಿದ್ದುದೇ ಅಲ್ಲದೆ, ಸುಂದರಮೂರ್ತಿ ವಿದ್ಯಾವಂತನಾಗಿಯೂ ಇದ್ದ. ಆಸ್ತಿ, ರೂಪ, ವಿದ್ಯೆ-ಮೂರೂ ಒಂದೇ ಎಡೆಯಲ್ಲಿ ಸೇರಿದ್ದುವು; ಜೊತೆಗೆ ಸೋದರ ಸಂಬಂಧ, ಅಕ್ಕನ ಮಗ. ಗುಣಾಂಶಗಳು ಹೆಚ್ಚಾಗಿದ್ದುದರಿಂದ ಕಾವೇರಮ್ಮ ತನ್ನ ಕಡೆಯ ವರಗಳನ್ನು ಮರೆತು ಗಂಡನ ಇಷ್ಟದ ಪ್ರಕಾರ ಸುಂದರಮೂರ್ತಿಗೇ ತಮ್ಮ ಮಗಳನ್ನು ಕೊಡುವ ಹಿಗ್ಗಿನಲ್ಲೇ ಇದ್ದರು. ಆದರೆ, ಪಾರ್ವತಮ್ಮನವರ ಬೋಧನೆಯ ಪ್ರಭಾವದಿಂದ ಸುಂದರಮೂರ್ತಿಯ ನಡವಳಿಕೆ ಅವರ ದೃಷ್ಟಿಯಲ್ಲಿ ಅಬ್ರಾಹ್ಮಣಿಕೆ ಅನಾಚಾರಗಳ ಪೆಂಡಭೂತವಾಗಿ ಕಾಣತೊಡಗಿತ್ತು. ಇಂಥವನು ಕೈ ಹಿಡಿದ ಹೆಂಡತಿಯನ್ನು ತೊರೆದು, ದೇಶಸೇವೆ ದೇಶೋದ್ಧಾರ ಎಂದು ಇವೊತ್ತಲ್ಲ ನಾಳೆ ಗಾಂಧಿ ಚಳವಳಿಗೆ ಸೇರಿ,ಜೈಲಿಗೆ ಹೋಗಿ,ದೇಶ ದೇಶ ಅಲೆಯುತ್ತ, ಯಾವುದೋ ಕಡೆ ಕಂಡ ಹೆಣ್ಣನ್ನು ಕೂಡಿಕೊಂಡು ಕೈಹಿಡಿದ ಹೆಂಡತಿಯನ್ನು ಬಿಟ್ಟೆಬಿಟ್ಟರೋ? ವಿಶ್ವನಾಥ ಆಡಿದ ಕೆಲವು ಸಂಗತಿಗಳ ಆಧಾರದ ಮೇಲೆ ಪಾರ್ವತಮ್ಮನವರು ಕಟ್ಟಿದ ಸುಂದರಮೂರ್ತಿಯ ಭವಿಷ್ಯಚಿತ್ರವನ್ನು ಕಂಡು ಕಾವೇರಮ್ಮ ನಿಜವಾಗಿಯೂ ಬೆದರಿದ್ದರು ನಂಜುಂಡಶಾಸ್ತ್ರಿಗಳು ಆಸ್ತಿವಂತರಲ್ಲದಿರಬಹುದು. ಇಷ್ಟಕ್ಕೂ ಕೃಷ್ಣಪ್ಪನವರ ಆಸ್ತಿಯೆಲ್ಲ ಅವರದ್ದೇ ಅಲ್ಲ; ಅದರಲ್ಲಿ ಸ್ವಲ್ಪ ಭಾಗ ದೇಶಾಂತರ ಹೋದ ಅವರ ತಮ್ಮ ಸೂರಪ್ಪನದು. ಅವನು ಆಸ್ತಿಪಾಸ್ತಿಯೆಲ್ಲವನ್ನೂ ಬಿಟ್ಟು ದೇಶಾಂತರ ಹೋಗಿ ಹನ್ನೆರಡು ಹದಿಮೂರು ವರ್ಷಗಳ ಹತ್ತಿರ ಹತ್ತಿರಕ್ಕೆ ಬಂದಿದ್ದರೂ, ಊರಿನವರು ಹಾಗಿರಲಿ—ಕೃಷ್ಣಪ್ಪನವರೇ ಅವನನ್ನು ಸಂಪೂರ್ಣವಾಗಿ ಮರೆತಿದ್ದರೂ, ಅವನು ಎಂದಾದರೂ ಬಂದು ತನ್ನ ಭಾಗದ ಪಿತ್ರಾರ್ಜಿತ ಆಸ್ತಿಯನ್ನು ಮತ್ತೆ ಕೇಳಬಹುದು. ಇನ್ನು ಉಳಿದ ಭಾಗದ ಕೃಷ್ಣಪ್ಪನವರ ಆಸ್ತಿ-ಪಿತ್ರಾರ್ಜಿತ ಸ್ವಯಾರ್ಜಿತ ಎಲ್ಲ ಸೇರಿ— ಅಬ್ಬಬ್ಬ ಎಂದರೆ ಏಳೆಂಟು ಸಾವಿರ ರೂಪಾಯಿಗಳಷ್ಟು. ಇದರಲ್ಲಿ ಸುಂದರಮೂರ್ತಿಗೆ ಬರುವ ಆಸ್ತಿ ಅದ

ರಲ್ಲಿ ಮೂರನೆಯ ಒಂದು ಭಾಗ. ಅವನು ಇದನ್ನು ಕಳೆದರೂ ಆಯಿತು. ನಿಜವಾದ ಆಸ್ತಿ ವಿದ್ಯೆ. ಸುಂದರಮೂರ್ತಿಗಿಂತ ಹೆಚ್ಚಾಗಿ ವಿಶ್ವನಾಥನೇ ಗ್ರಾಜ್ಯುಯೇಟಾಗುವ ಸಂಭವ ಹೆಚ್ಚು. ಇನ್ನು ರೂಪ: ಗಂಡಸಿನಲ್ಲಿ ರೂಪ ಅಷ್ಟು ಗಣನೀಯವಾದದ್ದಲ್ಲ. ಮೈಲಾರಯ್ಯ ರೂಪವಂತರೆ? ಅವರನ್ನು ಕಾವೇರಮ್ಮ ಕೈಹಿಡಿದಿಲ್ಲವೆ? ಈ ಕಾರಣಗಳಿಂದ, ವಿಶ್ವನಾಥ ಕಮಲೆಗೆ ಯೋಗ್ಯನಾದ ವರ. ಇದು ಕಾವೇರಮ್ಮನವರ ವಿಚಾರಪೂರ್ವಕವಾದ ನಿರ್ಧಾರ; ಅವರ ನಿರ್ಧಾರ ಮೈಲಾರಯ್ಯನವರ ನಿರ್ಧಾರವೂ ಆಯಿತು. ಈ ನಿರ್ಧಾರವನ್ನು ಸಾಧ್ಯವಾದಷ್ಟು ಬೇಗ ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಮೈಲಾರಯ್ಯನವರು ನಂಜುಂಡಶಾಸ್ತ್ರಿಗಳ ಮನೆಯ ಜಗಲಿಯ ಮೇಲೆ ವರಾರ್ಥಿಗಳಾಗಿ ಬಂದು ಮಂಡಿಸಿದ್ದರು. ಆ ಮಾತು ಈ ಮಾತು ಮುಗಿದ ಮೇಲೆ—

"ಈ ಬೆಳಗ್ಗೆಯೇ ಗುಣಿಸಿ ನೋಡಿದೆ. ಜಾತಕ ಪ್ರಶಸ್ತವಾಗಿ ಕೂಡಿ ಬರುತ್ತೆ" ಎಂದರು ನಂಜುಂಡಶಾಸ್ತ್ರಿಗಳು, ಮುಖತುಂಬ ಮಂದಹಾಸವನ್ನು ಸೂಸುತ್ತ.

"ಸಂತೋಷ" ಎಂದು ಮೈಲಾರಯ್ಯನವರೂ ತೃಪ್ತಿಸೂಚಕವಾದ ನಗೆಯನ್ನು ಬೀರಿದರು.

"ವೈಶಾಖ ತೀರ ಹತ್ತಿರವಾಗಬಹುದು. ಜ್ಯೇಷ್ಠದಲ್ಲಿ ಒಂದು ಲಗ್ನ ನೋಡಿಬಿಡಬಹುದು." ಎಂದು ಸೂಚಿಸಿದರು, ಇವರ ಮಾತುಕತೆ ಆಲಿಸುತ್ತ ಒಳಗೆ ಬಾಗಿಲ ಬಳಿ ಕುಳಿತಿದ್ದ ಪಾರ್ವತಮ್ಮನವರು.

"ಮಾಡಬಹುದು. ಆದರೆ...."

"ಅದೇನಪ್ಪ ಆದರೆ ಅಂತೀಯ? ಅವರು ಅಷ್ಟು ದೊಡ್ಡಮನಸ್ಸು ಮಾಡಿ ಕೃಷ್ಣಪ್ಪನವರ ಸಂಬಂಧವನ್ನೂ ಬಿಟ್ಟು, ಹೆಣ್ಣು ಕೊಡುತ್ತೇನೆ ಅಂತ ನಮ್ಮ ಮನೆ ಬಾಗಿಲಿಗೆ ಗೋಧೂಳಿಲಗ್ನದಲ್ಲಿ ಬಂದಿರುವಾಗ, ಅದ್ಯಾಕಪ್ಪ ಅದೇನೋ ಆದರೆ-ಗೀದರೆ ಅಂತ ರಾಗ ತೇಗೀತೀಯ?" ಎಂದು ಪಾರ್ವತಮ್ಮನವರು ಬಾಯಿಹಾಕಿದರು.

"ಅಮ್ಮಯ್ಯ, ನಮ್ಮ ಗಂಡಸರ ಕಷ್ಟ ನಿಮಗೆ ಗೊತ್ತಾಗುವುದಿಲ್ಲ. ನಾನು ಗೌರಿ ಮದುವೆಯನ್ನೆ ಸಾಧ್ಯವಾದರೆ ಈ ಜ್ಯೇಷ್ಠದಲ್ಲಿ ಮಾಡಬೇಕು ಅಂತ ಇದ್ದೆ. ಅದಕ್ಕೆ ಹಣ ಹೊಂದಿಸುವುದೇ ಸಾಕಾಗಿಹೋಗುತ್ತೆ.

ವಿಶ್ವನಾಥನ ಮದುವೆಗೆ ಈಗಲೇ ಏನು ಆತುರ ಅಂತ ಒಂದೊಂದು ಸಲ ಅನ್ನಿಸುತ್ತೆ.''

"ಹೆಣ್ಣು ಕೊಟ್ಟ ಮೇಲೆ ಅಳಿಯನ ವಿದ್ಯಾಭ್ಯಾಸದ ಯೋಚನೆ ಮೈಲಾರಯ್ಯನವರಿಗೆ ಇರದೆ ಇರುತ್ತದೆಯೆ ? ಅವರು ತಾನೆ ಇನ್ನು ಯಾರಿಗೆ ಮಾಡಬೇಕು ? ಒಬ್ಬಳೇ ಮಗಳು. ಸುಮ್ಮನೆ ಒಪ್ಪಿಕೋ ಅಪ್ಪ ನೀನು. ನಾನು ಹೇಳಿದ್ದು ಸರಿಯೋ ಅಲ್ಲವೋ ಮೈಲಾರಯ್ಯನವರೇ ? '' ಎಂದು ಪಾರ್ವತಮ್ಮ ಮೈಲಾರಯ್ಯನವರಿಂದ ಉತ್ತರ ನಿರೀಕ್ಷಿಸುತ್ತ ಹೊಸ್ತಿಲ ಹತ್ತಿರಕ್ಕೆ ಸರಿದು ಕುಳಿತರು.

ಮೈಲಾರಯ್ಯನವರು ತುಸು ಹೊತ್ತು ಯೋಚನೆಮಾಡುತ್ತ ಮೌನವಾಗಿದ್ದರು. ಬಳಿಕ, ಕಡೆಯ ಮಾತಾಗಿ ಹೇಳುವ ರೀತಿಯಲ್ಲಿ ಹೀಗೆ ಹೇಳಿದರು :

"ನನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ತಿಳಿಸಿಬಿಡುತ್ತೇನೆ. ವಿಶ್ವನಾಥ ಬಿ. ಎ. ಮಾಡಿದ ಮೇಲೆ ಲಾಯರ್ ಪರೀಕ್ಷೆಗೆ ಓದಲಿ ಎಂದು ನನ್ನ ಅಭಿಲಾಷೆ. ಅವನ ಮುಂದಿನ ವಿದ್ಯಾಭ್ಯಾಸದ ಹೊಣೆ ನನ್ನದು. ಎರಡು ಖರ್ಚೂ ಹಾಕಿ ಮದುವೆ ಮಾಡಿಕೊಡುತ್ತೇನೆ. ಮಗಳಿಗೆ ಹಾಕಬೇಕಾದ ಒಡವೆಯನ್ನೆಲ್ಲ ಹಾಕುತ್ತೇನೆ. ಇದಕ್ಕಿಂತ ಹೆಚ್ಚು ನನ್ನಿಂದ ಸಾಧ್ಯವಿಲ್ಲ."

''ವಿಶ್ವನಾಥ ಪುಣ್ಯ ಮಾಡಿದ್ದ. ಅದು ಸರಿಯೆ, ವಿಶ್ವನಾಥನ ವಿದ್ಯಾಭ್ಯಾಸಕ್ಕೆ ನೀವು ಖರ್ಚುಮಾಡುವ ಹಣವನ್ನ ಅವನಿಗೆ ಈಗಲೇ ಕೊಟ್ಟುಬಿಡಿ. ನಾನೂ ಬಾಯಿಬಿಟ್ಟು ಆಡಿಬಿಡುತ್ತೇನೆ. ವಿದ್ಯಾಭ್ಯಾಸದ ಖರ್ಚೂ ಎಂತ ಬೇಕಾದರೂ ತಿಳಿಯಿರಿ, ವರದಕ್ಷಿಣೆ ಎಂತ ಬೇಕಾದರೂ ಭಾವಿಸಿ; ವಿಶ್ವನಾಥನಿಗೆ ಈಗ ಐನೂರು ಕೊಟ್ಟುಬಿಡಿ. ಕೈಲಾದಷ್ಟು ಸಹಾಯ ಮುಂದೆ ಬೇಕಾದರೆ ಮಾಡುವಿರಂತೆ. ಮದುವೆ ಖರ್ಚೂ ಬೇಕಾದರೆ ಸ್ವಲ್ಪ ಉಳಿಸಿ. ಹೀಗೆ ಮಾಡಿದರೆ, ವಿಶ್ವನಾಥನೂ ತಂದೆಯ ಮಾತಿಗೆ ಎದುರು ಹೇಳದೆ ಒಪ್ಪಿಕೊಂಡಾನು ಇಲ್ಲದೆ ಹೋದರೆ, ಏನಾದರೂ ಕೊಕ್ಕೆ ತೆಗೆಯುತ್ತಾನೆ. ಗೌರಿಮದುವೆ ಆಗದೆ ನನಗೆ ಮದುವೆ ಬೇಡ ಅಂದರೂ ಅಂದಾನೆ. ಅವನು ವರದಕ್ಷಿಣೆ ಮುಟ್ಟುವುದಿಲ್ಲ ಎಂತ ಸಾರಿ ಸಾರಿ ಹೇಳಿದ್ದಾನೆ. ನಿನ್ನ ತಂದೆಗೆ ನಿನ್ನ ಇನ್ನು ಓದಿಸುವುದಕ್ಕಾಗುವುದಿಲ್ಲವಂತೆ, ಇದು ನಿನ್ನ ವಿದ್ಯಾಭ್ಯಾಸದ ಖರ್ಚಿಗೆ; ಮದುವೆಗೆ ಒಪ್ಪಿಕೊ ಎಂದರೆ ನನ್ನ

ಮಾತು ತೆಗೆಯುವುದಿಲ್ಲ ಅವನು.'' ಎಂದು ಪಾರ್ವತಮ್ಮ ವ್ಯವಹಾರವನ್ನು ಕೊನೆಮುಟ್ಟಿಸುವ ರೀತಿಯಲ್ಲಿ ಒಗ್ಗರಣೆ ಹಾಕಿದರು.

"ನೀವು ಹಿರಿಯರು ಹೇಳಿದ ಮೇಲೆ ನಾನು ಪ್ರತಿಯಾಗಿ ಹೇಳುವುದೇನಿದೆ? ಆಗಬಹುದು" ಎಂದು ಮೈಲಾರಯ್ಯನವರು ಮೇಲಕ್ಕೆದ್ದರು.

"ನಮ್ಮ ಮನೆಯಲ್ಲಿ ಕಾಫಿ ಪದ್ಧತಿ ಇಲ್ಲವಲ್ಲ. ಒಂದಿಷ್ಟು ಪಾನಕವನ್ನಾದರೂ ಕುಡಿದು ಹೋಗುವಿರಂತೆ, ಕುಳಿತುಕೊಳ್ಳಿ" ಎಂದು ಪಾರ್ವತಮ್ಮನವರು ಬಲವಂತಮಾಡಿದರು.

ಪಾರ್ವತಮ್ಮನವರು ಮಾಡಿ ತಂದು ಕೊಟ್ಟ ಪಾನಕವನ್ನು ಕುಡಿದು, "ಇನ್ನೇನು, ಎಲ್ಲ ಸುಮುಖವಾಗಿ ತೀರ್ಮಾನವಾದಹಾಗಾಯಿತು. ಅಪ್ಪಣೆಯಾದರೆ ಬರ್ತೀನಿ" ಎಂದು ಮೈಲಾರಯ್ಯನವರು ಮನೆಯ ಕಡೆ ಹೊರಟರು. ಅವರು ಅತ್ತ ಹೋದ ಕೂಡಲೆ ಇತ್ತ ಪಾರ್ವತಮ್ಮನವರು ಮುಖ ಅರಳಿಸಿಕೊಂಡು ತಮ್ಮ ಮಗನ ಮುಖ ನೋಡಿ, "ಇನ್ನೇನಪ್ಪ, ಗೌರಿಯ ಮದುವೆಗೆ ದಾರಿಯಾದ ಹಾಗಾಯಿತಲ್ಲ? ಬೇಗ ಒಂದು ವರ ಗೊತ್ತುಮಾಡಿಬಿಡಪ್ಪ" ಎಂದರು. "ಎಲ್ಲ ಭಗವಂತನ ಕೃಪೆ ಇದ್ದಹಾಗೆ ಆಗುತ್ತೆ. ನೋಡೋಣ" ಎಂದು ಸಮಾಧಾನಚಿತ್ತರಾಗಿ ನುಡಿದರು ನಂಜುಂಡಶಾಸ್ತ್ರಿಗಳು.

ಮನೆಗೆ ಹೋಗಿ, ಮೈಲಾರಯ್ಯನವರು ನಡೆದ ಸಂಗತಿಯನ್ನು ತೀರ್ಮಾನರೂಪದಲ್ಲಿ ಹೆಂಡತಿಗೆ ತಿಳಿಸಿದರು. ಮದುವೆ ನಿಶ್ಚಯವಾದದ್ದು, ಕಾವೇರಮ್ಮನಿಗೆ ಸಂತೋಷವನ್ನು ತಂದರೂ, ವರದಕ್ಷಿಣೆ (ಅಥವಾ ವಿದ್ಯಾಭ್ಯಾಸದ ಖರ್ಚು) ಕೊಡಲು ಒಪ್ಪಿಕೊಂಡು ಬಂದದ್ದು ಅವರ ಮನಸ್ಸಿಗೆ ಅಷ್ಟು ಹಿತವೆನಿಸಲಿಲ್ಲ. ಆದರೆ ಮಾತು ಕೊಟ್ಟು ಆಗಿಹೋಗಿತ್ತು; ಎಲ್ಲದರ ಜವಾಬುದಾರಿಯನ್ನು ಹೊರುವವರೇ ಮಾತು ಕೊಟ್ಟಿರುವವರು; ಇನ್ನು ನಡುವೆ ತಾನು ಮಾತಾಡಿ ಪ್ರಯೋಜನವಿಲ್ಲ, ಸುಂದರಮೂರ್ತಿ ತಪ್ಪಿದರೂ ಕಂಡು ಕೇಳದ ಕಡೆಯೋ ವರ ದೊರೆತಹಾಗಾಯಿತು ಎಂದು ಸಮಾಧಾನಹೊಂದಿದರು.

೩೮

ವಿಶ್ವನಾಥ ಮನೆಗೆ ಬಂದೊಡನೆಯೇ ಮದುವೆ ಗೊತ್ತಾದ ಸುದ್ದಿ ಅಜ್ಜಿಯ ಬಾಯಿಂದ ಅವನ ಕಿವಿಯ ಮೇಲೆ ಬಿದ್ದು ಆಶ್ಚರ್ಯವನ್ನೂ ಹರ್ಷ

ವನ್ನೂ ಉಂಟುಮಾಡಿದುವು. ತನ್ನ ರೂಪಿಗೆ ಎಂತಹ ಹೆಂಡತಿ ತನಗೆ ಮುಂದೆ ದೊರಕಲಿರುವಳೋ ಎಂದು ಸಂಶಯಗ್ರಸ್ತನಾಗಿದ್ದ. ಜೀವನಿಗೆ ಕಮಲೆಯಂಥ ಚೆಲುವೆ ದೊರೆತಳೆಂದು ತಿಳಿದು ಅವನು ಹಿಗ್ಗಿದನು. ಕೇವಲ ಹೊರ ರೂಪಿಗೇ ಸೋಲುವ ಮನಸ್ಸು ರೂಪವಷ್ಟರಿಂದಲೇ ತೃಪ್ತಿಗೊಳ್ಳುತ್ತದೆ ; ಕಮಲೆ ಬುದ್ಧಿವಂತೆ, ಕೆಲಸಬೊಗಸೆ ಬಲ್ಲವಳು, ಗುಣಶಾಲಿನಿ ಎಂದು ಅವನು ಕೇಳಿದ್ದ. ಸಂತೋಷಪಡದೆ ಇರಲು ಕಾರಣವಿರಲಿಲ್ಲ. ಒಂದು ಗಂಟೆಯ ಹೊತ್ತಿನ ಕೆಳಗೆ ತೋಟದಲ್ಲಿ ತಾನು ಎಸಗಿದ ಕೃತ್ಯ ಯಾರ ಗಮನಕ್ಕೂ ಬಾರದೆ ಇರಲಿ ಎಂದು ಮನಸ್ಸಿನಲ್ಲಿಯೇ ದೇವರನ್ನು ಬೇಡಿಕೊಂಡ. ಈ ಮದುವೆಯ ಏರ್ಪಾಟು ಮುಂಚೆಯೇ ಆಗಿದ್ದು, ಚೆಲುವೆಯಾದ ಚೆನ್ನಿ ತನ್ನ ಕಣ್ಣಿಗೇ ಬೀಳದೆ ಇದ್ದಿದ್ದರೆ, ತಾನು ಅಂತಹ ಸಾಹಸಕಾರ್ಯಕ್ಕೆ ಹೋಗುತ್ತಲೇ ಇರಲಿಲ್ಲ ಎಂದು ತನಗೆ ತಾನೇ ಸಮಾಧಾನ ತಂದುಕೊಂಡ. ಆ ಸಮಾಧಾನದೊಂದಿಗೆ ಮನಸ್ಸು ನಿರ್ಮಲವಾದಂತೆ ಅವನಿಗೆ ತೋರಿತು. ಚೆನ್ನಿಯನ್ನು ತಾನು ಮುಟ್ಟಿಸಿಕೊಂಡಿದ್ದು, ಈಗ ಮನೆಯಲ್ಲಿ ಮೈಲಿಗೆ ಬೆರಸ ಲಿರುವೆನೆಂಬ 'ಮಡಿ ಮೈಲಿಗೆಯ' ಭಾವನೆ ಮೇಲಕ್ಕೆ ಎದ್ದಿತು. ತನ್ನ ಮನಸ್ಸಿನ ತೃಪ್ತಿಗಾಗಿ, 'ಬಹಳ ಸೆಕೆ, ಸ್ವಲ್ಪ ಸ್ನಾನ ಮಾಡಿಬಿಡುತ್ತೇನೆ' ಎಂದು ಹೇಳಿ ಬಾವಿಯಲ್ಲಿ ನೀರು ಸೇದಿಕೊಂಡು, ಬಟ್ಟೆಯನ್ನೆಲ್ಲ ತೋಯಿಸಿ, ಸ್ನಾನ ಮಾಡಿದ.

"ಬಟ್ಟೆ ಏಕೆ ತೋಯಿಸಿದೆ?" ಎಂದು ತಂದೆ ಕೇಳಿದಾಗ, ಕೃಷ್ಣಪ್ಪ ನವರ ತೋಟಕ್ಕೆ ಹೋಗಿದ್ದಾಗ ಯಾವುದೊ ಬಟ್ಟೆ ತುಳಿದೆನೆಂದೂ ಅದು ಮಾದನದಿರಬಹುದೆಂದು ತೋರಿ ಸ್ನಾನಮಾಡಿದುದಾಗಿಯೂ ತಿಳಿಸಿದ. ಮಗನ ಆಚಾರಶೀಲ ಕಂಡು ತಂದೆಗೆ ಸಂತೋಷವಾಯಿತು. ಅವನ ಕೆನ್ನೆಯ ಮೇಲಿನ ಉಗುರಿನ ಗೀರು ಕತ್ತಲೆಯಲ್ಲಿ ಯಾರಿಗೂ ಕಾಣಲಿಲ್ಲ.

ಸ್ನಾನ ಅವನ ಮೈಯ ಮೈಲಿಗೆಯನ್ನೂ ತೊಳೆದಿರಬಹುದು ; ಅವನು ಎಷ್ಟೇ ಸಮಾಧಾನ ತಂದುಕೊಂಡರೂ ಅದು, ಜೊತೆಗೆ ಅವನು ಮಾಡಿದ ಸ್ನಾನ, ಅವನ ಮನಸ್ಸಿನ ಮೈಲಿಗೆಯನ್ನು ತೊಳೆಯಿತೆಂದು ಹೇಳಲಾಗದು. ಅವನು ಮಾಡಿದ ಕಾರ್ಯದಿಂದ ಅವನ ಮನಸ್ಸು ಹೊಲೆಯಾಯಿತು.

ಚೆನ್ನಿಯ ಚಿತ್ರ ಅವನ ಮನಸ್ಸಿನಿಂದ ಸಂಪೂರ್ಣವಾಗಿ ಅಳಿಸಿಹೋಗಿ

ಆದರ ಸ್ಥಾನದಲ್ಲಿ ಕೂಡಲೆ ಕಮಲೆಯ ಸುಂದರ ರೂಪು ಪ್ರತಿಷ್ಠಿತವಾಯಿತು. ಆ ಚೆಲುವೆಯ ಕೈ ಹಿಡಿಯಲು ತಾನು ಅರ್ಹನೆ ಎಂಬ ಪ್ರಶ್ನೆ ಅವನ ಮನಸ್ಸಿನಲ್ಲಿ ಏಳಲೇ ಇಲ್ಲ.

ಮದುವೆಯ ಸುದ್ದಿ ಕೇಳಿ ಕಮಲೆಗೆ ಮಾತ್ರ ಬರಸಿಡಿಲು ಎರಗಿದಂತಾಯಿತು. ಹೇಗೋ ಎರಡು ತುತ್ತು ತಿಂದು, ಆಯಾಸಗೊಂಡವಳಂತೆ ಬೇಗನೆ ಮಲಗಿದಳು. ನಿದ್ದೆಗೆ ಮುನ್ನ, ಅವಳಿಗೆ ಸುಂದರಮೂರ್ತಿಯ ನೆನಪಾಯಿತು; ಆ ಚಿತ್ರ ಅಳಿಸಿ, ವಿಶ್ವನಾಥನ ಕುರೂಪ ಎದುರು ನಿಂತು ಹಲ್ಲುಗಿರಿಯತೊಡಗಿತು. ಈ ರೂಪದ ಪರಿಭಾವನೆ ಅವಳಿಗೆ ಬೇಕಿಲ್ಲ. ಬೇಡವೆಂದರೂ ಅದು ಇವಳನ್ನು ಬಿಡದು; ಆದರ ನೆರಳು ಸುಂದರಮೂರ್ತಿಯ ಸುಂದರಾಕೃತಿಯ ನೆರಳನ್ನು ಅಟ್ಟಿಸಿಕೊಂಡು ಹೋಗಿ, ಹೊಡೆದೋಡಿಸಿ, ತಾನೇ ತಾನಾಗಿ ಎದುರು ನಿಂತು ಭೂತಾಕೃತಿಯನ್ನು ತಳೆದು ತನ್ನೊಡನೆ ನಿಲ್ಲುವುದು, ಗಹಗಹಿಸಿ ನಗುವುದು, ಸರಸವಾಡಲು ಹವಣಿಸುವುದು. ನಿದ್ದೆ ಹತ್ತದ ಕಣ್ಣು ಬಿಟ್ಟು ನೋಡುವಳು: ಕತ್ತಲೆಯಲ್ಲಿಯೂ ಅದೇ ರೂಪ. ತಂದೆ ತಾಯಿ ಮಲಗಿ ನಿದ್ದೆ ಹೋಗುತ್ತಿದ್ದರೂ ಇವಳಿಗೆ ನಿದ್ದೆಬಾರದು. ನಿದ್ದೆ ಬಾರದ ಸಂಕಟ ಒಂದು ಕಡೆ; ನಿರಾಶೆಯ ಇಮ್ಮಡಿಯ ಸಂಕಟ ಇನ್ನೊಂದು ಕಡೆ. ಒಮ್ಮೊಮ್ಮೆ ಸುಂದರನ ರೂಪ ಮಿಂಚಿ, ಕತ್ತಲಿಡಿದ ಕಣ್ಣಿಗೆ ಬೆಳಕು ತಂದು, ವಿಶ್ವನಾಥನನ್ನು ಮದುವೆಯಾಗುವುದಿಲ್ಲ ಎಂದು ಹೇಳು ಎಂದು ಹೇಳಿಕೊಟ್ಟಂತೆ ಬೋಧೆಯಾಗುವುದು. “ನೀನು ಯಾರೋ ಹೇಳುವುದಕ್ಕೆ ?” ಎಂದು ಕರಿಯ ಆಕೃತಿ ಮತ್ತೆ ಬಂದು ಸುಂದರನನ್ನು ಅಟ್ಟುವುದು.

ಕಮಲೆಯ ಮೂಕ ಸಂಕಟ ಆಗ ಯಾರ ಗಮನಕ್ಕೂ ಬರುವಂತಿರಲಿಲ್ಲ; ಅವಳ ತಲೆಗೆ ಆಸರೆಯಾಗಿದ್ದ ದಿಂಬಿಗೆ ಮಾತ್ರ ಸ್ಪಷ್ಟವಾಯಿತು— ಅವಳು ಸುರಿಸಿದ ಕಂಬನಿಯ ಕೋಡಿಯಿಂದ.

೩೯

ಮದುವೆಯ ಮಾತುಕತೆ ನಡೆದ ಮಾರನೆಯ ದಿನ, ‘ ಲಗ್ನಪತ್ರಿಕೆ ’ ನಡೆಯಲು ಆ ದಿನ ಶುಭವಾಗಿದೆಯೆಂದೂ, ವೈಲಾರಯ್ಯನವರು ಒಪ್ಪಿದರೆ

ಆಗಬಹುದೆಂದೂ ತಾಯಿ ಸೂಚಿಸಿದ ಮೇರೆಗೆ ನಂಜುಂಡಶಾಸ್ತ್ರಿಗಳು ಬಂದು ಮೈಲಾರಯ್ಯನವರಿಗೆ ತಿಳಿಸಿದರು. ಕೃಷ್ಣಪ್ಪನವರು ಊರಿನಲ್ಲಿ ಇಲ್ಲದೆ ಇರುವಾಗಲೇ ಲಗ್ನಪತ್ರಿಕೆ ನಡೆಯುವುದು ಮೈಲಾರಯ್ಯನವರಿಗಿಂತ ಕಾವೇರಮ್ಮನಿಗೆ ಅಷ್ಟಾಗಿ ಸರಿ ಕಾಣಲಿಲ್ಲ. "ಇದರಲ್ಲಿ ಮುಚ್ಚುಮರೆ ಯಾಕೆ? ನಮ್ಮ ಇಷ್ಟ ಬಂದ ವರನಿಗೆ ನಮ್ಮ ಮಗಳನ್ನು ಕೊಡುತ್ತೇವೆ. ಸುಂದರಮೂರ್ತಿಗೆ ಕಮಲೆ ಕೊಡಬೇಕೆಂದು ನಮಗೂ ಮನಸ್ಸಿತ್ತು. ಈಗ ಕೊಡದೆ ಇರಲು ಕಾರಣ ಏನೂ ಎನ್ನುವುದೂ ಅವರಿಗೇ ಸ್ಪಷ್ಟವಾಗುತ್ತದೆ. ಮದುವೆಗಾದರೂ ಅವರು ಬರಲೇಬೇಕಲ್ಲ. ಅವರು ಬಂದ ಮೇಲೆಯೇ ಲಗ್ನಪತ್ರಿಕೆಯೂ ಆಗಲಿ, ಹೆದರಿಕೆಯೇನು?" ಎಂದು ಕಾವೇರಮ್ಮ ಮೈಲಾರಯ್ಯನವರಿಗೆ ತಿಳಿಸುವ ಮೂಲಕ ಶಾಸ್ತ್ರಿಗಳಿಗೂ ತಮ್ಮ ಅಭಿಪ್ರಾಯ ತಿಳಿಸಿಬಿಟ್ಟರು. ಶಾಸ್ತ್ರಿಗಳು, "ಹಾಗೆಯೇ ಆಗಲಿ" ಎಂದು ಹೊರಟು ಹೋದರು.

ಕೃಷ್ಣಪ್ಪನವರ ಮನೆಯವರೆಲ್ಲಾ ಊರಿಗೆ ಹಿಂದಿರುಗಿದರು. ರಾಮಸ್ವಾಮಯ್ಯ ಗಂಗಮ್ಮಾ ಮೈಸೂರಿನಿಂದ ನೇರವಾಗಿ ಬೆಂಗಳೂರಿಗೆ ಪ್ರಯಾಣ ಮಾಡಿದರು.

ಬಸ್ಸು ಇಳಿದು ಮನೆಗೆ ಬಂದ ಕೂಡಲೆ ಸ್ನಾನ, ಕಾಫಿ, ಊಟ— ಇವುಗಳ ಏರ್ಪಾಡಿನಲ್ಲಿ ಕೃಷ್ಣಪ್ಪನವರೂ ನರಸಮ್ಮನವರೂ ನಿರತರಾದರು. ಊಟವಾಗಬೇಕಾದರೆ ಮಧ್ಯಾಹ್ನ ಎರಡೋ ಮೂರೋ. ಸ್ನಾನವಾದ ಕೂಡಲೆ ಸುಂದರಮೂರ್ತಿ ಕಾವೇರತ್ತೆಯ ಮನೆಗೆ ಶ್ರೀಕಂಠೇಶ್ವರನ ಪ್ರಸಾದವನ್ನು ತಾನೇ ಕೊಡುವುದಾಗಿ ಹೇಳಿ ಅಲ್ಲಿಗೆ ಹೊರಟ.

ಆಗ ಮಧ್ಯಾಹ್ನ. ಮೈಲಾರಯ್ಯನವರು ಊಟ ಮಾಡಿ ಚಾಪೆಯ ಮೇಲೆ ಮಲಗಿ ಗೊರಕೆ ಹೊಡೆಯುತ್ತಿದ್ದರು. ಕಾವೇರಮ್ಮನೂ ಬರಿಯ ನೆಲದ ಮೇಲೆಯೇ ಗೋಡೆಯ ಕಡೆಗೆ ಮುಖಮಾಡಿಕೊಂಡು ಮಲಗಿ ನಿದ್ದೆಯ ಜೋಂಪಿನಲ್ಲಿದ್ದರು. ಬರಿಯ ಬಾಗಿಲು ಹಾಕಿತ್ತು.

ಸುಂದರಮೂರ್ತಿ ಬಾಗಿಲನ್ನು ತಳ್ಳಿಕೊಂಡು ಮನೆಯೊಳಕ್ಕೆ ಪ್ರವೇಶಿಸಿದ. ಮಲಗಿದ್ದ ಅತ್ತೆ ಮಾವನನ್ನು ಎಚ್ಚರಿಸಲು ಇಷ್ಟಪಡಲಿಲ್ಲ. ಹಜಾರದಲ್ಲಿ ಕಮಲೆ ಕಂಡುಬರಲಿಲ್ಲ. ನಡುಮನೆಗೆ ಹೋದ. ಅಲ್ಲಿ ಗೋಡೆಯ

ಪಕ್ಕದಲ್ಲಿ ಕಮಲೆ ಮಂಡಿಯ ಮೇಲೆ ತಲೆಯೂರಿ ಕುಳಿತು, ಕುಳಿತೇ ನಿದ್ದೆ ಹೋಗುತ್ತಿರುವವಳಂತೆ ಕಾಣಬಂದಳು.

“ಕಮಲಾ!” ಮೆಲ್ಲನೆ ಮಾತನಾಡಿಸಿದ ಸುಂದರಮೂರ್ತಿ.

ಉತ್ತರವಿಲ್ಲ.

“ಕಮಲಾ! ಲೇ, ಕಮಲೂ!” ಸ್ವಲ್ಪ ಗಟ್ಟಿಯಾಗಿ ಕೂಗಿದ.

ಸುಂದರಮೂರ್ತಿಯ ಧ್ವನಿಯೆಂದು ಕಮಲೆಗೆ ಗೊತ್ತಾಗಿ, ಕತ್ತೆತ್ತಿ ನೋಡಿದಳು. ನಡುಮನೆಯ ನಸುಗತ್ತಲೆಯಲ್ಲಿ ಅವಳ ಕಣ್ಣು ಒದ್ದೆಯಾಗಿದ್ದುದು ಅಪ್ಪನಿಗೆ ಗೋಚರವಾಗಲಿಲ್ಲ. ಕಮಲೆ ಎದ್ದು ಹಿತ್ತಿಲಿಗೆ ಹೋದಳು; ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಸುಂದರಮೂರ್ತಿಯೂ ಅವಳ ಹಿಂದೆಯೇ ಹೋದ; ಅವಳು ಅಳುತ್ತಿರುವಳೆಂದು ಈಗ ಅವನಿಗೆ ಗೊತ್ತಾಯಿತು.

“ಏಕೆ, ಕಮಲಾ, ಅಳುತ್ತಿದೀಯಲ್ಲ?”

“ಅಳುತ್ತಲೂ ಇಲ್ಲ ಏನೂ ಇಲ್ಲ” ಎಂದು ಕಣ್ಣೀರನ್ನು ಸೆರಗಿನ ಕೊನೆಯಿಂದ ಒರಸಿಕೊಂಡಳು. ಕೆನ್ನೆ ಶುಭ್ರವಾಯಿತು; ಕಣ್ಣುಗಳು ಕೆಂಪಗೇ ಇದ್ದುವು; ಬೇಗಬೇಗನೆ ಬಿಡುತ್ತಿದ್ದ ಉಸಿರಿನಿಂದಾಗಿ ಎದೆ ಉಬ್ಬಿ ಇಳಿಯುತ್ತಿತ್ತು.

“ಈಗ ಅಳುತ್ತಿಲ್ಲ, ಹೌದು. ಆದರೆ ಆಗ ಏಕೆ ಅಳುತ್ತ ಕುಳಿತಿದ್ದೆಯಲ್ಲ, ನಾನು ಬಂದಾಗ?”

ಮಾತಿಲ್ಲ.

“ಅಮ್ಮ ಬೈದರೇನು?”

ಮೌನ.

“ಕಣ್ಣಿಗೆ ಮಣ್ಣು ಬಿದ್ದಿದೇನೋ?”— ತುಸು ನಕ್ಕ ಸುಂದರ, ಅವಳನ್ನೂ ನಗಿಸಬೇಕೆಂದು.

‘ಬಾಳಿಗೆ ಮಣ್ಣು ಬಿದ್ದಿತೇನೋ’ ಎಂದು ಅವನು ಕೇಳಿದ್ದರೆ ಅವಳಿಗೆ ಅರ್ಥವಾಗುತ್ತಿದ್ದಿತು.

ಕಮಲೆಯ ಮುದ್ದುಮೊಗದಲ್ಲಿ ಮೆಲುನಗೆಯ ನೆರಳೂ ಸುಳಿಯದಿದ್ದುದನ್ನು ಕಂಡು ನಗಿಸಬೇಕೆಂದು ಇನ್ನಷ್ಟು ಪ್ರಯತ್ನಪಟ್ಟ;

" ಈ ವರ್ಷವೋ ಮುಂದಿನ ವರ್ಷವೋ ಗಂಡನ ಮನೆಗೆ ಹೋಗ ಬೇಕಾಗುತ್ತೆ ಅಂತ, ಆಗ ನಗುತ್ತಿರೋಣ ಅಂತ, ಈಗಲೇ ಅಳುವನ್ನೆಲ್ಲ ಅತ್ತು ಮುಗಿಸಿಬಿಡೋಣ ಅಂತಲೋ ಹೇಗೆ? "

'ಹೌದು, ಗಂಡನ ಮನೆಗೆ ಹೋಗಬೇಕು. ಒಲ್ಲದ ಗಂಡನ ಮನೆಗೆ. ನಿಮ್ಮ ಮನೆಗಲ್ಲ' ಎಂದು ಉತ್ತರರೂಪವಾಗಿಯೋ ಎಂಬಂತೆ ಫಳಫಳನೆ ಮತ್ತೆ ಕಂಬನಿಗಳುರುಳಿದುವು. ಆದರೆ ಅವು ಸೂಚಿಸಬಹುದಾದ ಉತ್ತರ ಅವನ ಮನಸ್ಸಿಗೆ ಮಾತ್ರ ಹೊಳೆಯಲಿಲ್ಲ.

ಪರಿಹಾಸ ಮಾಡುವ ತನ್ನ ಪ್ರಯತ್ನದಿಂದ ಅಳಿಸಲಾಗದಷ್ಟು ಮಿತಿ ಮೀರಿದ, ನಿಜವಾದ ದುಃಖ ಏನೋ ಇದೆ ಎಂಬುದು ಮಾತ್ರ ಅವನಿಗೆ ಈಗ ಸ್ಪಷ್ಟವಾಯಿತು. ಅದರ ಕಾರಣ ಏನೆಂಬುದನ್ನು ತಿಳಿಯುವ ಕುತೂಹಲ ಬಲವಾಯಿತು. ಬಗೆಬಗೆಯಲ್ಲಿ ಮೆಲುಮಾತುಗಳಿಂದ ಕಾರಣವೇನೆಂದು ಕೇಳಿದನವನು. ಅವನ ಪ್ರಶ್ನೆಗಳೆಲ್ಲ ವ್ಯರ್ಥವಾದುವು— ಗುರಿ ತಪ್ಪಿದ ಬಾಣಗಳಂತೆ, ಕಟ್ಟಕಡೆಯ ಬಾಣ ಬಿಡುವವನಂತೆ, ಹಿಂದಿರುಗಲು ಸಿದ್ಧನಾಗಿ ರುವವನಂತೆ ನಟಿಸಿ, " ಅದು ಏನೆಂದು ನೀನು ಹೇಳದೆ ಹೋದರೆ ನಿನ್ನ ಕೂಡ ಇನ್ನು ಮೇಲೆ ಮಾತಾಡುವುದಿಲ್ಲ" ಎಂದು ಖಂಡಿತವಾಗಿ ಹೇಳಿದ ಸುಂದರ.

" ಇನ್ನು ಮೇಲೆ ನನ್ನ ಕೂಡ ನೀನು ಹೀಗೆಲ್ಲ ಬಂದು ಮಾತನಾಡಲೂ ಕೂಡದು "— ಬಾಣಕ್ಕೆ ಪ್ರತಿ ಬಾಣದಂತೆ ಬಂದಿತೀ ಉತ್ತರ. ಕಮಲೆಯ ಅಳು, ಮೌನ, ಕಡೆಯಲ್ಲಿ ಈ ಅರ್ಥಪೂರ್ಣವಾದ ಮಾತು : ಇದಕ್ಕಿಂತ ಸ್ಪಷ್ಟವಾದ ಉತ್ತರವನ್ನು ಅವಳೇನು ಕೊಡಬಲ್ಲಳು ? ಮೌನದ ಪಲ್ಲವಿ; ಅಳುವಿನ ಅನುಪಲ್ಲವಿ; ಮೂರು ನಾಲ್ಕು ಮಾತಿನ 'ನುಡಿ' : ಅವಳ ದುಃಖದ ಹಾಡು ಸಹಜವಾಗಿ ಹೊರಹೊಮ್ಮಿತು. ಸುಂದರನಿಗೆ ಮಾತ್ರ ಸಮಸ್ಯೆ ಇನ್ನೂ ಬಗೆಹರಿಯಲಿಲ್ಲ. ಅವನು ಬಹುಕಾಲ ಊರಿನಲ್ಲಿ ಇಲ್ಲದೆ ಹಿಂದಿರುಗಿ ಬಂದಿದ್ದು ಈ ಮಾತುಗಳನ್ನು ಕೇಳಿದ್ದಿದ್ದರೆ ಅವುಗಳ ಧ್ವನಿ ಅವನಿಗೆ ಬೋಧೆಯಾಗುತ್ತಿದ್ದುದರಲ್ಲಿ ಸಂದೇಹವಿಲ್ಲ. ಊರು ಬಿಟ್ಟು ಹೋಗಿ ಒಂದು ವಾರ ಕೂಡ ಇಲ್ಲ; ಅಷ್ಟರಲ್ಲಿ ಅವಳ ಬಾಳನ್ನು ತನ್ನ ಬಾಳಿನಿಂದ ಹರಿಯುವ ಘಟನೆಯೊಂದು ನಡೆಯುವುದೆಂದು ಅವನು ಊಹಿಸಲಾಗದಿದ್ದರೆ ಅದು ಕೇವಲ ಸಹಜ.

ಅರ್ಥವಿವರಣೆ ಬಯಸಲೋ ಎಂಬಂತೆ ಕೇಳಿದನವನು:

" ನನ್ನ ಕೂಡ ಮಾತಾಡಲು ನಿನಗೆ ಇಷ್ಟವಿಲ್ಲವೇನು ? "

" ಇಷ್ಟವಿಲ್ಲ ಎದೆನೆ ನಾನು ? "

" ಓಹೋ, ಕೂಡದೋ ! ನಿಮ್ಮ ತಾಯಿಯ ಅಪ್ಪಣೆ. ಆಗಲಿ, ಪಾಲಿಸ ಬಹುದು. ನಂಜನಗೂಡಿನ ದೇವರ ಪ್ರಸಾದ ಕೊಡೋಣ ಅಂತ ಬಂದೆ. ನಿನ್ನ ಕೈಲೇ ಕೊಡಬಹುದೋ ಇಲ್ಲ ಅತ್ತೆಯ ಕೈಲೇ ಕೊಡಲೋ ? "

ಕಮಲೆ ಮಾತಾಡದೆ ಪ್ರಸಾದ ಸ್ವೀಕರಿಸಲು ಕೈಯೊಡ್ಡಿದಳು. ಸುಂದರಮೂರ್ತಿ ದೇವರ ಪ್ರಸಾದದ ಪೊಟ್ಟಣವನ್ನೂ ಒಂದು ತೆಂಗಿನಕಾಯಿ ಹೋಳನ್ನೂ ಅವಳ ಕೈಗೆ ಇಟ್ಟ. ಅವಳು ಅವನ್ನು ತೆಗೆದುಕೊಂಡು ಅಡಿಗೆಯ ಮನೆಗೆ ಹೋಗಿ ದೇವರ ಮಂದಾಸನದ ಮುಂದೆ ಇರಿಸಿ, ಮತ್ತೆ ನಡುಮನೆಯಲ್ಲಿ ಬಂದು ಮೊದಲಿನಂತೆ ಕುಳಿತಳು. ತಾನು ಆಡಿದ ಮಾತಿನಿಂದ, ವಿಶ್ವನಾಥನೊಂದಿಗೆ ತನ್ನ ಮದುವೆ ಗೊತ್ತಾಗಿರುವ ಸಂಗತಿ ಸುಂದರನಿಗೆ ಸ್ಪಷ್ಟವಾಗಿ ಗೊತ್ತಾಗಲಿಲ್ಲವೆಂದು ಅರಿತಳು. ಸ್ಪಷ್ಟವಾಗಿ ಹೇಳದೆ ಇದ್ದದ್ದು ತನ್ನ ತಪ್ಪು ಎಂದು ಭಾವಿಸಿದಳು. ಹಾಗೆ ಹೇಳಿದ್ದರೆ, "ಅವನನ್ನು ನಾನು ಮದುವೆಯಾಗುವುದಿಲ್ಲ ಅಂತ ಹಟ ಹಿಡಿ" ಎಂದು ಹೇಳುತ್ತ ಇದ್ದನೋ ಏನೊ— ಎಂದು ತನ್ನ ವರ್ತನೆಗೆ ತನ್ನನ್ನೆ ಹಳಿದು ಕೊಂಡು, ಇಮ್ಮಡಿಯ ದುಃಖದಲ್ಲಿ ಮುಳುಗಿದಳು.

ಸುಂದರಮೂರ್ತಿ ಹೊರಕ್ಕೆ ಬಂದ. ಮಾವ ಅತ್ತೆ ಇನ್ನೂ ನಿದ್ದೆ ಹೋಗುತ್ತಿದ್ದರು. ಸುಂದರಮೂರ್ತಿ ಬಂದ ಹಾಗೆಯೇ ಹಿಂದಿರುಗಿ ಹೊರಟ.

ಬಾಗಿಲು ದಾಟುವಾಗ ಸುಂದರಮೂರ್ತಿ, "ಮಗಳಿಗೆ ಲಜ್ಜೆ ಕಲಿಸುತ್ತ ಇದಾರೆ. ಅತ್ತೆ ಕಲಿಸಲಿ ಕಲಿಸಲಿ, ಒಳ್ಳೆಯದೆ" ಎಂದುಕೊಂಡು ಮುಗುಳು ನಗೆ ನಗುತ್ತ ಹೊರಟ. ಇನ್ನೇನು ಬೀದಿಗೆ ಕಾಲಿಡಬೇಕೆನ್ನುವಷ್ಟರಲ್ಲಿ ರಾಮು ಸೋಮು ಎಲ್ಲಿಯೋ ಆಟವಾಡಲು ಹೋಗಿದ್ದವರು ಹಿಂದಿರುಗಿ ಬೀದಿಯಲ್ಲಿ ಬರುತ್ತ ಸುಂದರಮೂರ್ತಿಯನ್ನು ಕಂಡು, " ಸುಂದರಾ ! ಸುಂದರಾ ! " ಎಂದು ಕೂಗುತ್ತ ಓಡಿಬಂದು ಅವನ ಕೈಗಳನ್ನು ಹಿಡಿದು ಕೊಂಡರು. " ಕಮಲೆ ಮದುವೆ ! ಕಮಲೆ ಮದುವೆ ! " ಎಂದು ರಾಮು ಸುಂದರ ಕೈ ಜಗ್ಗಿಸಿ ಕುಣಿದ. "ಹೌದು ಸುಂದರ, ನಾಳೇನೋ ನಾಡಿದ್ದೋ.

ಕಮಲೆ ಗಂಡ ವಿಶ್ವಣ್ಣ. ನೀನೇ ಆಗಿದ್ರೆ ಚೆನ್ನಾಗಿತ್ತು. ನಿನ್ನೇ ಭಾವ ಅನ್ನಬಹುದಾಗಿತ್ತು, ಅಲ್ಲವೆ?" ಎಂದು ಸೋಮು ಕತ್ತೆತ್ತಿ ಹಲ್ಲುಗಿರಿಯುತ್ತ ಸುಂದರನ ಕಡೆ ನೋಡಿದ.

ರಾಮು ಸೋಮುವಿನ ಮಾತು ಮಕ್ಕಳ ಮಾತು ಎನ್ನುವ ಹಾಗಿರಲಿಲ್ಲ. ಏಕೆಂದರೆ, ತುಸು ಹಿಂದಿನ ಕಮಲೆಯ ನಡವಳಿಕೆಯಿಂದ ಈ ಮಕ್ಕಳ ಮಾತು ನಿಜವಿರಬೇಕೆಂದು ಸುಂದರನಿಗೆ ಖಚಿತವಾಯಿತು. "ನೀವು ಮನೆಗೆ ಹೋಗಿ" ಎಂದು ಮಕ್ಕಳ ಕೈ ಬಿಡಿಸಿಕೊಂಡು ಸುಂದರ ತಲೆಬಗ್ಗಿಸಿಕೊಂಡು, ಬೇಗ ಬೇಗ ಹೆಜ್ಜೆಹಾಕುತ್ತ, ಮನೆಗೆ ಹಿಂದಿರುಗಿದ. ಅಷ್ಟುಹೊತ್ತಿಗೆ ಅಡಿಗೆಯಾಗಿ ಎಲೆ ಹಾಕಲು ಸಿದ್ಧತೆ ನಡೆಯುತ್ತಿತ್ತು. ಸುಂದರಮೂರ್ತಿ ನೇರವಾಗಿ ಅಡಿಗೆಯ ಮನೆಗೆ ಹೋಗಿ, "ಅಮ್ಮಾ ಕಮಲೆಗೆ ಮದುವೆ ಗೊತ್ತಾಗಿದೆಯಂತೆ, ಹೌದೆ?" ಎಂದು ತವಕಗೊಂಡು ಕೇಳಿದ ತಾಯಿಗೆ ಮಗನ ಮನಸ್ಸಿನ ವೇದನೆ ಅರಿವಿಗೆ ಬಾರದೆ ಹೋಗಲಿಲ್ಲ. "ಈಗ ಸ್ವಲ್ಪ ಹೊತ್ತಿನ ಹಿಂದೆ ಸಾತಿ ಪಾತಿ ಬಂದಿದ್ದರು. ಅವರು ಹೇಳಿದರು. ನಿಜ ಇರಬೇಕಪ್ಪ. ನಿನಗೆ ಹೇಳಿದವರು ಯಾರು?"—"ರಾಮು, ಸೋಮು"—"ಒಳ್ಳೆಯದೇ ಆಗಲಿ ಕೆಟ್ಟದೇ ಆಗಲಿ, ಇಂಥ ವಿಚಾರಗಳಲ್ಲಿ ಮಕ್ಕಳ ಮಾತು ಸುಳ್ಳಾಗುವುದಿಲ್ಲ. ಆದರೆ ಆಗಲಿ ಬಿಡು. ಒಳ್ಳೆಯದೇ ಆಯಿತು. ಮೈಸೂರ ಬೆಂಗಳೂರ ಹೆಣ್ಣುಗಳೇ ಬರುತ್ತವೆ, ನಿನಗೇನು?" ಎಂದು ತಾಯಿ ಸಮಾಧಾನ ಹೇಳಿದರು.

## ೪೦

ಇಂದು ಮೈಲಾರಯ್ಯನವರ ಮನೆಯಲ್ಲಿ ಸಡಗರ, ಸಂಭ್ರಮ. ವಿಶ್ವನಾಥ ಕಮಲೆಯರ ವಿವಾಹದ ಲಗ್ನಪತ್ರಿಕೆ. ಈ ಶುಭಸಂದರ್ಭಕ್ಕೆ ಅನೇಕ ಗಣ್ಯ ಮಹನೀಯರೂ ಮಹಿಳೆಯರೂ ಆಹ್ವಾನಿತರಾಗಿದ್ದಾರೆ. ಕೃಷ್ಣಪ್ಪನವರಿಗೆ, ಕಮಲೆಯನ್ನು ತಮ್ಮ ಮಗನಿಗೆ ಕೊಡಲಿಲ್ಲವಲ್ಲಾ ಎಂದು ಅಷ್ಟು ಸಂತಾಪವಿಲ್ಲ; ಮೈಲಾರಯ್ಯ ತಮ್ಮನ್ನು ಪೂರ್ವಭಾವಿಯಾಗಿ ಒಂದು ಮಾತು ಕೇಳದೆ ತಾವು ಊರಿನಲ್ಲಿ ಇಲ್ಲದಿದ್ದಾಗ ನಂಜುಂಡಶಾಸ್ತ್ರಿಗಳೊಡನೆ ಮಾತಾಡಿ ಮದುವೆ ಗೊತ್ತುಮಾಡಿದ್ದಕ್ಕಾಗಿ ಸಂತಾಪ, ಜೊತೆಗೆ ಕ್ರೋಧ; ತನ್ನ ತಮ್ಮನ ಮಗಳು ತನ್ನ ಮಗನಿಗೆ ಇಲ್ಲವಾಯಿತೇ ಎಂದು ನರಸಮ್ಮ

ನವರಿಗೆ ಕೊರಗು. ಅಂತೂ ಇಬ್ಬರಿಗೂ ಲಗ್ನಪತ್ರಿಕೆಗೂ, ರಾತ್ರಿ ಆ ಸಂಬಂಧದ ಭೋಜನಕ್ಕೂ ಹೋಗಲು ಮನಸ್ಸಿಲ್ಲ. ಶಿಷ್ಟಾಚಾರವನ್ನು ಪಾಲಿಸಲು, ಮನಸ್ಸಿಲ್ಲದ ಮನಸ್ಸಿನಿಂದಲೇ ಮೈಲಾರಯ್ಯನವರ ಮನೆಗೆ ಹೋಗಲು ಗಂಡ ಹೆಂಡಿರಿಬ್ಬರೂ ನಿರ್ಧರಿಸಿದ್ದರು. "ನೀನೂ ಬಾ ಸುಂದರ-ಮೂರ್ತಿ ಬರದಿದ್ದರೆ ತಪ್ಪಾಗಿ ತಿಳಿದುಕೊಂಡಾರು" ಎಂದು ಕೃಷ್ಣಪ್ಪನವರು ಮಗನಿಗೆ ಉಪದೇಶಮಾಡಿದ್ದರು. ತಂದೆಯ ಮಾತಿಗೆ ವಿರುದ್ಧವಾಗಿ ನಡೆಯಬಾರದೆಂಬ ಮೊದಲ ಉದ್ದೇಶದಂತೆ ಎಲ್ಲರೊಂದಿಗೆ ಸುಂದರ-ಮೂರ್ತಿಯೂ ಸೋದರಮಾವನ ಮನೆಗೆ ಹೋದ. ವಿಶ್ವನಾಥನೂ ಅಲ್ಲಿಗೆ ಬಂದಿದ್ದ. ಅವನ ಸುಪ್ರಸನ್ನವಾದ ಮುಖವನ್ನು ನೋಡುತ್ತ ಕುಳಿತಿರುವುದು ಅವನಿಗೆ ಸಾಧ್ಯವಾಗಲಿಲ್ಲ. "ಇಲ್ಲೇ ಬರುತ್ತೇನೆ" ಎಂದು ಹೇಳಿ ಎದ್ದು ಹೊರಟುಹೋದ.

ಸೂರ್ಯ ಇನ್ನೂ ಮುಳುಗಿರಲಿಲ್ಲ. ಆಕಾಶವೆಲ್ಲಾ ಮುಂಗಾರ ಕರಿ ಮೋಡಗಳಿಂದ ಮುಚ್ಚಿ ಹೋಗಿದ್ದರೂ, ನಡುನಡುವೆ ಬೈಗಿನ ಕೆಂಪು ಇನ್ನಷ್ಟು ಕೆಂಪಾಗಿ ಮನೋಹರವಾಗಿತ್ತು. ಸುಂದರಮೂರ್ತಿಯ ಮನೋಗಗನದ ಪ್ರೇಮಸೂರ್ಯನೂ ಇನ್ನೇನು ಮುಳುಗುವವನಾಗಿದ್ದನು; ಆದ್ದರಿಂದ ಈಗ ಸುಂದರನ ಮನಸ್ಸಿನ ಆಗಸದಲ್ಲಿ ಎಂದಿಗಿಂತ ಇಂದು ಪರಮೋಜ್ವಲವಾಗಿ ಬೆಳಗತೊಡಗಿತು; ಆದರೆ, ನಿರಾಶೆಯ ಮುಗಿಲು ಅದನ್ನು ಕವಿದಿದ್ದಿತು.

ಸುಂದರನಿಗೆ ಎಲ್ಲಿಯೂ ಹೋಗಬೇಕೆಂಬ ಒಂದು ನಿರ್ದಿಷ್ಟವಾದ ಉದ್ದೇಶವಿರಲಿಲ್ಲ. ತೋಟಕ್ಕೆ ಹೋಗಿ ಚೆನ್ನಿಯನ್ನು ನೋಡಿಕೊಂಡು ಬರೋಣ ಎನ್ನಿಸಿತು. ಹಾಗೆಯೇ ತೋಟದ ಕಡೆ ಹೊರಟ. ತೋಟವನ್ನು ಸಮೀಪಿಸಿದಂತೆ ಕಮಲೆಯ ಚಿತ್ರ— ಕಮಲೆಯೇ — ಅವನ ಎದುರು ನಿಂತು ಪರಿಹಾಸ ಮಾಡುತ್ತಿದ್ದಂತೆ ತೋರಿತು. "ನನಗೆ ಗೊತ್ತು, ನಿನ್ನ ಹೃದಯ ನಿನಗೆ ಗೊತ್ತಿಲ್ಲದಂತೆಯೇ ಚೆನ್ನಿಯ ಕಡೆಗೆ ಒಲೆಯುತ್ತಿದೆ. ಅವಳು ಬ್ರಾಹ್ಮಣರ ಹುಡುಗಿಯಾಗಿದ್ದರೆ ನೀನು ಖಂಡಿತವಾಗಿ ನನ್ನನ್ನು ಮರೆತು ಅವಳ ಕೈ ಹಿಡಿಯುತ್ತಿದ್ದೆ. ಇದರ ಸುಳಿವು ತಿಳಿದೇ ನಾನು ವಿಶ್ವನಾಥನನ್ನು ಮದುವೆಯಾಗಲು ಒಪ್ಪಿದ್ದು" ಎಂದು ಕಮಲೆ ತನಗೆ ಹೇಳಿದಂತೆ ತೋರಿತು. "ಹಾಗಾದರೆ ಕಮಲೆ ಅಳುತ್ತಿದ್ದುದೇಕೆ?" ಎಂಬ ಪ್ರಶ್ನೆ ಅವನ ಮನಸ್ಸಿನಲ್ಲಿ

ಮೂಡಿತು. ಅವಳು ತನ್ನನ್ನಲ್ಲದೆ ಇನ್ನು ಯಾರನ್ನೂ ಪ್ರೀತಿಸಲು ಸಾಧ್ಯವಿಲ್ಲ. ಚೆನ್ನಿಯನ್ನು ತಾನು ಪ್ರೀತಿಸುವುದು — ತನ್ನ ತಂಗಿಯಂತೆ; ಇದರಲ್ಲಿ ಸಂದೇಹವಿಲ್ಲ. ಇನ್ನು ಚೆನ್ನಿಯ ಆರೈಕೆ, ಪೋಷಣೆ— ಇದೇ ತನ್ನ ಮುಖ್ಯ ಕೆಲಸ. ತೋಟವನ್ನು ಸಮೀಪಿಸಿದಂತೆ ಚೆನ್ನಿಯ ನೆನಪು – ಅವಳ ಕುರಿತ ಆಲೋಚನೆ, ಇವುಗಳಲ್ಲಿ ಅವನ ಮನಸ್ಸು ಕಮಲೆಯ ನೆನಪನ್ನು ಮರೆಯತೊಡಗಿತು. ಇದ್ದಕ್ಕಿದ್ದಂತೆ ಅವನಿಗೆ ಆಶ್ಚರ್ಯವಾಯಿತು. ಇದುವರೆಗೆ ಪ್ರೀತಿಸಿದ್ದ ವ್ಯಕ್ತಿಯನ್ನು ಮರೆಯುವುದು ಇಷ್ಟು ಸುಲಭವಾಯಿತೆ? ಇಲ್ಲ; ಸಾಧ್ಯವಿಲ್ಲ. ಕಮಲೆ ತನ್ನನ್ನು ಕರೆಯುತ್ತ ಇದ್ದಾಳೆ. ಆದರೆ, ಅವಳನ್ನು ಕೂಡುವುದು ಹೇಗೆ? ಮುಂದಿನ ಜನ್ಮದಲ್ಲಿ ಮಾತ್ರ ಸಾಧ್ಯ. ಮುಂದಿನ ಜನ್ಮದಲ್ಲಿ! ಅಲ್ಲಿಯ ವರೆಗೂ ತಾನು ಒಂಟಿಯಾಗಿರಬೇಕೆ — ಬೇಸರವಿಲ್ಲದೆ ಕಾಯುತ್ತ? ಇನ್ನು ಯಾರನ್ನಾದರೂ ಮದುವೆಯಾಗುವಂತೆ ತಂದೆ-ತಾಯಿ ಬಲವಂತ ಮಾಡಿದರೋ? ಅದು ಸಾಧ್ಯವಿಲ್ಲ. ಕಾಯುವುದೂ ಸಾಧ್ಯವಿಲ್ಲ. ಆದ್ದರಿಂದ, ಈ ಬಾಳನ್ನು ಬೇಗ ಕೊನೆಗಾಣಿಸಿಕೊಂಡರೆ ಕಮಲೆಗಾಗಿ ಯುಗಕಾಲ ಬೇಕಾದರೂ ಕಾಯುತ್ತ ಇರಬಹುದು. ಈ ಬಾಳನ್ನು ಮುಗಿಸಿಕೊಳ್ಳುವುದೇ ಉಳಿದಿರುವ ಉಪಾಯ.

ಆಕಾಶದಲ್ಲಿ ಇದ್ದಕ್ಕಿದ್ದ ಹಾಗೆ ಮಿಂಚತೊಡಗಿತು; ಗುಡುಗಿತು; ಗಾಳಿಯೆದ್ದಿತು; ಮುಗಿಲೋಟ ಮೊದಲಾಯಿತು. ತೋಟದ ತೆಂಗು ಅಡಕೆ ತಲೆದೂಗತೊಡಗಿದವು; ಮರಗಳ ತಿಕ್ಕಾಟದಿಂದ “ಭರಭರ ಪರಪರ’ ಸದ್ದು ಕೇಳತೊಡಗಿತು. ಪಟಪಟನೆ ದಪ್ಪ ಹನಿಗಳು ಬೀಳತೊಡಗಿದವು.

* * * *

ಲಗ್ನಪತ್ರಿಕೆ ಆಯಿತು. ಮದುವೆಯ ಶಾಸ್ತ್ರ ಉಳಿಯಿತೆ ಹೊರತು, ಕಮಲೆ ವಿಶ್ವನಾಥ ವಧೂವರರಾದರು. ಬಂದವರೆಲ್ಲಾ ವಧೂವರರನ್ನು ಮುಂದಾಗಿಯೇ ಹರಸಿದರು. ಎಲ್ಲರಿಗೂ ತಾಂಬೂಲ, ಕೊಬ್ಬರಿ-ಸಕ್ಕರೆ ವಿನಿಯೋಗವಾಯಿತು. “ಒಳ್ಳೆ ಶುಭಲಗ್ನದಲ್ಲಿ ಲಗ್ನಪತ್ರಿಕೆ ಗೊತ್ತುಮಾಡಿದ್ದೀರಿ. ಮಳೆರಾಯ ಕಣ್ಣುಬಿಟ್ಟ ಹಾಗೆ ಕಾಣುತ್ತೆ. ಆಗಲೇ ಹನಿಯುತ್ತ ಇದೆ” ಎಂದು ಬಂದವರೆಲ್ಲಾ ಬೇಗಬೇಗನೆ ಮನೆಗೆ ತೆರಳಿದರು. ಭೋಜನಕ್ಕೆ ಆಹ್ವಾನಿತರಾಗಿದ್ದ ನಂಜುಂಡಶಾಸ್ತ್ರಿಗಳ ಮನೆಯವರೂ ಕೃಷ್ಣಪ್ಪನವರ

ಮನೆಯವರೂ ಅಲ್ಲಿಯೇ ಉಳಿದರು.

* * * *

ಸುಂದರ ಮಳೆಹನಿಯಲ್ಲಿಯೇ ನದಿಯ ಕಡೆಗೆ ತಿರುಗಿ ಬೇಗಬೇ
ನಡೆದು ಹೋದ. ಮಳೆ ಎಂದು ಬೇಗಬೇಗನೆ ನದಿಯಿಂದ ಹಿಂದಿರುಗುತ್ತಿ
ಒಬ್ಬಿಬ್ಬರು ಹೆಂಗಸರು ನದಿಯ ಕಡೆ ಹೋಗುತ್ತಿದ್ದ ಸುಂದರನನ್ನು ದಿಟ್ಟಿ
ನೋಡಿದರು; ಸುಂದರನ ಗುರುತು ಕಂಡ ಗಂಡಸೊಬ್ಬರು "ದೊಡ್ಡದಾಗ
ಹಾಗಿದೆ ಮಳೆ. ಇದೇನು ಈಗ ನದಿಯ ಕಡೆ ಹೊರಟೆ?" ಎಂದು ಪ್ರಶ್ನಿ
ದರು. ಸುಂದರ ಉತ್ತರ ಕೊಡದೆಯೇ ನದಿಯ ಕಡೆಗೆ ಧಾವಿಸಿದ.

ಕತ್ತಲೆ ಹಬ್ಬಿತು; ಮಿಂಚು ಫಳಫಳಿಸತೊಡಗಿತು; ಗುಡುಗಿನ ಆರ್ಭ
ಹೆಚ್ಚಾಯಿತು; ಗಾಳಿ ಬಿರ್ರನೆ ಬೀಸುತ್ತಿತ್ತು; ಹಳೆಯ ಮರಗಳ ರೆಂಬೆಗ
ಮುರಿದುಬೀಳುತ್ತಿದ್ದುವು; ದಡದ ಒಂದೆರಡು ಬುಡ ಭದ್ರವಿಲ್ಲದ ಮರಗ
ಉರುಳಿಬಿದ್ದುವು. ಪ್ರಕೃತಿಯಂತೆಯೇ ಸುಂದರನ ಮನಸ್ಸೂ ಪ್ರಕ್ಷು
ವಾಗಿತ್ತು.

ಸುಂದರ ಹೋಗಿ ನೆಟ್ಟನೆ ನದಿಯ ಸ್ನಾನಘಟ್ಟದ ಕೆಳಗಿನ ಮೆಟ್ಟಿ
ಮೇಲೆ ನೀರಿನೊಳಕ್ಕೆ ಕಾಲನ್ನು ಇಳಿಯಬಿಟ್ಟುಕೊಂಡು, ಕಡೆಯ ನಿರ್ಧಾ
ಮಾಡಲು ಅಲ್ಲಿ ಕುಳಿತು "ಥೂ, ಯೋಚನೆ ಮಾಡಬಾರದು; ಆಲೋಚ
ನಿರ್ಧಾರಕ್ಕೆ ಶತ್ರು" ಎಂದು ಹೊಳೆಗೆ ಬೀಳಲು ಅನುವಾದ. ತಟ್ಟ
ತೋರಿತು: "ಬೇಸಗೆಯ ಹೊಳೆ, ಇಲ್ಲಿ ಆಳ ಇರಲಾರದು. ಬೇರೆಯ ಕ
ಹೋಗೋಣ" ಎಂದು ಮೆಟ್ಟಿಲುಗಳನ್ನೇರಿ, ದಡದ ಪಕ್ಕದಲ್ಲಿ ಕಡಿದಾಗಿ
ಅಶ್ವತ್ಥಕಟ್ಟೆಯ ಮೇಲಕ್ಕೆ ಹೋಗಿ ನಿಂತ. ಅದರ ಕೆಳಗೆ ಸರಿಯಾಗಿ ನದಿ
ಒಂದು ಮಡುವಿನ ತಾಣ ಅದು ಬೇಸಗೆಯಲ್ಲೂ ತಕ್ಕಮಟ್ಟಿಗೆ ಆಳವಾಗಿ
ವುದು ಅಲ್ಲಿಗೆ ಧುಮುಕಿ, ತನಗೆ ಈಜುವುದೂ ಬರುತ್ತಿದ್ದುದರಿಂದ ಈಜ
ಪ್ರಯತ್ನ ಮಾಡದೆಯೇ ಮುಳುಗಬೇಕೆಂದು ಆಲೋಚನೆ ಮಾಡಿದ. ಅದ
ಏನು ಮಾಡಬೇಕು? ಕೈಕಾಲು ಕಟ್ಟಿಕೊಂಡು ಬೀಳಬೇಕು. ಒಂದು ಹ
ಕ್ಕಾಗಿ ಹುಡುಕಾಡತೊಡಗಿದ. ಹಗ್ಗ ಸಿಕ್ಕಲಿಲ್ಲ.

ಮಳೆ ಜೋರಾಯಿತು. ಹತ್ತಿರದಲ್ಲಿ ಒಂದು ಮುರುಕು ಮಂಟಪ. ಅ
ಹಗ್ಗದ ತುಂಡೊಂದು ಸಿಕ್ಕಿದರೂ ಸಿಕ್ಕಬಹುದೆಂದು ಅಲ್ಲಿಗೆ ಹೋದ; ಹು

ಕಾಡಿದ; "ಪಾಪಿ ಸಮುದ್ರ ಹೊಕ್ಕರೂ ಮೊಳಕಾಲುದ್ದ ನೀರು. ಒಂದು ಹಗ್ಗದ ತುಂಡೂ ಸಿಕ್ಕವೊಲ್ಲದು" ಎಂದು ಗೊಣಗುತ್ತ ಮತ್ತೆ ತಡಕಾಡ ತೊಡಗಿದ. ಅವನ ಆಶ್ಚರ್ಯಕ್ಕೆ ಒಂದು ಹಗ್ಗದ ತುಂಡು ಅವನ ಕಾಲಬಳಿ ಮೇಲಿಂದ ಬಂದು ಬಿದ್ದಿತು! "ಎಲಾ! ಇದೇನು!" ಎಂದು ಸುಂದರ ಸುತ್ತುಮುತ್ತಲೂ ತಿರುಗಿ ನೋಡಿದ. ಕಾರ್ಗತ್ತಲೆ ತುಂಬಿದೆ ಎಲ್ಲೆಲ್ಲೂ. ಏನೂ ಕಾಣದು. ಆದರೆ, "ಹ ಹ್ಹ ಹಾ!"ಎಂಬ ಬಿರುನಗೆ ಕೇಳಿಬಂದಿತು. ಸುಂದರನಿಗೆ ಮತ್ತಷ್ಟು ಆಶ್ಚರ್ಯವಾಯಿತು. ನಗೆಯ ಸದ್ದು ಕೇಳಿದ ಕಡೆ ತಿರುಗಿ ದಿಟ್ಟಿಸಿ ನೋಡಿದ. ಕತ್ತಲೆಯಲ್ಲಿ ಯಾರೂ ಕಾಣಿಸಲಿಲ್ಲ. "ಯಾರು?" ಎಂದು ಪ್ರಶ್ನಿಸಿದ. "ಈ ಹೊತ್ತು ನಾನು ಅಕಸ್ಮಾತ್ ಇಲ್ಲಿಗೆ ಬಂದದ್ದು ಸಾರ್ಥಕವಾಗಿದ್ದರೂ ಇರಬಹದು. ಒಂದು ಪ್ರಾಣವನ್ನು ಉಳಿಸುವ ಸುಸಂಧಿಯನ್ನು ಭಗವಂತನು ಕಲ್ಪಿಸಿ ಕೊಟ್ಟಿರುವನಾದ್ದರಿಂದ ಈ ಸಂಜೆಗೆ ಮಾತ್ರ ನನ್ನ ಮೌನವ್ರತವನ್ನು ಮುರಿಯುತ್ತೇನೆ. ನೀನು ಯಾರು, ಹೇಳು?"— ಎಂದು ವಯಸ್ಕನಾದವನೊಬ್ಬನ ಧ್ವನಿಯ ನುಡಿಗಳು ಕೇಳಿಬಂದುವು.

"ನಾನು ಈ ಊರಿನವನು." ಸುಂದರ ಉತ್ತರಕೊಟ್ಟ.

"ಅದು ಗೊತ್ತು. ಪ್ರಾಣ ಕಳೆದುಕೊಳ್ಳಬೇಕೆನ್ನುವವರು ಬೇರೆ ಊರಿಗೆ ಯಾಕೆ ಹೋಗುತ್ತಾರೆ? ಊರು ಎಂದ ಮೇಲೆ ಹೊಳೆಯೋ, ಬಾವಿಯೋ, ಕೆರೆಯೊ ಇದ್ದೇ ಇರುತ್ತದೆ. ಇಲ್ಲ, ನೀನು ಕಾಲಿಗೆ ಕಟ್ಟಿಕೊಳ್ಳಬೇಕೆಂದು ಬಯಸುತ್ತಿದ್ದ ಹಗ್ಗ ಕುತ್ತಿಗೆಗಾಗುತ್ತದೆ. ನಿನ್ನ ಹೆಸರೇನು?"

"ಸುಂದರ; ಸುಂದರಮೂರ್ತಿ."

"ಸುಂದರಮೂರ್ತಿ! ಯಾರ ಮಗ?"

"ಶಾನುಭೋಗ ಕೃಷ್ಣಪ್ಪನವರ ಮಗ."

ನಿಂತಿದ್ದ ವ್ಯಕ್ತಿ ತನ್ನ ಭುಜದ ಮೇಲೆ ಕೈ ಹಾಕಿದ ಅರಿವಾಯಿತು.

"ಮಗೂ ನೀನು ಕೆಟ್ಟ ಕೆಲಸವನ್ನು ಆಲೋಚಿಸಿದ್ದೆ."

"ಹೌದು, ಅದು ನನಗೂ ಗೊತ್ತು. ನೀವು ಅದಕ್ಕೆ ವಿಘ್ನವಾಗಿ ಬಂದಿರಿ. ಈಗ ನೀವು ಯಾರು ಹೇಳಿ?"

ಆಗ ಎರಡು ಕ್ಷಣ ಮಿಂಚಿನಿಂದ ಬಾನೆಲ್ಲ ಬೆಳಗಿತು; ಮಂಟಪವೂ ಬೆಳಗಿತು.

"ಮಿಂಚಿನ ಬೆಳಕಿನಲ್ಲಿ ನಾನು ಯಾರೆಂಬುದು ಗೊತ್ತಾಯಿತೆ, ಮಗೂ?"

"ಗೊತ್ತಾಯಿತು."

"ನನ್ನಲ್ಲಿ ಅಪನಂಬಿಕೆಯಿಡಲು ಕಾರಣ ಇಲ್ಲ ತಾನೆ?"

"ಇಲ್ಲ."

"ಹಾಗಾದರೆ, ನಿನ್ನ ಈ ಉದ್ಯೋಗಕ್ಕೆ ಕಾರಣವೇನೆಂಬುದನ್ನು ತಿಳಿಸಿದರೆ, ಅದಕ್ಕೆ ನದಿಯ ಪಾಲಾಗುವುದಲ್ಲದೆ ಸಹಜವಾದ ಬೇರೆಯ ಪರಿಹಾರೋಪಾಯ ನನಗೆ ತೋರಿದರೆ ಹೇಳುತ್ತೇನೆ. ನನ್ನಲ್ಲಿ ನಂಬಿಕೆಯಿಟ್ಟು ತಿಳಿಸುವೆಯೋ?"

"ಆಗಲಿ, ತಿಳಿಸುತ್ತೇನೆ" ಎಂದು ಸುಂದರಮೂರ್ತಿ ತಾನು ಕಮಲೆಯನ್ನು ಮದುವೆಯಾಗಬೇಕೆಂದಿದ್ದುದನ್ನೂ ಅವಳನ್ನು ವಿಶ್ವನಾಥನೆಂಬವನಿಗೆ ಕೊಟ್ಟು ಮದುವೆಯಾಗಲಿರುವುದನ್ನೂ ಸಂಕ್ಷೇಪವಾಗಿ ತಿಳಿಸಿದ.

"ಆ ಹುಡುಗಿಯನ್ನು ಮದುವೆಯಾಗುವುದಲ್ಲದೆ ನಿನಗೆ ಜೀವನದಲ್ಲಿ ಬೇರೆಯ ಘನವಾದ ಉದ್ದೇಶವಿಲ್ಲವೋ?"

"ಇದೆ."

"ಅಂತಹ ಬೇರೆಯ ಉದ್ದೇಶವಿಲ್ಲದಿದ್ದರೂ ಹೀಗೆ ಸಾಯುವುದು ಅವಿವೇಕ. ಸಾವು ಎಂದಾದರೊಮ್ಮೆ ತಾನಾಗಿಯೇ ಬರುತ್ತದೆ. ಅದಕ್ಕೆ ನಾವು ಪ್ರಯತ್ನಪಡಬೇಕಾಗಿಲ್ಲ ಸರಳವಾದ ಜೀವನದಲ್ಲಿಯೇ ಅಪಾರ ಸುಖವುಂಟು. ಬದುಕಿಗಾಗಿ ಬದುಕುವುದರಲ್ಲಿಯೇ ಉಲ್ಲಾಸವಿದೆ. ಹೇಗಾದರೂ ಸರಿಯೆ, ನಾವು ಬದುಕಿರಬೇಕೆಂಬುದೇ ಭಗವತ್ಸಂಕಲ್ಪ. ಹೀಗಿರುವಾಗ, ನೀನು ಬೇರೆಯ ಜೀವನೋದ್ದೇಶಗಳನ್ನಿಟ್ಟುಕೊಂಡೂ ಸಾಯಲು ಹವಣಿಸುತ್ತ ಇದ್ದೆಯಲ್ಲ? ಎಂಥ ಮೌಢ್ಯ! ನಿನ್ನ ಉದ್ದೇಶವಾದರೂ ಏನು? ನಾನು ತಿಳಿಯಬಹುದೆ?"

ಸುಂದರಮೂರ್ತಿ ವಿವರಿಸಿದ: "ಹರಿಜನರ, ದೀನದಲಿತರ, ಸೇವೆ ಮಾಡುವುದು; ಅವಕಾಶ ಒದಗಿದರೆ ಬೇರೆಯ ರೀತಿಯಲ್ಲಿಯೂ ದೇಶಸೇವೆ

ಮಾಡುವುದು.'' ಹೀಗೆ ವಿವರಿಸುತ್ತ ಇದ್ದಾಗ, ಪ್ರಾಸ್ತಾವಿಕವಾಗಿ ಚೆನ್ನಿ ಯೆಂಬ ಹೊಲೆಯರ ಹುಡುಗಿಯಿಂದ ಮೊದಲು ತನಗೆ ಈ ಪ್ರೇರಣೆ ಆಯಿ ತೆಂದೂ ತಿಳಿಸಿದ.

"ಚೆನ್ನಿ ಯಾರು ? ''

"ನಮ್ಮ ತೋಟದ ಕಾವಲು ಮಾದನ ಮಗಳು.''

ಸಂಭಾಷಣೆ ನಡೆಸುತ್ತಿದ್ದ ವ್ಯಕ್ತಿ ಕೆಲಕಾಲ ಮೌನವಾಗಿದ್ದ.

"ದೇಶವನ್ನು ಉದ್ಧಾರಮಾಡಲಾಗದಿದ್ದರೂ ಒಂದು ಬಡಪಾಯಿ ಹೆಣ್ಣನ್ನು ಉದ್ಧಾರಮಾಡಬಹುದಲ್ಲವೆ ? "

"ಮಾಡಬಹುದು. ಹಾಗೆ ಮಾಡಬೇಕೆಂಬುದೂ ನನ್ನ ಉದ್ದೇಶ ಗಳಲ್ಲಿ ಒಂದು.''

"ಇದುವರೆಗೆ ಏನಾದರೂ ಮಾಡಿದ್ದಿಯೋ ? "

ಸುಂದರಮೂರ್ತಿ ತನ್ನ ತಂದೆ ಕೃಷ್ಣಪ್ಪನವರು ಮಾದನಲ್ಲೂ ಅವನ ಮಗಳಲ್ಲೂ ತೋರುತ್ತಿದ್ದ ವಿಶ್ವಾಸ, ಅವರನ್ನು ಕಾಪಾಡಿಕೊಂಡು ಬರುತ್ತ ಇರುವ ರೀತಿ ಇವೆಲ್ಲವನ್ನೂ ವಿವರಿಸಿದ. ಅದರಲ್ಲಿ ತನ್ನ ಅಲ್ಪ ಪಾತ್ರವನ್ನೂ ತಿಳಿಸಿದ. ಚೆನ್ನಿ ಖಾಯಿಲೆ ಬಿದ್ದಾಗ ತಾನು ಮಾಡಿದ ಕೆಲಸವನ್ನು ವರ್ಣಿಸಿದ.

"ನಿಮ್ಮ ತಂದೆ ಇದಕ್ಕಿಂತ ಹೆಚ್ಚು ಮಾಡಲಾರರು. ನೀನು ಆ ಹುಡುಗಿಗೆ ವಿದ್ಯೆ ಕಲಿಸಬಹುದು. ವಿದ್ಯೆ ಕಲಿತ ಹೆಣ್ಣು ಹೆಚ್ಚು ಸ್ವಾವಲಂಬಿ ಯಾಗಿರಬಹುದು. ಹಾಗೆ ಮಾಡಬಹುದಲ್ಲವೆ ? "

"ಮಾಡಬಹುದು. ಮಾಡುತ್ತೇನೆ.''

"ಆ ಹುಡುಗಿ ಈಗ ಆರೋಗ್ಯವಾಗಿದ್ದಾಳೆಯೇ ? "

"ಆರೋಗ್ಯವಾಗಿದ್ದಾಳೆ."

"ಸಂತೋಷ. ಈಗ ಮಳೆ ನಿಂತಿರುವ ಹಾಗಿದೆ. ನೀನು ಮನೆಗೆ ಹೋಗಬಹುದಲ್ಲವೆ ? ''

"ನಿಮ್ಮ ಅಪ್ಪಣೆಯಾದರೆ ಹೋಗಿಬರುತ್ತೇನೆ.''

ಸುಂದರಮೂರ್ತಿ ಆ ಅಪರಿಚಿತ ವ್ಯಕ್ತಿಯ ಕಾಲಿಗೆ ಎರಗಿದ. ಆತ "ದೀರ್ಘಾಯುಷ್ಮಾನ್ ಭವ'' ಎಂದು ಹರಸಿದರು.

ಹೋಗುವ ಮುನ್ನ, "ತಾವು ಯಾರೆಂದು ತಿಳಿಯಲಿಲ್ಲ. ನಾಳೆ ಬೆಳಗ್ಗೆ ಬರುತ್ತೇನೆ. ಅನುಗ್ರಹ ಮಾಡಬೇಕು ? '' ಎಂದು ಕೇಳಿದ.

'' ನಾಳೆ ನಾನು ಇಲ್ಲಿ ಇರುವುದಿಲ್ಲ. ನಾನು ಒಂದು ಕಡೆ ನಿಲ್ಲತಕ್ಕವ ನಲ್ಲ. ಸುತ್ತುತ್ತ ಇರುತ್ತೇನೆ. ಮಳೆ ಬಂತು. ಇಲ್ಲಿ ಬಂದು ತಂಗಿದೆ. ನಾಳೆ ಎಲ್ಲಿಗೆ ಹೋಗುತ್ತೇನೆಯೋ ನನಗೇ ತಿಳಿಯದು. ಅಂತೂ ಇಲ್ಲಿ ಇರುವುದಿಲ್ಲ. ಎಂದಾದರೂ ಮತ್ತೆ ಬಂದರೂ ಬಂದೆ."

"ಹಾಗಾದರೆ ನಾನು ಹೋಗಿ ಬರಲೆ ? "

" ಒಳ್ಳೆಯದು.''

ಸುಂದರಮೂರ್ತಿಯ ಮನಸ್ಸು ಈಗ ಶಾಂತವಾಗಿತ್ತು. ಮಳೆ ಸಂಪೂರ್ಣವಾಗಿ ನಿಂತು, ಆಕಾಶದಲ್ಲಿ ಆಶಾಜ್ಯೋತಿಯ ಕಿಡಿಗಳೆಂಬಂತೆ ನಕ್ಷತ್ರಗಳು ತೊಳಗುತ್ತಿದ್ದವು. ಅವನು ಮೈಲಾರಯ್ಯನವರ ಮನೆಗೆ ಹೋದ; ಎಲೆ ಹಾಕಿ ಬಡಿಸಿತ್ತು; ದುಃಖವನ್ನೆಲ್ಲ ನುಂಗಿಕೊಂಡು, ಎಲ್ಲರೊಡನೆ ಕುಳಿತು ಊಟದ ಶಾಸ್ತ್ರ ಮುಗಿಸಿದ.

## ೪೧

ಜ್ಯೈಷ್ಠ ಶುದ್ಧ ಪಂಚಮಿ, ವಿಶ್ವನಾಥನ ಮದುವೆ. ಕಾಲೇಜು ತೆರೆಯುವು ದಕ್ಕೆ ಇನ್ನೂ ಹದಿನೈದು ಇಪ್ಪತ್ತು ದಿನಗಳಿದ್ದುವು. ಎಷ್ಟೇ ಮನಸ್ಸಿಗೆ ಸಮಾಧಾನ ತಂದುಕೊಂಡರೂ ಸುಂದರಮೂರ್ತಿಗೆ ಕಮಲೆ ಹಸೆಮಣೆಯ ಮೇಲೆ ವಿಶ್ವನಾಥನೊಂದಿಗೆ ಕುಳಿತಿರುವುದನ್ನು ನೋಡುವ ಸಂದರ್ಭ ಅಹಿತ ವಾಗಿ ಕಂಡಿತು. ತನಗೆ ಏನೋ ಬೇಸರವಾಗಿದೆಯೆಂದೂ ತಾನು ಬೆಂಗಳೂ ರಿಗೆ ಹೋಗಿ ಬರುವುದಾಗಿಯೂ ತಂದೆ ತಾಯಿಗೆ ತಿಳಿಸಿ, ಅವರ ಅಪ್ಪಣೆ ಪಡೆದು, ಅವನು ಬೆಂಗಳೂರಿಗೆ ಭಾವನ ಮನೆಗೆ ಹೊರಟುಹೋದ. ಹೋಗುವ ಮುನ್ನ, ಆ ಬೇಸರದ ಕಾರಣ ಏನೆಂಬುದು ಕೃಷ್ಣಪ್ಪನವರಿಗಿಂತ ಹೆಚ್ಚಾಗಿ ನರಸಮ್ಮನವರಿಗೆ ಸ್ಪಷ್ಟವಾಗಿ ಗೊತ್ತಾಯಿತು. ಆದರೂ, "ಕಮಲೆಯ ಮದುವೆಗೆ ಇರುವುದಿಲ್ಲವೇನೋ ? " ಎಂದು ಮಗನನ್ನು ಕೇಳಿದರು ನರಸಮ್ಮ. "ನೀವು ಹಿರಿಯರು ಇರುತ್ತೀರಲ್ಲ, ನಾನು ಇದ್ದು ಏನಾಗಬೇಕು? "ಎಂದು ಸುಂದರಮೂರ್ತಿ ಜುಗುಪ್ಸೆಯಿಂದ ಉತ್ತರ ಕೊಟ್ಟ.

"ಏನಾದರೂ ತಪ್ಪು ತಿಳಿದುಕೊಂಡಾರಪ್ಪ ನಿನ್ನ ಮಾವ ಅತ್ತೆ" ಎಂದು ಕೃಷ್ಣಪ್ಪನವರು ವಿವೇಕ ಹೇಳಿದರು. "ಇನ್ನು ಮಾವ ಅತ್ತೆ ಎಲ್ಲಿ ಬಂತು? ಸೋದರಮಾವ, ಕಾವೇರಮ್ಮ ಎನ್ನಿ" ಎಂದು ಗಂಡನ ಮಾತನ್ನು ತಿದ್ದಿದರು ನರಸಮ್ಮ. "ತಪ್ಪು ತಿಳಿದುಕೊಂಡು ಆಗಲೇ ಆಗಬೇಕಾದದ್ದು ಆಯಿತಲ್ಲ, ಇನ್ನೇನು ಉಳಿದಿದೆ? ನಮ್ಮ ಮನೆಗೆ ಕೊಡುವುದಕ್ಕೆ ಮಾವನಿಗೆ ಇನ್ನು ಹೆಣ್ಣುಮಕ್ಕಳಿಲ್ಲವಲ್ಲ?" ಎಂದು ಸುಂದರ ಸ್ವಲ್ಪ ವ್ಯಂಗ್ಯವಾಗಿಯೇ ಉತ್ತರ ಕೊಟ್ಟಿದ್ದ. ಆಗ ತಡೆಯಲಾಗದೆ ದುಃಖ ಒತ್ತರಿಸಿಕೊಂಡು ಬಂದಿತು. ಅದು ಹೇಗೊ ಪ್ರಯತ್ನಪೂರ್ವಕವಾಗಿ ಕಂಬನಿ ತಡೆದುಕೊಂಡ. ಬೆಂಗಳೂರಿಗೆ ಹೋಗಬೇಕೆಂಬ ಅವನ ಈ ನಿರ್ಧಾರಕ್ಕೆ ಅವನ ಮನಸ್ಸಿನ ಉದ್ವೇಗ ಪ್ರೋತ್ಸಾಹ ಕೊಟ್ಟು, ಅವನು ಬೆಂಗಳೂರಿಗೆ ಹೊರಟೇಬಿಟ್ಟ.

ಸುಂದರಮೂರ್ತಿ ಅನಿರೀಕ್ಷಿತವಾಗಿ ಬೆಂಗಳೂರಿಗೆ ಬಂದದ್ದು ಅವನ ಅಕ್ಕ ಭಾವನಿಗೆ ಆಶ್ಚರ್ಯವುಂಟುಮಾಡಿತು. ಸುಂದರಮೂರ್ತಿ ಅಕ್ಕನ ಮುಂದೆ ತನ್ನ ಅಳಲನ್ನೆಲ್ಲಾ ತೋಡಿಕೊಂಡ.

"ಮಾವನಿಗೆ ಒಂದು ಮಾತು ಹೇಳಬೇಕಾಗಿತ್ತು ನೀನು, ಕಮಲೆಯನ್ನ ನಾನೇ ಮದುವೆಮಾಡಿಕೊಳ್ಳಬೇಕು ಅಂತ."

"ಏನು ಅಕ್ಕ ನೀನು ಹೇಳುವುದು, ಹೆಣ್ಣು ಕೊಡಿ ಎಂದು ಬೇಡಿಕೊಳ್ಳಲೇ!"

"ನಿನಗೆ ಹೆಣ್ಣಿಗಿಂತ ಮಾನ ಹೆಚ್ಚಾಯಿತು. ಹಾಗಿದ್ದ ಮೇಲೆ ತೆಪ್ಪನಿರು. ಹೆಂಗಸರ ಹಾಗೆ ಮುಖ ಜೋಲು ಹಾಕಬೇಡ. ಇದು ನಿನ್ನ ಒಳ್ಳೆಯದಕ್ಕೇ ಆಯಿತೇನೋ. ಯಾರಾದರೂ ಭಾಗ್ಯವಂತರ ಮನೆಯ ಹೆಣ್ಣು ಕಮಲೆಗಿಂತ ಚೆನ್ನಾಗಿರುವವಳು ಸಿಕ್ಕುತ್ತಾಳೆ, ಸುಮ್ಮನೆ ಇದನ್ನೇ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಈ ಊರಿನ ಹೆಣ್ಣು ಯಾವುದಾದರೂ ನೋಡಿ ಅವರೇ ಬೇಕಾದರೆ ಮದುವೆಮಾಡಿಸುತ್ತಾರೆ"

"ಇಲ್ಲ, ಅಕ್ಕ. ನಾನು ಮದುವೆಯನ್ನೆ ಮಾಡಿಕೊಳ್ಳುವುದಿಲ್ಲ ಅಂತ ತೀರ್ಮಾನ ಮಾಡಿಬಿಟ್ಟಿದ್ದೇನೆ."

"ಸರಿ ಸರಿ, ಗಂಡಸರೆಲ್ಲಾ ಹೀಗೆಯೇ. ಅವರೂ ತಮ್ಮ ಸೋದರ ಮಾವನ ಮಗಳನ್ನೇ ಮದುವೆಯಾಗಬೇಕು ಅಂತ ಇದ್ದರಂತೆ. ಏನೋ

ಒದಗಿತು, ಆ ಹೆಣ್ಣು ಮದುವೆಯಾಗಲಿಲ್ಲ. ನನ್ನನ್ನು ಮದುವೆ ಮಾಡಿಕೊಂಡು ಸುಖವಾಗಿಲ್ಲವೆ? ಒಂದು ಸಲ ಹೆಣ್ಣು, ಮದುವೆ ಅಂತ ಮನಸ್ಸಿಗೆ ಇಳಿದುಬಿಟ್ಟರೆ ಈ ತೀರ್ಮಾನ ಗೀರ್ಮಾನ ಎಲ್ಲ ಗಾಳಿಗೆ ತೂರಿಕೊಂಡು ಹೋಗುತ್ತೆ'' ಎಂದು ಗಂಗಮ್ಮ ನಕ್ಕಳು.

ಅಕ್ಕ ತಮ್ಮನ ಮಾತನ್ನು ಮೌನವಾಗಿ ಕೇಳುತ್ತ ಕುಳಿತಿದ್ದ ರಾಮಸ್ವಾಮಯ್ಯ, ಮುಗುಳುನಗೆ ನಕ್ಕು, ''ನಿಮ್ಮ ಅಕ್ಕ ತುಂಬ ಅನುಭವಸ್ಥೆಯಪ್ಪ. ಅವಳ ಮಾತು ಕೇಳು'' ಎಂದ.

ಸುಂದರಮೂರ್ತಿ ಬಂದ ತರುಣದಲ್ಲಿಯೇ, ಕಮಲೆಯ ಮದುವೆಗೆ ಗಂಗಮ್ಮನನ್ನೂ ಕರೆದುಕೊಂಡು ಖಂಡಿತ ಬರಬೇಕೆಂದು ಪುನಃ ಪುನಃ ಬಲಾತ್ಕರಿಸುವ ವಾಕ್ಯಗಳಿಂದ ತುಂಬಿದ ಒಂದು ದೀರ್ಘ ಪತ್ರ ನ್ಯೈಲಾರಯ್ಯನವರಿಂದ ರಾಮಸ್ವಾಮಯ್ಯನಿಗೆ ಬಂದಿತು. ಹೊರಡುವ ವಿಚಾರದಲ್ಲಿ ರಾಮಸ್ವಾಮಯ್ಯ ಗಂಗಮ್ಮನ ತೀರ್ಮಾನವನ್ನು ಅಪೇಕ್ಷಿಸಿದ. ''ಸುಂದರಮೂರ್ತಿಯೇ ಮದುವೆಗೆ ತಪ್ಪಿಸಿಕೊಂಡು ಇಲ್ಲಿಗೆ ಬಂದು ಕುಳಿತಿರುವಾಗ ನಾವು ಹೋಗಿ ಆಗಬೇಕಾದ್ದೇನು? ಅವನನ್ನು ಬಿಟ್ಟು ಕಮಲೆಯ ಮದುವೆ ನಡೆದೇ ಹೋಗುತ್ತದೆ. ನಾವು ಹೋಗದಿದ್ದರೂ ಮದುವೆ ನಿಲ್ಲುವುದಿಲ್ಲ. ನಾವು ಹೋದರೆ ಹದಿನೈದು ಇಪ್ಪತ್ತು ರೂಪಾಯಿ ಖರ್ಚಾಗುತ್ತೆ. ಕಮಲೆಗೆ ಆಶೀರ್ವಾದ ಮಾಡಿ ಇಪ್ಪತ್ತು ರೂಪಾಯಿ ಕಳಿಸಿಕೊಡಿ'' ಎಂದು ತೀರ್ಮಾನಿಸಿಬಿಟ್ಟಳು ಗಂಗಮ್ಮ.

''ನಾನು ಹೇಳಲಿಲ್ಲವೆ ಸುಂದರ, ನಿಮ್ಮ ಅಕ್ಕ ತುಂಬ ತಿಳಿವಳಿಕಸ್ತೆ'' ಎಂದು ರಾಮಸ್ವಾಮಯ್ಯ ಹೆಂಡತಿಯ ತೀರ್ಮಾನಕ್ಕೆ ತಲೆಬಾಗಿದ.

ಸುಂದರಮೂರ್ತಿ ಇಲ್ಲದೆಯೇ, ರಾಮಸ್ವಾಮಯ್ಯ ಗಂಗಮ್ಮ ಬಾರದೆಯೇ, ಕಮಲೆಯ ಮದುವೆ ವಿಜೃಂಭಣೆಯಿಂದ ನಡೆದೇ ಹೋಯಿತು. ಆ ವೇಳೆಯಲ್ಲಿ ಇತ್ತ ಸುಂದರ, ಅತ್ತ ಕಮಲೆ, ಒಬ್ಬರನ್ನೊಬ್ಬರು ನೆನೆಯುತ್ತ ದುಃಖಿತರಾಗಿದ್ದರು

ಅಂದು ಭಾವ ಅಕ್ಕನೊಡನೆ ಮಾತಾಡಿ ರಾತ್ರಿ ಮಲಗಿಕೊಂಡಾಗ ಸುಂದರಮೂರ್ತಿಗೆ ನಿದ್ದೆಯೇ ಹತ್ತಲಿಲ್ಲ; ಹಿಂದಿನ ರಾತ್ರಿಗಳಲ್ಲಿಯೂ ನಿದ್ದೆ ಸರಿಯಾಗಿ ಬರುತ್ತಿರಲಿಲ್ಲ; ಆದರೆ, ಇಂದು, ದುಃಖ ನಿರಾಶಾಭಾವನೆ

ಗಳೊಂದಿಗೆ ಮನಸ್ಸಿನಲ್ಲಿ ಒಂದು ಹೋರಾಟವೂ ನಡೆಯುತ್ತಿ, ನಿದ್ದೆಯ ಸುಳಿವೂ ಇಲ್ಲದಂತಾಗಿತ್ತು. ಕಮಲೆಯ ಮದುವೆಗೆ ನಿಲ್ಲದೆ ತಾನು ತನ್ನ ಸಂಕುಚಿತ ಸ್ವಾರ್ಥಬುದ್ಧಿಯನ್ನು ತೋರಿಸಿದಂತಾಗಲಿಲ್ಲವೆ ಎಂದು ತನಗೆ ತಾನೇ ಪ್ರಶ್ನಿಸಿಕೊಂಡ. ತಾನು ಹೇಡಿಯಂತೆ ವರ್ತಿಸಿ ಇನ್ನೊಬ್ಬರ ಮೇಲೆ ತಪ್ಪು ಹೊರಿಸುವುದು ತಪ್ಪು ಎಂದು ಭಾವಿಸತೊಡಗಿದ. 'ಕಮಲೆಯನ್ನಲ್ಲದೆ ಬೇರೆ ಯಾರನ್ನೂ ನಾನು ಮದುವೆಯಾಗುವುದಿಲ್ಲ, ನೀವು ಕಮಲೆಯನ್ನ ಬೇರೆ ಯಾರಿಗೂ ಕೊಡಕೂಡದು' ಎಂದು ಹೇಳುವ ಧೈರ್ಯವನ್ನು ತಾನು ವಹಿಸಿರಲಿಲ್ಲ; ಇನ್ನು ಕಮಲೆ ಯಾವ ಧೈರ್ಯದಿಂದ 'ನಾನು ವಿಶ್ವನಾಥನನ್ನು ಮದುವೆಯಾಗುವುದಿಲ್ಲ' ಎಂದು ಹೇಳಿಯಾಳು? ತಾನು ಧೈರ್ಯ ವಹಿಸಿ ಹಾಗೆ ಹೇಳಿದ್ದರೆ, 'ನಿನ್ನ ನಡತೆ ನಮಗೆ ಒಪ್ಪಿಗೆಯಿಲ್ಲ. ಚೆನ್ನಿಯಲ್ಲಿ ತೋರಿಸುವ ಅತ್ಯಾದರವನ್ನು ನೀನು ಬಿಡಬೇಕು. ದೇಶಸೇವೆ ಹರಿಜನೋದ್ಧಾರ ಮೊದಲಾದ ಕನಸುಗಳನ್ನು ಕಾಣುವುದನ್ನು ಬಿಡಬೇಕು' ಎಂದು ಅವರು ಷರತ್ತು ಹಾಕಿದ್ದರೆ ತಾನು ಇವುಗಳನ್ನು—ಸಾಧಿಸಲಾಗದಿದ್ದರೂ ಸಾಧಿಸಲು ಪ್ರತಿಯೊಬ್ಬರೂ ಪ್ರಯತ್ನಪಡಬೇಕಾದ ಈ ಸತ್ಸಂಕಲ್ಪಗಳನ್ನು, ಬಿಡಲು ಸಿದ್ಧವಾಗಿದ್ದನೂ, ಅವು ಬಿಡತಕ್ಕವೋ? ಇಲ್ಲ, ಎಂದಿಗೂ ಇಲ್ಲ. ತನ್ನ ಎಲ್ಲ ಧ್ಯೇಯಗಳ ಸಂಕೇತವಾಗಿದ್ದಾಳೆ ಚೆನ್ನಿ. ಪ್ರೇಮಜೀವನದ ಸಂಕೇತವಾದ ಕಮಲೆ, ಸೇವೆ ತ್ಯಾಗಗಳ ಜೀವನದ ಸಂಕೇತವಾದ ಚೆನ್ನಿ—ಮಾದನ ಮಗಳು, ಮಾದಿಗನ ಮಗಳು—ಇವರಿಬ್ಬರಲ್ಲಿ ಒಬ್ಬರನ್ನು ಮಾತ್ರ ಪರಿಗ್ರಹಿಸಬೇಕು. ಕಮಲೆಯ ಮದುವೆಯ ಸಂದರ್ಭದಲ್ಲಿ ತನ್ನ ಭವಿಷ್ಯವನ್ನು ನಿರ್ಧರಿಸುವ ಆಯ್ಕೆಯನ್ನು ಮಾಡಿದಂತಾಯಿತು. ಅದಕ್ಕಾಗಿ ತಾನು ಏಕೆ ಪಶ್ಚಾತ್ತಾಪಪಡಬೇಕು? ಪಶ್ಚಾತ್ತಾಪಪಡಬೇಕಾಗಿಲ್ಲ. ಇನ್ನು ತನ್ನ ಜೀವನದಲ್ಲಿ ಪ್ರೇಮಜೀವನದ ಕವಾಟವನ್ನು ಮುಚ್ಚಿಬಿಡಬೇಕು; ತ್ಯಾಗ ಸೇವೆಗಳ ಕವಾಟವನ್ನು ತೆರೆಯಬೇಕು. ಅದು ಚೆನ್ನಿಯಿಂದ ಮೊದಲಾಗಬೇಕು. ಮುರುಕುಮಂಟಪದಲ್ಲಿ ಆ ಅಪರಿಚಿತ ವ್ಯಕ್ತಿ ಹೇಳಿದಂತೆ ಚೆನ್ನಿಗೆ ವಿದ್ಯೆ ಕಲಿಸಬೇಕು; ಚೆನ್ನಿ ಚಿನ್ನದ ಗಟ್ಟಿ; ಅವಳನ್ನು ಸುಂದರ ವಿಗ್ರಹವಾಗಿ ಮಾಡಬೇಕು; ರಾಚಪ್ಪನೇ ಆಗ ಅವಳನ್ನು ಮದುವೆಯಾದರೂ ಆಗಬಹುದು; ಆಗಲಿಲ್ಲ, ಅವಳನ್ನು ಸೇವಾಕಾರ್ಯ

ಸ್ನಾದರೂ ಹೂಡಬಹುದು. ಇದೇ ತನ್ನ ಮುಂದಿನ ಬಾಳ ಬಟ್ಟೆ; ಸಾಧನಮಾರ್ಗ. ತನ್ನ ಪ್ರಯತ್ನ ಹೆಚ್ಚು ಏನೂ ಇಲ್ಲದಿದ್ದರೂ ವಿಧಿ ಯಿನ್ನಿಂದ ಈ ಸ್ವಾರ್ಥತ್ಯಾಗವನ್ನು — ಕಮಲೆಯನ್ನು ಮದುವೆಯಾಗ ಬೇಕೆಂದು ಛಲ ಹಿಡಿದು ಅದನ್ನು ಹೇಗಾದರೂ ಸಾಧಿಸುವುದನ್ನು—ಮಾಡಿ ಸಿದೆ. ಕಮಲೆಯ ಹಂಬಲನ್ನು ಬಿಡದೆ ತನ್ನ ಮೇಲೆ ಹೊರಿಸಿರುವ ಆ ಸ್ವಾರ್ಥತ್ಯಾಗ ಅರ್ಥಪೂರ್ಣವಾಗದು. ಇನ್ನು ಮೇಲೆ ಕಮಲೆ ಪರಸತಿ; ಅವಳನ್ನು ತಂಗಿಯಂತೆ ಭಾವಿಸಬೇಕು. ವಿಶ್ವನಾಥನೊಂದಿಗೆ ಸೌಹಾರ್ದ ದಿಂದಲೇ ವರ್ತಿಸಬೇಕು—ಅವನು ಅವಕಾಶ ಕೊಟ್ಟರೆ. ಮನಸ್ಸಿಗೆ ಸಮಾ ಧಾನವನ್ನು ತರುವ ಈ ನಿರ್ಧಾರ ಸಹಜವಾಗಿ ಅವನಿಗೆ ನಿದ್ದೆಯನ್ನು ತರಬೇಕಾಗಿತ್ತು. ಆದರೆ ನಿದ್ದೆ ಬರಲಿಲ್ಲ. ಹೊಸ ಹೋರಾಟಕ್ಕೆ ಮೊದಲಾ ಯಿತು. ಕಮಲೆಯ ಹಂಬಲವನ್ನು ಬಿಡುವ ಯೋಚನೆ ಮಾಡಿರುವುದರಿಂದ ಇನ್ನು ಅವಳ ಮದುವೆಗೆ ಹೋಗಿ ನಿಸ್ಸಂಗಿಯಂತೆ ಅವರ ಸಂತೋಷದಲ್ಲಿ ತಾನು ಭಾಗಿಯಾಗುವುದರಲ್ಲಿ ತಪ್ಪೇನು? ತಪ್ಪಿಲ್ಲ. ಆದರೆ, ಕಮಲೆ ಇದೇ ರೀತಿ ಸಮಾಧಾನವನ್ನು ತಂದುಕೊಂಡು ಗೆಲವಿನಿಂದ ಕೂಡಿರುವಳೊ? ಅಲ್ಲದೆ, ಇದೇ ಸಮಾಧಾನ ಬುದ್ಧಿ ಊರಿಗೆ ಹಿಂದಿರುಗಿದ ಮೇಲೆ ಉಳಿದಿರು ವುದೋ? ಮತ್ತೆ ಕಮಲೆಯ ಹಂಬಲು ಕಾಡಿ, ಇಲ್ಲದ ಧೈರ್ಯವನ್ನು ತಂದುಕೊಂಡು ಮದುವೆಯ ಮನೆಯಲ್ಲಿ ತಾನು ಏನಾದರೂ ರಾದ್ಧಾಂತ ವನ್ನು ಹೂಡಿದರೋ? ತನ್ನನ್ನು ತಾನು ನಂಬುವುದು ಹೇಗೆ? ಈ ಅಂಶ ದಲ್ಲಿ ಅವನು ಬೇಗನೆ ನಿರ್ಧಾರಕ್ಕೆ ಬರಲಾಗಲಿಲ್ಲ. ನಿದ್ದೆ ಹತ್ತಲಿಲ್ಲ.

ಮಾರನೆಯ ಬೆಳಗ್ಗೆ ತಲೆ ಮೈ ಭಾರವಾಗಿದ್ದುವು. ಗಾಳಿಸೇವನೆ ಗೆಂದು ಲಾಲ್‌ಬಾಗಿಗೆ ಹೊರಟ. ಒಂದು ಹದ ಮಳೆಯಾಗಿ, ಲಾಲ್ ಬಾಗ್ ಬೆಳಗ್ಗೆಯ ಹೊಂಬಿಸಿಲಿನಲ್ಲಿ ಮನೋಹರವಾಗಿತ್ತು; ಸೌಂದರ್ಯ ವಿಲಾಸಿಗಳ, ಕವಿಗಳ, ವಿಹಾರಕ್ಕೆ ಅದು ಆಹ್ವಾನವನ್ನು ನೀಡುತ್ತಿತ್ತು. ಸುಂದರಮೂರ್ತಿ ಕವಿಯಲ್ಲದಿದ್ದರೂ ಸೌಂದರ್ಯದ ಶತ್ರುವಾಗಿರಲಿಲ್ಲ. ಉದ್ಯಾನದ ಸೌಂದರ್ಯಶ್ರೀಗೆ ಕೆಲಕಾಲ ಮನಸೋತು, ಒಳ ಬೇಗುದಿ ಯನ್ನು ಮರೆತುಬಿಡಲು ಪ್ರಯತ್ನಿಸಿ, ಒಂದು ಪೀಠದ ಮೇಲೆ ಕುಳಿತ. ಸೌಂದರ್ಯಶ್ರೀ ಲಾಸ್ಯದೊಂದಿಗೆ ಇವನ ಮನಸ್ಸು ಸಮತಾನದಲ್ಲಿ ಮಿಡಿಯದೆ

ಇದ್ದುದರಿಂದ ಬೇಗನೆ ಬೇಸರವಾಯಿತು. ಎದ್ದು ತಿರುಗಾಡ ತೊಡಗಿದ. ದೂರದಲ್ಲಿ ಪರಿಚಿತ ವ್ಯಕ್ತಿ ಬರುತ್ತಿರುವಂತೆ ಕಂಡಿತು; ಹತ್ತಿರ ಬಂದಾಗ ಆ ವ್ಯಕ್ತಿ ಲಕ್ಷ್ಮೀಪತಿ ಎಂದು ಗೊತ್ತಾಯಿತು. ಅನಿರೀಕ್ಷಿತವಾಗಿ ಹತ್ತಿರದ ಗೆಳೆಯನನ್ನು ಕಂಡು ಸುಂದರಮೂರ್ತಿಯ ಬಾಡಿದ ಮುಖ ಗೆಲವಿನಿಂದ ಕೂಡಿತು. ಇಬ್ಬರೂ ಹುಲ್ಲು-ಹಾಸಿನ ಮೇಲೆ ಕುಳಿತು ಸರಸಸಲ್ಲಾಪದಲ್ಲಿ ತೊಡಗಿದರು.

೪೨

ಸುಂದರಮೂರ್ತಿ ತನ್ನ ಅಳಲನ್ನೆಲ್ಲಾ ತೋಡಿಕೊಳ್ಳಲು ಯಾರಾದರೂ ಆಪ್ತರು ಸಿಕ್ಕಾರೆ ಎಂದು ಹಾತೊರೆಯುತ್ತಿದ್ದ ವೇಳೆಯಲ್ಲಿ ಸಹಪಾಠಿಯೂ ಹೃದಯಮಿತ್ರನೂ ಆದ ಲಕ್ಷ್ಮೀಪತಿ ಸಿಕ್ಕಿದ್ದರಿಂದ, ಹಿಂದೆ ಮುಂದೆ ನೋಡದೆ, ತಾನಾಗಿ ತನ್ನ ಅಳಲನ್ನೆಲ್ಲಾ ಸ್ನೇಹಿತನ ಮುಂದೆ ತೋಡಿಕೊಂಡ. ಅವನ ಹೃದಯ ಬಹು ಹಗುರವಾಯಿತು.

"ಸುಂದರಮೂರ್ತಿ, ನೀನು ಒಲಿದ ಹೆಣ್ಣನ್ನು ಮರೆಯಲು ಈ ಊರಿಗೆ ಬಂದೆ. ನಾನು ಒಲಿಯದ ಹೆಣ್ಣನ್ನು ನೆರೆಯಲು ಈ ಊರಿಗೆ ಬಂದೆ" ಎಂದು ಹೇಳಿ ನಕ್ಕ, ಲಕ್ಷ್ಮೀಪತಿ.

"ಹಾಗೆಂದರೇನು ? ನನಗೆ ಅರ್ಥವಾಗುವುದಿಲ್ಲ. ನೀನು ಮಾತಾಡುವುದು ಕವಿತೆಯ ಹಾಗಿದೆ" ಎಂದು ಸುಂದರನೂ ಅಚ್ಚರಿಗೊಂಡು ಪ್ರತಿಯಾಗಿ ನಕ್ಕ.

"ನಾನು ಕವಿಯೂ ಆಗಿರಬಹುದೆಂದು ನನಗೆ ತೋರುತ್ತಿದೆ. ಏಕೆಂದರೆ, ಕೆಲವು ಕವನಗಳನ್ನೂ ಬರೆದಿದ್ದೇನೆ. ನೀನು ಕೇಳಲು ಸಿದ್ಧವಾಗಿದ್ದರೆ ಕೆಲವನ್ನು ಓದುತ್ತೇನೆ. ಬೇಸರವಾಗುವಂತಿದ್ದರೆ ಓದುವುದಿಲ್ಲ."

"ಬೇಸರವಾಯಿತೆ ಇಲ್ಲವೆ ಎನ್ನುವುದನ್ನು ನೀನು ಓದಿದ ಮೇಲೆ ಹೇಳುತ್ತೇನೆ. ಎಲ್ಲಿ, ಓದು, ಕೇಳೋಣ ?" ಎಂದು ಸುಂದರ ಹುಲ್ಲು ಹಾಸಿನ ಮೇಲೆ ಪವಡಿಸಿ, ಕವಿತಾಶ್ರವಣಕ್ಕೆ ಕಿವಿಯನ್ನೂ ಮನಸ್ಸನ್ನೂ ತೆರೆದು ಸಿದ್ಧನಾಗಿ ಕುಳಿತ.

ಲಕ್ಷ್ಮೀಪತಿ ಜೇಬಿನಿಂದ ಚಿಕ್ಕ 'ನೋಟ-ಬುಕ್' ತೆಗೆದು, ಕೆಲವು ಆಯ್ದ ಕವನಗಳನ್ನು ಮೆಲುದನಿಯಲ್ಲಿ ಓದಿದ. ಒಂದೆರಡನ್ನು ಬಿಟ್ಟು

ಉಳಿದ ಏಳೆಂಟು ಕವನಗಳು ಪ್ರಣಯ-ಗೀತೆಗಳು: ಐದಾರು ಕವನಗಳು ಭಗ್ನಪ್ರಣಯವನ್ನು ಸಾರಿ ಹೇಳುತ್ತಿದ್ದುವು; ಉಳಿದ ಎರಡರಲ್ಲಿ ಹೆಣ್ಣೊಂದರ ಅನುಪಮ ಸೌಂದರ್ಯವನ್ನೂ, ಪ್ರೇಮವಿಲ್ಲದ ಸೌಂದರ್ಯ ನಿರ್ಗಂಧ ಕುಸುಮವೆಂದೂ, ಪ್ರೇಮವು ಸಾಧಾರಣ ಸೌಂದರ್ಯವನ್ನು ಕೂಡ ಸ್ವರ್ಗೀಯವನ್ನಾಗಿ ಮಾಡುವುದೆಂದೂ ವರ್ಣಿಸಿತ್ತು.

ಕವನಗಳನ್ನು ಕೇಳಿಯಾದ ಮೇಲೆ ಅವುಗಳ ಮೇಲೆ ಸುಂದರನ ಟೀಕೆ ಹೀಗಿತ್ತು :

"ನಿನಗೇ ಗೊತ್ತಲ್ಲ, ನಾನು ಕನ್ನಡದಲ್ಲಿ ಅಷ್ಟಕ್ಕಷ್ಟೆ. ಆದರೂ ನನಗೆ ತೋರುವುದು ಹೀಗೆ. ಇವು ಕಂದ ವೃತ್ತ ಷಟ್ಪದಿಗಳಲ್ಲ. ಏನೋ ಹೊಸ ಧಾಟಿಯಲ್ಲಿ ಬರೆದ ಹಾಗಿದೆ. ಛಂದಸ್ಸು ಇದೆಯೋ ಇಲ್ಲವೋ ನನಗೆ ತಿಳಿಯದು. ಕೇಳುವುದಕ್ಕೇನೋ ಹಿತವಾಗಿದ್ದವು. ಅರ್ಥವಾಗುವಂತಿವೆ. ಭಾವಪೂರ್ಣವಾಗಿಯೂ ಇವೆ. ಷೆಲ್ಲಿಯ ಕೆಲವು ಪದ್ಯಗಳನ್ನು ನೆನಪಿಗೆ ತರುತ್ತವೆ."

ಲಕ್ಷ್ಮೀಪತಿ ಹೇಳಿದ: "ನೀನು ಹೇಳಿದ್ದು ದಿಟ. ನನಗೆ ಮೊದಲಿನಿಂದಲೂ ಪದ್ಯ ಬರೆಯುವ ಚಟ. ಕಂದಪದ್ಯಗಳನ್ನೂ ಷಟ್ಪದಿಗಳನ್ನೂ ಬರೆಯುತ್ತ ಇದ್ದೆ. ಕನ್ನಡ ಪಂಡಿತರಿಗೆ ತೋರಿಸಿದಾಗ, ಇನ್ನು ಮೇಲೆ ಬರೆಯಬೇಡ, ಛಂದೋದೋಷಗಳಿವೆ ಎಂದು ಬುದ್ಧಿ ಹೇಳಿದರು. ಈಗ ಎರಡು ಮೂರು ವರ್ಷಗಳ ಹಿಂದೆ ಪ್ರಕಟವಾದ 'ಇಂಗ್ಲಿಷ್ ಗೀತಗಳು' ಎಂಬ ಪದ್ಯಪುಸ್ತಕ ನನ್ನ ಕೈಗೆ ಅಕಸ್ಮಾತ್ ದೊರಕಿತು. ಅದರಲ್ಲಿನ ಪದ್ಯಗಳನ್ನು ಓದಿದಾಗ ನನ್ನ ಕಣ್ಣು ತೆರೆದಂತಾಯಿತು; ಮುಚ್ಚಿದ್ದ ಹೃದಯವೂ ತೆರೆದಂತಾಯಿತು. ಅದರಲ್ಲಿ ಬರೆದಿದ್ದ ಕೃತಿಗಳ ಧಾಟಿಯಲ್ಲಿ ನನ್ನ ಸ್ವಂತ ಅನುಭವವನ್ನು ಕವನಗಳ ರೂಪದಲ್ಲಿ ಬರೆಯತೊಡಗಿದೆ. ನನ್ನ ಮನಸ್ಸಿಗೆ ಒಪ್ಪಿಬಂದವನ್ನು ಮಾತ್ರ ಇಲ್ಲಿ ಪ್ರತಿಮಾಡಿಟ್ಟುಕೊಂಡಿದ್ದೇನೆ. ಷೆಲ್ಲಿ ನನ್ನ ಮೆಚ್ಚಿನ ಇಂಗ್ಲಿಷ್ ಕವಿ. ಅವನ ಕವನಗಳ ಪ್ರಭಾವವೂ ಇಲ್ಲಿ ಕಾಣದೆ ಇಲ್ಲ."

ಸುಂದರಮೂರ್ತಿ ಒಂದು ವಿವರಣೆಯನ್ನು ಬಯಸಿದ: "ನಿನ್ನ ಕವನಗಳಲ್ಲಿ ಸ್ವಂತ ಅನುಭವವನ್ನು ವರ್ಣಿಸಿರುವುದಾಗಿ ಹೇಳಿರುತ್ತೀಯೆ. ಒಂದು ಪ್ರಶ್ನೆ ಕೇಳಬಹುದೋ?"

" ಅಗತ್ಯವಾಗಿ. "

" ಒಂದು ಹುಡುಗಿಯನ್ನು ಪ್ರೀತಿಸಿ, ಅವಳನ್ನು ಮದುವೆಯಾಗಲು ಸಾಧ್ಯವಾಗದೆ, ಅದಕ್ಕಾಗಿ ಹಲುಬಿರುವುದು ಕೆಲವು ಕವಿತೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. 'ನಿರ್ಗಂಧಕುಸುಮ' ಎಂಬ ಕವನದಲ್ಲಿ, ಕೈ ಹಿಡಿದ ಹೆಣ್ಣು ಅಪೂರ್ವ ಸುಂದರಿಯಾದರೂ ಅವಳಲ್ಲಿ ಪ್ರೇಮವಿಡಲಾಗದ್ದರಿಂದ 'ನಿರ್ಗಂಧಕುಸುಮ' ಎಂದು ಹೇಳಿದೆ. ಈ ಕವನಗಳು ನಿನ್ನ ಜೀವನದ ಸಂಗತಿಗಳ ನಿರೂಪಣೆಯೋ, ಇಲ್ಲ ಕಲ್ಪನೆಯೆ? "

" ಸತ್ಯಸಂಗತಿಗಳು. ನನ್ನ ಪ್ರಣಯುಜೀವನದ ಸಂಕ್ಷಿಪ್ತ ಚರಿತೆ. ನಿನ್ನ ವಿಚಾರವನ್ನು ನೀನು ನನ್ನಲ್ಲಿ ಬಿಚ್ಚಿ ಹೇಳಿದೆಯಲ್ಲ, ಹಾಗೆ ನನ್ನ ವಿಚಾರವನ್ನೂ ಇಲ್ಲಿ ಮುಚ್ಚಿ ಹೇಳಿದ್ದೇನೆ. ಬಿಚ್ಚಿ ಹೇಳಿದರೆ ಗದ್ಯ, ಮುಚ್ಚಿ ಹೇಳಿದರೆ ಕವಿತೆ – ನನ್ನ ಅಭಿಪ್ರಾಯದಲ್ಲಿ. "

" ನಿನ್ನ ಕವನಗಳ ಮೇಲಿನ ಟೀಕೆ ಅಲ್ಲ, ನಾನು ಹೇಳುವುದು. ನಮ್ಮ ಪಠ್ಯಪುಸ್ತಕ-ಮುದ್ದಣನ ರಾಮಾಶ್ವಮೇಧದ ವಾಕ್ಯ ನೆನಪಿಗೆ ಬರುತ್ತದೆ. ಹೃದ್ಯವಾದ ಗದ್ಯದಲ್ಲಿಯೇ ಆ ಸಂಗತಿಗಳನ್ನು ಬಿಚ್ಚಿ ಹೇಳುವೆಯಾ, ನಿನ್ನ ಆಕ್ಷೇಪಣೆ ಇಲ್ಲದೆ ಹೋದರೆ? "

ಲಕ್ಷ್ಮೀಪತಿ ಕವನಗಳಲ್ಲಿ ಸೂಚಿತವಾಗಿದ್ದ ತನ್ನ ಆತ್ಮವೃತ್ತವನ್ನು ಗೆಳೆಯನಿಗೆ ಸ್ವಲ್ಪ ವಿಸ್ತಾರವಾಗಿಯೇ ಹೇಳಿದ. ಸಂಗ್ರಹವಾಗಿ, ಅವನು ಹೇಳಿದ್ದು ಇದು:

ಲಕ್ಷ್ಮೀಪತಿ ಹೈಸ್ಕೂಲು ತರಗತಿಗಳಲ್ಲಿ ಓದುತ್ತಿದ್ದಾಗಲೇ ನೆರೆಯ ಮನೆಯ ಹುಡುಗಿಯೊಬ್ಬಳನ್ನು ಒಲಿದ. ಅದು ಒಲವೆಂಬುದನ್ನು ಮೊದಲು ಇಬ್ಬರೂ ಅರಿಯರು. ಸಲಿಗೆ ಸ್ನೇಹಗಳೇ ಒಲವಾಗಿ ಮಾಗುತ್ತ ಬಂದಿದ್ದವು. ಸಮಯ ಸಂದರ್ಭಗಳು ದೊರೆತಾಗಲೆಲ್ಲ ಇಬ್ಬರೂ ಒಟ್ಟಿಗೆ ಮಾತಾಡುತ್ತ, ನಲಿಯುತ್ತ, ಸಂತೋಷವಾಗಿ ಕಾಲ ಕಳೆಯುವರು. ಲಕ್ಷ್ಮೀಪತಿ ಎಂಟ್ರೆನ್ಸ್ ತರಗತಿಗೆ ಬಂದಾಗ, ಇಬ್ಬರ ಮನಸ್ಸೂ ಸಂಪೂರ್ಣವಾಗಿ ಕೂಡಿ, ಒಲವಿಗೆ ತಿರುಗಿ, ಮದುವೆಯಾಗಿ ಸುಖಿಗಳಾಗುವ ಕನಸು ಕಾಣುತ್ತಿದ್ದರು. ಲಕ್ಷ್ಮೀಪತಿ ಅನೇಕ ವೇಳೆ ಆ ಹುಡುಗಿಯನ್ನು ಕದ್ದು ಮುತ್ತಿಟ್ಟದ್ದೂ ಉಂಟು. ಆದರೆ ಇಬ್ಬರೂ ತಮ್ಮ ಒಲವನ್ನು ಗುಪ್ತವಾಗಿಯೇ ಇಟ್ಟಿದ್ದರು. ಅವರು ಮದುವೆ

ಯಾಗಲು ಒಂದು ಪ್ರಬಲವಾದ ವಿಘ್ನ ವಿದ್ದಿತು. ಇಬ್ಬರೂ ಬ್ರಾಹ್ಮಣ ಜಾತಿಯುವರೇ ಆದರೂ, ಬೇರೆಬೇರೆ ಒಳಪಂಗಡಗಳಿಗೆ ಸೇರಿದವರು. ಅವರ ಮುಗ್ಧ ಪ್ರಣಯಕ್ಕೆ ಆ ಪರಿಸ್ಥಿತಿ ಒಂದು ಅಡ್ಡಿಯಾಗಿ ಕಾಣಲಿಲ್ಲ. ಆದರೆ, ಲಕ್ಷ್ಮೀಪತಿಗೆ ತಿಳಿಯದಂತೆಯೇ ಹುಡುಗಿಗೆ ಮದುವೆಯಾಗಿ ಹೋಯಿತು. ಅದೇ ಕಾಲದಲ್ಲಿ ಅವನ ತಂದೆ ತಾಯಿ ಗೊತ್ತುಮಾಡಿದ ಹೆಣ್ಣನ್ನು ಅವನು ಮದುವೆಯಾಗಬೇಕಾಗಿ ಬಂದಿತು. ಮದುವೆಯಾದ ಹೆಣ್ಣು ರೂಪವಂತೆ, ಚದುರೆ, ಒಲವು ತೋರುವ ಸ್ವಭಾವದವಳು. ಲಕ್ಷ್ಮೀಪತಿ ನಿಷೇಕಪ್ರಸ್ತಕ್ಕಾಗಿ ಮಾವನ ಮನೆಗೆ ಈಗ ಬೆಂಗಳೂರಿಗೆ ಬಂದಿದ್ದ. ತಾನು ಒಲಿಯದಿದ್ದರೂ ತನ್ನನ್ನು ಒಲಿದು ತನ್ನನ್ನೆ ನಂಬಿರುವ ಕೈಹಿಡಿದ ಮಡದಿಯನ್ನು ಹೇಗೆ ಒಲಿದು ಅವಳನ್ನು ಸುಖಪಡಿಸುವುದು ಎಂಬುದೇ ಅವನ ಸದ್ಯದ ಸಮಸ್ಯೆಯಾಗಿತ್ತು. "ಒಲಿಯದ ಹೆಣ್ಣನ್ನು ಮರೆಯಲು ಬಂದೆ ಎಂದು ಮೊದಲೇ ನಾನು ಹೇಳಲಿಲ್ಲವೆ?" ಎಂದು ಲಕ್ಷ್ಮೀಪತಿ ತನ್ನ ಆತ್ಮಕಥೆಯನ್ನು ಮುಗಿಸಿದ.

ಸ್ನೇಹಿತನ ಕಥೆಯನ್ನು ಸುಂದರ ಆಸಕ್ತಿಯಿಂದ ಕೇಳಿ ನಿಟ್ಟುಸಿರು ಬಿಟ್ಟ: "ಎಲ್ಲರ ಮನೆಯ ದೋಸೆಯೂ ತೂತು!.... ನನ್ನದೊಂದು ಮಾತು: ನಿನಗೆ ಮದುವೆಯೂ ಆಗಿ, ಪ್ರಸ್ತವೂ ಆಯಿತು. ಕೈಹಿಡಿದ ಹೆಂಡತಿಯನ್ನು ಸುಖಪಡಿಸುವುದು ನಿನ್ನ ಕರ್ತವ್ಯ."

"ನಾನೂ ಹಾಗೆಯೇ ಅಂದುಕೊಂಡಿದ್ದೇನೆ. ಆದರೆ, ಹಿಂದಿನ ಒಲವನ್ನು ಮರೆಯುವುದು ಕಷ್ಟ."

"ಹಿಂದಿನ ಒಲವು ನಿನಗೆ ಒಂದು ಉಪಕಾರ ಮಾಡಿದೆ; ಕೈಗೂಡದಿದ್ದರೂ ಚಿಂತೆಯಿಲ್ಲ, ನಿನಗೆ ಒಂದು ಜೀವನಾದರ್ಶವನ್ನು ತೋರಿಸಿದೆ."

"ಅದು ಏನು? ನನಗೆ ತೋರಲಿಲ್ಲ."

"ಕಾವ್ಯರಚನೆ, ಸಾಹಿತ್ಯಸೇವೆ. ನಿನ್ನ ಅರಿವಿಲ್ಲದೆಯೆ ನೀನು ಕವಿಯಾಗಿದ್ದೀಯೆ. ನಿನ್ನ ಎಲ್ಲಾ ಅನುಭವಗಳನ್ನೂ ಹೀಗೆಯೇ ಕವಿತೆಯ ರೂಪದಲ್ಲಿ ಬರಿ. ಅದು ನಿನ್ನ ಜೀವನದ ಗುರಿ ಎಂದು ನನಗೆ ತೋರುತ್ತದೆ."

"ನಾನು ಈಗ ಬರೆದಿರುವುದು ಕವಿತೆ ಎಂಬ ಧೈರ್ಯ ನನಗಿಲ್ಲ. ನೋಡೋಣ. ಅದಿರಲಿ, ನಿನ್ನ ಜೀವನದ ಗುರಿ ಏನು?"

"ನಾನು ಕವಿಯಾಗಲಾರೆ, ದೇಶಸೇವಕನೂ ಆಗಲಾರೆ. ಆದರೂ,

ಏನನ್ನೋ ಸಾಧಿಸುವ ಕನಸು ಕಾಣುತ್ತ ಇದೇನೆ" ಎಂದು ಸುಂದರಮೂರ್ತಿ ಚೆನ್ನಿಯ ವಿಚಾರ, ತನ್ನ ಕೆಲವು ನಿರ್ಧಾರಗಳ ವಿಚಾರ, ಇವನ್ನು ಸಂಗ್ರಹವಾಗಿ ತಿಳಿಸಿ, "ಈಗ ನಿನ್ನ ಸಲಹೆ ಏನು? ವಿಶ್ವನಾಥನ ಮದುವೆಗೆ ಹೋಗಲೋ ಬೇಡವೋ?" ಎಂದು ಪ್ರಶ್ನಿಸಿದ.

"ನಾನು ನಿನ್ನ ಪರಿಸ್ಥಿತಿಯಲ್ಲಿ ಇದ್ದರೆ, ಹೋಗುವುದು ಸರಿಯೇ ಎನ್ನಬಹುದಾದರೂ ಹೋಗುವ ಮನಸ್ಸುಮಾಡಲಾರೆ" ಎಂದು ಲಕ್ಷ್ಮೀಪತಿ ಉತ್ತರಕೊಟ್ಟ.

ಈ ರೀತಿ, ಸುಂದರಮೂರ್ತಿಯ ಬಗೆಹರಿಯದ ಪ್ರಶ್ನೆಯ ತೀರ್ಮಾನವಾಯಿತು. ಅವನು ಮದುವೆಗೆ ಹೋಗದೆಯೇ ಕಮಲೆಯ ಮದುವೆ ನಡೆದು ಹೋಯಿತು.

೪೩

ಸುಂದರಮೂರ್ತಿ ಬೆಂಗಳೂರಿನಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಇದ್ದ ದಿನಗಳಲ್ಲಿ, ಅವನೂ ಲಕ್ಷ್ಮೀಪತಿಯೂ ಸಂಜೆಯ ವೇಳೆ ಲಾಲ್‌ಬಾಗಿನಲ್ಲೋ ಕಬ್ಬನ್ ಪಾರ್ಕಿನಲ್ಲೋ ಬಸವನಗುಡಿಯ ಗುಡ್ಡ ಬಂಡೆಗಳ ಪ್ರಾಂತದಲ್ಲೋ ಸ್ನೇಹದ ಸವಿಯನ್ನು ಸವಿಯುತ್ತ ಹಾಯಾಗಿ ಕಾಲಕಳೆಯುತ್ತಿದ್ದರು. ಈ ಕಾಲದಲ್ಲಿ ಅವರು ತೀರ ಹತ್ತಿರದ ಗೆಳೆಯರಾದರು; ಒಬ್ಬರನ್ನೊಬ್ಬರು 'ಸುಂದರೂ,' 'ಲಕ್ಷ್ಮೀ' ಎಂದು ಮುದ್ದಿನ ಮಾತುಗಳಲ್ಲಿ ಸಂಬೋಧಿಸುವಷ್ಟು ಸಲಿಗೆ ಬೆಳೆದು ಬಂದಿತು. ಇಬ್ಬರೂ ಒಟ್ಟಿಗೆ ಓದುತ್ತ ಇದ್ದವರು, ಸಮವಯಸ್ಸಿನವರು, ಸಮಾನ ದರ್ಜೆಯವರು, ಹೆಚ್ಚು ಕಡಮೆ ಒಂದೇ ಸ್ವಭಾವದವರು—ಕನಸು ಕಾಣುವ ಸ್ವಭಾವದವರು, ಜೀವನದಲ್ಲಿ ಒಂದು ಆದರ್ಶವನ್ನಿಟ್ಟುಕೊಂಡು ಅದರತ್ತ ಸಾಗಬೇಕೆನ್ನುವವರು. ಮೊದಲಿಂದಲೂ ಗೆಳೆಯರೇ ಆಗಿದ್ದರೂ ಒಬ್ಬರನ್ನೊಬ್ಬರು ಕಂಡುಕೊಂಡು ಅರಿತರು; ಸಮಾನಧರ್ಮಿಯರೆನಿಸಿ, ಜೀವದ ಗೆಳೆಯರಾದರು. ಇಂಥ ಗೆಳೆತನ ಬೆಳೆಯಲು ಬಹುಕಾಲ ಬೇಕಾಗದು. ಅದು ಬುಗ್ಗೆಯಂತೆ ಚಿಮ್ಮಿಬಿಡುತ್ತದೆ. ಹೀಗೆ ತಟ್ಟನೆ ವಿಕಾಸಗೊಂಡ ಈ ಗೆಳೆತನದಲ್ಲಿ, ಒಬ್ಬರಿಗೊಬ್ಬರು ಹೇಳಿಕೊಳ್ಳದೆ ಇರಬಹುದಾದಂಥ ಗುಟ್ಟು ಏನೂ ಉಳಿಯಲಿಲ್ಲ. ತಮ್ಮತಮ್ಮ ಗೃಹಕೃತ್ಯದ ವಿಚಾರಗಳನ್ನೆಲ್ಲ ಪರಸ್ಪರ ಹೇಳಿ

ಕೊಂಡರು. ಲಕ್ಷ್ಮೀಪತಿಯ ತಂದೆ ಬಡ ಗುಮಾಸ್ತರು, ಮಗನ ವಿದ್ಯಾಭ್ಯಾಸಕ್ಕೆ ಸಹಾಯವಾಗದ್ದರಿಂದ ಅವನಿಗೆ ಬೇಗನೆ ಮದುವೆ ಮಾಡಿದರು, ವರದಕ್ಷಿಣೆ ಮುಟ್ಟಲು ಒಪ್ಪಲಿಲ್ಲ, ಒಬ್ಬಳೇ ಬೆಳೆದು ನಿಂತಿರುವ ಮಗಳ ಮದುವೆ ಮಾಡಲು ಲಕ್ಷ್ಮೀಪತಿ ಬಿ. ಎ. ಪ್ಯಾಸು ಮಾಡಿ ಉದ್ಯೋಗಸ್ಥನಾಗಿ ನೆರವಿಗೆ ಬರುವನೆಂದು ಕಾದಿದ್ದಾರೆ—ಈ ವಿಶೇಷ ವಿಷಯಗಳು ಸುಂದರ ಮೂರ್ತಿಗೆ ತಿಳಿಯಬಂದುವು. ಲಕ್ಷ್ಮೀಪತಿಯ ಸ್ಥಿತಿಯನ್ನು ಕಂಡು ಸುಂದರ ಮೂರ್ತಿಗೆ ಬಹು ಕನಿಕರವಾಯಿತು. ತಂದೆ, ತಾಯಿ, ತನ್ನ ಈಗಿನ ಹೆಂಡತಿ, ತನ್ನಂತೆ ಕಷ್ಟಸ್ಥಿತಿಯಲ್ಲಿರುವ ಇತರರು — ಎಲ್ಲರ ಬಗ್ಗೆಯೂ ಲಕ್ಷ್ಮೀಪತಿಯ ಹೃದಯದಲ್ಲಿ ಮರುಕವಲ್ಲದೆ ಬೇರೆ ಭಾವನೆಯೇ ಇಲ್ಲ. ಅವನು ಕವಿ ಅಲ್ಲದೆ ಇರಬಹುದು, ಕವಿಯಾಗದೆ ಇರಬಹುದು, ಅವನದು ಕವಿ ಸಹಜವಾದ ಹೃದಯ, ಎಂದು ಸುಂದರಮೂರ್ತಿಗೆ ಸುಲಭಗೋಚರ ವಾಯಿತು. ವಿಶ್ವನಾಥನ ಸ್ನೇಹ ಎಂದೋ ಕಳಚಿಕೊಂಡಿತು. ತಾನು ಸಿದ್ಧವಾಗಿದ್ದರೂ ಅದು ಮತ್ತೆ ಕೂಡಿಕೊಳ್ಳುವಂತೆ ಕಾಣದು; ರಾಚಪ್ಪನ ಸ್ನೇಹ—ನಿಜವಾಗಿ ಬೆಳೆಯಬೇಕಾದ್ದು, ತಾನು ಸ್ವಾಗತಿಸಿದ್ದು, ಅದು ಏನು ಕಾರಣದಿಂದಲೋ ದೃಢಬದ್ಧವಾದುದಾಗಿಲ್ಲ, ನಿಶ್ಚಿತವಾಗಿಲ್ಲ; ಲಕ್ಷ್ಮೀಪತಿಯ ಸ್ನೇಹ ತನ್ನ ಜೀವನದಲ್ಲಿ ಖಚಿತಗೊಂಡಂತೆ ಭಾಸವಾಯಿತು.

ಕಡೆಯ ಸಂಜೆ, "ಇಬ್ಬರೂ ಮತ್ತೆ ಮೈಸೂರಿನಲ್ಲಿ ಹೇಗೂ ಸೇರುತ್ತೇವೆಯಲ್ಲ" ಎಂದು ಹರ್ಷದಿಂದ ಒಬ್ಬರನ್ನೊಬ್ಬರು ಬೀಳ್ಕೊಂಡರು.

ಈ ಹರ್ಷಭಾವ ಸುಂದರಮೂರ್ತಿಯಲ್ಲಿ ಅವನು ಊರಿಗೆ ಹಿಂದಿರುಗಿದ ಮೇಲೆ ಉಳಿಯಲಿಲ್ಲ; ಹಳೆಯ ಕಹಿ ನೆನಪುಗಳು ಮರುಕೊಳಿಸಿದುವು ಎಂದು ಕಾಲೇಜು ಬಾಗಿಲು ತೆರೆದೀತೋ, ಎಂದಿಗೆ ಮೈಸೂರಿಗೆ ಹೋಗಿ ವ್ಯಾಸಂಗ ದಲ್ಲಿಯೋ ಲಕ್ಷ್ಮೀಪತಿಯ ಸಾಹಚರ್ಯದಲ್ಲಿಯೋ ಇನ್ನೂ ಮಾಯದೆ ಇರುವ ದುಃಖದ ಗಾಯದ ನೋವನ್ನು ಮರೆತೇನೋ ಎಂದು ಅವನ ಹೃದಯ ಹಾತೊರೆಯುತ್ತಿತ್ತು. ಅವನು ಹೆಚ್ಚು ಹೊತ್ತನ್ನೆಲ್ಲಾ ತೋಟ ದಲ್ಲಿಯೇ ಕಳೆಯುತ್ತಿದ್ದನು: ಚೆನ್ನಿಯೊಡನೆ, ಮಾದನೊಡನೆ, ಏನಾದರೂ ಸ್ವಲ್ಪ ಮಾತಾಡುವನು; ಹೊರ ಜಗತ್ತನ್ನೇ ಕಾಣದ ಅವರೊಂದಿಗೆ ಮಾತು ಕತೆಯಾಡಲು ವಿಷಯವಾದರೂ ಏನು ಇದ್ದೀತು? ಒಂದು ಸಲ ಮಾದ

ಚೆನ್ನಿ ಇಬ್ಬರಿಗೂ ರಾಮಾಯಣದ ಕಥೆಯನ್ನು ಸಂಗ್ರಹವಾಗಿ ಹೇಳಲು ಪ್ರಯತ್ನಪಟ್ಟನು. ಅವರಿಬ್ಬರೂ ಕಥೆಯನ್ನು ಆಶ್ಚರ್ಯದಿಂದ ಬಾಯಿಬಿಟ್ಟು ಕೇಳಿದರೂ ಅವರಿಗೆ ಏನೂ ಅರ್ಥವಾದಂತೆ ಕಾಣಲಿಲ್ಲ. ಇದು ಪ್ರಯೋಜನವಿಲ್ಲವೆಂದು, ಅವರಿಗೆ ಆರೋಗ್ಯನಿಯಮಗಳನ್ನು ಉಪದೇಶಿಸಲು ಪ್ರಯತ್ನಪಟ್ಟನು. ಅವರು ವಾಸಮಾಡುವುದು ಜವುಳುನೆಲದ ಮುರುಕು ಗುಡಿಸಿಲಿನಲ್ಲಿ, ಇನ್ನು ತಾನು ಬೋಧಿಸಿರುವ ಆರೋಗ್ಯನಿಯಮಗಳಿಂದ ಏನು ಪ್ರಯೋಜನ? ಎಲ್ಲ ಹೊಲೆಯರ ಪಾಡೂ ಇಷ್ಟೇ ತಾನೆ?— ಎಂದು ತೋರಿ, ಅವನಿಗೇ ನಾಚಿಕೆಯಾಯಿತು. ತನ್ನ ತಂದೆಗೆ ಹೇಳಿ, ಮಾದನಿಗೂ ಚೆನ್ನಿಗೂ ತೋಟದಲ್ಲಿಯೇ ಒಂದು ಹೆಂಚಿನ ಮನೆ ಕಟ್ಟಿಸಿ ಕೊಡಬೇಕೆಂದು ಉದ್ದೇಶಿಸಿದನು. ಆ ಮನೆ ಕಟ್ಟಿಸಿದರೆ, ಅಲ್ಲಿ ಚೆನ್ನಿಗೆ ವಿದ್ಯೆ ಹೇಳಿಕೊಡಲು ಅನುಕೂಲವಾಗುವುದು, ತಕ್ಕ ವಾತಾವರಣವನ್ನು ಕಲ್ಪಿಸಿದಂತಾಗುವುದು; ಅವಳು ತಕ್ಕಮಟ್ಟಿಗೆ ವಿದ್ಯಾವಂತೆಯಾದರೆ, ತಾನೂ ಅವಳೊಂದಿಗೆ ಅಲ್ಲಿಯೇ ವಾಸಮಾಡಿಕೊಂಡಿದ್ದು, ತನ್ನ ಬಾಳನ್ನು ಊರಿನ ದೀನದಲಿತರ ಸೇವೆಗಾಗಿಯೇ ಮೀಸಲಿಡುವುದು; ತನ್ನ ಆ ಬೀಡು ಒಂದು ಸೇವಾಶ್ರಮವಾಗುವುದು —ಹೀಗೆ ಅವನ ಕಲ್ಪನೆ ರೂಪಗೊಂಡಿತು. ಅದು, ಆ ಕಲ್ಪನಾಚಿತ್ರ, ಅವನಿಗೆ ಮನೋಹರವಾಗಿ ಕಂಡಿತು. ಅದರಲ್ಲಿ ಅವನು ಸುಖಿಯಾದನು. ತನಗೆ ಒದಗಿದ್ದ ನಿರಾಶೆಯ ದುಃಖವನ್ನು ಬಹುಮಟ್ಟಿಗೆ ಮರೆತನು.

ಹಿಂದಿನ ಸಲ ರಜ ಮುಗಿದ ವೇಳೆ ಮೈಸೂರಿಗೆ ಹೋಗುವ ಮುನ್ನ ಅವನು ಕಾವೇರತ್ತೆಯ ಮನೆಗೆ ಹೋಗಿ, ಮಾವ ಅತ್ತೆಗೆ ಬರುತ್ತೇನೆಂದು ಹೇಳಿ, ಅವರಿಗೆ ನಮಸ್ಕಾರಮಾಡಿ ಅವರ ಹರಕೆಯನ್ನು ಪಡೆದು, ಕಮಲೆಗೆ ಕಡೆಗಣ್ಣ ನೋಟದ ಮತ್ತು ಮುಗುಳುನಗೆಯ ಕಾಣಿಕೆಯನ್ನು ಸಲ್ಲಿಸಿ ತೆರಳಿದ್ದನು ಈ ಸಲ ಆ ಸೌಭಾಗ್ಯ ಅವನ ಪಾಲಿಗೆ ಇಲ್ಲವಾಯಿತು. ಅಳಲನ್ನು ನುಂಗಿಕೊಂಡು, ಏನನ್ನೋ ಸಾಧಿಸಿಬಿಡುವ ಅಸ್ಪಷ್ಟವಾದ ಗುರಿಯತ್ತ ಗಮನವನ್ನು ಹೊರಳಿಸಿ, ಹೊಸ ಹುರಿಪಿನಿಂದ ಮೈಸೂರಿಗೆ ಹೊರಟನು.

೪೪

೧೯೪೫ನೆಯ ಇಸವಿಯ ಜುಲೈ ೧ನೆಯ ತಾರೀಖಿನ ದಿನ ಕಾಲೇಜು

ಬಾಗಿಲು ತೆರೆಯಿತು. ಸುಂದರಮೂರ್ತಿ ಎರಡು ದಿನ ಮುಂದಾಗಿಯೇ ಮೈಸೂರಿಗೆ ಬಂದು ತಾನು ಕಳೆದ ವರ್ಷ ಇದ್ದ ಕೋಣೆಯಲ್ಲಿಯೇ ಬಿಡಾರ ಮಾಡಿದ. ವಿಶ್ವನಾಥನೂ ಮೈಸೂರಿಗೆ ಬಂದು, ಈ ಸಲ ಬೇರೆಯ ಕೋಣೆಯನ್ನು ಗೊತ್ತುಮಾಡಿಕೊಂಡ; ಸುಂದರಮೂರ್ತಿಯ ಸಹವಾಸ ವನ್ನು ಸಂಪೂರ್ಣವಾಗಿ ತ್ಯಜಿಸಿಯೇಬಿಟ್ಟ. ಈಗ ಅವನು ಮೈಲಾರಯ್ಯ ನವರ ಒತ್ತಾಸೆಯಿಂದ ತನ್ನ ಕಾಲ ಮೇಲೆ ತಾನು ನಿಲ್ಲಲು ಸಮರ್ಥನಾಗಿದ್ದ.

ಸುಂದರಮೂರ್ತಿ ತನ್ನ ಊರಿನಲ್ಲಿ ಇದ್ದಾಗ ಒಂದು ದಿನವಾದರೂ ತಾನು ತರಿಸಿಕೊಂಡಿದ್ದ ಚರಕದಿಂದ ಒಂದು ನೂಲೆಳೆಯನ್ನೂ ತೆಗೆದಿರಲಿಲ್ಲ; ಅದರ ಪ್ರಾಯಶ್ಚಿತ್ತಾರ್ಥವಾಗಿಯೇ ಎಂಬಂತೆ ಸಂಪೂರ್ಣ ಖಾದಿಧಾರಿ ಯಾದ. ಈ ಖಾದಿಧಾರಣೆ ಅವನ ಮೇಲೆ ವಿಶೇಷ ಪ್ರಭಾವವನ್ನು ಉಂಟು ಮಾಡಿದಂತೆ ಕಾಣುತ್ತದೆ. ಅದುವರೆಗೂ ರಾಜಕಾರಣದ ಸುದ್ದಿಗಳಲ್ಲಿ ಅಷ್ಟಾಗಿ ಆಸಕ್ತಿವಹಿಸದಿದ್ದವನು ಈಗ ಅವುಗಳಲ್ಲಿ ವಿಶೇಷ ಆಸಕ್ತಿಯನ್ನು ವಹಿಸತೊಡಗಿದ. ಖಾದಿಧಾರಿಗಳೊಡನೆಯೂ ಕಾಂಗ್ರೆಸ್ ಒಲವುಳ್ಳವ ರೊಡನೆಯೂ ಹೆಚ್ಚುಹೆಚ್ಚಾಗಿ ಬೆರೆಯುತೊಡಗಿ, ಸ್ವಾತಂತ್ರ್ಯದ ಹೋರಾಟ ಎಷ್ಟು ಮುಂದೆ ಸಾಗಿದೆ ಎಂಬುದನ್ನು ಪ್ರಥಮತಃ ಅರಿತುಕೊಂಡ. ದೇಶನಾಯಕರ ವಿಚಾರದಲ್ಲಿಯೂ ಕಾಂಗ್ರೆಸ್ ಚಳವಳಿಗಳ ವಿಚಾರ ದಲ್ಲಿಯೂ ತಾನು ಎಷ್ಟು ಅಜ್ಞನಾಗಿದ್ದನೆಂಬುದನ್ನು ಅರಿತುಕೊಂಡು ಅದಕ್ಕಾಗಿ ಬಹು ವಿಷಾದಪಟ್ಟ. ಸುಬ್ಬರಾಯನ ಕೆರೆಯ ಅಂಗಳದಲ್ಲಿ ನಡೆಯುತ್ತ ಇದ್ದ ರಾಜಕೀಯ ಸಭೆಗಳಲ್ಲಿ ಆಸಕ್ತಿ ತೋರತೊಡಗಿದ. ದೇಶಕ್ಕೆ ಸ್ವಾತಂತ್ರ್ಯ ದೊರಕದೆ ಹರಿಜನರ ಉದ್ಧಾರ ಆಗುವುದಾದರೂ ಹೇಗೆ? ಆದ್ದರಿಂದ ಅದಕ್ಕೆ ಪೂರ್ವಭಾವಿಯಾಗಿ ಸ್ವಾತಂತ್ರ್ಯದ ಹೋರಾಟ ದಲ್ಲೂ ಭಾಗವಹಿಸಿ ಆ ರೀತಿಯಲ್ಲಿಯೂ ದೇಶಸೇವೆಮಾಡುವುದು ತನ್ನ ಕರ್ತವ್ಯವಲ್ಲವೇ ಎಂದು ತನಗೆ ತಾನೇ ಪ್ರಶ್ನೆಹಾಕಿಕೊಂಡ. 'ದೇಶದ ಸ್ವಾತಂತ್ರ್ಯದ ಹೋರಾಟಕ್ಕೆ ನಿನ್ನ ಸೇವೆ ಅವಶ್ಯಕ' ಎಂದು ಅವನ ಅಂತರ್ವಾಣಿ ನುಡಿಯಿತು.

ಸುಂದರಮೂರ್ತಿಯಲ್ಲಿ ಹೊಸ ಆವೇಶದ ಸಂಚಾರವಾಯಿತು. ಆ ಆವೇಶದ ಅಮಲಿನಲ್ಲಿ ಅವನು ತನ್ನ ವ್ಯಾಸಂಗ, ತನ್ನ ಸಜ್ಜನ ಗೆಳೆಯ

ಲಕ್ಷ್ಮೀಪತಿ, ರಾಚಪ್ಪ, ಕಡೆಗೆ ಚೆನ್ನಿ—ಎಲ್ಲವನ್ನೂ, ಎಲ್ಲರನ್ನೂ ಮರೆತ. ಸ್ವದೇಶೀ ವಸ್ತುಗಳನ್ನೇ ಉಪಯೋಗಿಸಲು ಮೊದಲು ಮಾಡಿದ. ಸಿನಿಮಾ ಪೋಷಣಕ್ಕೆ ಬಹಿಷ್ಕಾರ ಹಾಕಿದ.

ಸ್ವಾತಂತ್ರ್ಯದ ಹೋರಾಟಕ್ಕೆ ದೇಶವೂ ಸಿದ್ಧವಾಗುತ್ತಿತು; ಸುಂದರ ಮೂರ್ತಿಯೂ ಸಿದ್ಧವಾಗುತ್ತಿದ್ದ.

ಯುದ್ಧಕ್ಕೆ ನುಗ್ಗುವ ಮೊದಲು ತಕ್ಕ ತರಬೇತು ಪಡೆಯಬೇಕೆಂದು ತೋರಿತವನಿಗೆ. ಮಹಾತ್ಮಾ ಗಾಂಧಿಯವರ ಸಾಬರಮತಿ ಆಶ್ರಮದಲ್ಲಿ ಅವನ ಗೆಳೆಯ ಶ್ರೀಧರಮೂರ್ತಿ ಇದ್ದನಷ್ಟೆ. ತಾನೂ ಅಲ್ಲಿಗೆ ಹೋಗಬೇಕೆಂದು ಬಯಸಿ, ಆಶ್ರಮದ ವಿಚಾರ ತಿಳಿಸಬೇಕೆಂದು ಅವನಿಗೊಂದು ಸಣ್ಣ ಪತ್ರವನ್ನು ಬರೆದ. ಶ್ರೀಧರಮೂರ್ತಿಯಿಂದ ಹೀಗೆ ಉತ್ತರ ಬಂದಿತು:

ಪ್ರಿಯ ಸುಂದರ,

ಬಹಳ ದಿನಗಳಿಂದ ನಿನ್ನಿಂದ ಕಾಗದವೇ ಬಂದಿರಲಿಲ್ಲ. ನಿನ್ನ ಈ ಕಾಗದವನ್ನು ನೋಡಿ ನನಗೆ ಆಶ್ಚರ್ಯ ಸಂತೋಷಗಳು ಏಕ ಕಾಲದಲ್ಲಿ ಉಂಟಾಗಿವೆ. ಖಾದಿಯಲ್ಲಿ ನಂಬಿಕೆಯಿಲ್ಲದಿದ್ದ ನೀನು ಖಾದಿಧಾರಿಯಾಗುವುದು ಮಾತ್ರವಲ್ಲದೆ, ದೇಶಸೇವೆಗೆ ಶಿಕ್ಷಣ ಬಯಸುತ್ತಿರುವುದು ನಿನ್ನಲ್ಲಿ ಅತ್ಯಾಶ್ಚರ್ಯಕರವಾದ ಮಾರ್ಪಾಟಾಗಿದೆ. ನೀನೂ ಇಲ್ಲಿಗೆ ಬಂದು ನನ್ನೊಡನೆ ಇರುವುದಾದರೆ ಅದರಿಂದ ನನಗೆ ಸಂತೋಷವಲ್ಲವೆ?

ಆಶ್ರಮವನ್ನು ಬಂದು ನೋಡಿಕೊಂಡು ಹೋಗಲು ಎಲ್ಲರಿಗೂ ಎಲ್ಲಾ ಕಾಲದಲ್ಲೂ ಸ್ವಾಗತವಿದ್ದೇ ಇದೆ. ಆಶ್ರಮಕ್ಕೆ ಬರಲು ಅಡ್ಡಿಯೇನು? ಭಾರತೀಯರಿಗೆ ಈಗ ಇದೊಂದು ಯಾತ್ರಾಸ್ಥಳ. ಅಗತ್ಯವಾಗಿ ಬಾ.

ಆದರೆ, ನೀನು ಆಶ್ರಮವಾಸಿಯಾಗಲು ಬಯಸಿದರೆ— ಅದು ಸ್ವಲ್ಪ ಕಷ್ಟಸಾಧ್ಯ. ಪ್ರವೇಶ ದೊರೆಯುವುದಿಲ್ಲ ಎಂದು ಅರ್ಥವಲ್ಲ. ಎಲ್ಲರಿಗೂ ಪ್ರವೇಶವುಂಟು. ಆದರೆ, ಇಲ್ಲಿ ಇರಬೇಕೆಂದು ಬಂದವರು ಇಲ್ಲಿನ ಸಂಯಮದ, ಶ್ರಮಸಾಧ್ಯವಾದ, ಬಹು ಸರಳವಾದ, ಜೀವನವನ್ನು ಕಂಡು ಮಹಾತ್ಮರ ಆಶೀರ್ವಾದವನ್ನು ಪಡೆದು ಹಿಂದಿರುಗುತ್ತಾರೆ. ಇಲ್ಲಿನ ಜೀವನಕ್ರಮ ನಿನಗೆ ಒಗ್ಗುವುದೇ? ಆಲೋಚಿಸು.

ಇಲ್ಲಿನ ಆಶ್ರಮ ಎಂದರೆ ಒಂದು ಹಳ್ಳಿಯಷ್ಟಿದೆ. ಇಲ್ಲಿ ಕೆಲವು

ದಿನಗಳಿದ್ದರೆ ಉತ್ತಮ ಶಿಕ್ಷಣವನ್ನೇನೋ ಪಡೆಯಬಹುದು. ಆದರೆ ಇಲ್ಲಿನ ಶಿಸ್ತು ಸುಖಜೀವಿಗಳಿಗೆ ಸಂಕೋಲೆ. ಮುಂಚಿತವಾಗಿ ಮಲಗಿ ಬೇಗನೆ ಏಳಬೇಕು. ಊಟ ಉಡಿಗೆ ತೊಡಿಗೆಗಳಲ್ಲಿ ನಮ್ಮ ರುಚಿಗಳಿಗೆ ಎಡೆಯೇ ಇಲ್ಲ! ಆಶ್ರಮದ ಹಂಚಿಕೆಯ ಕಾರ್ಯದ ಜೊತೆಗೆ ನಮ್ಮ ಕಾರ್ಯಗಳನ್ನು ನಾವೇ ನಿರ್ವಹಿಸಿಕೊಳ್ಳಬೇಕು. ನಮ್ಮ ಊಟ ತಿಂಡಿಗಳಿಗೆ ನಮ್ಮವೇ ಬೇರೆ ಬೇರೆ ತಟ್ಟೆ ಬಟ್ಟಲುಗಳು; ನಾವೇ ತೊಳೆದು ಗೊತ್ತಾದ ಕಡೆ ಇಟ್ಟುಕೊಳ್ಳಬೇಕು. ನಮ್ಮ ಬಟ್ಟೆಗಳನ್ನು ನಾವೇ ಒಗೆದುಕೊಳ್ಳಬೇಕು. ಪಾಯಖಾನೆಗಳನ್ನು ಕೂಡ ಸರತಿಯ ಪ್ರಕಾರ ಶುಚಿ ಮಾಡಬೇಕು. ಒಟ್ಟಿನಲ್ಲಿ ಜೀವನ ಅತಿ ಸಾಮಾನ್ಯ, ಸರಳ; ಒಗ್ಗಿದರೆ, ಅಷ್ಟೇ ಸುಂದರ. ಇಲ್ಲಿ ಶಿಕ್ಷಣ ಪಡೆದವರು ರಾಷ್ಟ್ರಸೇವೆಗೆ, ಅದರಲ್ಲಿಯೂ ಗ್ರಾಮಗಳ ಉದ್ಧಾರ ಕಾರ್ಯಕ್ಕೆ ಪೂರ್ಣ ಯೋಗ್ಯತೆ ಪಡೆಯುವರೆಂಬುದರಲ್ಲಿ ಸಂದೇಹವಿಲ್ಲ.

ನನ್ನ ದೃಷ್ಟಿಯಲ್ಲಿ, ಇಲ್ಲಿನ ದೊಡ್ಡ ಕೊರತೆಯೆಂದರೆ, ಆಶ್ರಮವಾಸಿಗಳಿಗೆ ಸಾಕಷ್ಟು ವಿರಾಮ ದೊರೆಯುವುದಿಲ್ಲ. ಕಾಲವೆಲ್ಲ ದೈನಂದಿನ ಕಾರ್ಯಗಳಲ್ಲಿಯೇ ಕಳೆದು ಹೋಗುತ್ತದೆ. ಓದಿ ತಿಳಿದುಕೊಳ್ಳುವುದಕ್ಕಾಗಲಿ ಗಲಭೆಯಿಲ್ಲದೆಡೆ ಕುಳಿತು ಆಲೋಚನೆ ಮಾಡುವುದಕ್ಕಾಗಲಿ ಅಷ್ಟು ಅವಕಾಶವಿಲ್ಲ. ಇಲ್ಲಿ ಎಲ್ಲರ ಮನಸ್ಸು ಜೀವನ ತಿದ್ದುತ್ತದೆ; ಆತ್ಮವಿಕಾಸಕ್ಕೆ ಅವಕಾಶವಿಲ್ಲ; ವಿಶಿಷ್ಟ ವ್ಯಕ್ತಿತ್ವ ರೂಪಗೊಳ್ಳುವುದಿಲ್ಲ. ಇದು ನನ್ನ ಅಭಿಪ್ರಾಯ.

ಆದರೆ, ಮಹಾತ್ಮರ ಸಾನ್ನಿಧ್ಯದ ಸೂರ್ಯಪ್ರಭೆಯ ಮುಂಡೆ ಅವರಿಗೆ ಕೊರತೆ ಏನೇ ಕಂಡರೂ ಅದೆಲ್ಲಾ ಕತ್ತಲೆಯಂತೆ ಚೆದರಿಹೋಗುತ್ತದೆ.

ನೀನು ಈ ವರ್ಷ ಬಿ. ಎ. ಪರೀಕ್ಷೆಗೆ ಕಟ್ಟುವವನಾಗಿದ್ದೀಯೆ ಎಂದು ನಿನ್ನ ಕಾಗದದಿಂದ ತಿಳಿದುಬರುತ್ತದೆ. ನಾನಂತೂ ಬಹಳ ಬೇಗನೆ ವಿದ್ಯಾವ್ಯಾಸಂಗವನ್ನು ಕೈಬಿಟ್ಟು ಇತ್ತ ಬಂದೆ. ನೀನು ಇಲ್ಲಿಯ ವರೆಗೆ ಓದಿ, ಇನ್ನು ಏಳೆಂಟು ತಿಂಗಳ ಅವಧಿಯಲ್ಲಿ ಹೀಗೆ ದುಡುಕುವುದು ತರವೆ? ಆಲೋಚನೆ ಮಾಡು. ರಾಷ್ಟ್ರಸೇವೆಯೋ, ಹರಿಜನಸೇವೆಯೋ, ಗ್ರಾಮಸೇವೆಯೋ — ಯಾವುದಕ್ಕೂ ನಿನ್ನ ಮುಂದಿನ ಇಡಿಯ ಜೀವಮಾನವೇ ನಿನ್ನದಾಗಿ ಕಾದಿರುವಾಗ, ಇನ್ನು ಏಳೆಂಟು ತಿಂಗಳಲ್ಲಿ ನೀನಿಲ್ಲವೆಂದು ರಾಷ್ಟ್ರದ

ಕೆಲಸ ಕುಂಠಿತವಾಗುವುದಿಲ್ಲ. ನನ್ನಿಂದ ದೇಶ ಉದ್ಧಾರವಾಗುತ್ತಿದೆ ಯೆಂದಾಗಲಿ, ನಿನ್ನಲ್ಲಿ ನಿರುತ್ಸಾಹವನ್ನು ಹುಟ್ಟಿಸಬೇಕೆಂದಾಗಲಿ, ನಿನ್ನ ಸೇವಾಕಾಂಕ್ಷೆಯನ್ನು ಸಣ್ಣದೆಂದು ಬಗೆಯುವುದಾಗಲಿ ನನ್ನ ಉದ್ದೇಶವಲ್ಲ. ಕಾರ್ಯವಾಸಿಯ ದೃಷ್ಟಿಯಿಂದ ಹೀಗೆ ಬರೆಯುತ್ತಿದೇನೆ. ಆದರೆ, ಆಶ್ರಮ ವನ್ನು ಬಂದು ದರ್ಶನ ಮಾಡಲು ಅಭ್ಯಂತರವಿಲ್ಲ. ಅದಕ್ಕಾದರೂ ದಸರಾ ರಜಾ ಕಾಲದಲ್ಲಿ ಬರಬಹುದಲ್ಲವೆ?

ಎಂದೇ ಆಗಲಿ, ಯಾತಕ್ಕೋ ಆಗಲಿ, ಆಗತ್ಯವಾಗಿ ಬಾ. ನಿನ್ನ ಬರವನ್ನೇ ಎದುರುನೋಡುತ್ತಿರುವ,

ನಿನ್ನ ನಚ್ಚಿನ ಗೆಳೆಯ,
ಶ್ರೀಧರ.

ಶ್ರೀಧರನ ಪತ್ರ ಬಹಳ ವಿವೇಕಪೂರ್ಣವಾಗಿದೆಯೆಂದು ಸುಂದರ ಮೂರ್ತಿಗೆ ತೋರಿತು. ಅದನ್ನು ಹತ್ತು ಸಲ ಓದಿದ; ತನ್ನ ನಿರ್ಧರವನ್ನು ಇಪ್ಪತ್ತು ಸಲ ತಿರುವಿ ಹಾಕಿದ. ಲಕ್ಷ್ಮೀಪತಿಯ ಸಲಹೆ ಕೇಳೋಣವೆಂದು ಮನಸ್ಸಾಯಿತು. ಹೊರ ಹೊರಡಬೇಕೆಂದು ಸಿದ್ಧನಾಗುತ್ತಿದ್ದಾಗ, 'ನೆನೆ ದವರ ಮನದಲ್ಲಿ' ಎಂಬಂತೆ, ಲಕ್ಷ್ಮೀಪತಿಯೇ ಅಲ್ಲಿಗೆ ಬಂದ. ಸುಂದರ ಪತ್ರವನ್ನು ಅವನಿಗೆ ಓದಿ ಹೇಳಿ, ಅವನ ಸಲಹೆಯನ್ನು ಕೇಳಿದ. ಹೆಚ್ಚು ಆಲೋಚನೆ ಮಾಡದೆ ಲಕ್ಷ್ಮೀಪತಿ ಹೇಳಿದ, ಸ್ಫೂರ್ತಿಯಿಂದ ಕೂಡಲೆ ಕಾವ್ಯ ರಚನೆ ಮಾಡುವಂತೆ:

"ಸುಂದರ, ರಾಷ್ಟ್ರಸೇವೆ ಮಾಡಬೇಕೆನ್ನುವವರು ಸರ್ವತ್ಯಾಗಕ್ಕೂ ಸಿದ್ಧರಾಗಿರಬೇಕು. ರಾಷ್ಟ್ರಸೇವೆಯ ಹಂಬಲು ನನ್ನನ್ನೂ ಕಾಡದೆ ಇಲ್ಲ; ಈಗಲೂ ಕಾಡುತ್ತ ಇದೆ. ನಾನು ಅದಕ್ಕೆ ಹುಟ್ಟಿಲ್ಲ ಎಂದು ಕಾಣುತ್ತಿದೆ. ನಿನ್ನ ಪ್ರೋತ್ಸಾಹದ ಮಾತುಗಳಿಂದ ಕಾವ್ಯರಚನೆಗೆ ನನ್ನ ಜೀವಮಾನವನ್ನು ಮೀಸಲಿಡಬೇಕೆಂದು ನಿರ್ಧರಿಸಿದ್ದೇನೆ. ಸಾಹಿತ್ಯಸೇವೆಯ ಮೂಲಕ ದೇಶ ಸೇವೆ ಮಾಡಬೇಕೆಂದು ಸಂಕಲ್ಪಮಾಡಿದ್ದೇನೆ. ಭಾಷಾಸೇವೆಯೂ ದೇಶ ಸೇವೆ ಎಂದು ಬಲ್ಲವರು ನುಡಿಯುವುದನ್ನು ಕೇಳಿದ್ದೇನೆ. ಈಗ ನನ್ನ ಒಂದೆರಡು ಕವನಗಳನ್ನು ಬೆಂಗಳೂರಿನ ಒಂದು ಪ್ರಸಿದ್ಧ ಮಾಸಪತ್ರಿಕೆಗೆ ಪ್ರಕಟನೆಗೆಂದು ಕಳಿಸಿದ್ದೆ. ಅವರು ಕವನಗಳನ್ನು ಮೆಚ್ಚಿಕೊಂಡು, ಅವನ್ನು

ಪ್ರಕಟಿಸುವುದಾಗಿ ಭರವಸೆ ಕೊಟ್ಟಿದ್ದಾರೆ. ನನ್ನ ದಾರಿಯನ್ನು ನಾನು ಗುರುತಿಸಿಕೊಂಡಿದ್ದೇನೆ. ನಿನ್ನ ದಾರಿಯನ್ನು ನೀನು ಕಂಡುಕೊಂಡು ಅದರಲ್ಲಿ ಮುಂದುವರಿ. ನನಗೆ ಗೊತ್ತು, ನಿನ್ನ ಹಂಬಲು ಹಿರಿದು, ಹಲವು ಮುಖವಾಗಿದೆ. ಅದನ್ನು ಒಮ್ಮುಖ ಮಾಡಿಕೊ. ಇಲ್ಲದಿದ್ದರೆ ಏನನ್ನೂ ಸಾಧಿಸಿದಂತಾಗುವುದಿಲ್ಲ. ಶ್ರೀಧರ ಹೇಳುವಂತೆ, ಇಷ್ಟರ ವರೆಗೆ ಓದಿ, ಮೊದಲು ಬಿ. ಎ. ಮಾಡುವುದು ನಿನ್ನ ಕರ್ತವ್ಯ ಎಂದು ನನಗೆ ತೋರುತ್ತದೆ. ಆಮೇಲೆ ನಿನಗೆ ತೋರಿದಂತೆ ಮಾಡು.''

ಸುಂದರಮೂರ್ತಿ ಏನೂ ಹೇಳಲಿಲ್ಲ; ಕೆಲಹೊತ್ತು ಮೌನವಾಗಿದ್ದ.

"ಮನಸ್ಸಿದ್ದರೆ, ಈ ಕವನ ಕೇಳು. ತುಂಬ 'ಚಿಕ್ಕದು. ನಿನ್ನೆ ತಾನೆ ಬರೆದದ್ದು'' ಲಕ್ಷ್ಮೀಪತಿ ಮೌನವನ್ನು ಮುರಿದು, ಆ ಕವನವನ್ನು ಓದಿದ:

ಚೆದರಿದೆ ಚಿತ್ತ :
ಅತ್ತ ಇತ್ತ ಸುತ್ತ ಮುತ್ತ
ಹರಿದಿದೆ ಚಿತ್ತ :
ಈಗ ತಾನೆ ಎಚ್ಚತ್ತ
ಚರಿಸುವ ಚಿತ್ತ :
ಹುತ್ತ ಬಿಟ್ಟ ಹಾವಿನಂತೆ
ಗಾಳಿಯೆದುರ ತರಗಿನಂತೆ
ಹರಿದು ಎಸೆದ ಹೂವಿನಂತೆ
ಕಾವಿಗಿಟ್ಟ ಅರಗಿನಂತೆ
ಹರಿದಿದೆ ಚಿತ್ತ,
ತೂರಿದೆ ಚಿತ್ತ,
ಹರಡಿದೆ ಚಿತ್ತ,
ಕರಗಿದೆ ಚಿತ್ತ—
ಹರಿದು ತೂರಿ ಹರಡಿ ಕರಗಿ
ಸೊರಗಿದೆ ಚಿತ್ತ.
ಎತ್ತ ಎತ್ತ ಎತ್ತ ಎತ್ತ

ನನ್ನಯ ಗುರಿಯೆತ್ತ ?
ನಾಡ ತಾಯು ಮಗಳಲ್ಲವೆ
ನುಡಿಯ ತಾಯಿ ?
ಇವಳ ಸೇವೆಯವಳ ಸೇವೆ-
ಯೆಂದು ನನ್ನ ಬಾಯಿ
ಹಾಡ ಹೊರಟಿದೆ ;
ನಾಡ ನೋವು ನಲಿವುಗಳನು
ಸೋಲು ಗೆಲವು ಸಾಸಗಳನು
ಹಾಡ ತೊಡಗಿದೆ.
ಹಾಡ ಹೊರಟ ಕಂದನನ್ನು
ಹರಸು ತಾಯಿ,
ಚಿತ್ತವನ್ನು ಸೇವೆಯಲ್ಲಿ
ನಿಲಿಸು ತಾಯಿ,
ಓ, ನಾಡತಾಯಿ !

ಕವನವನ್ನು ಆಲಿಸಿ, "ನಿನ್ನ ನಿರ್ಧಾರವನ್ನೇ ನುಡಿದಿದೀಯೆ ನನಗೆ ನಿರ್ಧಾರವಿದ್ದರಲ್ಲವೆ ನುಡಿಯುವುದು ?" ಎಂದ ಸುಂದರಮೂರ್ತಿ.

೪೫

ಸುಂದರಮೂರ್ತಿಯ ಬಾಳು ಹಲವು ಪ್ರಭಾವಗಳ ಸೆಳೆತಕ್ಕೆ ಸಿಕ್ಕಿ ಹೋಗಿತ್ತು — ನದಿಯ ನೀರೋಟದ ಸುಳಿಗೆ ಸಿಕ್ಕ ಪ್ರಾಣಿ, ಮುಂದಕ್ಕೂ ಸಾಗಲಾರದೆ ಹಿಂದಕ್ಕೂ ಹೋಗಲಾರದೆ ದಡವನ್ನೂ ಮುಟ್ಟಲಾರದೆ ತಪ್ಪಿಸಿ ಕೊಳ್ಳಲೂ ಆಗದೆ ತೇಲದೆ ಮುಳುಗದೆ ಸುಳಿಯಲ್ಲಿ ಗಿರ್ರನೆ ಸುತ್ತುತ್ತಿರುವಂತೆ ಆಗಿತ್ತು ಅವನ ಸ್ಥಿತಿ. ಒಂದು ಕಡೆ ತಂದೆ-ತಾಯಿಗಳಲ್ಲಿ ಭಕ್ತಿ, ಅವರ ಮನ ನೋಯಿಸಬಾರದೆಂಬ ಮನಸ್ಸು; ಏನು ಮಾಡಿದರೂ ಅಳಿಸಲಾಗದ ಕಮಲೆಯ ನೆನಪು; ಚೆನ್ನಿಯ ಮೇಲಿನ ಮರುಕ, ಅವಳನ್ನು ಮೇಲೆತ್ತ ಬೇಕೆಂಬ ಹಂಬಲು ; ಸಾಧ್ಯವಾದರೆ ಇತರ ಹರಿಜನರ ಸೇವೆಯನ್ನೂ ಮಾಡ ಬೇಕೆಂಬ ಸಂಕಲ್ಪ—ಬಹುಮಟ್ಟಿಗೆ ಚೆನ್ನಿಯ ಸಂಪರ್ಕದಿಂದಲೇ ಪ್ರೇರಿತ

ವಾದ ಸಂಕಲ್ಪ; ಈಗ ರಾಷ್ಟ್ರಸೇವೆ ಮಾಡಬೇಕೆಂಬ ಹೊಸ ಅನಿರೀ
ಆವೇಶ, ಸಾಬರಮತಿಯ ಕರೆ. ಲಕ್ಷ್ಮೀಪತಿ ನುಡಿಯ ಸೇವೆಯಲ್ಲಿ ನ
ಸೇವೆಯನ್ನು ಸಮನ್ವಯಮಾಡಿಕೊಂಡಂತೆ ತಾನು ಚೆನ್ನಿಯ ಉದ
ಕಾರ್ಯವನ್ನು ದೇಶಸೇವೆ ಎಂದು ತಿಳಿಯುವುದು ಹೇಗೆ? ಆದರೂ, ಚ
ಯನ್ನು ತೊರೆದು ಮುಂದುವರಿಯುವುದು ಹೇಗೆ? ಅವಳು ತನ್ನ ಜೀವ
ಒಂದು ಪ್ರಧಾನಭಾಗವಾಗಿದ್ದಾಳೆ. ಕಮಲೆ ಒಂದು ಕಣ್ಣಾದರೆ ಅ
ಇನ್ನೊಂದು ಕಣ್ಣು. ಒಂದು ಕಣ್ಣು ತಾನಾಗಿ ಹೋಯಿತು – ಅರೆಗು
ನಾಗಿದ್ದೇನೆ; ಇನ್ನೊಂದು ಕಣ್ಣನ್ನೂ ಕಿತ್ತು ಪೂರ್ತಿ ಕುರುಡಾಗಲೆ?
ಸಾಧ್ಯವಾಗದು. ಮಾದನ ಕೊನೆ ಇಂದೋ ನಾಳೆಯೊ? ತಬ್ಬಲಿ ಚೆನ್ನಿ
ಒಡಹುಟ್ಟಿಲ್ಲದಿದ್ದರೂ ತನ್ನ ತಂಗಿಗೆ, ಯಾರು ದಿಕ್ಕು? ತನ್ನ ತಂದೆ ಕು
ಚೆನ್ನಿಯಲ್ಲಿ ಮರುಕವುಳ್ಳವರಾದರೂ, ತನ್ನ ತಮ್ಮಂದಿರ ಪುರೋಭಿವೃದ್ಧಿ
ತನ್ನ ತಂಗಿಯರ ಮದುವೆಯ ಹೊಣೆ ಹೊತ್ತೂ ಹತ್ತು ಜನ ನಡೆದಂತೆ
ಯುವ ಸಂಪ್ರದಾಯಬದ್ಧರಾಗಿ ಧೈರ್ಯವಾಗಿ ಅದು ಹೇಗೆ ತಾನೆ ಚೆನ್ನಿ
ಪಾಲನೆ ಪೋಷಣೆ ಸಂರಕ್ಷಣೆಗಳಿಗೆ ಹೆಗಲು ಕೊಡಬಲ್ಲರು? ಇಂದು ಕ
ಇಲ್ಲವಾಗಿ ಚೆನ್ನಿ ತನಗೆ ಹೆಚ್ಚು ಹತ್ತಿರವಾಗಿದ್ದಾಳೆ. ಅದು ಹೇಗೋ ತ
ಕುಟುಂಬದ ಉಡಿಯಲ್ಲಿ ಬಂದು ಬಿದ್ದವಳು. ಕುಟುಂಬದ ಪ್ರತಿನಿಧಿಯ
ತಾನು ಅವಳನ್ನು ಕೈಕಾಯಬೇಕು.

ಇವೆಲ್ಲ ಮುಂದಿನ, ದೂರದ ಆಲೋಚನೆ; ಸದ್ಯದಲ್ಲಿ ಮಾದ ಚೆನ್ನಿ
ಆಸರೆ. ಆಶ್ರಮವಾಸಿಯಾಗದಿದ್ದರೂ ಸಾಬರಮತಿಯನ್ನು ನೋಡಿಕೊ
ಬರಲು ಯಾವ ಅಭ್ಯಂತರವೂ ಇಲ್ಲ. ರಾಷ್ಟ್ರಸೇವಕರ ಭವಿಷ್ಯವನ್ನು ಕಂ
ರಿಲ್ಲ. ಮತ್ತೆ ಎಂದು ಚಳವಳಿ ಆರಂಭವಾಗಿ ಶ್ರೀಧರ ಅದರಲ್ಲಿ ಭಾಗಿಯ
ಜೈಲಿಗೆ ಹೋಗುವನೊ? ಅವನು ಸಾಬರಮತಿಯಲ್ಲಿ ಇರುವಾಗಲೇ ಅ
ಹೋಗುವುದು ಒಳಿತು. ಹೀಗೆಂದು ನಿರ್ಧರಮಾಡಿ, ತಂದೆಗೂ ಒ
ಕಾಗದ ಹಾಕಿ, ಲಕ್ಷ್ಮೀಪತಿಗೆ ತಿಳಿಸಿ, ಕೈಲಿದ್ದ ಐವತ್ತು ರೂಪಾಯಿಗಳ
ತೆಗೆದುಕೊಂಡು, ಸುಂದರ ಸಾಬರಮತಿಗೆ ಕಡೆಗೂ ತೆರಳಿದ.

೪೬

ಮೂರು ದಿನ ಸಾಬರಮತಿಯಲ್ಲಿ ನಿಲ್ಲಬೇಕೆಂದು ಹೋದ ಸುಂ

ಅಲ್ಲಿನ ಜೀವನಕ್ಕೆ ಮಾರುಹೋಗಿ ಅಲ್ಲಿಯೇ ಉಳಿದುಬಿಡಬೇಕೆಂದು ಮನಸ್ಸು ಮಾಡಿದ. ಅವನ ಪುಣ್ಯಕ್ಕೆ, ಮಹಾತ್ಮರೂ ತಾತ್ಕಾಲಿಕವಾಗಿ ಅಲ್ಲಿಗೆ ಬಂದಿದ್ದರು. ಆಶ್ರಮವಾಸಿಗಳೊಂದಿಗೆ ಅವರು ರಾಜಕಾರ್ಯವನ್ನು ಕುರಿತು ಹೆಚ್ಚು ಮಾತಾಡದಿದ್ದರೂ ಅವರ ಒಂದೊಂದು ನುಡಿಯಿಂದ ಇನ್ನೊಂದು ಹೋರಾಟ ಸದ್ಯದಲ್ಲಿಯೇ ಪ್ರಾರಂಭವಾಗಬಹುದೆಂಬ ಸೂಚನೆ ಕಂಡುಬರುತ್ತಿದ್ದಿತು.

ಶ್ರೀಧರನೂ ಇತರ ಕೆಲವು ಆಶ್ರಮವಾಸಿಗಳೂ ಭರತಖಂಡದ ಆ ವರ್ಷದ ರಾಜಕೀಯ ಜ್ವಾಲಾಮುಖಿ ಹೇಗೆ ಹೊಗೆಯಾಡುತ್ತಿದೆಯೆಂಬುದನ್ನು ಚಿತ್ರಿಸಿದರು. ಆ ಹೊತ್ತಿನಲ್ಲಿ, ಬ್ರಿಟಿಷರ ದಬ್ಬಾಳಿಕೆ ಕ್ರೂರತರವಾಗಿ ತಾಂಡವವಾಡುತ್ತಿತ್ತು. ಹಲವು ವಿಷಾದಕರ ಘಟನೆಗಳಿಂದ ಇದು ವ್ಯಕ್ತಪಟ್ಟಿತು. ಜೆ. ಟಿ. ಸಂಡರ್‌ಲ್ಯಾಂಡರ 'ಇಂಡಿಯಾ ಇನ್ ಬಾಂಡೆಜ್' ಎಂಬ ಆಗಲೇ ಜಗತ್ಪ್ರಸಿದ್ಧವಾಗಿದ್ದ ಪುಸ್ತಕವನ್ನು ನಿಷಿದ್ಧವೆಂದು ಘೋಷಿಸಿದ್ದರು; ಅದನ್ನು ಪ್ರಕಟಿಸಿದ್ದಕ್ಕಾಗಿ 'ಮಾಡರ್ನ್ ರಿವ್ಯೂ' ಸಂಪಾದಕರಾದ ರಾಮಾನಂದ ಚಾಟರ್ಜಿಯವರನ್ನು ದಸ್ತಗಿರಿ ಮಾಡಿದ್ದರು; ಭಗತ್‌ಸಿಂಗರನ್ನು ದೆಹಲಿ ಬಾಂಬ್ ಪ್ರಕರಣಕ್ಕಾಗಿ ಆಜೀವ ದ್ವೀಪಾಂತರವಾಸದ ಶಿಕ್ಷೆಗೆ ಗುರಿಪಡಿಸಿದ್ದರು; ಸುಭಾಸಚಂದ್ರ ಬೋಸರನ್ನು ವಿಚಾರಣೆಗೆ ಗುರಿಪಡಿಸಿದ್ದರು. ಈ ದಸ್ತಗಿರಿಗಳು, ಈ ವಿಚಾರಣೆಗಳು, ಇವುಗಳನ್ನು ಮರಸುವಂತೆ ಪೋಲೀಸರ ರಾಕ್ಷಸೀವರ್ತನೆ ಘೋರರೂಪವನ್ನು ತಾಳಿತ್ತು: ಲಾಹೋರಿನಲ್ಲಿ ವಿಚಾರಣೆಗೊಳಗಾಗಿದ್ದ ರಾಜಕೀಯ ಬಂದಿಗಳ ವಕೀಲಿನಿಧಿಗಾಗಿ ದ್ರವ್ಯ ಸಂಗ್ರಹಕಾರ್ಯದಲ್ಲಿ ತೊಡಗಿದ್ದ ಯುವಕವೃಂದದ ಮೇಲೆ ಪೋಲೀಸರ ಮುಸಲಪ್ರಹಾರ ಬಿದ್ದು ಅವರು ಮೂರ್ಛೆ ಹೋಗುವಷ್ಟು ಘಾತಗೊಂಡರು; ಅವರು ಮಾಡಿದ್ದ ಅಪರಾಧವೆಂದರೆ, "ಸಾಮ್ರಾಜ್ಯಷಾಹಿಯನ್ನು ತುಳಿಯಿರಿ'', "ಕ್ರಾಂತಿಗೆ ಜಯವಾಗಲಿ" ಎಂದು ಘೋಷಿಸಿದ್ದು. ಅನೇಕ ಕಡೆಗಳಲ್ಲಿ ಕಾರ್ಮಿಕರ ಮುಷ್ಕರಗಳು ಪ್ರಜೆಗಳ ಅಸಮಾಧಾನಕ್ಕೆ ಕನ್ನಡಿಯಾಗಿತ್ತು. ಈ ಕಿರಿಯ ಕಥನದಲ್ಲಿ ಒಂದು ಹಿರಿಯ ಹೋರಾಟದ ದೃಶ್ಯವೇ ಸುಂದರಮೂರ್ತಿಗೆ ಗೋಚರವಾಯಿತು. ಈ ಸಂಗತಿಗಳಲ್ಲಿ ಕೆಲವು ಈ ಮೊದಲೇ ವೃತ್ತಪತ್ರಿಕೆಗಳ ಮೂಲಕ ಸುಂದರಮೂರ್ತಿಗೆ ಗೊತ್ತಾಗಿದ್ದರೂ ಜೀವನವನ್ನು ಕುಲುಕಿರಲಿಲ್ಲ; ಈ ಪ್ರತ್ಯಕ್ಷಕಥನ ಅವನ ಪ್ರಾಣವನ್ನು

ಹಿಂಡಿತು. ದೇಶಸೇವೆಗೆ ಪ್ರಾಣಾರ್ಪಣಮಾಡಬೇಕೆಂಬ ಆವೇಶ ಅವನಲ್ಲಿ ಉಕ್ಕಿತು.

ಒಂದು ವಾರವಾಯಿತು; ಎರಡು ವಾರವಾಯಿತು; ಸುಂದರಮೂರ್ತಿ ಮನೆ ಮಠ ಓದು ಕಾಲೇಜು ಎಲ್ಲವನ್ನೂ ಮರೆತು ಆಶ್ರಮವಾಸಿಯಂತೆಯೇ ಸಾಬರಮತಿಯಲ್ಲಿ ನೆಲಸಿಬಿಟ್ಟ; ಅಲ್ಲಿನ ಜೀವನಕ್ರಮದಲ್ಲಿ ಹೃತ್ಪೂರ್ವಕವಾಗಿ ಭಾಗಿಯಾಗಿ, ಒಂದು ಬಗೆಯ ಆನಂದಸಾಗರದಲ್ಲಿ ಓಲಾಡುತ್ತಿದ್ದ. ತನ್ನ ಸಾಬರಮತಿಯ ಪ್ರವಾಸದ ಅನುಭವವನ್ನು ವಿವರಿಸಿ ಲಕ್ಷ್ಮೀಪತಿಗೆ ಕಾಗದ ಬರೆದು. ತನ್ನ ಪ್ರವಾಸ ವಾಸವೇ ಆಗಬಹುದೋ ಏನೋ ಎಂದು ತಿಳಿಸಿದ್ದ. ಅವನ ಪ್ರವಾಸ ಅನಿರ್ದಿಷ್ಟವಾಗಿ ಮುಂದುವರಿದಿತ್ತು.

ಇದ್ದಕ್ಕಿದ್ದ ಹಾಗೆಯೇ ತಂದೆಯಿಂದ ಸುಂದರಮೂರ್ತಿಗೆ ಒಂದು ಪತ್ರ ಬಂದಿತು: ಅದರಲ್ಲಿ, ತಾಯಿ ಕಾಲು ಸೊಂಟ ಹಿಡಿದುಕೊಂಡು ಹಾಸಿಗೆ ಹಿಡಿದಿರುವಳೆಂದೂ ತನ್ನನ್ನು ನೋಡಲು ಅವಳು ಹಂಬಲಿಸುತ್ತಿರುವಳೆಂದೂ ಕೂಡಲೆ ಹೊರಟು ಬರಬೇಕೆಂದೂ ಬರೆದಿದ್ದರು. ಕಡೆಯಲ್ಲಿ, ಮಾದನೂ ಜ್ವರ ಹಿಡಿದು ಮಲಗಿರುವನೆಂದೂ ಅವನು ಬದುಕುವ ಸೂಚನೆಯಿಲ್ಲವೆಂದೂ ಮೊದಲು ಬರೆಯಲು ಮರೆತಿದ್ದ ಸಂಗತಿಯನ್ನು ಸೇರಿಸಿದ್ದರು.

ಹಿಂದಿರುಗುವುದು ಕರ್ತವ್ಯವೆಂದು ಶ್ರೀಧರಮೂರ್ತಿ ಸಲಹೆ ಕೊಟ್ಟ; ವಿಷಯವೇನೆಂಬುದನ್ನು ಅರಿತ ಒಬ್ಬಿಬ್ಬರು ಆಶ್ರಮವಾಸಿಗಳು ಸುಂದರ ಮೂರ್ತಿಗೆ ಹೀಗೆ ಸಮಾಧಾನ ಹೇಳಿದರು:

"ನಿಮ್ಮ ಹಾಗೆ ಅನೇಕ ಉತ್ಸಾಹಶಾಲಿಗಳಾದ ತರುಣ ವಿದ್ಯಾರ್ಥಿಗಳು ಸಾಬರಮತಿಗೆ ಬಂದು ಮಹಾತ್ಮರ ಆಶೀರ್ವಾದವನ್ನೂ ಬುದ್ಧಿವಾದವನ್ನೂ ಯಾಚಿಸಿದ್ದಾರೆ. ಮಹಾತ್ಮರು ಎಲ್ಲರಿಗೂ ಉಪದೇಶ ಮಾಡಿರುವುದು ಇಷ್ಟೆ: ಎಲ್ಲವನ್ನೂ ತ್ಯಾಗಮಾಡಿ ದೇಶಸೇವೆಗೆ ಉದ್ಯುಕ್ತರಾಗಬೇಕೆಂಬ ಅದಮ್ಯವಾದ ಪ್ರೇರಣೆ ಇಲ್ಲದೆ ಹೋದ ಭಾಗದಲ್ಲಿ, ನೀವು ಮೊದಲು ವಿದ್ಯಾಭ್ಯಾಸಂಗದ ಕಡೆಗೆ ಪೂರ್ಣ ಲಕ್ಷ್ಯಕೊಡಬೇಕು; ಎಲ್ಲರೂ ಪ್ರತ್ಯಕ್ಷವಾಗಿ ರಾಜಕೀಯದಲ್ಲಿ ಭಾಗವಹಿಸಬೇಕಾಗಿಲ್ಲ. ವಿದ್ಯಾರ್ಥಿದಶೆ ಮುಗಿದ ಮೇಲೆ, ನಿಮ್ಮ ನಿಮ್ಮ ಹಳ್ಳಿಗಳಲ್ಲಿಯೇ ನೆಲಸಿ ಅಜ್ಞಾನದಲ್ಲಿ ಮುಳುಗಿರುವ ಹಳ್ಳಿಗರಿಗೆ ಜ್ಞಾನದಾನ ಮಾಡಿ; ಹರಿಜನರ ಸೇವೆಮಾಡಿ, ಅವರನ್ನು ಮುಂದಕ್ಕೆ

ನ್ನಿ; ಗ್ರಾಮಸೇವೆ ಮಾಡಿ; ರಚನಾತ್ಮಕ ಕಾರ್ಯಮಾಡಿ. ಇದೂ ಅನು ಮವಾದ ದೇಶಸೇವೆ. ನೀವೂ ಅಂತೆಯೇ ಮಾಡಬಹುದು. ನಿಮ್ಮ ಳ್ಳಿಯನ್ನೆ ಸಾಬರಮತಿಯನ್ನಾಗಿ ಮಾಡಿ."

ಈ ಸಲಹೆ ಸಮಾಧಾನವಾಕ್ಯಗಳಿಗೆ ಸದ್ಯದ ಮಟ್ಟಿಗೆ ಸುಂದರಮೂರ್ತಿ ಲೆಬಾಗಿದ. ಸುಳಿಯಲ್ಲಿ ಸಿಲುಕಿ ಸುಳಿಯೊಂದಿಗೆಯೇ ಪ್ರವಾಹದಲ್ಲಿ ಮುಂದಕ್ಕೆ ಸಾಗಿಹೋದ.

೪೭

ನರಸಮ್ಮನವರ ಸ್ಥಿತಿ ಅಂಥಾದ್ದೇನೂ ಚಿಂತಾಜನಕವಾಗಿರಲಿಲ್ಲ. ುಂದರಮೂರ್ತಿ ಹಿಂದಿರುಗುವ ವೇಳೆಗೆ ಅವರು ಹಾಸಿಗೆಯ ಮೇಲೆ ಎದ್ದು ುಳಿತು ಸುತ್ತಮುತ್ತ ತಿರಳುವ ಮಟ್ಟಿಗೆ ಚೇತರಿಸಿಕೊಂಡಿದ್ದರು. ಆಸ್ಪತ್ರೆಯ ರಿಸ್ತಾನ ಡಾಕ್ಟರೂ ಯಾವುದೊ ಜಾತಿಯ ಕಾಂಪೌಂಡರೂ ಕೊಡುವ ಷಧವನ್ನು ತಾವು ಕುಡಿಯುವುದಿಲ್ಲವೆಂದು ಹಟಹಿಡಿದಿದ್ದರಿಂದ, ನರಸಿಂಹ ಂಡಿತರ ಆಯುರ್ವೇದ ಚಿಕಿತ್ಸೆ ನಡೆಯುತ್ತಿತ್ತು. ಆದರೆ ಮಾಧನ ಸ್ಥಿತಿ ಏನೋ ನಿಜವಾಗಿಯೂ ಕಳವಳಕ್ಕೆ ಈಡಾಗಿತ್ತು. ಕೃಷ್ಣಪ್ಪನವರು ಸ್ಪತ್ರೆಯ ಡಾಕ್ಟರನ್ನು ಕರೆದು ತಂದು ತೋರಿಸಲಾಗಿ, ಅವನಿಗೆ ನಿಮೋ ಯಾ ಎಂದು ಹೇಳಿ, ಅವನು ಬದುಕುವುದು ಅನುಮಾನ ಎಂದು ಭಿಪ್ರಾಯಪಟ್ಟಿದ್ದರು.

ಸುಂದರಮೂರ್ತಿ ತಂದೆಗೆ ತಿಳಿಸಿಯೇ ಸಾಬರಮತಿಗೆ ಹೋಗಿದ್ದನಷ್ಟೆ. ವನು ಅಲ್ಲಿ ಎರಡು ಮೂರು ದಿನಗಳಿದ್ದು ಹಿಂದಿರುಗುವನೆಂದು ಕೃಷ್ಣಪ್ಪ ನರು ನಂಬಿದ್ದರು. ಅವನು ಅಲ್ಲಿ ಇನ್ನೂ ಕೆಲವು ಕಾಲ ಇರುವುದಾಗಿ ತ್ರೆ ಬರೆದದ್ದರಿಂದ ಅವರಿಗೆ ಆತಂಕವುಂಟಾಯಿತು. ಹೀಗೆ ಸುಮ್ಮನೆ ಾವುದೋ ಊರಿಗೆ ಹೋಗಿ ಕುಳಿತರೆ ವಿದ್ಯಾಭ್ಯಾಸಕ್ಕೆ ವಿಘ್ನವಾಗುತ್ತದೆ ುದು ಅವರ ಮೊದಲ ಎಣಿಕೆ. ಅವರು ಮಿಡ್ಲ್ ಸ್ಕೂಲ್ ಹೆಡ್ಮಾಸ್ಟರನ್ನು ಕಸ್ಮಾತ್ ಸಂಧಿಸಿದಾಗ 'ಸಾಬರಮತಿ ಯಾವುದು?' ಎಂದು ಕೇಳಿದರು. ನಕ್ಕೆ ಆ ಉಪಾಧ್ಯಾಯರು ಅದು 'ಗಾಂಧಿಯವರ ಆಶ್ರಮ' ಎಂದು ತಿಳಿಸಿ ರು. ಆದರ ವಿಚಾರ ಅವರಿಗೆ ಹೆಚ್ಚು ತಿಳಿಯದಿದ್ದರೂ, ಅಲ್ಲಿಗೆ ಹೋದ ನು ಎಲ್ಲಿ ಹಿಂದಿರುಗಿ ಬರುತ್ತಾನೆ ಎಂದು ಗಾಬರಿ ಹಿಡಿಸಿದರು. ಕೃಷ್ಣಪ್ಪ

ನವರಿಗೆ ನಿಜವಾಗಿಯೂ ಗಾಬರಿಯಾಯಿತು. ಅವನನ್ನು ಹಿಂದಕ್ಕೆ ಕರಸಲು ಹೆಂಡತಿಯ ಕಾಯಿಲೆ ಸಕಾರಣವಾಗಿಯೂ ಇತ್ತು. ಕೂಡಲೆ ಬಾ ಎಂದು ಸಾಬರಮತಿಗೆ ಕಾಗದ ಹಾಕಿದರು. ಬೆಂಗಳೂರಿನಿಂದ ಶಾಮಿಯನ್ನು ಕರಸುವ ಆಲೋಚನೆಯನ್ನು ಅವರು ಮಾಡಲೇ ಇಲ್ಲ. ಸುಂದರ ಹಿಂದಿರುಗಿ ಬಂದದ್ದು ತಾಯಿಗೋಸ್ಕರವಾಗಿಯೇ ಆದರೂ, ಮಾದನ ಕಡೆಗಾಲದ ಸೂಚನೆಯನ್ನು ಕಂಡು ಚೆನ್ನಿಗೋಸ್ಕರವಾಗಿಯೂ ಅವನು ಬಂದಿದ್ದನು.

ತಾಯಿ ಸ್ವಲ್ಪಮಟ್ಟಿಗೆ ಚೇತರಿಸಿಕೊಂಡದ್ದನ್ನು ಕಂಡು ಸುಂದರನ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಯಿತು. ತಂದೆಯ ಹೇಳಿಕೆಯಿಂದ ಮಾದನ ಉಲ್ಬಣವಾದ ಖಾಯಿಲೆಯ ಕಾರಣವೂ ತಿಳಿದುಬಂದಿತು. ಈಚೀಚೆಗೆ ಮಾದ ಹೆಂಡದಂಗಡಿಯಲ್ಲಿಯೇ ಹೆಂಡ ಕುಡಿಯುತ್ತಿರಲಿಲ್ಲ; ಬೇಕೆನಿಸಿದಾಗ ಶೀಸೆಯಲ್ಲಿ ತಂದಿಟ್ಟುಕೊಂಡು, ಗುಡಿಸಿಲಿನಲ್ಲಿಯೇ ಕುಡಿದು ಬಿದ್ದುಕೊಳ್ಳುತ್ತಿದ್ದ. ಅವನ ಹೆಂಡದ ಶೀಸೆ ಅಂಗಡಿಗೆ ಹೋಗುವಾಗ ದಾರಿಯಲ್ಲಿ ಬಿದ್ದು ಒಡೆದುಹೋಯಿತು; ಹೆಂಡದಂಗಡಿಯವನನ್ನು ಶೀಸೆ ಎರವಲು ಕೇಳಿದ; ಅವನು ಕೊಡಲಿಲ್ಲ; ಅವಕ್ಕೋಸ್ಕರ, ಅಲ್ಲಿಯೇ ಕಂಠಪೂರ್ತಿ ಕುಡಿದು ತೂರಾಡುತ್ತ ಬಂದು, ತೋಟದ ಹೊರಗಡೆಯೇ ಮುಗ್ಗರಿಸಿಬಿದ್ದು ಅಲ್ಲಿಯೇ ಅಮಲಿನಿಂದ ಮಲಗಬಿಟ್ಟ. ದೊಡ್ಡ ಮಳೆ ಬಂದು, ಮಳೆಯಲ್ಲಿ ತೊಯ್ದು ಹೋದ. ಮಳೆ ನಿಂತ ಎಷ್ಟೋ ಹೊತ್ತಿನ ಮೇಲೆ ಅವನಿಗೆ ಎಚ್ಚರವಾಗಿ, ಮೆಲ್ಲನೆ ತೂರಾಡುತ್ತ ತೋಟದೊಳಕ್ಕೆ ಹೋಗಿ, ಗುಡಿಸಿಲಿನಲ್ಲಿ ಬಿದ್ದುಕೊಂಡ. ಆ ರಾತ್ರಿಯೇ ವಿಪರೀತ ಜ್ವರ. ಮಾರನೆಯ ಬೆಳಿಗ್ಗೆ ಮಾದನ ಸ್ಥಿತಿಯನ್ನು ತೋಟದ ಕೆಲಸದ ಆಳು ಒಬ್ಬನಿಗೆ ಚೆನ್ನಿ ತಿಳಿಸಿದಳು. ಅವನು ಆ ಸಂಗತಿಯನ್ನು ಕೃಷ್ಣಪ್ಪನವರಿಗೆ ತಿಳಿಸಿದ. ಕೃಷ್ಣಪ್ಪನವರು ಕೂಡಲೆ ತೋಟಕ್ಕೆ ಹೋಗಿ ಮಾದನ ಚಿಂತಾಜನಕ ಸ್ಥಿತಿಯನ್ನು ಕಂಡು, ಆಸ್ಪತ್ರೆಗೆ ಹೋಗಿ ಡಾಕ್ಟರನ್ನು ಕರೆದುತಂದು ತೋರಿಸಿದರು. ಅವರು ತೋಟಕ್ಕೆ ಬಂದು ರೋಗಿಯನ್ನು ನೋಡಿಕೊಂಡು ಹೋಗಲು ಐದು ರೂಪಾಯಿ ಅಪೇಕ್ಷಿಸಿದರು. ಕೃಷ್ಣಪ್ಪನವರು ಹಣ ಕೊಡಲು ಹಿಂದೆಮುಂದೆ ನೋಡಲಿಲ್ಲ. ಅವರು ತಾವು ದಿನಕ್ಕೆ ಒಂದು ಸಲ ಬಂದು ಮಾದನನ್ನು ನೋಡಿಕೊಂಡು ಹೋಗುವುದಾಗಿಯೂ, ಪ್ರತಿ ಸಲದ ಭೇಟಿಗೂ ಎರಡು ರೂಪಾಯಿ ಕೊಡ

ಬೇಕೆಂದೂ ಹೇಳಿದ್ದರು. ಕೃಷ್ಣಪ್ಪನವರು ಅದಕ್ಕೂ ಒಪ್ಪಿದ್ದರು. ತಾವೇ ಆಸ್ಪತ್ರೆಗೆ ಹೋಗಿ, ಔಷಧ ತಂದು, ಚೆನ್ನಿಯ ಕೈಯಿಂದ ಅವನಿಗೆ ಕುಡಿಸುತ್ತಿದ್ದರು. ತಾವೇ ದಿನಕ್ಕೆ ಎರಡು ಸಲ ತೋಟಕ್ಕೆ ಹೋಗಿ ಬಿಸಿಯಾದ ಹಾಲು, ಗಂಜಿ ತೆಗೆದುಕೊಂಡು ಹೋಗಿ ಕೊಡುತ್ತಿದ್ದರು. ಎರಡು ಮೂರು ದಿನಗಳಿಂದೀಚೆಗೆ ಮಾದ ಒಂದು ತೊಟ್ಟು ಹಾಲೂ ಕುಡಿದಿರಲಿಲ್ಲ; ಮೇಲುಸಿರು ಎಳೆಯುತ್ತ ಇತ್ತು. ಡಾಕ್ಟರು ಮಾದ ಬದುಕುವ ಆಸೆಯಿಲ್ಲವೆಂದು ತಿಳಿಸಿಬಿಟ್ಟಿದ್ದರು.

ತಂದೆ ಕಾಗದ ಬರೆದದ್ದೂ ತಾನು ಹಿಂದಿರುಗಿ ಬಂದದ್ದೂ ಎರಡೂ ಒಳ್ಳೆಯದಾಯಿತು ಎಂದುಕೊಂಡ ಸುಂದರ. ಮಾದ ಬದುಕಿರುವ ವರೆಗೂ ಅವನಿಗೆ ತನ್ನ ತಂದೆ ಮಾಡುತ್ತಿದ್ದ ಸೇವಾಕಾರ್ಯವನ್ನು ತಾನು ವಹಿಸಿಕೊಳ್ಳುವುದಾಗಿ ನಿರ್ಧರಿಸಿಕೊಂಡ. ಅದೇ ನಿರ್ಧಾರದಿಂದ, ಕೂಡಲೆ ತೋಟಕ್ಕೆ ಧಾವಿಸಿದ. ಮಾದ ಮೃತ್ಯುಶಯ್ಯೆಯ ಮೇಲೆ ಮಲಗಿದ್ದುದನ್ನು ಕಂಡು ಕಂಬನಿದುಂಬಿದ. ಇನ್ನು ಚೆನ್ನಿ ಸಂಪೂರ್ಣವಾಗಿ ತಬ್ಬಲಿಯಾದಳು, ಅವಳ ಗತಿ ಏನು ಎಂಬ ಆಲೋಚನೆ ಅವನನ್ನು ಬಾಧಿಸತೊಡಗಿತು.

ಅಂದಿನ ರಾತ್ರಿ ಸುಂದರ ತಂದೆಯನ್ನು ಕೇಳಿದ :

"ಅಪ್ಪಾ, ಮಾದ ಕಣ್ಣುಮುಚ್ಚಿದರೆ ಚೆನ್ನಿಯ ಗತಿ ಏನು ?"

"ನಾನೂ ಅದನ್ನೇ ಆಲೋಚಿಸುತ್ತ ಇದೇನೆ. ಏನು ಮಾಡುವುದಳ್ಳೂ ತೋರುವುದಿಲ್ಲ. ಹಣಕಾಸಿಗಾಗಿ ನಾನು ಯೋಚಿಸುತ್ತ ಇಲ್ಲ. ಅವಳನ್ನು ಎಲ್ಲಿ ಬಿಡುವುದು ಎನ್ನುವುದೇ ದೊಡ್ಡ ಆಲೋಚನೆ. ಅನ್ಯಾಯವಾಗಿ ಅವಳಿಗೆ ಹೊಲೆ ಅಂಟಿಕೊಂಡು ಬಂದಿದೆ. ಇಲ್ಲದೆ ಹೋದರೆ ಮಗಳಂತೆಯೇ ಮನೆಯಲ್ಲಿ ಇಟ್ಟುಕೊಂಡು ಕಾಪಾಡುತ್ತ ಇದ್ದೆ. ಕಾಳೇಗೌಡ ಅವಳನ್ನು ಸಾಕಿಕೊಳ್ಳಬಹುದು. ಮಾದನ ಮಗಳು ಎಂದು ಅವನು ಒಲ್ಲ."

"ಅಪ್ಪ, ತೋಟದಲ್ಲಿ ಒಂದು ಸಣ್ಣ ಹೆಂಚಿನ ಮನೆ ಕಟ್ಟಿಸಿಬಿಡೋಣ. ಅಲ್ಲಿ ಅವಳು ವಾಸವಾಗಿರಲಿ. ತೋಟದ ಕಾವಲಿಗೆ ಹೇಗೂ ನಾವು ಇನ್ನೊಬ್ಬ ಆಳನ್ನು ಗೊತ್ತುಮಾಡಬೇಕು. ಅವನು ಜೊತೆಗೆ ಇರುತ್ತಾನೆ."

"ಅದು ಮುಂದಿನ ಆಲೋಚನೆ. ಸದ್ಯ ಏನು ಮಾಡುವುದು, ಹೇಳು.

ನಾಳೆಯೋ ಮಾದ ತೀರಿಕೊಂಡರೆ, ಒಂಟಿ ಹುಡಿಗಿಯನ್ನು ತೋಟದಲ್ಲಿ ಹೇಗೆ ಬಿಟ್ಟಿರುವುದು ?"

ಇಬ್ಬರಿಗೂ ಈ ಸಮಸ್ಯೆ ಬಗೆಹರಿಯದೆ, ಆ ಆಲೋಚನೆಯಲ್ಲಿಯೇ ಬೆಳಕು ಹರಿಯಿತು.

ಬೆಳಗಾದ ಕೂಡಲೆ ತಂದೆಮಕ್ಕಳಿಬ್ಬರೂ ಒಟ್ಟಿಗೆ ತೋಟಕ್ಕೆ ಹೋದರು. ಮಾದ ಕಟ್ಟಿಗೆಯ ಹಾಗೆ ಮಲಗಿದ್ದ. ಸ್ವಲ್ಪ ಕಾಫಿ ಕುಡಿಸಲೆಂದು, ಮಾದ ನನ್ನು ಎಚ್ಚರಗೊಳಿಸುವ ಹಾಗೆ ಸುಂದರ ಚೆನ್ನಿಗೆ ಹೇಳಿದ. ಚೆನ್ನಿ 'ಅಪ್ಪಾ! ಅಪ್ಪಾ! ಮಾದ! ಮಾದ!' ಎಂದು ಅನೇಕ ಬಾರಿ ಕೂಗಿದಳು, ಅವನನ್ನು ಉರುಳಿಸಿ ನೋಡಿದಳು. ಮಾದನ ಮುಚ್ಚಿದ ಕಣ್ಣು ಮುಚ್ಚಿದ ಹಾಗೆಯೇ ಇತ್ತು. ಕಡೆಯ ಸಲ ಕಣ್ಣು ಮುಚ್ಚಿದನೆಂದು ಕೃಷ್ಣಪ್ಪನವರು ಅರಿತರು. ಆಸ್ಪತ್ರೆಗೆ ಹೋಗಿ ಡಾಕ್ಟರನ್ನು ಕರೆದುಕೊಂಡು ಬರುವಂತೆ ಸುಂದರನಿಗೆ ಹೇಳಿದರು.

ಸುಂದರ ಆಸ್ಪತ್ರೆಗೆ ಹೋಗಿ, ಮಾದ ಸಾವು ಸಂಕಟದಲ್ಲಿದ್ದಾನೆಂದು ಡಾಕ್ಟರಿಗೆ ತಿಳಿಸಿದ. "ನಿನ್ನೆ ಬೆಳಿಗ್ಗೆಯೇ ಅವನಿಗೆ ಸಾವು ಸಂಕಟ. ಬಹುಶಃ ಈಗ ಅವನು ಸತ್ತಿರಬೇಕು. ನಾನು ಬಂದೆ, ನೀವು ನಡೆಯಿರಿ" ಎಂದು ಡಾಕ್ಟರು ಸುಂದರನಿಗೆ ತಿಳಿಸಿದರು. ಸುಂದರ ತೋಟಕ್ಕೆ ಹಿಂದಿರುಗಿದ.

ಸುಂದರ ಹಿಂದಿರುಗಿದ ಸ್ವಲ್ಪ ಹೊತ್ತಿನೊಳಗಾಗಿ ಡಾಕ್ಟರು ತೋಟಕ್ಕೆ ಬಂದರು; ಅವರ ಜೊತೆಯಲ್ಲಿ ಕ್ರಿಸ್ತಪಾದ್ರಿಯೊಬ್ಬರಿದ್ದರು.

ಡಾಕ್ಟರ್ ಜೇಮ್ಸ್ ದೊರೆಸ್ವಾಮಿಯವರು ಬಹಳ ಮುಂದಾಲೋಚನೆ ಯಿಂದ ಎರಡು ದಿನಗಳ ಹಿಂದೆಯೆ ಮಾದನ ಮರಣವನ್ನು ಮುಂಗಂಡು, ಬೆಂಗೂಳೂರಿನಿಂದ ಹಾಸನಕ್ಕೆ ಬಂದಿದ್ದ ರೆವರೆಂಡ್ ಮೈಕೇಲ್ ಮಾಧವ ರನ್ನು ಅಲ್ಲಿಂದ ಕರಸಿಕೊಂಡಿದ್ದರು. ಹಿಂದಿನ ದಿನದ ಬೆಳಗ್ಗೆಯೇ ರೆವರೆಂಡ್ ಸಾಹೇಬರು ಡಾಕ್ಟರ ಜೊತೆಯಲ್ಲಿ ತೋಟಕ್ಕೆ ದಯಮಾಡಿಸಿ ಮರಣೋನ್ಮುಖ ನಾಗಿದ್ದ ಮಾದನಿಗೆ ಕ್ರೈಸ್ತಮತದ ದೀಕ್ಷೆಯನ್ನು ಅನುಗ್ರಹಿಸಿದ್ದರು. ಈಗ ಮಾದನ ಆತ್ಮಕ್ಕೆ ಶಾಂತಿಯನ್ನೂ ಕೋರಲು ಡಾಕ್ಟರೊಂದಿಗೆ ಬಂದಿದ್ದರು.

ಡಾಕ್ಟರು ಮಾದನನ್ನು ಪರೀಕ್ಷಿಸಿ, ಅವನು ಸತ್ತು ಮೂರು ನಾಲ್ಕು ಗಂಟೆಗಳ ಮೇಲಾಗಿದೆಯೆಂದು ನುಡಿದುಬಿಟ್ಟರು. ಚೆನ್ನಿ ಮಾದನ ಮೇಲೆ

ಬಿದ್ದು ಬಿಕ್ಕಿಬಿಕ್ಕಿ ಅಳತೊಡಗಿದಳು. ಸುಂದರ ಅವಳನ್ನು ಮುಟ್ಟಿಕೊಂಡು ತಂಗಿಯನ್ನು ಸಂತೈಸುವಂತೆ ಸಂತೈಸತೊಡಗಿದ. ಅವನೂ ಕೃಷ್ಣಪ್ಪನವರೂ ಕಂಬನಿದುಂಬಿದ್ದರು. ರೇವರೆಂಡ್ ಸಾಹೇಬರು ಸೊಂಟಕ್ಕೆ ಕಟ್ಟಿಕೊಂಡು ತೂಗಬಿಟ್ಟಿದ್ದ ಶಿಲುಬೆಯನ್ನು ಮಾದನ ಹಣೆಗೂ ತುಟಿಗೂ ಸೋಂಕಿಸಿದರು ; ಬಲಗೈಯಿಂದ ತಮ್ಮ ವಕ್ಷಸ್ಥಲದ ಮೇಲೆ ಶಿಲುಬೆಯ ಸಂಜ್ಞೆಮಾಡಿ ಮಾದನ ಎದೆಯ ಮೇಲೆಯೂ ಅದೇ ಸಂಜ್ಞೆಯನ್ನು ಮಾಡಿದರು. ಹಿಂದೂಧರ್ಮದಲ್ಲಿ ಮೋಕ್ಷಪ್ರಾಪ್ತಿಯ ಅವಕಾಶವಿಲ್ಲದಿದ್ದ ಒಂದು ಮಾನವಪ್ರಾಣಿಗೆ ರೆವರೆಂಡ್ ಸಾಹೇಬರು ಮೋಕ್ಷದ ಹಾದಿಯನ್ನು ಹಾಕಿಕೊಟ್ಟರು.

"ಸರಿ. ಇನ್ನು ಇವನನ್ನು ಮಣ್ಣುಮಾಡುವ ಏರ್ಪಾಡು ಮಾಡಿ. ಹಾಸನವಾಗಿದ್ದರೆ ಅದಕ್ಕೆ ನಾನೇ ಏರ್ಪಾಡು ಮಾಡುತ್ತ ಇದ್ದೆ. ಇನ್ನು ಈ ಹುಡುಗಿಯ ಆಲೋಚನೆ ಏನು ಮಾಡಿದ್ದೀರಿ?" ಎಂದು ತಾವಾಗಿ ಮೇಲೆ ಬಿದ್ದು ಕೃಷ್ಣಪ್ಪನವರನ್ನು ಕೇಳಿದರು ಡಾಕ್ಟರ್.

ಅದು ಒಂದು ನೇರವಾದ ಪ್ರಶ್ನೆಯೆಂದು ಕೃಷ್ಣಪ್ಪನವರು ಭಾವಿಸಿ, "ನಾನೂ ಅದೇ ಆಲೋಚನೆ ಮಾಡುತ್ತಾ ಇದೀನಿ. ನೋಡೋಣ" ಎಂದರು.

"ನೋಡೋಣ ಎಂದರೆ ಆಗುತ್ತದೆಯೇ! ಈಗಲೇ ತೀರ್ಮಾನ ಮಾಡಬೇಕು. ಆ ಹುಡುಗಿ ಇಲ್ಲಿ ಒಬ್ಬಳೇ ಇರುವುದು ಹೇಗೆ? ನಿಮ್ಮ ಜನ ಈ ಬಡಪಾಯಿಯನ್ನು ಊರ ಒಳಕ್ಕೇ ಸೇರಿಸುವುದಿಲ್ಲ. ನೀವು ಊರ ಹೊರಕ್ಕೆ ಹಾಕಿರುವ ಮಂದಿ ತಮ್ಮ ಹೊಟ್ಟೆ ತಾವು ಹೊರೆದುಕೊಳ್ಳಲಾರರು. ತಮ್ಮ ಮಕ್ಕಳನ್ನೇ ಮಾರಿಕೊಳ್ಳಲು ಸಿದ್ಧವಾಗಿದ್ದಾರೆ. ಈ ಸ್ಥಿತಿಯಲ್ಲಿ, ನೀವು ತಾನೇ ಏನು ಮಾಡುತ್ತೀರಿ ಹೇಳಿ ಪಾಪ!" ಎಂದು ಡಾಕ್ಟರು ಪಾದ್ರಿಗಳ ಮುಖವನ್ನು ನೋಡಿದರು.

"ಪತಿತರನ್ನು ಉದ್ಧಾರಮಾಡುವುದಕ್ಕಾಗಿಯೇ ನಮ್ಮ ಏಸುಕ್ರಿಸ್ತನು ಜನ್ಮಧಾರಣೆ ಮಾಡಿರುವನು. ಪಾಪಿ ಪರದೇಶಿಗಳನ್ನು ಸಂರಕ್ಷಿಸುವ ಭಾರವನ್ನು ಆ ಮಹಾತ್ಮನು ನಮಗೆ ವಹಿಸಿದ್ದಾನೆ. ಈ ದಿಕ್ಕಿಲ್ಲದ ಹುಡುಗಿಯನ್ನು ನಾವು ಕರೆದುಕೊಂಡು ಹೋಗಲು ಸಿದ್ಧರಾಗಿದ್ದೇವೆ. ಆಕೆಯ ಪಾಲನೆಗೆ ನಾವು ವ್ಯವಸ್ಥೆಮಾಡುವೆವು. ಆಕೆಗೆ ವಿದ್ಯೆಯನ್ನು ಕಲಿಸುವೆವು.

ಈಶಸೇವೆಯನ್ನೂ ದೇಶಸೇವೆಯನ್ನೂ ಮಾಡಲು ಅವಳನ್ನು ಯೋಗ್ಯಳನ್ನಾಗಿ ಮಾಡುವೆವು. ನೀವು ಯೋಚನೆ ಮಾಡದೆ ನಮ್ಮೊಂದಿಗೆ ಕಳುಹಿಸಿ ಕೊಡಿ '' ಎಂಬುದಾಗಿ ಪಾದ್ರಿ ಸಾಹೇಬರು ಗಂಭೀರವಾಗಿ ನುಡಿದರು.

ಒಂದು ದೃಷ್ಟಿಯಲ್ಲಿ ಪಾದ್ರಿಗಳು ಹೇಳಿದ್ದು ನ್ಯಾಯವಾಗಿ ಕಂಡಿತು ಸುಂದರಮೂರ್ತಿಗೆ. ತಪ್ಪೆಲ್ಲವೂ ತಮ್ಮದು, ಹಿಂದೂಧರ್ಮದ್ದು. ಯಾವ ಮತವಾದರೇನು, ಯಾವ ಧರ್ಮವಾದರೇನು ? ಚೆನ್ನಿ ಸುಖವಾಗಿ ಬದುಕುವುದು ಮುಖ್ಯ. ಸುಖಿಯನ್ನಾಗಿ ಮಾತ್ರವಲ್ಲ, ಅವರು ಅವಳನ್ನು ಒಬ್ಬ ಮನುಷ್ಯವ್ಯಕ್ತಿಯನ್ನಾಗಿ ಮಾಡುವರು. ತನಗೆ ಆ ಚೈತನ್ಯವಿದ್ದರೆ ತಾನು ಚೆನ್ನಿಯನ್ನು ಉಳಿಸಿಕೊಳ್ಳಬೇಕು; ಇಲ್ಲವೆ ಅವರೊಂದಿಗೆ ಕಳಿಸಿಕೊಡಬೇಕು.

ಆದರೆ, ತನ್ನ ಸಂಕಲ್ಪವೇನಾಯಿತು ? ತಾನೇ ಚೆನ್ನಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಅವಳನ್ನು ಮಾನವಪ್ರಾಣಿಯ ಮಟ್ಟಕ್ಕೆ ತರಬೇಕೆಂಬ ತನ್ನ ಆ ಸಂಕಲ್ಪ ಈಗ ಗಾಳಿಯ ಪಾಲಾಯಿತೆ ? ಸಂಕಲ್ಪಗಳನ್ನು ಮಾಡುವುದು ಬಹು ಸುಲಭ; ನುಡಿಯುವುದು ಇನ್ನೂ ಸುಲಭ; ಚರ್ಚಾಕೂಟದ ಭಾಷಣದಲ್ಲಿ ಅಂದು ತೋರಿದ ಆ ಉತ್ಸಾಹ, ಆ ಕಾರ್ಯಶ್ರದ್ಧೆ, ಈಗ ಎಲ್ಲಿ ? ಎಲ್ಲಿ, ಎಲ್ಲಿ ? ಸಾಧ್ಯವಿಲ್ಲ. ಅವಳನ್ನು ಕಳುಹಲಾಗದು.

ಸುಂದರಮೂರ್ತಿ ನಿರ್ಧಾರ ಮಾಡಿದ. ಪಾದ್ರಿಗಳ ಔದಾರ್ಯಕ್ಕಾಗಿ ಅವರನ್ನು ವಂದಿಸಿದ. ಡಾಕ್ಟರಲ್ಲಿ ಹೀಗೆ ಬೇಡಿಕೊಂಡ: " ಹಿಂದೊಮ್ಮೆ ನೀವು ಉಪಕಾರ ಮಾಡಿದ್ದಿರಿ. ನಾವು ಅವಳಿಗಾಗಿ ಬೇರೆ ಏರ್ಪಾಡು ಮಾಡುವವರೆಗೆ ದಯವಿಟ್ಟು ಅವಳನ್ನೂ ನಿಮ್ಮ ಮನೆಯಲ್ಲಿ ಇಟ್ಟುಕೊಳ್ಳಬೇಕು. ಹಣ ಕಾಸಿನ ವಿಚಾರ ಆಲೋಚನೆ ಮಾಡಬೇಡಿ. ಮತಧರ್ಮಗಳಿಗಿಂತ ಹೆಚ್ಚಾಗಿ ಅವುಗಳನ್ನು ಭ್ರಷ್ಟಮಾಡುವ ವ್ಯಕ್ತಿಗಳು, ಅವರನ್ನು ಕುರುಡಾಗಿ ಹಿಂಬಾಲಿಸುವ ಸಮಾಜ—ಇವು ನಮ್ಮ ಎದುರಿಗಿರುವ ಅಡ್ಡಿ. ನಮ್ಮ ತಂದೆ ಚೆನ್ನಿಯನ್ನು ಇದುವರೆಗೆ ಕಾಪಾಡಿಕೊಂಡು ಬಂದಿದ್ದಾರೆ. ಮುಂದೂ ಕಾಪಾಡುತ್ತಾರೆ. ನಮ್ಮ ಮನೆಯ ಮಗಳಂತಿದ್ದರೂ ಮನೆಯಲ್ಲಿ ಇಟ್ಟುಕೊಳ್ಳಲು ಅವಕಾಶವಿಲ್ಲ. ಇದು ಬಹು ನಾಚಿಕೆಯ ವಿಷಯ. ಅವಳನ್ನ ನಮ್ಮ ಮನೆಗೆ ಸೇರಿಸಲಾಗದಿದ್ದರೂ ನಮ್ಮ ಮನಸ್ಸಿನಿಂದ ಹೊರಕ್ಕೆ ದೂಡಲು ಸಾಧ್ಯವಿಲ್ಲ. ಅವಳು ಈ ಊರಿನಲ್ಲಿಯೇ

ಇರಬೇಕೆಂದು ನನ್ನ ಆಸೆ. ಆದ್ದರಿಂದ ನನ್ನ ಕೋರಿಕೆಯನ್ನು ನೀವು ಕೆಲವು ಕಾಲ ನಡಸಿಕೊಡಿ. ನಿಮಗೆ ನಾವು ಕೃತಜ್ಞರಾಗಿರುತ್ತೇವೆ.'' ಎಂದು ಹೇಳಿ, ಸುಂದರಮೂರ್ತಿ ತಂದೆಯ ಮುಖವನ್ನು ನೋಡಿದ.

ಡಾಕ್ಟರು ಪಾದ್ರಿಗಳ ಮುಖವನ್ನು ಅರ್ಥಪೂರ್ಣ ದೃಷ್ಟಿಯಿಂದ ನೋಡಿದರು; ಪಾದ್ರಿಗಳು ಮುಗುಳುನಗೆ ನಕ್ಕು ತಲೆಯಲ್ಲಾಡಿಸಿದರು. "ಆಗಲಿ, ಸದ್ಯಕ್ಕೆ ನಮ್ಮ ಮನೆಯಲ್ಲಿ ಈ ಹುಡುಗಿಯನ್ನು ನನ್ನ ಮಗಳಂತೆಯೇ ಕಾಪಾಡಿಕೊಳ್ಳುತ್ತೇನೆ. ನನಗೂ ಮಕ್ಕಳಿಲ್ಲ. ನನಗೆ ಸರ್ಕಾರದ ಸಂಬಳ ಹೊರತು ಆಸ್ತಿಪಾಸ್ತಿ ಬೇರೆ ವರಮಾನ ಯಾವುದೂ ಇಲ್ಲದೆ ಇರುವುದರಿಂದ, ನನಗೆ ಇಷ್ಟವಿಲ್ಲದಿದ್ದರೂ ನೀವು ಹೇಳಿದ ಹಣಕಾಸಿನ ಏರ್ಪಾಡಿಗೆ ಒಪ್ಪಿ ಕೊಳ್ಳಬೇಕಾಗಿದೆ. ನಿಮಗೂ ಹೆಚ್ಚಿನ ಹೊರೆ ಹೊರಿಸಲು ಇಷ್ಟವಿಲ್ಲ. ನಾನು ಇಷ್ಟು ಎಂದು ಸೂಚಿಸುವುದಿಲ್ಲ. ನೀವು ಸಂತೋಷದಿಂದ ಕೊಟ್ಟದ್ದನ್ನು ತೆಗೆದುಕೊಂಡು, ಎಲ್ಲವನ್ನೂ ಆ ಹುಡುಗಿಯ ಸುಖಜೀವನಕ್ಕಾಗಿಯೇ ವಿನಿಯೋಗಿಸುತ್ತೇನೆ.''

ಕೃಷ್ಣಪ್ಪನವರು ಈ ಏರ್ಪಾಡಿಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ಡಾಕ್ಟರೂ ಪಾದ್ರಿಗಳೂ ಚೆನ್ನಿಯನ್ನು ಕರೆದುಕೊಂಡು ಹೊರಟರು.

ಸುಂದರಮೂರ್ತಿಯೂ ಕೃಷ್ಣಪ್ಪನವರೂ ಕಾಳೇಗೌಡನ ಮನೆಗೆ ತೆರಳಿದರು. ಕೃಷ್ಣಪ್ಪನವರು ಕಾಳೇಗೌಡನಿಗೆ ಮಾದನ ಸಾವಿನ ಸುದ್ದಿ ತಿಳಿಸಿದರು:

"ಮಾದ ತೀರಿಹೋದ, ಕಾಳ....!" ಅವರ ಕೊರಳು ಕಟ್ಟಿತ್ತು.

"ಏನು ಬುದ್ದಿ? ಏನಂದ್ರಿ! ಮಾದ ತೀರಿಹೋದನಾ? ನಮ್ಮ ಮಾದ, ನಮ್ಮ ತೋಟದ ಮಾದ?"

"ಹ್ಞೂ, ನಿನ್ನೆ ರಾತ್ರಿ.''

"ಇನ್ನು ಆ ಹೆಣ್ಣುಮಗಾಗೆ ಗತಿ ಯಾರಪ್ಪ? ಹಾಳು ಜಾತಿನಾ ಬಡಿಯ! ಮಾದಿಗರ ಮಗಾ ಅಲ್ಲದೆ ಹೋಗಿದ್ದರೆ ನನ್ನ ಹೈಕಳೊಂದಿಗೆ ನಾನು ಸಾಕಿಕೋತ ಇದ್ದೆನೇ.''

"ನೀನೇನು ಯೋಚನೆ ಮಾಡಬೇಡ ಕಾಳ. ಡಾಕ್ಟರ ಮನೆಗೆ ಕಳಿಸಿಕೊಟ್ಟೆ. ಸದ್ಯಕ್ಕೆ ಅವರ ಮನೆಯಲ್ಲಿ ಇರುತಾಳೆ. ಅದಿರಲಿ, ಈಗ

ಮ್ಯಾದನ್ನ ಮಣ್ಣುಮಾಡಬೇಕು. ನೀನು ಮಾಡೀಯ ? '

ಕಾಳೀಗೌಡ ಸ್ವಲ್ಪ ತಲೆ ಕೆರೆದ; ಆಮೇಲೆ ಹೇಳಿದ: "ಹಾಳು ಜಾತಿನಾ ಬಡಿಯ!.... ಹೆಣಕ್ಕೇನು ಜಾತಿ ಬುದ್ಧಿ ? ಬಿಡಿಬಿಡಿ. ಗಾಡೀಲಿ ಸಾಗಿಸಿ ನಾನು ಮಣ್ಣುಮಾಡಿ ಬರತೀನಿ. ನೀವು ಸುಮ್ಕೆ ಮನೇಗೆ ಹೋಗಿ ಇನ್ನ.... ಲೋ, ಪುಟಕಾಡ, ಗಾಡಿ ಕಟ್ಟಿ ತನ್ರೋ...."

ಕೃಷ್ಣಪ್ಪನವರು ಬಾಯಿಹಾಕಿದರು : "ಕಾಳ, ಗಾಡಿ ಬೇಡ. ನಾವೆಲ್ಲ ಕೂಡೋ ಗಾಡಿ. ನೋಡಿದ ಜನ ಏನಾನು ಅಂದಾರು. ಯಾರಾದರೂ ಹೊಲೆ ಮಾದಿಗರನ್ನ ಕರೆದುಕೊಂಡು ಹೋಗಿ ಆ ಕೆಲಸ ಮಾಡಿಸು. ಅವರಿಗೆ ಏನಾದರೂ ಕೊಟ್ಟರಾಯಿತು."

"ಹಂಗೇ ಮಾಡೋಣ, ನೀವಿನ್ನು ಹೋಗಿ."

ಕೃಷ್ಣಪ್ಪನವರೂ ಸುಂದರಮೂರ್ತಿಯೂ ಮನೆಗೆ ಹಿಂದಿರುಗಿದರು. ಮಾದನ ಸಾವಿನ ಸುದ್ದಿ ಕೇಳಿ ಮನೆಯವರೆಲ್ಲ ಮರುಗಿದರು. ಆ ಸುದ್ದಿ ಯಾವ ವೃತ್ತಪತ್ರಿಕೆಯಲ್ಲಿಯೂ ಬರಲಿಲ್ಲ; ಊರಿನವರಿಗೆ ಕೂಡ ಯಾರಿಗೂ ಅದು ಮುಟ್ಟಲಿಲ್ಲ. ಇತರ ಯಾರೂ ಅವನ ಸಾವಿಗೆ ಮರುಗುವಂತಾಗಲಿಲ್ಲ; ಮರುಗಲು ಕಾರಣವಿರಲಿಲ್ಲ. ಆದರೆ ಕೃಷ್ಣಪ್ಪನವರ ತೋಟದ ಒಂದೊಂದು ಗಿಡವೂ ಮಾದನ ಸಾವಿಗಾಗಿ ಅತ್ತಿರಬೇಕು; ಅಳುವಂತೆಯೇ ಶಬ್ದಮಾಡುತ್ತ ತೋಟದ ಮರಗಳು ಗಾಳಿಗೆ ಸುಯ್ಯೆನ್ನುತ್ತಿದ್ದುವು.

## ೪೮

ಸ್ನಾನವಾಗಿ ಊಟವಾದ ಮೇಲೆ ಕೃಷ್ಣಪ್ಪನವರು ಸುಂದರಮೂರ್ತಿಯನ್ನು ಕರೆದು, "ಮಾದನನ್ನು ಇಷ್ಟು ಹೊತ್ತಿಗೆ ಮಣ್ಣುಮಾಡಿರಬಹುದು. ತೋಟಕ್ಕೆ ಹೋಗಿ ಬರೋಣ ಬಾ" ಎಂದು ಅವನೊಂದಿಗೆ ತೋಟಕ್ಕೆ ಹೋದರು. ಗುಡಿಸಿಲಿನಲ್ಲಿ ಮಾದನ ಹೆಣ ಇರಲಿಲ್ಲ. ಆದರೂ, ಅಲ್ಲಿ ಮಾದನೂ ಚೆನ್ನಿಯೂ ಓಡಾಡುತ್ತಿರುವಂತೆಯೇ ಅವರಿಗೆ ತೋರಿತು.

ಇಬ್ಬರೂ ಒಂದು ಕಲ್ಲುಚಪ್ಪಡಿಯ ಮೇಲೆ ಕುಳಿತರು. ಕೃಷ್ಣಪ್ಪನವರು ಜೇಬಿನಿಂದ ಒಂದು ಕಾಗದವನ್ನು ತೆಗೆದು, "ಇದನ್ನು ಓದು. ನಿನ್ನ ಚಿಕ್ಕಪ್ಪನ ಕಾಗದ" ಎಂದು ಅವನ ಕೈಗೆ ಇತ್ತರು.

"ನನ್ನ ಚಿಕ್ಕಪ್ಪನೆ! ಯಾರು?"

"ನನ್ನ ಖಾಸಾ ತಮ್ಮ. ಅವನು ದೇಶಾಂತರ ಹೋಗಿ ಹನ್ನೆರಡು ವರ್ಷದ ಮೇಲಾಯಿತು. ನಾನು ಸತ್ತುಹೋದನೆಂದೇ ತಿಳಿದಿದ್ದೆ. ಈಗ ಈ ಕಾಗದ ಬಂದಿದೆ. ಎಲ್ಲಿಂದ ಎನ್ನುವುದು ಗೊತ್ತಾಗುವುದಿಲ್ಲ. ತಾರೀಖಿಲ್ಲ. ಕವರಿನ ಮೇಲೆ ಅಂಚೆಮುದ್ರೆಯೂ ಸ್ಪಷ್ಟವಾಗಿರಲಿಲ್ಲ."

"ಚಿಕ್ಕಪ್ಪನ ಕಾಗದ ಅಂತಲೇ ನಿಮಗೆ ಹೇಗೆ ಖಾತರಿ?"

"ಮನೆಯಲ್ಲಿ ಅವನ ಬರಹದ ಕೆಲವು ಕಾಗದಪತ್ರಗಳಿವೆ. ಅವನ ಬರವಣಿಗೆಯೇ ಇದು. ಏನೂ ಅನುಮಾನವಿಲ್ಲ."

ಸುಂದರಮೂರ್ತಿ ಆ ಕಾಗದವನ್ನು ಓದಿಕೊಂಡ:

"ತೀರ್ಥರೂಪಸಮಾನರಾದ ಅಣ್ಣನವರಿಗೆ. ಶಿರಸಾಷ್ಟಾಂಗ ನಮಸ್ಕಾರಗಳು.

"ನಾನು ಬದುಕಿದ್ದೇನೆ ಎನ್ನುವುದು ಈ ಕಾಗದದಿಂದ ನಿಮಗೆ ಗೊತ್ತಾಗುತ್ತದೆ. ಹೆಚ್ಚು ಬರೆಯುವ ಅಪೇಕ್ಷೆ ನನಗೆ ಇಲ್ಲ. ಚಿ॥ ಸುಂದರ ಮೂರ್ತಿ ಈಗ ವಿದ್ಯಾವಂತನಾಗಿದ್ದಾನೆ ಎಂದು ತಿಳಿಯುವವನಾದೆ. ಅವನ ಪುರೋಭಿವೃದ್ಧಿಯಲ್ಲಿ ನನಗೆ ನಂಬಿಕೆ ಇದೆ. ಅವನು ನಿಮ್ಮಂತೆಯೇ ಧರ್ಮಬುದ್ಧಿಯುಳ್ಳವನು, ದಯಾಪರನು, ಸಕಲ ಜೀವರಾಶಿಗಳಲ್ಲಿಯೂ ಕರುಣೆಯುಳ್ಳವನು ಎಂಬ ವಿಷಯದಲ್ಲಿ ನನಗೆ ಲೇಶಮಾತ್ರವೂ ಸಂದೇಹ ವಿಲ್ಲ. ನನ್ನ ಭಾಗದ ಕಳೆದುಳಿದ ಪಿತ್ರಾರ್ಜಿತ ಆಸ್ತಿಯೆಲ್ಲವನ್ನೂ ನಾನು ಈ ಮೂಲಕ ಸುಂದರಮೂರ್ತಿಗೆ ದಾನವಾಗಿ ಕೊಟ್ಟಿರುತ್ತೇನೆ. ಇದನ್ನೇ ನನ್ನ ಇಷ್ಟಪತ್ರವೆಂಬುದಾಗಿ ಭಾವಿಸಬಹುದು. ಆ ಆಸ್ತಿಯನ್ನು ಅವನು ತನ್ನ ಇಷ್ಟಬಂದಂತೆ ವಿನಿಯೋಗಿಸಲು ಸಂಪೂರ್ಣ ಬಾಧ್ಯತೆ ಹೊಂದಿರುತ್ತಾನೆ. ಈ ಪತ್ರವನ್ನು ಸಮಯ ಬಂದಾಗ ಅವನ ವಶಕ್ಕೆ ಕೊಡಬೇಕಾಗಿ ಬೇಡುತ್ತೇನೆ."

ಇಂತೀ ನಮಸ್ಕಾರಗಳು.

ಸೂರಪ್ಪ.

ಕಾಗದ ಓದಿಕೊಂಡು ಸುಂದರಮೂರ್ತಿ ಏನೂ ಅರ್ಥವಾಗದವನಂತೆ ಸುಮ್ಮನೆ ಕುಳಿತಿದ್ದ. ಕೃಷ್ಣಪ್ಪನವರು ಹೇಳಿದರು: "ನೋಡಿದೆಯಾ

ಸುಂದರ? ತಮ್ಮನ ಆಸ್ತಿಯೆಲ್ಲವನ್ನೂ ದಕ್ಕಿ ಹಾಕಿಕೊಂಡ ಎಂದು ಆಗ ಊರಿನವರೆಲ್ಲ ನನ್ನನ್ನು ನಿಂದಿಸುತ್ತ ಇದ್ದರು. ನಾವು ಅಣ್ಣತಮ್ಮಂದಿರು ಪಾಲಾಗಿದ್ದುದು ಎಷ್ಟೋ ಮಂದಿಗೆ ಗೊತ್ತೇ ಇರಲಿಲ್ಲ. ಅವನು ಬೇರೆ ಸಂಸಾರ ಮಾಡುತ್ತೇನೆ ಎಂದು ಹಾಸನಕ್ಕೆ ಹೋದ. ಹೋದ ಒಂದು ವರ್ಷದೊಳಗಾಗಿ ಹೆಂಡತಿ ಸತ್ತುಹೋದಳು. ಚಿಕ್ಕ ವಯಸ್ಸು, ಮದುವೆ ಮಾಡಿಕೋ ಎಂದು ಎಷ್ಟೋ ಹೇಳಿದೆ; ಕೇಳಲಿಲ್ಲ. ಅಲ್ಲಿ ಕೆಟ್ಟ ದಾರಿಗೆ ಬಿದ್ದಿದಾನೆ ಎಂದು ನನಗೆ ವರ್ತಮಾನ ಬಂದಿತು; ಎಷ್ಟು ನಿಜವೋ ಎಷ್ಟು ಸುಳ್ಳೋ ನನಗೆ ಗೊತ್ತಾಗಲಿಲ್ಲ. ನಮ್ಮ ಮನೆಯಲ್ಲಿಯೇ ಬಂದು ಇರು ಎಂದು ಬುದ್ಧಿ ಹೇಳಿ ಕಾಗದ ಬರೆದೆ ಇಲ್ಲಿಯೇ ಎರಡು ಮೂರು ವರ್ಷ ಇದ್ದ. ಆಗ ಮತ್ತೆ ತನ್ನ ಆಸ್ತಿಯ ವಹಿವಾಟನ್ನೆಲ್ಲ ನನಗೇ ವಹಿಸಿಕೊಟ್ಟ; ಒಂದು ತೋಟ, ಐದಾರು ಎಕರೆ ಗದ್ದೆ, ಎರಡು ಮೂರು ಎಕರೆ ಹೊಲ ಎಲ್ಲವನ್ನೂ ಮಾರಿಕೊಂಡು ಕಳೆದಿದ್ದಾನೆ ಎನ್ನುವುದು ಆಗಲೇ ನನಗೆ ಗೊತ್ತಾದದ್ದು. ಇಲ್ಲಿಯೂ ಸ್ವಲ್ಪ ಕೆಟ್ಟ ದಾರಿಗೆ ಬಿದ್ದ. ಒಂದು ಸಲ ಅದನ್ನು ಅವನೇ ಒಪ್ಪಿಕೊಂಡು, ನಾನು ಇಲ್ಲಿ ಇದ್ದರೆ ನನ್ನ ಮಾನ ಹೋಗುತ್ತೆ, ದೇಶಸಂಚಾರ ಮಾಡಲು ಹೋಗುತ್ತೇನೆ, ಹಿಂದಿರುಗಿ ಬರದೆ ಹೋದರೆ ನನ್ನ ಆಸೆ ಬಿಟ್ಟುಬಿಡಿ ಎಂದು ಹೇಳಿ ಒಂದು ರಾತ್ರಿ ಇದ್ದಕ್ಕಿದ್ದ ಹಾಗೇ ಹೊರಟುಹೋದ. ನನಗೂ ತುಂಬ ವ್ಯಥೆಯಾಯಿತು; ನೀನು ಹೇಗಾದರೂ ಇರು, ಮನೆಯಲ್ಲಿ ತಮ್ಮನಾಗಿ ಇದ್ದರೆ ಸಾಕು, ಹೋಗಬೇಡ ಎಂದು ಎಷ್ಟೋ ಬಗೆಯಲ್ಲಿ ಹೇಳಿದೆ. ಕೇಳಲಿಲ್ಲ. 'ನನಗೆ ಒಳ್ಳೆಯ ಬುದ್ಧಿ ಬರಲಿ, ಆಶೀರ್ವಾದ ಮಾಡಿ' ಎಂದು ನನಗೂ ಅವಳಿಗೂ ನಮಸ್ಕಾರ ಮಾಡಿ ನಮಗೆ ಹೇಳಿಯೇ ಹೊರಟುಹೋದ. ಗ್ರಹಚಾರದಿಂದ ಕೆಟ್ಟ ದಾರಿಗೆ ಬಿದ್ದನೇ ಹೊರತು, ಮನಸ್ಸು ಬಹಳ ಒಳ್ಳೆಯದು. ಎಲ್ಲೋ ಬದುಕಿದ್ದಾನಲ್ಲ, ಅಷ್ಟೇ ಸಾಕು." ಕಡೆಯ ಮಾತುಗಳನ್ನು ಹೇಳುತ್ತ ಇದ್ದಾಗ ಕೃಷ್ಣಪ್ಪನವರಿಗೆ ಕಣ್ಣು ಹನಿಗೂಡಿತು. "ಅವನದಾಗಿ ಉಳಿದಿರುವ ಹೊಲಗದ್ದೆಗಳನ್ನು ಮಾರಿ, ಬಂದ ಹಣವನ್ನು ನಿನ್ನ ಹೆಸರಿಗೆ ಹಾಸನದಲ್ಲೋ ಬೆಂಗಳೂರಿನಲ್ಲೋ ಬ್ಯಾಂಕಿಗೆ ಹಾಕಿಬಿಡುತ್ತೇನೆ. ನಿನ್ನ ಇಷ್ಟ ಬಂದ ಹಾಗೆ ಧರ್ಮಕಾರ್ಯಕ್ಕೆ ವಿನಿಯೋಗಿಸು. ಹಣವೆಲ್ಲವನ್ನೂ

ಈಗ ತಬ್ಬಲಿಯಾಗಿರುವ ಚೆನ್ನಿಯ ಪಾಲನೆ ಪೋಷಣೆಗಳಿಗೆ ವಿನಿಯೋಗಿಸಿದರೂ ಅವನ ಇಚ್ಛೆಗೆ ವಿರುದ್ಧವಾಗುವುದಿಲ್ಲ. ಆ ಧೈರ್ಯದಿಂದಲೇ ಡಾಕ್ಟರ ಮನೆಯಲ್ಲಿ ಚೆನ್ನಿಯನ್ನು ಬಿಡಲು ನಾನೂ ಒಪ್ಪಿದೆ. ಅವರಿಗೆ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಕೊಡೋಣ ಎಂತ ಮಾಡಿಕೊಂಡಿದ್ದೇನೆ." ಎಂದು ಹೇಳಿ ತಮ್ಮ ಮಾತನ್ನು ನಿಲ್ಲಿಸಿದರು ಕೃಷ್ಣಪ್ಪನವರು.

ಸ್ವಲ್ಪ ಹೊತ್ತಾದ ಮೇಲೆ ಸುಂದರಮೂರ್ತಿ ಹೇಳಿದ: "ಅಪ್ಪ, ಬಹಳ ಕಾಲ ಚೆನ್ನಿಯನ್ನು ಡಾಕ್ಟರ ಮನೆಯಲ್ಲಿ ಬಿಡಲು ನನಗೆ ಇಷ್ಟ ಇಲ್ಲ. ಅವರು ಅವಳನ್ನು ಕ್ರಿಸ್ತ ಮತಕ್ಕೆ ಸೇರಿಸಿದರೂ ಸೇರಿಸಬಹುದು."

"ಸೇರಿಸಿಕೊಂಡರೆ ಸೇರಿಸಿಕೊಳ್ಳಲಿ. ಅವಳು ಹೀಗೇ ಇದ್ದರೆ ಅವಳನ್ನು ಯಾರೂ ಮದುವೆಯಾಗುವುದಿಲ್ಲ. ಅವರು ಅವಳನ್ನೂ ಕ್ರಿಸ್ತ ಮತಕ್ಕೆ ಸೇರಿಸಿಕೊಂಡು, ಅವಳಿಗೆ ವಿದ್ಯಾ ಬುದ್ಧಿ ಕಲಿಸಿ, ಅವಳಿಗೆ ಮದುವೆ ಮಾಡಿದರೆ ಅವಳೂ ಬದುಕಿಕೊಳ್ಳುತ್ತಾಳೆ, ಪಾಪ. ಅದಕ್ಕೆ ನಾವು ಯಾಕೆ ದುಃಖಪಡಬೇಕು?"

"ಈಗ ಹೇಗೂ ಚಿಕ್ಕಪ್ಪನವರು ಸ್ವಲ್ಪ ಆಸ್ತಿಯನ್ನು ನಮಗೇ ಬಿಟ್ಟಿದ್ದಾರೆ. ಆದರಿಂದ ಅವಳಿಗೆ ಸ್ವಲ್ಪ ವಿದ್ಯೆ ಕಲಿಸಿ, ಅವಳಿಗೆ ಮದುವೆ ಮಾಡುವ ಜವಾಬುದಾರಿಯನ್ನು ನಾವೇ ವಹಿಸಿಕೊಂಡರೋ?" ಎಂದು ಸುಂದರ ಪ್ರಶ್ನಿಸಿದ.

"ನಾವೇ ಎಂದರೆ ನೀನು ತಾನೆ? ಸದ್ಯ ನೀನು ಆ ಆಲೋಚನೆ ಹತ್ತಿಸಿಕೊಂಡು ನಿನ್ನ ಓದಿಗೆ ಕಲ್ಲುಹಾಕಿಕೊಳ್ಳಬೇಡ. ಈ ಸಲ ನೀನು ಚೆನ್ನಾಗಿ ಕಷ್ಟಪಟ್ಟು ಓದಿ ಬಿ. ಎ. ಮಾಡು. ಈಗ ಹೇಗೊ ಚೆನ್ನಿಗೆ ಒಂದು ನೆಲೆ ಸಿಕ್ಕಿತಲ್ಲ. ನಿನ್ನ ದಾರಿ ನೀನು ನೋಡಿಕೋ."

ಸುಂದರಮೂರ್ತಿ ಮೌನವಾಗಿದ್ದ. ತನ್ನ ಹಂಬಲುಗಳನ್ನು ತಂದೆಗೆ ವಿವರಿಸಿ ಪ್ರಯೋಜನವಿಲ್ಲ, ತಾನು ಮಾಡುವುದನ್ನು ಮಾಡಬೇಕು ಎಂದು ನಿರ್ಧರಿಸಿಕೊಂಡು ಮೇಲೆದ್ದ. "ಇನ್ನು ಹೊರಡೋಣ." ಎಂದು ಕೃಷ್ಣಪ್ಪನವರೂ ಮೇಲಕ್ಕೆದ್ದರು. ಇಬ್ಬರೂ ಭಣ ಭಣ ಎನ್ನುತ್ತಿದ್ದ ಬರಿ ಗುಡಿಸಲ ಕಡೆಗೆ ಪ್ರೇಮಪೂರ್ಣವಾದ ನೋಟವೊಂದನ್ನು ಬೀರಿ, ಮನೆಯ ಹಾದಿ ಹಿಡಿದರು.

ಅದೇ ರಾತ್ರಿ ತಾಯಿ ಮಗನನ್ನು ಹಾಸಿಗೆಯ ಬಳಿ ಕೂರಿಸಿಕೊಂಡು ಅವನಿಗೆ ಉಪದೇಶ ಮಾಡಿದರು :

" ಮಗೂ, ನೀನು ಗಾಂಧಿ ಗೀಂಧಿ ಅಂತ ಅಲ್ಲಿ ಇಲ್ಲಿ ಅಲೆಯಬೇಡ ವಪ್ಪ. ಈ ವರ್ಷ ಕಷ್ಟಪಟ್ಟು ಓದಿ ಬಿ. ಎ. ಪ್ಯಾಸು ಮಾಡಬೇಕು. ನಾವೇನು ಅಂಥ ಮಹಾ ಆಸ್ತಿವಂತರೆ? ಈಗ ತಿಂದುಡುವುದಕ್ಕೆ ಇದೆ. ಇನ್ನೂ ತುಂಗೆಯ ಮದುವೆಯಾಗಬೇಕು ; ಅವಳಿಗೂ ಹದಿಮೂರು ತುಂಬಿತು. ನೀವು ಅಣ್ಣ ತಮ್ಮಂದಿರು ಕೂತು ತಿನ್ನುವಷ್ಟು ಇಲ್ಲಿ ಏನಿದೆ? ಅವರ ವಿದ್ಯಾಭ್ಯಾಸವಾಗಬೇಡವೆ? ನಿನ್ನ ದಾರಿಯನ್ನು ನೀನು ನೋಡಿ ಕೊಳ್ಳಬೇಕಪ್ಪ. ನೀನು ಎಲ್ಲರಿಗೂ ಬಹಳ ಅಚ್ಚುಮೆಚ್ಚಾಗಿದ್ದೆಯಪ್ಪ. ನಿನ್ನ ಭಾವನಿಗಂತೂ ನಿನ್ನ ಕಂಡರೆ ತುಂಬ ಹಿಗ್ಗು. ಅದೇನೊ ಈ ವರ್ಷ ನಿನ್ನ ಬುದ್ಧಿ ಚಂಚಲವಾಗಿಬಿಟ್ಟಿದೆ. ಕಮಲೆಗೆ ಬೇರೆ ಗಂಡು ಗೊತ್ತಾ ಯಿತು ಅಂತ ನೀನು ಮನಸ್ಸಿಗೆ ಹಚ್ಚಿಕೊಂಡಿದೀಯೆ. ನೀನು ಹೇಳಿಕೊಳ್ಳ ದಿದ್ದರೆ ನನಗೆ ಗೊತ್ತಾಗುವುದಿಲ್ಲವೆ? ಮನಸ್ಸು ಹರಿಯಬಿಡಬೇಡ; ಬಿಗಿ ಹಿಡಿದು ಓದಿ ಪ್ಯಾಸು ಮಾಡು. ಬಿ. ಎ. ಒಂದಾದರೆ ಬೇಕು ಬೇಕಾದ ಹೆಣ್ಣುಗಳು ಮನೆಯ ಬಾಗಿಲಿಗೆ ಬಂದು ಬೀಳುತ್ತವೆ. ನಾವು ಕೇಳುವುದೇ ಬೇಡ, ಸಾವಿರ ರೂಪಾಯಿ ಬೇಕಾದರೂ ವರದಕ್ಷಿಣೆ ಸುರೀತಾರೆ. ನೀನು ಬಿ. ಎ. ಮಾಡಿ, ಮದುವೆ ಮಾಡಿಕೊಂಡು, ನಿನ್ನ ತಂಗಿಯ ಮದುವೆ ಯೊಂದು ಆಗಿಬಿಟ್ಟರೆ ನಿಮ್ಮ ಕಣ್ಣಮುಂದೆ ನಾನು ತೀರಿಕೊಂಡು ಬಿಡು ತ್ತೀನಿ. ಇಷ್ಟು ನನ್ನ ಮಾತು ಕೇಳು " ಎಂದು ನರಸಮ್ಮನವರು ಮಗನ ತಲೆಯ ಮೇಲೆ ಕೈಯಾಡಿಸಿದರು.

" ಅದು ಯಾಕಮ್ಮಾ ಹಾಗೆ ಮಾತನಾಡುತಿ, ಸುಮ್ಮನಿರಮ್ಮಾ. ನಿನಗೇನು ಅಂತಹ ವಯಸ್ಸಾಗಿರುವುದು. " ಎಂದ ಸುಂದರಮೂರ್ತಿ.

" ನನಗೆ ಗೊತ್ತಪ್ಪ. ಇದು ನಮ್ಮಮ್ಮನ ಕಾಯಿಲೆ ಕೆಟ್ಟ ಕಾಯಿಲೆ. ಬೇಗ ತೆಗೆದುಕೊಂಡು ಹೋಗಿಬಿಡುತ್ತೆ. ನನಗೆ ಬೇಕಾದ್ದೂ ಅದೇ. ನಿನ್ನ ಮದುವೆ, ತುಂಗೆಯ ಮದುವೆ—ಎರಡಾಗಿಬಿಟ್ಟರೆ, ಅದನ್ನ ನೋಡಿಕೊಂಡು ಅವರ ಕಣ್ಣಮುಂದೆ ಪ್ರಾಣ ಬಿಡುವುದಕ್ಕಿಂತ ಬೇರೆ ಭಾಗ್ಯ ಇನ್ನೇನು ಬೇಕಪ್ಪ ? ಯಾವುದಾದರೂ ಒಳ್ಳೆಯ ಕಡೆಯ ಹೆಣ್ಣು ಬಂದರೆ ಒಳ್ಳೆ

ಎನ್ನಬೇಡ, ತಿಳಿಯಿತೆ?"

ಸುಂದರಮೂರ್ತಿ ಮೌನವಾಗಿದ್ದ.

ಈಗಾಗಲೇ ಬಹಳ ದಿನಗಳ ಓದು ನಿಂತುಹೋಗಿದೆಯೆಂದೂ ಕೂಡಲೆ ಹಿಂತಿರುಗಬೇಕೆಂದೂ ಕೃಷ್ಣಪ್ಪನವರು ಸೂಚಿಸಿದ್ದರ ಮೇರೆಗೆ ಸುಂದರ ಮೈಸೂರಿಗೆ ಹಿಂದಿರುಗಿದ.

೪೯

ಸುಂದರನ ಮನಸ್ಸು ಈಗ ಹತ್ತು ಹೋಳಾಗಿತ್ತು. ಅವನ ಧ್ಯೇಯದ ಧ್ರುವತಾರೆ ಎಲ್ಲೋ ದಟ್ಟವಾದ ಕಾರ್ಮುಗಿಲ ಮರೆಯಲ್ಲಿ ಅಡಗಿಕೊಂಡಂತಾಗಿತ್ತು. ಯಾವ ಕೆಲಸ ಮಾಡುವುದಕ್ಕೂ ಉತ್ಸಾಹವಿಲ್ಲ; ಯಾವುದರಲ್ಲಿಯೂ ಶ್ರದ್ಧೆಯಿಲ್ಲ. ಕಾಲೇಜಿನಲ್ಲಿ ಹೊತ್ತಿಗೆ ಗೊತ್ತಿಗೆ ತರಗತಿಗಳಿಗೆ ಹೋಗುತ್ತ ಇದ್ದರೂ ಪಾಠದ ಮಟ್ಟಿಗೆ ಇವನ ಕಿವಿಗಳು ಕಿವುಡಾಗಿದ್ದುವು. ಓದುವುದಕ್ಕೆಂದು ಪುಸ್ತಕ ತೆರೆದು ಕುಳಿತರೆ, ಪುಟಪುಟಗಳಲ್ಲಿಯೂ ಕನಸಿನ ಚಿತ್ರಗಳು ಹಾಯ್ದು ಹೋಗುತ್ತಿದ್ದುವು. ಮನಸ್ಸನ್ನು ಓದಿನಲ್ಲಿ ನಿಲ್ಲಿಸಲು ಸಾಧ್ಯವಾಗುತ್ತಿರಲಿಲ್ಲ. ಹೆಜ್ಜೆಹೆಜ್ಜೆಗೂ ತಾನು ಹೇಡಿಯಂತೆ ವರ್ತಿಸುತ್ತಿರುವುದಾಗಿ ಭಾಸವಾಗತೊಡಗಿತು. ಚೆನ್ನಿಯನ್ನು ಡಾಕ್ಟರ ವಶಕ್ಕೆ ಒಪ್ಪಿಸಿ ತನ್ನ ಧ್ಯೇಯಕ್ಕೆ ತಿಲಾಂಜಲಿಯನ್ನು ಅರ್ಪಿಸಿದಂತೆ ತೋರಿತವನಿಗೆ. ಮನಸ್ಸಾದರೆ ಒಮ್ಮೊಮ್ಮೆ ಲಕ್ಷ್ಮೀಪತಿಯ ಜೊತೆ ಸಂಜೆಯ ಸಂಚಾರಕ್ಕೆ ಹೊರಡುವನು; ಇಲ್ಲವಾದರೆ ಮನಬಂದೆಡೆ ಸುಮ್ಮನೆ ಅಲೆಯುತ್ತಿರುವನು. ಲಕ್ಷ್ಮೀಪತಿ ಒಮ್ಮೊಮ್ಮೆ ಇವನ ಕೋಣೆಗೆ ಬಂದು ತಾನು ರಚಿಸಿದ ಹೊಸ ಹೊಸ ಕವನಗಳನ್ನೂ ಕಥೆಗಳನ್ನೂ ಇವನಿಗೆ ಮೊದಲು ಓದಿ ಹೇಳುವನು; ಆಗ ಮಾತ್ರ ಸುಂದರಮೂರ್ತಿಯ ಮನಸ್ಸು ತುಸ ಪ್ರಸನ್ನಗೊಳ್ಳುವುದು; ಅವನ ದೇಶಭಕ್ತಿಯ ಕವನಗಳನ್ನು ಕೇಳಿ ಇವನ ಹೃದಯದಲ್ಲ ಅದು ಏನೋ ನವಸ್ಫೂರ್ತಿ, ನವಚೇತನ, ಸಂಚಾರವಾದಂತಾಗುವುದು ಆಗ ಅವನಿಗೆ— 'ಏನಾದರೂ ಕಾರ್ಯಮಾಡಬೇಕು; ಗಾಳಿಗೋಪುರಗಳನ್ನು ಕಟ್ಟಿ ಪ್ರಯೋಜನವಿಲ್ಲ; ಹೊಂಗನಸೇ ಆದರೂ ಕನಸು ಕಾಣುತ್ತ ಕೈಕಟ್ಟಿ ಕುಳಿತಿರುವ ಈ ಆಲಸ್ಯ, ಈ ಜಡತನ, ಈ ಕ್ಲೈಬ್ಯ ಇನ್ನು ಸಾಕು; ಮಾಡದೆ

ಮಣ್ಣುಮುದ್ದೆಯಾಗಿರುವುದಕ್ಕಿಂತ ಮಾಡಿ ಸೋತರೂ ಸೈ—ಎನ್ನಿಸಿತು. “ ಹೇ ಭಗವಂತ, ಯಾವುದಾದರೂ ಕಾರ್ಯಕ್ಕೆ ನನ್ನನ್ನು ಹೂಡು. ನನ್ನ ಅಲ್ಪಸೇವೆಯನ್ನು ಸ್ವೀಕರಿಸು ” ಎಂದು ಅವನಿಗೆ ನೆನಪಿರುವ ಮಟ್ಟಿಗೆ ಹಲವು ವರ್ಷಗಳಿಂದ ಈಚೆಗೆ ಇಂದು ಅವನು ದೇವರ ಕಡೆಗೆ ಕತ್ತು ಹೊರಳಿಸಿದ. ಅದೇ ಕಾಲದಲ್ಲಿ ಅವನ ಸಹಪಾಠಿಗಳಲ್ಲಿ ಬಹುಮಾಡಿ ದೇವರ ಕೃಪೆಯನ್ನು ಬೇಡುತ್ತಿದ್ದರು: ನಮಗೆ ಈ ವರ್ಷ ಪರೀಕ್ಷೆಯಲ್ಲಿ ತೇರ್ಗಡೆ ಮಾಡಿಸು ” ಎಂದು.

ಈ ಆಲಸ್ಯದ, ನಿಷ್ಕ್ರಿಯೆಯ ಕಾಲದಲ್ಲಿ ಸುಂದರಮೂರ್ತಿ ಶ್ರೀಧರಮೂರ್ತಿಯನ್ನು ನೆನೆದು ಅವನಿಗೆ ಒಂದು ಕಾಗದ ಬರೆದಿದ್ದ; ಆದರೆ ಅದಕ್ಕೆ ಶ್ರೀಧರಮೂರ್ತಿಯಿಂದ ಉತ್ತರವೇ ಬಂದಿರಲಿಲ್ಲ.

ದಿನಗಳು ಉರುಳಿದುವು; ನೊವೆಂಬರ್ ತಿಂಗಳು ಬಂದಿತು, ಸಂದಿತು; ಎಲ್ಲರೂ, ಸುಂದರಮೂರ್ತಿಯ ಸಹಪಾಠಿಗಳೆಲ್ಲರೂ ಪರೀಕ್ಷೆಗೆ ಹಣಕಟ್ಟಿದರು, ಅವನೂ ಕಟ್ಟಿದ; ಇಷ್ಟಕ್ಕೇ ಅವನ ತಾಯಿ ಊರಿನಲ್ಲಿ ಹಿಗ್ಗಿ ಹೋದರು; ‘ ಸುಂದರಮೂರ್ತಿಗೆ ಪ್ಯಾಸಾದರೆ ನಿನ್ನ ಸೇವೆ ಮಾಡಿಸುತ್ತೇನಪ್ಪ ’ ಎಂದು ನಂಜನಗೂಡು ಶ್ರೀಕಂಠೇಶ್ವರನಿಗೆ ಹರಸಿಕೊಂಡರು.

ಡಿಸೆಂಬರ್ ತಿಂಗಳೂ ದಾಟಿತು; ನೂತನ ವರ್ಷ ೧೯೩೦—ಉದಯವಾಯಿತು. “ ಏನೂ ಮಾಡಲಿಲ್ಲ. ಓದಿ ಪ್ಯಾಸಾದರೂ ಮಾಡೋಣ ” ಎಂದು ಸುಂದರಮೂರ್ತಿ ಹೊಸವರ್ಷದ ಸಂಕಲ್ಪವನ್ನು ಕೈಕೊಂಡನು. ಆದರೆ ಅವನ ಬಾಳಿನಲ್ಲಿ ದೈವಸಂಕಲ್ಪ ಬೇರೆಯಾಗಿತ್ತು.

## ೩೦

ನೂತನ ವರ್ಷಾರಂಭದಲ್ಲಿ ಸಮಗ್ರಭಾರತವೇ ಒಂದು ನೂತನ ಸಂಕಲ್ಪವನ್ನು ಕೈಕೊಂಡಿತು. ಗಾಂಧಿಯವರ ನೇತೃತ್ವದಲ್ಲಿ ಕಾಂಗ್ರೆಸ್ ಮಹಾಸಂಸ್ಥೆ ಆ ವರ್ಷದ ಜನವರಿ ೨೬ ರಲ್ಲಿ ಪೂರ್ಣ ಸ್ವರಾಜ್ಯದ ಘೋಷಣೆಯನ್ನು ಮಾಡಿತು. ದೇಶಾದ್ಯಂತವೂ ಸಭೆಗಳಾಗಿ, ಸ್ವಾತಂತ್ರ್ಯಸಾಧನೆಯ ಪ್ರತಿಜ್ಞೆಯನ್ನು ಕೈಕೊಳ್ಳಲಾಯಿತು. ನಾನಾ ಕಾರಣಗಳಿಗಾಗಿ ನಾನಾ ವ್ಯಕ್ತಿಗಳನ್ನು ದೇಶದಲ್ಲೆಲ್ಲ ಸರ್ಕಾರ ದಸ್ತಗಿರಿ ಮಾಡತೊಡಗಿತು.

ಸುಂದರಮೂರ್ತಿಗೆ ಈಗ ಚೆನ್ನಿಯ ಯೋಚನೆ ಹೆಚ್ಚಾಗಿ ಇರಲಿಲ್ಲ; ಏಕೆಂದರೆ ಅವಳಿಗೆ ತಾತ್ಕಾಲಿಕವಾದ ಒಂದು ನೆಲೆಯನ್ನು ಕಲ್ಪಿಸಲಾಗಿತ್ತು. ಪರೀಕ್ಷೆಯೊಂದು ಸಮಾಪಿಸುತ್ತಿತ್ತು. ದೇಶವೇ ಅಗ್ನಿಪರೀಕ್ಷೆಗೆ ಒಳಗಾಗಿರುವಾಗ ತನ್ನ ಪರೀಕ್ಷೆ ಒಂದು ಮಕ್ಕಳಾಟಿಕೆ ಎಂದು ತೋರಿತವನಿಗೆ. "ಸಂಸ್ಕೃತಿಯ ದೃಷ್ಟಿಯಿಂದ ನಮ್ಮ ವಿದ್ಯಾಭ್ಯಾಸ ಪದ್ಧತಿಯು ನಮ್ಮ ನೆಲೆಯಿಂದ ನಮ್ಮನ್ನು ಕಿತ್ತೊಗೆದು, ನಮ್ಮನ್ನು ಬಂಧಿಸಿರುವ ಸಂಕೋಲೆಯನ್ನೇ ನಾವು ಅಪ್ಪಿಕೊಳ್ಳುವ ಹಾಗೆ ಮಾಡಿದೆ" ಎಂಬ ಘೋಷಣೆಯ ವಾಕ್ಯ ಸುಂದರನ ಮನಸ್ಸನ್ನು ಸೆಳೆಯಿತು. ಆ ವಿದ್ಯಾಭ್ಯಾಸವನ್ನು ಸಾಕುಮಾಡಿ, ಸ್ವಾತಂತ್ರ್ಯದ ಹೋರಾಟದಲ್ಲಿ ಭಾಗವಹಿಸಬೇಕೆಂಬ ಪ್ರಬಲವಾದ ಇಚ್ಛೆ ಅವನಲ್ಲಿ ಮೂಡಿತು. ಫೆಬ್ರುವರಿ ತಿಂಗಳ ಪ್ರಾರಂಭದಲ್ಲಿ ತಂದೆಯಿಂದ ಹಣ ಬಂದ ಕೂಡಲೆ, ಯಾರನ್ನೂ ಕೇಳದೆ, ಯಾರಿಗೂ ತಿಳಿಸದೆ, ಸುಂದರಮೂರ್ತಿ ನೆಟ್ಟಗೆ ಸಾಬರಮತಿಯನ್ನು ಸೇರಿದನು.

"ಈಗ ಯಾಕೆ ಬಂದೆ? ಇಂದಿನ ಪರಿಸ್ಥಿತಿಯಲ್ಲಿ ಆಶ್ರಮಕ್ಕೆ ಹೊಸಬರನ್ನು ಸೇರಿಸಿಕೊಳ್ಳುತ್ತಾರೆಯೋ ಇಲ್ಲವೋ?" ಎಂದು ಸುಂದರನ ಪುನರಾಗಮನಕ್ಕೆ ಅಚ್ಚರಿಗೊಂಡು ಪ್ರಶ್ನಿಸಿದ ಶ್ರೀಧರ.

"ದೇಶಸೇವೆಗೆಂದು ಬಂದವರನ್ನು ಯಾರಾದರೂ ಬೇಡ ಎನ್ನುವುದಾದರೆ ಆಗಲಿ" ಎಂದು ಸುಂದರಮೂರ್ತಿ ನಗುತ್ತ ಹೇಳಿದ. ಸುಂದರಮೂರ್ತಿ ಆಶ್ರಮದಲ್ಲಿ ಶ್ರೀಧರನ ಅತಿಥಿಯಾಗಿ ಉಳಿದ.

ಫೆಬ್ರುವರಿ ೧೪, ೧೫, ೧೬ ರಲ್ಲಿ ಕಾಂಗ್ರೆಸ್ ಕಾರ್ಯಸಮಿತಿ ಸಾಬರಮತಿಯಲ್ಲಿಯೇ ಸೇರಿತು. ಆ ಸಂದರ್ಭದಲ್ಲಿ ಮಹಾತ್ಮರನ್ನೂ ಇತರ ದೇಶನಾಯಕರನ್ನೂ ಸಂದರ್ಶಿಸುವ ಸೌಭಾಗ್ಯ ಸುಂದರಮೂರ್ತಿಗೆ ಲಭಿಸಿ, ಇಷ್ಟಕ್ಕೇ ಆದರೂ ತಾನು ಇಲ್ಲಿಗೆ ಬಂದದ್ದು ಸಾರ್ಥಕವಾಯಿತೆಂದು ಅವನು ಹಿಗ್ಗಿದನು. ಸಮಿತಿಯ ಸಭೆಯ ಸಂದರ್ಭವಲ್ಲಿ ಮಾತುಕತೆಗಾಗಿ ಕರ್ನಾಟಕದಿಂದಲೂ ಒಬ್ಬಿಬ್ಬರು ಪ್ರಮುಖರು ಬಂದಿದ್ದರು. ಸುಂದರಮೂರ್ತಿ ಅವರ ಪರಿಚಯವನ್ನು ಮಾಡಿಕೊಂಡು, ದೇಶಸೇವಾ ದೀಕ್ಷಾಬದ್ಧನಾಗಿ, ಅವರೊಂದಿಗೆ ಸಾಬರಮತಿಯಿಂದ ಶ್ರೀಧರನನ್ನು ಬೀಳ್ಕೊಂಡು ಹಿಂದಿರುಗಿದನು.

ಸಾಬರಮತಿಯಲ್ಲಿದ್ದಾಗಲೇ ಸುಂದರಮೂರ್ತಿ ತಾನು ಕೈಕೊಂಡ

ಕಾರ್ಯವನ್ನು ತಂದೆಗೆ ಸಂಕ್ಷೇಪವಾಗಿ ತಿಳಿಸಿ, ಅವರ ಕ್ಷಮೆ ಬೇಡಿ, ಅವರಿಗೆ ಪತ್ರ ಬರೆದನು.

ಆ ಪತ್ರವನ್ನು ನೋಡಿಕೊಂಡು ಕೃಷ್ಣಪ್ಪನವರು ತಲೆ ಚಚ್ಚಿಕೊಂಡರು; ನರಸಮ್ಮನವರು ಎದೆ ಬಡಿದುಕೊಂಡರು. "ಅವನ ಚಿಕ್ಕಪ್ಪನ ದಾರಿ ಹಿಡಿದನೇ ನಮ್ಮ ಸುಂದರ!" ಎಂದು ಆಕೆ ಗೋಳಾಡಿದರು. "ಅವನ ಆಸ್ತಿಗೆ ಅವನು ತಾನೇ ಹಕ್ಕುದಾರ; ಈಗ ಗುಣಕ್ಕೂ ಹಕ್ಕುದಾರನಾದ" ಎಂದರು ಕೃಷ್ಣಪ್ಪನವರು. ಸೂರಪ್ಪನ ಪತ್ರದ ವಿಚಾರವನ್ನು ಈ ಹೊತ್ತಿಗೆ ಅವರು ತಮ್ಮ ಹೆಂಡತಿಗೆ ತಿಳಿಸಿದ್ದರು.

೫೧

ವಿಶ್ವನಾಥ ದಿಗ್ವಿಜಯವನ್ನು ಮಾಡಿಕೊಂಡು ಬಂದಂತೆ ಪರೀಕ್ಷೆಯಾದ ಮೇಲೆ ಊರಿಗೆ ಹಿಂದಿರುಗಿದ. ಅವನು ಹಿಂದಿರುಗಿದ ಮೇಲಂತೂ ಕೃಷ್ಣಪ್ಪನವರ ಮತ್ತೂ ನರಸಮ್ಮನವರ ದುಃಖ ಮರುಕಳಿಸಿಕೊಂಡು ಇಮ್ಮಡಿಯಾಯಿತು. ಎಸ್. ಎಸ್. ಎಲ್. ಸಿ. ಪರೀಕ್ಷೆಯಾದ ಮೇಲೆ ಶಾಮಿ ಬೆಂಗಳೂರಿಂದ ಹಿಂದಿರುಗಿದ ಮೇಲೆ ಗಂಡಹೆಂಡಿರ ದುಃಖ ಸ್ವಲ್ಪ ಶಮನವಾಯಿತು. ಶಾಮಿ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿರುವುದಾಗಿ ತಿಳಿಸಿದ. "ನೀನೂ ನಿಮ್ಮ ಅಣ್ಣನ ದಾರಿ ಹಿಡಿಯಬೇಡವಪ್ಪ" ಎಂದು ನರಸಮ್ಮನವರು ಮಗನಿಗೆ ಬುದ್ಧಿವಾದ ಹೇಳಿದರು; ಸುಂದರಮೂರ್ತಿ ವಿದ್ಯಾಭ್ಯಾಸವನ್ನು ಬಿಟ್ಟು, ತಮ್ಮನ್ನೆಲ್ಲ ತೊರೆದು, ಉತ್ತರದೇಶಕ್ಕೆ ಹೋದ ಕಥೆಯನ್ನು ವಿವರಿಸಿದರು.

ಒಂದು ದಿನ ಕೃಷ್ಣಪ್ಪನವರು ಜಗಲಿಯ ಮೇಲೆ ಕುಳಿತಿದ್ದಾಗ, ಶುಭ್ರ ಧವಳ ವಸ್ತ್ರಧಾರಿಯಾದ, ಬೈರಾಗಿ-ವೇಷದ ವ್ಯಕ್ತಿಯೊಬ್ಬ ಬಂದು ಎದುರಿಗೆ ನಿಂತನು.

ಕೃಷ್ಣಪ್ಪನವರು ಬೈರಾಗಿಯನ್ನು ನೋಡಿದರು. ಏನೋ ಭಿಕ್ಷೆಗೆ ಬಂದಿದ್ದಾನೆಂದು ತಿಳಿದು, ಹರುಕುಮುರುಕು ಹಿಂದುಸ್ತಾನಿಯಲ್ಲಿ "ಏನೂ ಇಲ್ಲ, ಮುಂದಕ್ಕೆ ನಡೆಯಿರಿ" ಎಂದು ಹೇಳಿದರು.

"ತಾವೇ ಅಲ್ಲವೇ ಶಾನುಭೋಗರು?" ಎಂದು ಪ್ರಶ್ನಿಸಿದ ಬೈರಾಗಿ. ಕನ್ನಡ ಮಾತು; ಜೊತೆಗೆ ಯಾವುದೋ ಹಳೆಯ ಪರಿಚಯದ ದನಿಯು

ನೆನಪು; ಕೃಷ್ಣಪ್ಪನವರಿಗೆ ಆಶ್ಚರ್ಯವಾಯಿತು. ಕುತೂಹಲವಾಯಿತು ಗೌರವವನ್ನು ತೋರುವ ಧ್ವನಿಯಲ್ಲಿ, "ದಯವಮಾಡಿಸಿ, ಕುಳಿತುಕೊಳ್ಳಿ" ಎಂದರು.

ಬೈರಾಗಿ ಜಗಲಿಯ ಮೇಲೆ ಪದ್ಮಾಸನ ಹಾಕಿ ಕುಳಿತ.

"ನಿಮ್ಮ ಮಕ್ಕಳು ಸುಂದರಮೂರ್ತಿ ಎಲ್ಲಿ?"

"ಅಯ್ಯೋ ಅವನ ವಿಚಾರ ಯಾಕೆ ಕೇಳುತ್ತೀರಿ. ನೀವೇನಾದರೂ ಕೃಪೆ ಮಾಡಿ ಅವನ ಭವಿಷ್ಯ ತಿಳಿಸಿದರೆ ನಾನು ತಮ್ಮ ದಾಸನಾಗುತ್ತೇನೆ."

"ಅದು ದೊಡ್ಡ ಮಾತು. ನಾನು ತಮ್ಮ ದಾಸ."

"ಛಿ ಛಿ! ತಾವು ಸಂನ್ಯಾಸಿಗಳು, ಹಾಗೆನ್ನಬಾರದು."

"ನಾನು ಈಗ ಸಂಸಾರ ಹೂಡಲು ಬಂದಿದ್ದೇನೆ. ನೀವು ಸಂನ್ಯಾಸಿ ಎನ್ನುತ್ತೀರಿ" ಎಂದು ಬೈರಾಗಿ ಮುಗುಳುನಗೆ ಬೀರಿದನು. ಆ ಮುಗುಳು ನಗೆ, ಅರೆನರೆತ ಗಡ್ಡಮೀಸೆಗಳು, ಹೊಳಪಿನ ಕಣ್ಣುಗಳು,— ಇವು ಆತನ ಮುಖಕ್ಕೆ ಒಂದು ಅಪೂರ್ವಕಾಂತಿಯನ್ನು ಕೊಟ್ಟಿದ್ದುವು.

"ಹಾಗೆಂದರೆ!" ಎಂದು ಆಶ್ಚರ್ಯದಿಂದ ಬಾಯಿಬಿಟ್ಟರು ಕೃಷ್ಣಪ್ಪನವರು.

"ನಾನು ಈ ಊರಿಗೆ ಬಂದು ಈಗ ಮೂರು ದಿನಗಳಾದುವು. ಹೊಳೆಯ ದಡದ ಆ ಮುರುಕು ಮಂಟಪ ಇದೆಯಲ್ಲ, ಅಲ್ಲಿ ವಾಸವಾಗಿದ್ದೇನೆ. ನಾನು ನಿಜವಾಗಿಯೂ ಈಗ ಕೆಲವು ವರ್ಷಗಳಿಂದ ಮೌನವ್ರತಧಾರಿಯಾಗಿದ್ದೆ. ಈಗ ಯತ್ನವಿಲ್ಲದೆ ಎರಡು ಮೂರು ಸಲ ನನ್ನ ವ್ರತವನ್ನು ಮುರಿಯಬೇಕಾಯಿತು. ನಾನು ಕಳೆದ ವರ್ಷ ಈ ಊರಿಗೆ ಬಂದು, ಒಂದು ಸಂಜೆ ಒಂದು ಬೆಳಗ್ಗೆ ಮಾತ್ರ ಈ ಊರಿನಲ್ಲಿದ್ದೆ. ಆ ಸಂಜೆ ಹೊಳೆಯ ದಡದಲ್ಲಿ ನಿಮ್ಮ ಮಕ್ಕಳನ್ನು ನೋಡಿದ್ದೆ. ಆ ಮಾತು ಈ ಮಾತು ಆಡುತ್ತ ನಿಮ್ಮ ತೋಟದ ಮಾದನ ಮಗಳು ಚೆನ್ನಿಯ ವಿಚಾರ ಬಂತು. ಆ ತಬ್ಬಲಿ ಹೆಣ್ಣನ್ನು ನೀವು ಬಹು ಚೆನ್ನಾಗಿ ಕಾಪಾಡಿಕೊಂಡು ಬಂದಿರಿ, ಮುದುಕನಾದ ಮಾದ ಸತ್ತರೆ ಗತಿಯೇನು ಎಂಬ ವಿಚಾರ ನಿಮ್ಮ ಮಕ್ಕಳನ್ನು ಬಾಧಿಸುತ್ತ ಇದ್ದಂತೆ ನನಗೆ ಕಂಡುಬಂದಿತು. 'ನೀವು ಕಾಪಾಡಿ, ಅದಕ್ಕಿಂತ ದೊಡ್ಡ ಕೆಲಸ ಯಾವುದು?' ಎಂದು ನಾನು ಹೇಳಿದೆ. ಅದಕ್ಕೆ ಆತ ಒಪ್ಪಿದಂತೆ ತೋರಿತು. ಆ ಹುಡುಗಿಯನ್ನು ನೋಡುವ ಬಯಕೆಯಾಗಿ ಬೆಳಗ್ಗೆ ಊರು

ಬಿಟ್ಟು ಹೊರಡುವುದಕ್ಕೆ ಮುಂಚೆ ನಿಮ್ಮ ತೋಟಕ್ಕೆ ಹೋಗಿ ಆ ಹುಡುಗಿಯನ್ನು ನೋಡಿದೆ. ಲೋಕಕ್ಕೆ ಮಾದನ ಮಗಳು, ನಿಜವಾಗಿ ನಿಮ್ಮ ಮಗು ಎಂದು ತೋರಿತು ನನಗೆ. ಅಷ್ಟು ಚೆನ್ನಾಗಿದ್ದಾಳೆ ಆ ಹುಡುಗಿ. ಅದು ಬ್ರಾಹ್ಮಣರ ಮಗು ಎಂದಾಗಿದ್ದರೆ ನೀವು ಸಾಕಿಕೊಳ್ಳುತ್ತ ಇದ್ದಿರಿ; ಮಾದಿಗರ ಮಗು ಎಂದು ಕೈಬಿಟ್ಟಿರಿ. ನಾನು ಸಂನ್ಯಾಸಿಯೇ ಹೊರತು ಶಾಸ್ತ್ರಿಯಲ್ಲ, ಪಂಡಿತನಲ್ಲ. ನನಗೆ ತೋರುತ್ತದೆ, ಇವನು ಹೀನವೃತ್ತಿಯಲ್ಲಿ ಇರುವವನು, ಇವನು ಕೆಟ್ಟ ನಡತೆಯುವನು, ಅವನು ಅಗಮ್ಯಗಮನ ಮಾಡಿದವನು, ಇನ್ನೊಬ್ಬ ಕರ್ಮಭ್ರಷ್ಟನಾದವನು — ಎಂದು ನಾವು ಎಂದಿನಿಂದಲೂ ನಮ್ಮ ಜನರನ್ನು ಹೊರಹಾಕುತ್ತ ಬಂದು ಈ ಅಂತ್ಯಜರು ಎನ್ನಿಸಿಕೊಂಡವರ ಸಂಗಡ ಬೆಳೆಯುತ್ತಲೇ ಇದೆ. ಆ ಸಂಗಡಕ್ಕೆ ಈ ಹುಡುಗಿಯನ್ನು ಸೇರಿಸಿರುವವರೂ ನಾವೇ. ಈ ಹುಡುಗಿಯನ್ನು ನಾವು ಒಳಕ್ಕೆ ಕರೆದುಕೊಳ್ಳಬೇಕು; ಅವಳಂತೆ ಇತರರನ್ನೂ ಒಳಕ್ಕೆ ಕರೆದುಕೊಳ್ಳಬೇಕು. ಇರಲಿ. ಈ ವಿಷಯ ನನಗೆ ಹೆಚ್ಚಾಗಿ ತಿಳಿಯದು. ಪ್ರಕೃತ, ಈ ಸಲ ಈ ಊರಿಗೆ ಬಂದು ಮಂಟಪದಲ್ಲಿ ಇಳಿದುಕೊಂಡ ದಿನವೇ ನನಗೆ ವಿಪರೀತ ಜ್ವರ ಬಂದಿತು. ಮಾರನೆಯ ದಿನವೂ ಕಾಯಿತು. ಈ ಘಟ ಇನ್ನೂ ಕೆಲವು ಕಾಲ ಇರಬೇಕೆಂದು ಮನಸ್ಸಿರುವುದರಿಂದ, ಆಸ್ಪತ್ರಿಗೆ ಔಷಧ ತೆಗೆದುಕೊಳ್ಳೋಣ ಎಂತ ಹೋದೆ. ಅಲ್ಲಿ ಕಟ್ಟಡದ ಮುಂದೆ ಬಯಲಿನಲ್ಲಿ ನಾನು ತೋಟದಲ್ಲಿ ಕಂಡ ಹುಡುಗಿಯನ್ನು ನೋಡಿದ ಹಾಗಾಯಿತು "ನೀನು ಚೆನ್ನಿ ಅಲ್ಲವೇನಮ್ಮಾ?" ಎಂದು ಕೇಳಿದೆ. "ಹೌದು" ಎಂದಳು. "ಇಲ್ಲಿಗೆ ಏಕೆ ಬಂದೆ? ನಿನ್ನ ಅಯ್ಯನಿಗೆ ಔಷಧಿಗೆ ಬಂದೆಯಾ?" ಎಂದು ಕೇಳಿದೆ. "ಇಲ್ಲ. ನಾನೂ ಇಲ್ಲೇ ಡಾಕ್ಟರ ಹಟ್ಟೀಲಿ ಇದೀನಿ. ಮಾದ ತೀರಿಹೋದ" ಎಂದಳು. ನೀವೇ ಅವಳನ್ನು ಡಾಕ್ಟರಲ್ಲಿ ಬಿಟ್ಟಿದೀರಿ ಎಂದು ನನಗೆ ತೋರಿತು. ಒಳ್ಳೆಯ ಕೆಲಸವನ್ನೆ ಮಾಡಿದಿರಿ ಎಂದುಕೊಂಡೆ. ಚೆನ್ನಿಯನ್ನು ಇಟ್ಟುಕೊಳ್ಳಬೇಕಾದರೆ ಆ ಡಾಕ್ಟರು ಕ್ರೈಸ್ತರೇ ಇರಬೇಕು ಎನ್ನುವುದರಲ್ಲಿ ಸಂದೇಹವಿಲ್ಲ. ಆ ಹುಡುಗಿಯನ್ನು ಈಗಲೇ ಹಿಂದಕ್ಕೆ ಕರೆದುಕೊಳ್ಳದಿದ್ದರೆ ಅವಳನ್ನು ಕ್ರೈಸ್ತಮತಕ್ಕೆ ಸೇರಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ನೀವು ಬಂದು ಡಾಕ್ಟರಿಗೆ ಹೇಳಬೇಕು. ಆ ಹುಡುಗಿಯನ್ನು

ನಾನು ಇಟ್ಟುಕೊಂಡು ಸಾಕಿಕೊಳ್ಳುತ್ತೇನೆ. ಆ ಹುಡುಗಿ ಅಲ್ಲಿ ಇರುವುದು ನನಗೆ ಇಷ್ಟವಿಲ್ಲ. ಮಾದನ ಮಗಳಾಗಿ ನಿಮ್ಮ ಆರೈಕೆಯಲ್ಲಿದ್ದುದು ಒಂದು ರೀತಿ. ಈಗ ಮತ್ತೆ ನಿಮ್ಮ ಆರೈಕೆಯಲ್ಲಿರಲು ಸಾಧ್ಯವಾಗದಿದ್ದರೆ, ದಯ ವಿಟ್ಟು ನನ್ನ ಆರೈಕೆಗೆ ಒಪ್ಪಿಸಿ."

"ನೀವು ಊರೂರು ಸುತ್ತುವವರು. ಆ ಕಷ್ಟ ನಿಮಗೇಕೆ?" ಎಂದರು ಕೃಷ್ಣಪ್ಪನವರು.

"ಕಷ್ಟವಾಗಿದ್ದರೆ ನಾನು ಹೀಗೆ ಕೇಳುತ್ತಿರಲಿಲ್ಲ. ನಿಮ್ಮ ಸುಂದರ ಮೂರ್ತಿಯ ಅಭಿಪ್ರಾಯವನ್ನೂ ಬೇಕಾದರೆ ಕೇಳೋಣ. ಅವನೆಲ್ಲಿ?"

ಕೃಷ್ಣಪ್ಪನವರು ಸಂಕ್ಷೇಪವಾಗಿ ಸುಂದರಮೂರ್ತಿಯ ವಿಚಾರ ತಿಳಿಸಿ, ಕಂಬನಿಗರೆದರು.

"ಯಾಕೆ ಕೊರಗುತ್ತೀರಿ, ಕೊರಗಬೇಡಿ. ಅವನು ನಮಗಿಂತ ಸಂಸ್ಕಾರಿ. ಒಳ್ಳೆಯ ಕೆಲಸಕ್ಕೇ ಹೋಗಿದ್ದಾನೆ. ಅವನು ಈಗ ಈ ಮಹಾ ಕಾರ್ಯಕ್ಕೆ ಹೋಗಿರುವುದರಿಂದ, ಅವನು ಚೆನ್ನಿಯನ್ನು ಉಪೇಕ್ಷೆ ಮಾಡಿ ದ್ದಾನೆ ಎಂದು ನನಗೆ ಎನ್ನಿಸುವುದಿಲ್ಲ. ನೀವು ಆ ಹೊರೆ ಹೊರುವುದು ಸಾಧ್ಯ ವಾಗದು. ಅವನು ಹೊರಬೇಕೆಂದಿದ್ದ ಹೊರೆಯನ್ನೂ ಈಗ ನಾನು ವಹಿಸಿ ಕೊಳ್ಳಲು ಸಿದ್ಧನಾಗಿದ್ದೇನೆ. ನೀವು ಎರಡನೆಯ ಯೋಚನೆ ಮಾಡದೆ ಬಂದು ಡಾಕ್ಟರಿಗೆ ಹೇಳಿ ಚೆನ್ನಿಯ ಭಾರವನ್ನು ನನಗೆ ವಹಿಸಿಕೊಡಿ."

ಕೃಷ್ಣಪ್ಪನವರು ಸ್ವಲ್ಪ ಹೊತ್ತು ಯೋಚನೆ ಮಾಡಿದರು; ಯಾವುದೋ ಹಳೆಯ ನೆನವು ಅವರನ್ನು ಬಾಧಿಸುತ್ತಿರುವಂತೆ ಬೈರಾಗಿಗೆ ತೋರಿತು. ಬೈರಾಗಿ ಹೇಳಿದ: "ನಿಮ್ಮ ತಳಮಳ ನನಗೆ ಗೊತ್ತು. ಚೆನ್ನಿಯನ್ನು ನಿಮ್ಮ ಮಗಳಂತೆ ಭಾವಿಸಿದ್ದೀರಿ. ಊರು ಬಿಟ್ಟು ಅವಳನ್ನು ಕಳಿಸಲು ನಿಮಗೆ ಇಷ್ಟ ವಿಲ್ಲ. ಡಾಕ್ಟರು ತಾನೇ ಇಲ್ಲೇ ಎಷ್ಟು ದಿನ ಇರುತ್ತಾರೆ?"

"ಆ ಹುಡುಗಿಯನ್ನು ನಿಮ್ಮ ವಶಕ್ಕೇ ಒಪ್ಪಿಸಲು ಅಭ್ಯಂತರವಿಲ್ಲ. ಆದರೆ ನೀವು ಇಲ್ಲಿಯೇ ಉಳಿಯುತ್ತೀರೋ?"

"ನಿಮ್ಮ ಸಮಾಧಾನಕ್ಕಾಗಿ ಕೆಲವು ಕಾಲ ಇರಬಲ್ಲೆ. ಸದಾ ಇರಲು ಸಾಧ್ಯವಿಲ್ಲ. ಈ ಘಟ ಹೋದ ಮೇಲೆ ಮತ್ತೆ ಆ ಹುಡುಗಿಯ ಗತಿ ನಿರ್ಗತಿ ಯಾಗುತ್ತದೆ. ಆದ್ದರಿಂದ, ಅವಳಿಗೆ ಸಾಕಷ್ಟು ವಿದ್ಯಾಭ್ಯಾಸ ಕೊಡಿಸಿ.

ಅವಳನ್ನು ಸ್ವಾವಲಂಬಿಯನ್ನಾಗಿ ಮಾಡಿ ಮತ್ತೆ ನಾನು ದೇಶಾಟನೆಗೆ ಹೊರಡಬೇಕು. ಅದಕ್ಕೆ ಬೆಂಗಳೂರು ಮೈಸೂರಿನಂಥ ನಗರ ಉತ್ತಮ; ಬೊಂಬಾಯಾದರೆ ಇನ್ನೂ ಉತ್ತಮ. ಆಗಬಹುದು ತಾನೆ ? ''

'' ಆಗಬಹುದು '' ಎಂದು ಕೃಷ್ಣಪ್ಪನವರು ಒಪ್ಪಿದರು.

ಚೆನ್ನಿ ಡಾಕ್ಟರ ವಶದಿಂದ ಬೈರಾಗಿಯ ವಶಕ್ಕೆ ಬಂದಳು ; ಡಾಕ್ಟರು ಬಹು ಅಸಮಾಧಾನದಿಂದಲೇ ಚೆನ್ನಿಯನ್ನು ಬಿಟ್ಟುಕೊಟ್ಟರು ಬೈರಾಗಿ ಚೆನ್ನಿಯನ್ನು ಕರೆದುಕೊಂಡು ಹೊಳೆಯ ದಡದ ಮುರುಕು ಮಂಟಪದಲ್ಲಿ ಬಿಡಾರ ಮಾಡಿದ.

ಇದುವರೆಗೆ ಚೆನ್ನಿ ಊರಿನವರ ಗಮನಕ್ಕೆ ಅಷ್ಟಾಗಿ ಬಿದ್ದಿರಲಿಲ್ಲ; ಈಗ ಅವಳು ಎಲ್ಲರ ಗಮನಕ್ಕೂ ಬರುವಂತಾದಳು.

೫೨

ಬೈರಾಗಿ ಬಿಡಾರಮಾಡಿಕೊಂಡಿದ್ದ ಮುರುಕು ಮಂಟಪ ಹೊಳೆಯ ದಡದಲ್ಲಿ ಸ್ನಾನಘಟ್ಟದ ಸಮೀಪದಲ್ಲಿತ್ತು. ಅದರ ಪಕ್ಕದಲ್ಲಿಯೇ ಅಶ್ವತ್ಥ ಕಟ್ಟೆ. ಅಲ್ಲಿ ಬಹು ಎತ್ತರವಾಗಿ ಬೆಳೆದು ನಿಂತಿದ್ದ ಅರಳಿಯ ಮರ ತನ್ನ ನಿಡುತೋಳುಗಳಂತಿದ್ದ ಕೊಂಬೆಗಳನ್ನು ನಾಲ್ಕೂ ದಿಕ್ಕುಗಳಿಗೆ ಚಾಚಿ, ಸುತ್ತಮುತ್ತಣ ಒಂದೆರಡು ಮಾವಿನಮರ, ತನ್ನಂತೆಯೇ ಬೃಹದಾಕಾರದಲ್ಲಿ ಬೆಳೆದಿದ್ದ ಒಂದು ಆಲದಮರ, ಬಸಿರಿಮರ, ಸಣ್ಣ ಸಣ್ಣ ಹೊಂಗೆಯ ಮರಗಳು — ಇವೇ ಮುಂತಾದ ಜೊತೆಯ ಮರಗಳನ್ನು ಬಳಿಗೆ ಕರೆದು ತಬ್ಬಿಕೊಳ್ಳಲು ಹವಣಿಸುವಂತೆ ಕಾಣುತ್ತಿತ್ತು. ಅರಳಿಯಮರದ ಮೇಲೂ ಆಲದಮರದ ಮೇಲೂ ಹತ್ತಿಪ್ಪತ್ತು ಮಂಗಗಳ ಸಂಸಾರ ನೆಲಸಿತ್ತು. ಕಟ್ಟೆಯ ಮೇಲೆ ನೂರಾರು ಅಳಿಲುಗಳು ನಿರಾತಂಕವಾಗಿ ಓಡಾಡುವುವು. ಪೂರ್ವ-ಪಶ್ಚಿಮವಾಗಿ ಹರಿಯುವ ಹೊಳೆ ಊರ ಬಳಿ ತುಸ ದಕ್ಷಿಣೋತ್ತರ ವಾಗಿ ಹರಿಯುತ್ತಿದ್ದು, ಸೂರ್ಯೋದಯ ಕಾಲದಲ್ಲಿ ಹೊಳೆ ಹೊಸ್ನಾಗಿ ಹರಿಯುವುದು; ಸಂಜೆ ಬೈಗಿನ ಕೆಂಪು ಹೊಳೆಯನ್ನು ರಾಗಪೂರ್ಣವಾಗಿ ಮಾಡುವುದು. ಆಚೆಯ ದಡದ ಬದಿಯಲ್ಲಿ ಹೊಳೆಯಂಚನ್ನು ಹಸುರು ಗೆರೆಯಿಂದ ಗುರುತಿಸುವಂತೆ ಕಾಣುವ ಜೊಂಡಿನ ಒತ್ತಾದ ಬೆಳೆ. ಅದಕ್ಕೆ

ಆಚೆಗೆ ಕಣ್ಣು ಹರಿಯುವ ವರೆಗೆ ಸಮಭೂಮಿ, ಬೆಳೆ ಬಂದಾಗ ನೆಲಕ್ಕೆ ಹಸುರುರತ್ನಗಂಬಳಿಯನ್ನು ಹಾಸಿದಂತೆ ಕಾಣುವ ಗದ್ದೆಗಳ ಹರವು. ಈಗ ಗದ್ದೆಯೆಲ್ಲ ಕೊಯಿಲಾಗಿ, ರತ್ನಗಂಬಳಿಯನ್ನು ಸುತ್ತಿ ತೆಗೆದಿಟ್ಟಂತೆ ಕಾಣುತ್ತಿತ್ತು. ಅತ್ತ ಹಾಗೆಯೇ ನೋಡುತ್ತ ನೋಡುತ್ತ ಇದ್ದರೆ, ನೆಲತಾಯಿಯ ಮೊಲೆಹಾಲು ಧಾರಾಕಾರವಾಗಿ ಚಿಮ್ಮಿ ಕೆಳಕ್ಕೆ ಇಳಿದಂತೆ ತಟ್ಟನೆ, ಇದ್ದಕ್ಕಿದ್ದಂತೆ, ಬೆಳ್ಳಕ್ಕಿಯ ಸಾಲು ನೆಲದಿಂದ ನೆಗೆದು ಬಿಲ್ಲಿನಾಕಾರ ದಲ್ಲಿ ಇನ್ನೆಲ್ಲಿಯೋ ಹೋಗಿ ತಂಗುವುದು. ಇತ್ತ ವೃಕ್ಷರಾಜಿಯಿಂದ ಹಸುರೆಲೆ ಗಳೇ ಹಾರಿಹೋದುವೋ ಎಂಬಂತೆ ಗಿಳಿಗಳ ಬಳಗ ಅತ್ತಕಡೆಗೆ ಬಾನಿಗೆ ತೋರಣಗಟ್ಟಿ ಹಾರಿಹೋಗುವುದು. ಇದನ್ನೆಲ್ಲ ನಿರೀಕ್ಷಿಸುವುದಲ್ಲದೆ ಬೇರೆಯ ಕೆಲಸವೇ ಇಲ್ಲವೆನ್ನುವಂತೆ ಮೇಲೆ, ಬಹು ಮೇಲೆ, ಹದ್ದು ಗಿಡಗ ಗರುಡ ಪಕ್ಷಿಗಳು ಶಾಂತವಾಗಿ ಮಂಡಲಾಕಾರದಲ್ಲಿ ತೇಲುತ್ತ ಹಾರುತ್ತಿರುವುವು.

ಬೈರಾಗಿ ಬಂದು ತನ್ನ ಬಿಡಾರಮಾಡಿಕೊಂಡ ತಾಣ ಇಂತಹದು; ಮಂಟಪ ಮುರುಕೆಂಬ ಕೊರತೆ ಅಲ್ಲಿ ನೆಲಸಿದ ಯಾರ ಗಮನಕ್ಕೂ ಬಾರದು. ಬೈರಾಗಿಗೂ ಅದು ಕೊರತೆಯೆನಿಸಲಿಲ್ಲ. ಬಾಗಿಲಿಲ್ಲದ ಗುಡಿಸಿಲಿನಲ್ಲಿಯೇ ಕಾಲ ಕಳೆದ ಚೆನ್ನಿಗಾದರೂ ಈ ಬಾಗಿಲಿಲ್ಲದ ಮಂಟಪದಲ್ಲಿ ಏನೂ ಕೊರತೆ ಕಾಣಲಿಲ್ಲ. ಅಲ್ಲಿಯೂ ಗಿಡ ಮರ ಬಳ್ಳಿ ಗಿಳಿಗಳ ಸ್ನೇಹ, ಇಲ್ಲಿಯೂ ಅವೇ: ಜೊತೆಗೆ — ಹೊಸ ತಂದೆ ಬೈರಾಗಿ, ಅಕ್ಕ ಕಾವೇರಿ. ಚೆನ್ನಿಯನ್ನು ಮಾದನ ಮಗಳು ಎನ್ನುವುದಕ್ಕಿಂತ ಪ್ರಕೃತಿಯ ಮಗಳು ಎಂದರೆ ಒಪ್ಪೀತು. ಅಂಥವಳಿಗೆ, ಡಾಕ್ಟರ ಮನೆಯಲ್ಲಿನ ಅಂಕೆಯ ಬಾಳು ಮನಸ್ಸಿಗೆ ಹಿತವಾಗಿರಲಿಲ್ಲ. ಕಾಡಿನ ಹಕ್ಕಿಯನ್ನು ಗೂಡಿನಲ್ಲಿ ತಂದು ಇಟ್ಟಂತಾಗಿತ್ತು ಅವಳಿಗೆ; ಈ ಬೈರಾಗಿಯೊಡನೆ ವಾಸಮಾಡಲು ಮೊದಲಾಗಿ, ಗೂಡಿನಿಂದ ತಪ್ಪಿಸಿಕೊಂಡು ಬಿಡುಗಡೆ ಹೊಂದಿದಂತಾಗಿತ್ತು. ಎಲ್ಲ ದೃಷ್ಟಿಯಿಂದಲೂ ಅವಳ ಬಿಡುಗಡೆಯಾಗಿತ್ತು ಅದು. ಡಾಕ್ಟರ ಹೆಂಡತಿ ತನಗೆ ಹೊಟ್ಟೆತುಂಬ ಹಾಕುತ್ತಿದ್ದರೂ ತನಗೆ ಒಗ್ಗದ ಮಾತು ಅವಳ ಊಟಕ್ಕೆ ಕಹಿ ಬೆರಸುತ್ತ ಇತ್ತು. ಬೈರಾಗಿಯ ವಾತ್ಸಲ್ಯಪೂರ್ಣವಾದ ಮಾತುಗಳು ಅವನು ಇವಳಿಗೆ ಬಡಿಸುತ್ತ ಇದ್ದ ಸಪ್ಪೆಯ ಊಟಕ್ಕೂ ಸವಿಯನ್ನು ಬೆರಸಿತ್ತು.

ಡಾಕ್ಟರ ಮನೆಯಲ್ಲಿ ಇದ್ದಾಗಲೇ ಚೆನ್ನಿಯ ರೂಪ ಬಹಳಮಟ್ಟಿಗೆ

ಬದಲಾವಣೆಯಾಗಿತ್ತು ; ಎಣ್ಣೆ ಬಾಚಣಿಗೆ ಸೋಕದ ಅವಳ ಪೊದೆಗೂದಲು, ತೊಳೆದು ಬಿಡಿಸಿ ಹಿಕ್ಕಿ ಬಾಚಿ ಕೂದಲು ಎನ್ನುವ ಮಟ್ಟಿಗಾಗಿತ್ತು. ಡಾಕ್ಟರ ಹೆಂಡತಿಯ ಹಳೆಯ ಸೀರೆ ಅವಳ ಅರೆಬತ್ತಲೆಯ ಮೈಯನ್ನು ಮುಚ್ಚ ತೊಡಗಿತ್ತು. ಚೆನ್ನಿ ಬೈರಾಗಿಯ ಆರೈಕೆಗೆ ಬಂದ ಮೇಲೆ, ಇವಳು ಮಾದನ ಮಗಳು ಅಲ್ಲ ಎನಿಸಿದಳು.

ಊರಿನವರಿಗೆಲ್ಲ ಇವಳು ಮಾದನ ಮಗಳು ಎಂಬುದು ತಿಳಿಯದು. ಮಾದನನ್ನೇ ಯಾರೂ ಕಂಡರಿಯರು; ಮಾದನ ಮಗಳನ್ನು ಯಾರು ಅರಿಯಬಹುದು ? ನಂಜುಂಡಶಾಸ್ತ್ರಿಗಳ ಮನೆಯವರು, ಮೈಲಾರಯ್ಯನವರ ಮನೆಯವರು, ಕಾಳೇಗೌಡನ ಕುಟುಂಬ, ಕೃಷ್ಣಪ್ಪನವರ ತೋಟದ ಆಳು, ಅವರ ಹೊಲಗದ್ದೆಯ ರೈತರು—ಹೀಗೆ ಹಲವು ಮಂದಿಗೆ ಮಾದನ ಪರಿಚಯ ವುಂಟು ; ಅವರಲ್ಲಿಯೂ ಎಲ್ಲರೂ ಮಾದನ ಮಗಳನ್ನು ಕಂಡರಿಯರು. ಈ ಕಾರಣದಿಂದ, ಬಾಹ್ಯವೇಷದಲ್ಲಿ ಸಂಪೂರ್ಣ ಪರಿವರ್ತನೆ ಹೊಂದಿದ ಚೆನ್ನಿಯನ್ನು ಬೈರಾಗಿಯೊಡನೆ ಬಂದ ಹುಡುಗಿ, ಊರಿಗೆ ಹೊಸಬಳು ಎಂದೇ ಮೊದಮೊದಲು ಊರಿನ ಜನ ಭಾವಿಸಿದರು.

ಈ ಸ್ನಾನಘಟ್ಟಕ್ಕೆ ಹೆಚ್ಚಾಗಿ ಬರುತ್ತಿದ್ದವರು ಬ್ರಾಹ್ಮಣರು. ಸ್ನಾನಕ್ಕೆ, ಬಟ್ಟೆ ಒಗೆಯುವುದಕ್ಕೆ, ನೀರು ತೆಗೆದುಕೊಂಡು ಹೋಗುವುದಕ್ಕೆ ಬರುವರವರು. ಕೆಲವರು ಮೊದಲು ಈ ಬೈರಾಗಿಯೊಬ್ಬನೇ ಇರುವುದನ್ನು ಕಂಡಿದ್ದರು; ಅದೇ ಮಂದಿ ಜೊತೆಯಲ್ಲಿ ಒಬ್ಬಳು ಸ್ಫುರದ್ರೂಪಿಯಾದ ತರುಣಿ ಇರುವುದನ್ನು ಕಂಡು ಬೆಕ್ಕಸಬೆರಗಾದರು. ಅಚ್ಚರಿಯೊಂದಿಗೆ ಕುತೂಹಲ ಕೆರಳಿತು. ಒಬ್ಬೊಬ್ಬರಾಗಿ ಇಬ್ಬಿಬ್ಬರಾಗಿ ಈ ಬೈರಾಗಿಯ ವಿಷಯ ಮಾತಾಡಿಕೊಳ್ಳತೊಡಗಿದರು. ಒಬ್ಬಾಕೆ — "ಈಗ ವಾರದ ಹಿಂದೆ ನಾನೇ ಕಾಣ್ಣಾರೆ ನೋಡಿದೆ. ಈ ಬೈರಾಗಿ ಒಬ್ಬನೇ ಇದ್ದ. ಈಗ ಇದು ಯಾವಳೋ ಒಬ್ಬಳು ಹುಡುಗಿ ಬೇರೆ ಜೊತೆಗಿದ್ದಾಳಲ್ಲ! ನಮ್ಮ ಊರಿನ ಹುಡುಗಿಯೋ ? ಎಲ್ಲೂ ಕಂಡಹಾಗಿಲ್ಲವಲ್ಲ ?" ಎಂದು ಒಂದು ದಿನ ನೀರಿನ ಕೊಡವನ್ನು ಸೊಂಟಕ್ಕೇರಿಸುತ್ತ, ಮಂಟಪದ ಕಡೆಯೇ ನೋಡುತ್ತ ನುಡಿದಳು. "ನೋಡಿದರೆ ಬ್ರಾಹ್ಮಣರ ಹುಡುಗಿಯ ಹಾಗೇ ಕಾಣುತ್ತಾಳೆ. ಅವನ ಮಗಳಿರಬಹುದು" ಎಂದಳು ಇನ್ನೊಬ್ಬಾಕೆ.

"ಮೊದಲು ಜೊತೆಯಲ್ಲಿ ಇರಲಿಲ್ಲವಲ್ಲ ಅಂದ್ರೆ. ಈಗ ಇವಳು ಎಲ್ಲಿಂದ ಬಂದಳು ಅಂತೀನಿ?'' ಎಂದು ಸಂದೇಹಾಶ್ಚರ್ಯಗಳನ್ನು ಮುಂದಕ್ಕೆ ಹರಿಸಿದಳು ಮೊದಲು ನುಡಿದಾಕೆ. ''ಬೈರಾಗಿಗೆ ಮಗಳು ಅಂದರೆ ಏನೂ ಅಂದ್ರೆ, ನಾಚಿಕೆಗೇಡು!" ಎಂದು ಮೂಗಿನ ಮೇಲೆ ಬೆರಳಿಟ್ಟಳು ಮೂರನೆಯಾಕೆ. ಮೂವರೂ ಘಟ್ಟದ ಮೆಟ್ಟಲುಗಳನ್ನು ಹತ್ತುತ್ತ ಒಂದೇ ಪಲ್ಲವಿ ಹಾಡಿದರು: "ಏನೋ ಪ್ರಪಂಚ ವಿಚಿತ್ರ ಅಮ್ಮ! ಇವರ ಒಳಗು ಹೊರಗು ಕಂಡವರು ಯಾರಮ್ಮ? ವೇಷ ನೋಡಿದರೆ ಬೈರಾಗಿ, ಆಟ ನೋಡಿದರೆ ಸಂಸಾರಿ!"

ಸ್ನಾನಘಟ್ಟಕ್ಕೆ ಬರುವವರಿಗೆ ಇದರ ಒಳಗೂ ಹೊರಗೂ ಗೊತ್ತಾಗಲು ಬಹಳ ಕಾಲ ಹಿಡಿಯಲಿಲ್ಲ. ವಿಶ್ವನಾಥ ಊರಿಗೆ ಹಿಂದಿರುಗಿದವನು ಒಂದು ದಿನ ಹಾಗೆಯೇ ತಿರುಗಾಡುತ್ತ ಆಸ್ಪತ್ರೆಗೆ ಹೋಗಿ ಡಾಕ್ಟರನ್ನು ಮಾತನಾಡಿಸಿಕೊಂಡು ಬರೋಣ ಎಂದು ಹೊರಟ. ತನ್ನ ಇಂಗ್ಲಿಷ್ ಕಲಿಕೆಯನ್ನು ಪ್ರದರ್ಶನ ಮಾಡಲು ಮಿಡಲ್‌ಸ್ಕೂಲ್ ಮುಖ್ಯೋಪಾಧ್ಯಾಯರು, ಈ ಡಾಕ್ಟರು — ಇವರನ್ನು ಬಿಟ್ಟರೆ ಬೇರೆ ಯಾರೂ ಇರಲಿಲ್ಲ. ಹಾಗೆ ಅಲ್ಲಿಗೆ ಹೋದಾಗ ಅವರ 'ಕ್ವಾರ್ಟರ್ಸ್' ಮುಂದೆ ಚೆನ್ನಿ ಸ್ವಲ್ಪ ಮಟ್ಟಿಗೆ ಪರಿಷ್ಕೃತಳಾಗಿ ನಿಂತಿದ್ದುದನ್ನು ಕಂಡು ಅಚ್ಚರಿಗೊಂಡಿದ್ದ; ಡಾಕ್ಟರನ್ನು ವಿಚಾರಿಸಲಾಗಿ, ಉಪಕಾರಬುದ್ಧಿಯಿಂದ ತಾವು ಆ ಹುಡುಗಿಯನ್ನು ತಮ್ಮ ಮನೆಯಲ್ಲಿ ಕರೆದಿಟ್ಟುಕೊಂಡಿರುವುದಾಗಿ ತಿಳಿದುಬಂದಿತು. 'ಹೊಲೆಯರ ಹುಡುಗಿ, ಆಸ್ಪತ್ರೆಗೆ ಬರುವ ಜನ ಆಕ್ಷೇಪಣೆ ಮಾಡಬಹುದಲ್ಲವೆ?' ಎಂದು ವಿಶ್ವನಾಥ ಎಚ್ಚರಿಕೆಯ ಸಂದೇಹವನ್ನು ಸೂಚಿಸಿದಾಗ, ಡಾಕ್ಟರು 'ಇನ್ನೆಲ್ಲಿಯ ಹೊಲೆಯುತ ಹುಡುಗಿ! ನಮ್ಮ ಜಾತಿಗೆ ಸೇರಿಸಿಕೊಂಡು ಬಿಟ್ಟಿದೇವೆ. ಇನ್ನು ಸ್ವಲ್ಪ ದಿನ, ಅವಳನ್ನು ಬೆಂಗಳೂರಿಗೆ ಕಳಿಸಿ ನರ್ಸ್ ಟ್ರೈನಿಂಗ್ ಕೊಡಿಸುತ್ತೇನೆ. ಆಮೇಲೆ ನೋಡುವಿರಂತೆ ಅವಳನ್ನು!' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದರು. ಕೆಲವು ಕಾಲ ಕಳೆದ ಮೇಲೆ ವಿಶ್ವನಾಥ ಹೊಳೆಗೆ ಸ್ನಾನಕ್ಕೆ ಬಂದವನು ನೋಡುತ್ತಾನೆ, ಸಂಪೂರ್ಣ ಸಂಸ್ಕೃತ ಕನ್ಯೆಯಾಗಿ ಅಶ್ವತ್ಥಕಟ್ಟೆಯ ಮೇಲೆ ನಿಂತಿದ್ದಾಳೆ! ಚೆನ್ನಿ ಹೌದೋ ಅಲ್ಲವೋ ಎಂದು ಸಂದೇಹಿಸಿ, ಕುತೂಹಲದಿಂದ ಸ್ವಲ್ಪ ಹತ್ತಿರಕ್ಕೇ ಹೋಗಿ ಅಲ್ಲಿ ಇಲ್ಲಿ ಸುತ್ತಾಡಿದ; ಆ ಕನ್ಯೆಯನ್ನು ಪರೀಕ್ಷಿಸುವ

ದೃಷ್ಟಿಯಿಂದ ನೋಡಿದ. ಲಜ್ಜೆಯುರಿಯುದ ಚೆನ್ನಿ 'ಏನು ವಿಶ್ವಪ್ಪ, ಹೊಳೆ ತಾವ್ಕೆ ಬಂದಿದ್ರಾ?' ಎಂದು ಮಾತನಾಡಿಸಿಯೂ ಬಿಟ್ಟಳು. ಆಕಡೆ ತಿರುಗಿದಾಗ, ಮುರುಕು ಮಂಟಪದಲ್ಲಿ ತಾನು ಹಿಂದೆ ನೋಡದೆ ಇದ್ದ ಬೈರಾಗಿಯೊಬ್ಬನು ಏನೋ ಓದಿನಲ್ಲಿ ಮಗ್ನನಾಗಿ ಪದ್ಮಾಸನಾಸೀನನಾಗಿ ಕುಳಿತಿದ್ದನು. 'ಇದೇನು, ಇಲ್ಲಿದ್ದೀಯಾ?' ಎಂದು ವಿಶ್ವನಾಥ ಕೇಳಿದ. 'ಹೌದು. ನಾನು ಈಗ ಇಲ್ಲೇ ಇರೋದು' ಎಂದಳು ಚೆನ್ನಿ. 'ಅವರು ಯಾರು?' — 'ನಮ್ಮ ಅಪ್ಪ.' — 'ನಿಮ್ಮ ಅಪ್ಪ ಮಾದ, ತೀರಿಕೊಂಡನಲ್ಲ. ಇವರೆಲ್ಲಿಯ ಅಪ್ಪ?' — 'ಹಂಗೇ ಕರೀಬೇಕೂ ಅಂತ ಹೇಳವ್ರೆ, ಆವಯ್ಯಾ' — 'ಓಹೋ, ಹಾಗೋ, ಸರಿ. ಬರ್ತೀನಿ ಚೆನ್ನಿ' ಎಂದು ವಿಶ್ವನಾಥ ಅಲ್ಲಿಂದ ಹಿಂದಿರುಗಿದ.

ಅವನಿಗೆ ನಗು ಬಂದಿತು: 'ಹೊಲೆಯರ ಚೆನ್ನಿ ಕ್ರಿಸ್ತ ಮತಕ್ಕೆ ಸೇರಿ ಈಗ ಬ್ರಾಹ್ಮಣಳಾಗಿದಾಳೇನೋ' ಎಂದು ತನಗೆ ತಾನೇ ನಕ್ಕ. 'ಹೀನ ಸುಳಿ ಬೋಳಿಸಿದರೆ ಹೋದೀತ್ತೆ, ಅದೇ ನಡತೆ ನುಡಿತೆ' ಎಂದು ಮತ್ತೆ ತಿರಸ್ಕಾರದ ನಗೆಯನ್ನು ನಕ್ಕ. ಆದರೆ ಈ ತಿರಸ್ಕಾರಬುದ್ಧಿ ಬಹು ಕಾಲ ಉಳಿಯಲಿಲ್ಲ. ಹೊಲೆಯರ ಹುಡುಗಿ ಎಂದು ತಿಳಿದೂ ಚೆನ್ನಿಯನ್ನು ಅಪ್ಪಿಕೊಂಡ ಕಾಮಿಯಲ್ಲವೆ ಅವನು! ಅವನು ಹೇಳಿಕೊಂಡ ಗಾದೆ ಅವನನ್ನು ಕುರಿತೇ ಆಯಿತು. ಚೆನ್ನಿಯ ರೂಪ ಮತ್ತೆ ಅವನ ಚಿತ್ತವನ್ನು ಅಪಹರಿಸಿತು. ಆದರೆ ಚೆನ್ನಿಯ ಬಳಿ ಈಗ ಭೈರವ ರೂಪಿಯಾದ ಬೈರಾಗಿಯಿದ್ದನಾಗಿ, ಕೇದಗೆಯ ಗಿಡದ ಕೆಳಗೆ ಹಾವಿನ ಹುತ್ತ ಕಂಡು ಹಿಂದಿರುಗುವಂತೆ, ಚೆನ್ನಿಯ ಕುರಿತ ತನ್ನ ಕಾಮುಕ ಭಾವನೆಗೆ ಕಡಿವಾಣ ಹಾಕಬೇಕಾಗಿ ಬಂದಿತು.

ವಿಶ್ವನಾಥನಿಂದ ಅವನ ಮನೆಯವರಿಗೆ, ಅವನ ಮನೆಯವರಿಂದ ಕೇರಿಯವರಿಗೆ, ಕೇರಿಯವರಿಂದ ಊರಿನವರಿಗೆ, ಹೊಳೆಯ ಮಂಟಪದಲ್ಲಿ ವಾಸವಾಗಿರುವ ಬೈರಾಗಿಯ ಹುಡುಗಿ ಮಾದನ ಮಗಳು, ಹೊಲೆಯರ ಹುಡುಗಿ, ಎಂದೇ ಪ್ರಚಾರವಾಯಿತು. ಊರಿನ ಕೆಲವರು ಗಂಡಸರು ಬಂದು—'ಇವಳು ಹೊಲೆಯರ ಹುಡುಗಿ. ನಮ್ಮ ಸ್ನಾನ ಮಡಿಗಳಿಗೆ ತೊಂದರೆ. ಇಲ್ಲಿಂದ ಮಡಿಯಾಗಿ ಹೋಗುವುದು ಕಷ್ಟ. ಈ ಸ್ಥಳ ಬಿಟ್ಟು

ಬೇರೆ ಮರಿಯಾದ ಕಡೆಗೆ ಹೋಗಿ' ಎಂದು ಬೈರಾಗಿಗೆ ಬಗೆ ಬಗೆಯಲ್ಲಿ ಹೇಳಿದರು; ಬೆದರಿಕೆ ಹಾಕಿದರು. ಎಲ್ಲರಿಗೂ, ಎಲ್ಲಕ್ಕೂ, ಬೈರಾಗಿಯದು ಒಂದೇ ಉತ್ತರ; ಮೌನದ ತಲೆ ತೂಗಾಟ. ಅವನ ಮೌನ-ಕವಚವನ್ನು ಯಾರಿಂದಲೂ ಭೇದಿಸಲು ಸಾಧ್ಯವಾಗಲಿಲ್ಲ. ಅವನ ಮೌನದ ಸಂಕೇತ ಭಾಷೆಯನ್ನು ಹಲವರು ಹಲವು ರೀತಿ ಅರ್ಥಮಾಡಿಕೊಂಡರು. ಎಲ್ಲರಿಗೂ ಒಂದು ಅರ್ಥ ಮಾತ್ರ ಸುಸ್ಪಷ್ಟವಾಯಿತು: ಅವನು ಏನು ಮಾಡಿದರೂ ಈ ಸ್ಥಳ ಬಿಟ್ಟು ಕದಲುವುದಿಲ್ಲವೆಂದು. ಈ ಬೈರಾಗಿಯ ವಿಷಯದಲ್ಲಿ ಅವರಿಗೆ ಭಯವೂ ಇತ್ತು: ಅವನ ಜೋಳಿಗೆಯಲ್ಲಿ ಯಾವ ಮಂತ್ರ ಇದೆಯೋ, ಅವನ ಕೋಪಕ್ಕೆ ಪಾತ್ರರಾದರೆ ಎಲ್ಲಿ ಬೂದಿ ಮಂತ್ರಿಸಿ ಎರಚಿ ತಮ್ಮನ್ನು ಏನು ಮಾಡಿಬಿಡುತ್ತಾನೆಯೋ ಎಂದು. ಕಾಲಕ್ರಮದಲ್ಲಿ, ಚೆನ್ನಿ ಕ್ರಿಸ್ತಮತಕ್ಕೆ ಸೇರಿಬಿಟ್ಟು ಈಗ ಇವನ ಬಳಿ ಇದ್ದಾಳೆಂದೂ– ವಿಶ್ವನಾಥನಿಂದ ತಿಳಿದು ಜನಕ್ಕೆ ಮಹಾ ಸಮಾಧಾನ ಉಂಟಾಯಿತು. ಎಂದಿನಂತೆ ಎಲ್ಲರೂ ಹಟ್ಟಿ ಪಾಡಿಗೆ ತಾವು ಹೊಳೆಗೆ ಬಂದು ಆಹ್ನಿಕವೋ ಸ್ನಾನವೋ ಮಡಿಯೋ ನೀರೋ ನಿಡಿಯೋ ಮಾಡಿಕೊಂಡು ಹೋಗತೊಡಗಿದರು. ದೇಶದ ಅಸ್ಪೃಶ್ಯತೆಯ ನಿವಾರಣೆಗೆ ಅಸ್ಪೃಶ್ಯರೆಲ್ಲರೂ ಕ್ರೈಸ್ತಮತಾನುಯಾಯಿಗಳಾಗುವುದಲ್ಲದೆ ಬೇರೆಯ ಉಪಾಯವಿಲ್ಲವೋ ಎನಿಸಿತು ಅವರ ಈ ನಡವಳಿಯಿಂದ. ಚೆನ್ನಿಯೊಂದಿಗೆ ಬೈರಾಗಿಯ ಜೀವನ ನಿರಾತಂಕವಾಗಿ ಸಾಗತೊಡಗಿತು.

೫೩

ಸುಂದರಮೂರ್ತಿಯ ಗೆಳೆಯರು – ಸಹಪಾಠಿಗಳು – ವಿಶ್ವನಾಥ, ಲಕ್ಷ್ಮೀಪತಿ, ರಾಚಪ್ಪ–ಈ ಮೂವರಿಗೂ ಬಿ.ಎ. ಪರೀಕ್ಷೆಯಲ್ಲಿ ಪ್ಯಾಸಾಯಿತು. ಬಾಳಿನಲ್ಲಿ ಈ ಮೂವರ ಪ್ರಧಾನ ಉದ್ದೇಶವೂ ಒಂದೇ ಆಗಿದ್ದಿತು: ಪರೀಕ್ಷೆ ಮಾಡಿ, ಉದ್ಯೋಗವನ್ನು ಸಂಪಾದಿಸಿ, ನೆಮ್ಮದಿಯಾಗಿ ಬದುಕುವುದು.

ಲಕ್ಷ್ಮೀಪತಿಗೇನೋ ಇತ್ತೀಚೆಗೆ ತಾನೊಬ್ಬ ಗ್ರಂಥಕರ್ತನೆನಿಸಬೇಕೆಂಬ ಒಂದು ಚಪಲವೂ ಅಂಟಿಕೊಂಡುಬಂದಿತ್ತು; ತನ್ನ ಬರವಣಿಗೆಯ ಮೂಲಕ ಸಮಾಜದ ಓರೆಕೋರೆಗಳನ್ನು ತಿದ್ದಬೇಕೆಂಬ ಒಂದು ಹೆಬ್ಬಯಕೆ ಅವನ ಹೃದಯದ ಯಾವುದೋ ಮೂಲೆಯಲ್ಲಿ ಮೂರದ ತೆರೆಯಂತೆ

ಮಿಸುಗುತ್ತಿತ್ತು. ಅವನ ಅನೇಕ ಕವನ ಕಥೆಗಳು ಈಗಾಗಲೇ ನಾಡಿನ ಕೆಲವು ಪತ್ರಿಕೆಗಳಲ್ಲಿ ಪ್ರಕಟಗೊಂಡು, 'ಪ್ರಸಿದ್ಧಿಗೆ ಬರುವ ತರುಣ ಬರಹಗಾರ' ಎಂದು ಬೆಳಕಿಗೆ ಬಂದಿದ್ದನು. ಅವನ ಒಂದು ಕವನಗಳ ಸಂಕಲನ, ಕಥೆಗಳ ಸಂಕಲನ ಪ್ರಕಟನೆಗಾಗಿ ಕಾದಿದ್ದುವು. ಸ್ವಂತವಾಗಿ ಅಚ್ಚುಹಾಕಿಸಲು ಉಪಪತ್ತಿಯಿಲ್ಲ, ಇದ್ದ ಒಬ್ಬಿಬ್ಬರು ಗ್ರಂಥಪ್ರಕಾಶಕರ ಪರಿಚಯ ಇವನಿಗೆ ಇಲ್ಲ, ಪ್ರಕಾಶಕರು ತಾವಾಗಿ ಮುಂದೆ ಬಂದು ಇವನ ಪುಸ್ತಕಗಳನ್ನು ಪ್ರಕಾಶಪಡಿಸುವ ಮಟ್ಟಿನ ಪ್ರಸಿದ್ಧಿಯನ್ನು ಇವನು ಪಡೆದಿರಲಿಲ್ಲ; ತನಗೊಂದು ಕೆಲಸ ದೊರೆತರೆ, ಸಾಲವಾದರೂ ಮಾಡಿ ತನ್ನ ಪುಸ್ತಕಗಳನ್ನು ಅಚ್ಚುಹಾಕಿಸುವ ಕನಸು ಕಾಣುತ್ತಿದ್ದನವನು.

ರಾಚಪ್ಪನಿಗೇನೋ ಸಹಜಪ್ರೇರಣೆಯಿಂದಲೂ ಸುಂದರಮೂರ್ತಿಯ ಕೆಲಕಾಲದ ಸಹವಾಸದ ಪ್ರಭಾವದಿಂದಲೂ ತನ್ನ ಜನರ ಅಭಿವೃದ್ಧಿಗೆ ಏನಾದರೂ ಮಾಡಬೇಕೆಂಬ ಸಂಕಲ್ಪವೇನೋ ಮೊದಲಿನಿಂದಲೂ ಇದ್ದಿತು. ಬಿ. ಎ. ಪ್ಯಾಸಾದ ಕೂಡಲೆ ಆ ಸಂಕಲ್ಪ ಕ್ರಮಕ್ರಮವಾಗಿ ಹಿಂದಕ್ಕೆ ಸರಿಯುತ್ತ ಬಂದಿತು. 'ನಮ್ಮ ಜನವನ್ನು ನರಕವಾಸಕ್ಕೆ ನೂಕಿರುವವರು ಉತ್ತಮಜಾತಿಯವರು ಎನ್ನಿಸಿಕೊಂಡವರು; ತಮ್ಮ ಪಾಪಕಾರ್ಯದ ಪ್ರಾಯಶ್ಚಿತ್ತಾರ್ಥವಾಗಿ ಅವರು ಕೆಳಕ್ಕೆ ಬಿದ್ದ ತಮ್ಮ ಆ ಸೋದರರನ್ನು ಮೇಲಕ್ಕೆ ಎತ್ತಬೇಕು. ಇದು ಅವರ ಕರ್ತವ್ಯ'— ಮಹಾತ್ಮಾ ಗಾಂಧಿಯವರಾದಿಯಾಗಿ ದೇಶದ ನಾಯಕರೆಲ್ಲ ಹೀಗೆ ತಾನೆ ಹೇಳುತ್ತಿರುವುದು? ಇನ್ನು ಆ ಉದ್ಧಾರಕಾರ್ಯದಲ್ಲಿ ತನ್ನ ಪಾತ್ರವಾದರೂ ಏನು? ತಾನು ಈಗ ಬಿ. ಎ. ಪ್ಯಾಸುಮಾಡಿ ತಮ್ಮ ಜನಕ್ಕೆಲ್ಲ ಮೇಲುಪಂಕ್ತಿ ಹಾಕಿಕೊಟ್ಟಂತಾಗಿದೆ; ದೊಡ್ಡ ಉದ್ಯೋಗ ಹಿಡಿದು, ಬೇಗಬೇಗನೆ ಮೇಲುಮೇಲಿನ ಪದವಿಗಳಿಗೇರಿದರೆ, ಒಂದಾನೊಂದು ದಿನ ಡೈಪುಟಿ ಕಮಿಷನರೂ ಆದರೆ, ತಮ್ಮ ಜನಕ್ಕೆ ಒಂದು ಉನ್ನತಾದರ್ಶವನ್ನು ಹಾಕಿದಂತಾಗುವುದು; ಸರಿಯಾದ ಸದವಕಾಶ ಪ್ರೋತ್ಸಾಹಗಳು ಲಭಿಸಿದರೆ ಬ್ರಾಹ್ಮಣರಂತೆ, ಲಿಂಗಾಯತರಂತೆ, ಮುಸಲ್ಮಾನರಂತೆ, ಕ್ರೈಸ್ತರಂತೆ ಹೊಲೆಯರೆನ್ನಿಸಿಕೊಂಡವರೂ ಮುಂದೆ ಬರುವುದರಲ್ಲಿ ಸಂಶಯವಿಲ್ಲ ಎಂಬುದನ್ನು ತೋರಿಸಿಕೊಟ್ಟಂತಾಗುವುದು. ಅಲ್ಲದೆ, ತನಗೆ ಉತ್ಕೃಷ್ಟಪದವಿ ದೊರಕಿದರೆ, ತನ್ನ

ಅಧಿಕಾರಬಲದಿಂದ ತಾನು ಎಲ್ಲಿದ್ದರಲ್ಲಿ ತನ್ನ ಜನಕ್ಕೆ ಕೈಲಾದ ಸಹಾಯ ಮಾಡಬಹುದು ಎಂಬುದು ಇನ್ನೊಂದು ಆಲೋಚನೆ. ಇದರ ಪರಿಣಾಮವಾಗಿ, ಪ್ಯಾಸಾದ ಕೂಡಲೆ ರಾಚಪ್ಪ ಉದ್ಯೋಗಸಂಪಾದನೆಗೆ ಪ್ರಯತ್ನಿಸಿದನು. ಆದಿಕರ್ಣಾಟಕನೊಬ್ಬ ಬಿ. ಎ. ಪ್ಯಾಸುಮಾಡಿರುವನೆಂಬುದೇ ನಿಜವಾಗಿ ಎಲ್ಲರಿಗೂ ಸಂತೋಷ. ಸರ್ಕಾರದಲ್ಲಿ ಕೂಡಲೆ ಅವನಿಗೆ ಒಂದು ಕಾಯಂ ಉದ್ಯೋಗವೇ ದೊರೆಯಿತು; ರಾಚಪ್ಪ ಬೇಗನೆ ಅಮಲ್ದಾರ್ ಪದವಿಗೆ ಏರುವ ಸವಿಗನಸು ಕಾಣುತ್ತ, ತನ್ನ ಜನದ ಒಂದು ಹೆಣ್ಣನ್ನೂ ಮದುವೆಯಾದ. ಯಾವ ಜಾತಿಗೇ ಸೇರಿದ್ದರೂ ಬೇರೆಯ ಜಾತಿಯ ಹೆಣ್ಣನ್ನು ಮದುವೆಯಾಗುವುದಾದರೂ ಎಲ್ಲಿ ಸಾಧ್ಯ? ಈ ನಮ್ಮ ಸನಾತನ ಪುಣ್ಯಭೂಮಿಯಲ್ಲಿ ರಾಚಪ್ಪ, ಬ್ರಾಹ್ಮಣರ ಹುಡುಗಿ ಇರಲಿ, ಒಕ್ಕಲಿಗರ ಹೆಣ್ಣನ್ನು ಕೈಹಿಡಿಯುವುದು ಕೂಡ — ಅಬ್ಬಬ್ಬ! — ಕನಸಿನಲ್ಲಿಯೂ ಸಾಧ್ಯವಿರಲಿಲ್ಲ!

ವಿಶ್ವನಾಥನಿಗೂ ಬೆಂಗಳೂರಿನಲ್ಲಿ ಒಂದು ಸರ್ಕಾರಿ ಉದ್ಯೋಗವೇ ದೊರೆಯಿತು: ಅಬ್ಕಾರಿ ಕಚೇರಿಯಲ್ಲಿ. ರಿಟೈರಾಗುವ ಹೊತ್ತಿಗೆ ಕನಿಷ್ಠಪಕ್ಷ ಅಸಿಸ್ಟೆಂಟ್ ಕಮಿಷನರಾದರೂ ಆಗುತ್ತೇನೆಂಬ ಸಮಾಧಾನ ಅವನಿಗೆ. ಅರ್ಜಿ ಹಾಕಿದ ಕೂಡಲೆ ಉದ್ಯೋಗ ಅವನಿಗೆ ದೊರೆಯಲಿಲ್ಲ: ಮೈಲಾರಯ್ಯನವರು ರಾಮಸ್ವಾಮಯ್ಯನಿಗೆ ಕಾಗದ ಬರೆದು, ಯಾರು ಯಾರಿಂದಲೋ ಶಿಫಾರಸುಗಳನ್ನು ಕೊಡಿಸಿದ ಮೇಲೆ ಉದ್ಯೋಗ ದೊರೆಯಿತು.

ಲಕ್ಷ್ಮೀಪತಿಗೆ ಸರ್ಕಾರದ ನೌಕರಿ ಸಿಕ್ಕಲಿಲ್ಲ. ಅವನೂ ಬೆಂಗಳೂರಿನಲ್ಲಿ ಕೆಲವು ಕಾಲ ಮಾವನ ಮನೆಯಲ್ಲಿ ನೆಲಸಿ, ಕೆಲಸದ ಬೇಟೆಯಾಡಿ ಒಂದು ಖಾಸಗಿ ಹೈಸ್ಕೂಲಿನಲ್ಲಿ ಉಪಾಧ್ಯಾಯನಾದ. ತನ್ನ ಬರವಣಿಗೆಯ ಕೆಲಸಕ್ಕೂ ಓದುವುದಕ್ಕೂ ಬಹಳ ಬಿಡುವು ಸಿಕ್ಕುತ್ತದೆ ಎಂಬುದೇ ಅವನ ಸಮಾಧಾನವಾಗಿತ್ತು.

ಮೂವರೂ ಉದ್ಯೋಗಸ್ಥರಾದರು, ಸಂಸಾರವೊಂದಿಗರಾದರು, ನೆಲೆನಿಂತರು. ಸುಂದರಮೂರ್ತಿ ಮಾತ್ರ ಪರೀಕ್ಷೆ, ಮದುವೆ, ಉದ್ಯೋಗ — ಈ ಎಲ್ಲ ಆಲೋಚನೆಗಳನ್ನೂ ಬದಿಗೊತ್ತಿ ಯಾವುದೋ ಆದರ್ಶದ ಬೆನ್ನು ಹತ್ತಿ, ಅದರ ಸಾಧನೆಯಲ್ಲಿ ಮೈಮನ ಸೋಲುತ್ತಿದ್ದನು.

೫೪

ಭರತಖಂಡದ ಸ್ವಾತಂತ್ರ್ಯದ ಹೋರಾಟದ ವಿವರಪೂರ್ಣವಾದ, ವರ್ಣವತ್ತಾದ, ಸಮಗ್ರವಾದ ನಿರೂಪಣೆ ಇತಿಹಾಸದ ಹಲವು ಸಂಪುಟಗಳ ವಸ್ತು. ಸುಂದರಮೂರ್ತಿ ಯಾವುದೋ ತತ್‌ಕ್ಷಣದ ಆವೇಶಕ್ಕೆ ಒಳಗಾಗಿ ರಾಜಕೀಯ ರಂಗವನ್ನು ಪ್ರವೇಶಿಸಿದಂದಿನಿಂದ ಈ ಕಥೆ ಮುಗಿಯುವರೆಗಿನ ಹೋರಾಟದ ಚಿತ್ರವನ್ನು ಚಿತ್ರಿಸುವುದೂ ಕೂಡ ಕಥೆಗೆ ಹೊರತಾದ ವಿಷಯ ಮಾತ್ರವಲ್ಲ, ಸಾಹಸದ ಕಾರ್ಯ.

ಮಹದ್ಘಟನೆಗಳಿಂದ ಕೂಡಿದ ರಾಜಕೀಯ ಮಹಾನಾಟಕದಲ್ಲಿ ಸುಂದರಮೂರ್ತಿಯ ಪಾತ್ರ ಕೇವಲ ಅಲ್ಪ ; ಹಾಗೆಂದು ಕಿರಿದಲ್ಲ. ನಾಟಕ ಪರಿಪೂರ್ಣವಾಗಬೇಕಾದರೆ ಅರಸಿನ ಪಾತ್ರ ಎಷ್ಟು ಮುಖ್ಯವೋ ಆಳಿನ ಪಾತ್ರವೂ ಅಷ್ಟೆ ಮುಖ್ಯ. ನಾಟಕದ, ಚಲನಚಿತ್ರಗಳ, ಜನಸಂದಣಿಯ ಡೊಂಬಿದೃಶ್ಯಗಳಲ್ಲಿ ಹಲವರು ಕಾಣಿಸಿಕೊಳ್ಳುತ್ತಾರೆ; ಅಲ್ಲಿ, ನಮ್ಮ ಪರಿಚಯದ ಪಾತ್ರಧಾರಿಗಳನ್ನು ಗುರುತಿಸುವುದು ಕೂಡ ಕಷ್ಟ. ಒಮ್ಮೆ ಒಬ್ಬರ ಮುಖ, ಇನ್ನೊಬ್ಬರ ತಲೆ, ಮಗುದೊಬ್ಬರ ಬೆನ್ನು— ಹೀಗೆ ಒಬ್ಬೊಬ್ಬರೂ ನಮ್ಮ ದೃಷ್ಟಿಪಥದಲ್ಲಿ ಮಿಂಚಿ ಮಾಯವಾಗಬಹುದು. ಸಾಮೂಹಿಕ ಸತ್ಯಾಗ್ರಹಗಳಲ್ಲಿ ಸುಂದರಮೂರ್ತಿಯ ಪಾತ್ರವೂ ಅಷ್ಟೇ. ಉಲ್ಲೇಖನಕ್ಕೆ ವಸ್ತುವೇ ಹೊರತು, ನಿರೂಪಣಕ್ಕೆ, ಚಿತ್ರಣಕ್ಕೆ, ವರ್ಣನೆಗೆ, ಅಲ್ಲ. ಅಸಂಖ್ಯಾತ ಅಜ್ಞಾತ ಸ್ವಾತಂತ್ರ್ಯಯೋಧರಲ್ಲಿ ಅವನೂ ಒಬ್ಬನು ರಾಷ್ಟ್ರರಥದ ಹಗ್ಗ ಹಿಡಿದು ಎಳೆದ ರಾಷ್ಟ್ರಭಕ್ತವೀರರು ಅನೇಕಾನೇಕ ಮಂದಿ; ಅವರು ಹಿಡಿದ ಆ ಹಗ್ಗ ಎಂದರೆ—ಸಾಲುಗೂಡಿ ಬಂದ ಸತ್ಯಾಗ್ರಹಿಗಳ ತಂಡ. ಲಕ್ಷೋಪಲಕ್ಷ, ಕೋಟ್ಯನುಕೋಟಿ, ನಾರಿನ ಎಳೆಗಳು ಸೇರಿ ಹಗ್ಗ. ರಥ ಎಳೆಯುವುದರಲ್ಲಿ ಆ ನಾರಿನ ಎಳೆಯ ಪಾತ್ರ ಏನು, ಎಷ್ಟು? ಆದರೂ, ಆ ಒಂದೊಂದು ನಾರಿನ ಎಳೆ ಇಲ್ಲದೆ ಹಗ್ಗವಾಗದು, ಹಗ್ಗವಿಲ್ಲದೆ ರಥ ಎಳೆಯಲಾಗದು. ಆ ನಾರಿನ ಒಂದು ಎಳೆಯಂತೆ ಸುಂದರಮೂರ್ತಿ ಸತ್ಯಾಗ್ರಹ ಸಮರದಲ್ಲಿ ಭಾಗ ವಹಿಸಿದ. ಅವನ ಪಾತ್ರ ಅಲ್ಪ, ಅತ್ಯಲ್ಪ; ಆದರೆ ಕಿರಿದಲ್ಲ.

ಗಾಂಧಿಯವರು ತಿಲಕರನ್ನು ತಮ್ಮ ರಾಜಕೀಯ ಗುರು ಎಂದು ಒಪ್ಪಿ

ಕೊಂಡಿದ್ದಾರೆ. ಅವರು ಸ್ವರ್ಗಸ್ಥರಾದ ಮೇಲೆ ಗಾಂಧಿಯವರು ಭಾರತದ ರಾಜಕೀಯ ರಂಗಕ್ಕೆ ಇಳಿದರಷ್ಟೆ. ಅವರು ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹದ ಆಯುಧವನ್ನು ಮಸೆದು, ಹರಿತವಾಗಿ ಮಾಡಿಕೊಂಡು, ಹಿಂದಿರುಗಿದ್ದರು. ಅಹಮ್ಮದಾಬಾದಿನಲ್ಲಿ ಸತ್ಯಾಗ್ರಹ ಆಶ್ರಮವನ್ನು ಸ್ಥಾಪಿಸಿದರು. ಬಳಿಯಲ್ಲಿ ಹರಿಯುವ ಸಾಬರಮತಿ ನದಿಯಿಂದ ಆ ಆಶ್ರಮಕ್ಕೆ ಸಾಬರಮತಿ ಆಶ್ರಮ ವೆಂದು ಪ್ರಸಿದ್ಧವಾದ ಹೆಸರು. ಗಾಂಧಿಯವರು ಅಲ್ಲಿ ತಪಸ್ವಿಯಾಗಿ ಕುಳಿತು ಕರ್ಮಯೋಗದ ಸಾಧನೆಯಲ್ಲಿ ತೊಡಗಿದರು. ಅಲ್ಲಿಂದ ಅವರು ದೇಶಕ್ಕೆ ಮಾಡುತ್ತಿದ್ದ ಸ್ವಾತಂತ್ರ್ಯಸಾಧನೆಯ ಸಂದೇಶದ ಕಾವು ಬ್ರಿಟಿಷ್ ಸರ್ಕಾರಕ್ಕೆ ತಾಕತೊಡಗಿತು. ೧೯೨೨ ರಲ್ಲಿಯೇ ಸರಕಾರ ಅವರನ್ನು ದಸ್ತಗಿರಿ ಮಾಡಿತು; ಅವರಿಗೆ ಆರು ವರ್ಷದ ಕಾರಾಗೃಹವಾಸದ ಶಿಕ್ಷೆಯಾಯಿತು.

ಸ್ವಾತಂತ್ರ್ಯದ ಹೋರಾಟದ ತರುವಾಯದ ಕೆಲವು ಮೈಲಿಗಲ್ಲುಗಳು ಇವು: 'ಸ್ವರಾಜ್ಯದ ಕಂತಿನ ದಾನ'ಕ್ಕಾಗಿ ಸೈಮನ್ ಕಮಿಷನ್ನಿನ ಆಗಮನ, ಭಾರತೀಯರಿಂದ ಅದರ ಬಹಿಷ್ಕಾರ, ಅದರ ಸಂಬಂಧದ ಕಪ್ಪುಬಾವುಟಗಳ ಮೆರವಣಿಗೆ, ಹರತಾಳಗಳು, ಜನರ ಮೇಲೆ ಪೋಲೀಸರ ಅತ್ಯಾಚಾರ; ಬರಡೋಲಿಯ ಕರನಿರಾಕರಣೆಯ ಚಳವಳಿ; ಕೆಲವು ಪ್ರಮುಖ ದೇಶ ನಾಯಕರ ಬಲಿದಾನ; ಮತ್ತೆ ಸತ್ಯಾಗ್ರಹ ಚಳವಳಿ; ರೌಂಡ್ ಟೇಬಲ್ ಸಮ್ಮೇಳನದ ಕಪಟನಾಟಕ; ೧೯೩೫ ರ ರಾಜ್ಯಾಂಗಶಾಸನ; ದೇಶದಲ್ಲಿ ತಾತ್ಕಾಲಿಕ ಶಾಂತಿ.

ಹೋರಾಟದ ಮೊದಮೊದಲಿನ ಘಟನೆಗಳು ಹಲವಾರನ್ನು ಸುಂದರ ಮೂರ್ತಿ ಕೇಳಿಬಲ್ಲ; ಅಷ್ಟೆ. ಅವನು ಕಾಲೇಜಿಗೆ ಬಂದಾಗಲೂ ರಾಜಕೀಯ ಸುದ್ದಿಗಳನ್ನು ಅಷ್ಟಾಗಿ ಓದುತ್ತಿರಲಿಲ್ಲ. ಚೆನ್ನಿ ಮಾದ ಇವರ ಸಂಪರ್ಕದಿಂದ ಅವನ ಮನಸ್ಸು ಕ್ರಮೇಣ ಹರಿಜನರ ಕಡೆಗೆ ಹರಿದಿತ್ತು; ಪಿ. ಸಿ. ರಾಯ್ ಅವರ ಭಾಷಣ ಅವನಲ್ಲಿ ಸ್ಫೂರ್ತಿ ತುಂಬಿತ್ತು; ಮಹಾತ್ಮಾ ಗಾಂಧಿಯವರು ಹರಿಜನರ ಉದ್ಧಾರಕ್ಕೆ ಎಲ್ಲರೂ ಪ್ರಯತ್ನಪಡಬೇಕೆಂದು ಹೇಳುತ್ತಿದ್ದಾರೆಂದು ಅವರಲ್ಲಿ ಪೂಜ್ಯಬುದ್ಧಿ ಉದಿಸಿತು; ತನ್ನ ಬಾಳು ಅದಕ್ಕೆ ಮುಡಿಪು ಎಂಬ ಸಂಕಲ್ಪ ಮೂಡಿತ್ತು; ಚೆನ್ನಿಯ ಸಂಪರ್ಕವೇ ಕಮಲೆಯನ್ನು ಅವನಿಂದ ಕಸಿದುಕೊಂಡಿತು; ಅದರಿಂದ ಉಂಟಾದ ನಿರಾಶೆಯ ಕಾಲದಲ್ಲಿ ರಾಜ

ಕೀಯುವ ಕಡೆ ಮನಸ್ಸು ಓಡಿತು; ಮಾದ ಮಡಿದ ಮೇಲೆ ಚೆನ್ನಿಗೆ ಒಂದು ತಾತ್ಕಾಲಿಕ ಆಶ್ರಯ ದೊರೆಯಿತೆಂಬ ಸಮಾಧಾನದಿಂದ, ತನ್ನ ಮನಸೆಳೆದಿದ್ದ ಸಾಬರಮತಿಗೆ ಮತ್ತೆ ಧಾವಿಸಿದನು; ಅವನನ್ನು ಹಾಗೆ ಧಾವಿಸುವಂತೆ ಮಾಡಿದ್ದು ೧೯೩೦ರ ಜನವರಿ ೨೬: ಇಡಿಯ ಭರತಖಂಡದ ಜೀವನದ ಮೇಲೆಯೋ ಅಲ್ಲದೆ ಸುಂದರಮೂರ್ತಿಯ ಜೀವನದ ಮೇಲೆ ಪರಿಣಾಮ ಬೀರಿದ ದಿನ; ಸಂಪೂರ್ಣ ಸ್ವರಾಜ್ಯ ಸಾಧನೆಯ ಘೋಷಣೆಯ ಪುಣ್ಯ ದಿನ; ಇಂದು ನವಭಾರತ ರಾಷ್ಟ್ರನಿರ್ಮಾಣವಾದ, ಅಂದು ಕಂಡ ಕನಸು ನನಸಾದ, ಪುಣ್ಯದಿನ. ಈ ಕಾರ್ಯಕಾರಣಗಳ ಸರಪಣಿಯಲ್ಲಿ ಮುಖ್ಯವಾದ ಮೊದಲ ಕೊಂಡಿ ಚೆನ್ನಿ. ಇದನ್ನು ಅವನೇ ಅರಿಯನು. ಪ್ರತಿಯೊಬ್ಬರ ಜೀವಮಾನದಲ್ಲಿಯೂ ಅಷ್ಟೆ: ಯಾವುದೋ ಘಟನೆ, ಯಾವುದೋ ವ್ಯಕ್ತಿ, ಭವಿಷ್ಯಜೀವನದ ರೂಪಣಕ್ಕೆ ಕಾರಣವಾಗುತ್ತವೆ. ತಂದೆಯ ಕೈಲೋ ಹೆಂಡತಿಯ ಕೈಲೋ ಜಗಳ ಆಡಿಕೊಂಡು; ಪರೀಕ್ಷೆಯಲ್ಲಿ ತೇರ್ಗಡೆಯಾಗದೆ; ಉದ್ಯೋಗ ಸಿಕ್ಕದೆ — ಹೀಗೆ ಬೇರೆ ಬೇರೆ ಕಾರಣಗಳಿಂದ ಸತ್ಯಾಗ್ರಹ ಚಳವಳಿಗಳಿಗೆ ನುಗ್ಗಿದವರು ಎಷ್ಟು ಮಂದಿಯೋ! ಇದರಿಂದ ಅವರ ದೇಶಭಕ್ತಿಗಾಗಲಿ ಮೆರೆದ ಸಾಹಸಕ್ಕಾಗಲಿ ಕುಂದಿಲ್ಲ; ಖಾದಿಯ ಕುಲಾವಿಯನ್ನೆ ಧರಿಸಿ, ಖಾದಿಯ ಹ್ಯಾಟನ್ನೂ ಹಾಕಿ, ವೃತ್ತಪತ್ರಿಕೆಯ ರಾಜಕೀಯ ಸುದ್ದಿಯನ್ನೇ ಆಹಾರವಾಗಿ ತಿನ್ನುತ್ತ, ಗಾಂಧಿಯ ಚಿತ್ರವನ್ನು ಪೂಜಿಸುತ್ತ, ಗಾಂಧಿಭಕ್ತರಾಗಿ, ಕಾಂಗ್ರೆಸ್‌ಭಕ್ತರಾಗಿ ಹಿಂದೆ ನಿಂತವರು ಎಷ್ಟು ಮಂದಿಯೊ! ಇವರೂ ದೇಶಭಕ್ತರೆ. ಖಾದಿಯನ್ನೂ ಧರಿಸದೆ, ವೃತ್ತಪತ್ರಿಕೆಯನ್ನೂ ಓದದೆ, ಗಾಂಧಿ ಎಂದರೆ ತಮ್ಮ ಭಾಗದ ದೇವರು ಎಂದು ಮಾತ್ರ ತಿಳಿದು, ಸ್ವಾತಂತ್ರ್ಯದ ಕರೆ ಬಂದಾಗ ಹಿಂದೆ ಮುಂದೆ ನೋಡದೆ ಕೇವಲ ಆ ಕ್ಷಣದ ಆವೇಶದಲ್ಲಿ ಮುಂದೆ ನುಗ್ಗಿ ಮನೆ ಮಠ ಕೆಲಸ ಕೂಲಿ ಹೊಲ ಗದ್ದೆ — ಎಲ್ಲವನ್ನೂ ಕಳೆದುಕೊಂಡ ರೈತರು, ಮಿಲ್ಲಿನ ಕೂಲಿಗಳು ಇವರು ದೇಶಸೇವಕರಲ್ಲವೆ? ದೊಡ್ಡ ದೊಡ್ಡ ಸಭೆ ಮೆರೆವಣಿಗೆಗಳಲ್ಲಿ ಮಾತ್ರ ಭಾಗವಹಿಸಿ "ಗಾಂಧಿಕಿ ಜೈ" ಎಂದು ಕೂಗಿಕೊಂಡು ಪೋಲೀಸರ ಲಾಠಿ ಪ್ರಹಾರದಿಂದ ರಕ್ತ ಕಾರಿದ ಹಾಲುಗಲ್ಲದ ಹಸುಳೆಗಳು ದೇಶಭಕ್ತರಲ್ಲವೆ? ಶಾಲೆ ಕಾಲೇಜುಗಳನ್ನು

ಬಿಟ್ಟು, ಕೇವಲ ಅರ್ಧಗಂಟೆಯ ಉತ್ಸಾಹಪ್ರದರ್ಶನಕ್ಕಾಗಿ ಅರ್ಧವರ್ಷ ಒಂದು ವರ್ಷ ಜೈಲುವಾಸವನ್ನು ಅನುಭವಿಸಿ, ಅನೇಕ ಸಂದರ್ಭಗಳಲ್ಲಿ ಅಷ್ಟಕ್ಕೇ ತಮ್ಮ ವಿದ್ಯಾರ್ಥಿ-ಜೀವನಕ್ಕೆ ಕಲ್ಲುಹಾಕಿಕೊಂಡ, ವಿದ್ಯಾರ್ಥಿಗಳು ದೇಶಸೇವಕರಲ್ಲವೆ? ಇವರೆಲ್ಲಾ ದೇಶಭಕ್ತರಾಗುವ ಪಕ್ಷಕ್ಕೆ ಸುಂದರ ಮೂರ್ತಿಯೂ ದೇಶಸೇವಕನಾದ, ತನ್ನ ಆದರ್ಶಸಾಧನೆಯ ಮಾರ್ಗದಲ್ಲಿ ಹತ್ತು ಹೆಜ್ಜೆಯನ್ನಾದರೂ ಇಟ್ಟ, ರಾಷ್ಟ್ರ ರಥವನ್ನು ಕೊಂಚ ದೂರ ಎಳೆದ ಎನ್ನುವುದರಲ್ಲಿ ಸಂದೇಹವಿಲ್ಲ.

***

ಫೆಬ್ರುವರಿ ತಿಂಗಳಿನಲ್ಲಿ ಸಾಬರಮತಿಯ ಆಶ್ರಮದಲ್ಲಿ ಕಾರ್ಯಕಾರಿ ಸಮಿತಿ ಸೇರಿದ್ದ ಸಂದರ್ಭದಲ್ಲಿ ಮಹಾತ್ಮಾ ಗಾಂಧಿಯವರು ಹೋರಾಟಕ್ಕೆ ಉಪ್ಪಿನ ಸತ್ಯಾಗ್ರಹದ ಮುನ್ನುಡಿ ಬರೆದರು. ಉಪ್ಪಿನ ತಯಾರಿಕೆ, ಉಪ್ಪಿನ ಕೋಠಿಗಳಿಗೆ ದಾಳಿಯಿಡುವುದು, ಉಪ್ಪಿನ ಸಂಗ್ರಹಣ — ಇವನ್ನೆಲ್ಲ ಮಾಡಿ ಪ್ರತಿಯೊಬ್ಬರೂ ತಮಗೆ ಬೇಕಾದಂತೆ ಉಪ್ಪನ್ನು ಉಪಯೋಗಿಸುವುದು, ಉಪ್ಪನ್ನು ಮಾರುವುದು; ಈ ಮೂಲಕ ಉಪ್ಪಿನ ಕಾನೂನನ್ನು ಮುರಿಯುವುದು. ಇದೇ ಗಾಂಧಿಯವರ ಉಪ್ಪಿನ ಸತ್ಯಾಗ್ರಹದ ಯೋಜನೆ. ಈ ಸತ್ಯಾಗ್ರಹವನ್ನು ಪ್ರಾರಂಭಿಸುವ ಮುನ್ನ ಮಹಾತ್ಮರು ಆಗ ವೈಸ್‌ರಾಯ ರಾಗಿದ್ದ ಲಾರ್ಡ್ ಇರವಿನ್ನರಿಗೆ ಒಂದು ದೀರ್ಘ ಪತ್ರ ಬರೆದು, ತಾವು ಯೋಜಿಸಿರುವ ಹೋರಾಟ ನಡೆಯದಿರಬೇಕಾದರೆ ಬ್ರಿಟಿಷ್ ಸರ್ಕಾರದ ಆಡಳಿತದ ದೋಷಗಳನ್ನು ನಿವಾರಣೆ ಮಾಡಬೇಕೆಂದು ಕೋರಿದ್ದರು. ವೈಸ್‌ರಾಯರ ಉತ್ತರ ಗಾಂಧಿಯವರ ನಿರ್ಧಾರಕ್ಕೆ ಪುಟಕೊಟ್ಟಿತು. ಗಾಂಧಿಯವರು ಒಂದು ತುಣುಕು ರೊಟ್ಟಿ ಬೇಡಿದರು; ವೈಸ್‌ರಾಯರು ಮಣ್ಣು ಹೆಂಟಿ ನೀಡಿದರು. ಮಹಾತ್ಮರ ದಂಡಿಯಾತ್ರೆ ಅನಿವಾರ್ಯವಾಯಿತು.

ಈ ಕಾಲದಲ್ಲಿ ಸುಂದರ ಧಾರವಾಡದಲ್ಲಿ ಕಾಂಗ್ರೆಸ್ ಕಾರ್ಯಕರ್ತ ರೊಬ್ಬರ ಮನೆಯಲ್ಲಿ ಇಳಿದುಕೊಂಡಿದ್ದ. ಮೇಲ್ಕಂಡ ಘಟನೆಗಳು ಅವನ ಬಿಸಿ ರಕ್ತವನ್ನು ಕುದಿಯುವಂತೆ ಮಾಡಿದ್ದುವು. ಹೋರಾಟದಲ್ಲಿ ತಾನೂ ಪ್ರತ್ಯಕ್ಷವಾಗಿ ಭಾಗವಹಿಸಬೇಕೆಂಬ ಅದಮ್ಯವಾದ ಆಕಾಂಕ್ಷೆ ಮೂಡಿತು. ತಾನು ಯಾರ ಮನೆಯಲ್ಲಿ ಇಳಿದುಕೊಂಡಿದ್ದನೋ ಆ ಕಾಂಗ್ರೆಸ್ ಕಾರ್ಯ

ಕರ್ಶರ ಅನುಮತಿ ಬೇಡಿ ಅವನು ಮತ್ತೆ ಸಾಬರಮತಿಗೆ ಧಾವಿಸಿದ. ಆ ಹೊತ್ತಿಗೆ ಮಹಾತ್ಮರು ತಮ್ಮ ಸತ್ಯಾಗ್ರಹ ಯಾತ್ರೆಗಾಗಿ ಆಶ್ರಮದ ಎಪ್ಪತ್ತೊಂದು ಮಂದಿ ಸುಶಿಕ್ಷಿತ ಅನುಯಾಯಿಗಳನ್ನು ಆಯ್ಕೆಮಾಡಿಕೊಂಡಿದ್ದರು. ಅವರಲ್ಲಿ ಒಬ್ಬನಾಗುವ ಸೌಭಾಗ್ಯ ಶ್ರೀಧರನಿಗೇ ಲಭಿಸಲಿಲ್ಲ. ಇನ್ನು ಸುಂದರನಿಗೆ ಹೇಗೆ ಲಭಿಸೀತು? 'ಈಗ ಹಲವು ಮಂದಿ ಗಾಂಧಿಯವರ ಅನುಯಾಯಿಗಳಾಗಿ ಹೋಗುವುದರಿಂದ ಆಶ್ರಮವಾಸಿಯಾಗಿದ್ದು ಶಿಕ್ಷಣ ಹೊಂದಲು ನಿನಗೆ ಅವಕಾಶ ಲಭಿಸಿದೆ, ನೀನು ಇಲ್ಲಿಯೇ ಏಕೆ ನೆಲಸಬಾರದು!' ಎಂದು ಶ್ರೀಧರ ಸಲಹೆ ಮಾಡಿದ. ಸುಂದರಮೂರ್ತಿಗೆ ಆ ಸಲಹೆ ಒಗ್ಗಲಿಲ್ಲ. 'ಹೋರಾಟದಲ್ಲಿ ನುಗ್ಗಬೇಕಾದ ಅವಕಾಶ ಬೇಗನೆಯೇ ಲಭಿಸುತ್ತದೆ. ಆತುರವೇಕೆ? ಗಾಂಧಿಯವರಿಗೆ ತಮ್ಮ ದಸ್ತಗಿರಿಯಾಗುತ್ತದೆ ಎನ್ನುವುದು ಗೊತ್ತು. ಅವರ ದಸ್ತಗಿರಿಯಾದ ಮೇಲೆ ನೀನೇ ನಿನ್ನ ನಾಯಕ' ಎಂದು ಶ್ರೀಧರ ಅವನ ಉತ್ಸಾಹಕ್ಕೆ ತಡೆಹಾಕಿದ.

೧೯೩೦ ರ ಮಾರ್ಚಿ ೧೨ ರಲ್ಲಿ ಗಾಂಧಿಯವರು ತಮ್ಮ ಎಪ್ಪತ್ತೈದು ಮಂದಿ ಪಾದಚಾರಿ ಅನುಯಾಯಿಗಳೊಂದಿಗೆ ತಮ್ಮ ಮಹಾ ಪ್ರಸ್ಥಾನವನ್ನು ಪ್ರಾರಂಭಮಾಡಿದರು. ಅವರ ಈ ಯಾತ್ರೆ ಶ್ರೀರಾಮನ ಮತ್ತು ಪಾಂಡವರ ಮಹಾಯಾತ್ರೆಗಳನ್ನು ನೆನಪಿಗೆ ತರುತ್ತಿದ್ದಿತು. ಯಾತ್ರೆಗೆ ಪೂರ್ವಭಾವಿಯಾಗಿಯೇ ವಲ್ಲಭಭಾಯಿ ಪಟೇಲರ ದಸ್ತಗಿರಿ ನಡೆದು ಹೋಗಿತ್ತು. ಗುಜರಾತಿಗೆ ಗುಜರಾತೇ ಸರ್ಕಾರದ ವಿರುದ್ಧ ಪ್ರದರ್ಶನ ಮಾಡಲು ಸಾಬರಮತಿಯ ತೀರದಲ್ಲಿ ಸಭೆ ಸೇರಿತು. ಸಭೆಗೆ ಬೇರೆ ಬೇರೆ ಭಾಗಗಳಿಂದ ೭೫,೦೦೦ ಮಂದಿ ಬಂದಿದ್ದರು. ಸಾಗರೋಪಮವಾದ ಈ ಸಭೆಯನ್ನು ಸುಂದರ ಕಣ್ಣಾರೆ ಕಂಡು ಹಿಗ್ಗಿದನು; ಅವನ ಮೈ ರೋಮಾಂಚವಾಯಿತು. ಯಾತ್ರೆ ಹೊರಡುವ ಮುನ್ನ ೭ನೆಯ ತಾರೀಖು ಆಶ್ರಮದ ಬಳಿ ಗಾಂಧಿಯವರ ಮಹಾಪ್ರಸ್ಥಾನವನ್ನು ಸಂದರ್ಶಿಸಲು ಸಾವಿರಾರು ಮಂದಿ ನೆರೆದಿದ್ದರು. ಅವರೆಲ್ಲರೂ ತಮ್ಮ ತಮ್ಮ ಉತ್ಸಾಹ ಕೊಂಡೊಯ್ದಷ್ಟು, ಕಾಲಿನ ಶಕ್ತಿ ನಡಸಿದಷ್ಟು, ದೂರ ಯಾತ್ರಾರ್ಥಿಗಳೊಂದಿಗೆ ಪ್ರಯಾಣ ಮಾಡಿದರು. ಇವರಲ್ಲಿ ವೃತ್ತಪತ್ರಿಕಾ ಪ್ರತಿನಿಧಿಗಳು ಛಾಯಾಚಿತ್ರಕಾರರು, ಸಿನಿಮಾ ಚಿತ್ರ ತೆಗೆಯುವವರು ಮುಂತಾದವರೆಲ್ಲರೂ

ಇದ್ದರು. ರಥದ ಹಗ್ಗವನ್ನು ಸುಂದರನೂ ಮುಟ್ಟಿ ಆಶ್ರಮಕ್ಕೆ ಹಿಂದಿರುಗಿದ.

ಸುಂದರಮೂರ್ತಿ ಹೋರಾಟದಲ್ಲಿ ಭಾಗವಹಿಸುವ ಅವಕಾಶ ಬೇಗನೆಯೇ ಲಭಿಸಿತು. ಗಾಂಧಿಯುವರ ಯಾತ್ರೆ ೨೪ ದಿನಗಳ ಕಾಲ ನಡೆಯಿತು. ಈ ಕಾಲದಲ್ಲಿ, ಸುಂದರನಿಗೆ ಅವನಂತೆಯೇ ಆಶ್ರಮಕ್ಕೆ ಬಂದಿದ್ದ ಧಾರವಾಡದ ತರುಣನೊಬ್ಬನ ಸಲಿಗೆ ಬೆಳೆಯಿತು. ಅವನ ಹೆಸರು ಕುಲಕರ್ಣಿ. ಅವರಿಬ್ಬರೂ ಕೂಡಿ ಹೋರಾಟಕ್ಕೆ ನುಗ್ಗಬೇಕೆಂದು ಮನಸ್ಸು ಮಾಡಿದ್ದರು. ಬೊಂಬಾಯಿಯಲ್ಲಿ ಕುಲಕರ್ಣಿಯ ಸೋದರಮಾವ ಒಬ್ಬರು ಇದ್ದರು. ಮುಂದಿನ ಹಜ್ಜೆ ಇಡುವ ಮೊದಲು ತನ್ನ ಸೋದರ ಮಾವನ ಮನೆಯಲ್ಲಿ ಇರುವುದೆಂದು ಕುಲಕರ್ಣಿ ನಿಶ್ಚಯಿಸಿದ್ದ. ಸುಂದರನೂ ಕುಲಕರ್ಣಿಯೊಂದಿಗೆ ಬೊಂಬಾಯಿಗೆ ಹೋದ.

ಗಾಂಧಿಯುವರು ಏಪ್ರಿಲ್ ೬ರ ಬೆಳಗ್ಗೆ ದಂಡಿಯನ್ನು ಮುಟ್ಟಿದರು. ಆಗ ಶ್ರೀಮತಿ ಸರೋಜಿನಿ ದೇವಿಯುವರೂ ಅವರನ್ನು ಸಂದರ್ಶಿಸಲು ಅಲ್ಲಿಗೆ ಬಂದಿದ್ದರು ಪ್ರಾತಃಕಾಲದ ಪ್ರಾರ್ಥನೆಗಳು ಮುಗಿದ ಕೂಡಲೆ ಗಾಂಧಿಯುವರೂ ಸ್ವಯಂಸೇವಕರೂ ಕಡಲ ತೀರದ ಉಪ್ಪನ್ನು ಶೇಖರಿಸುವ ಮೂಲಕ ಉಪ್ಪಿನ ಕಾನೂನು ಭಂಗಮಾಡಿದರು. ಕನೂನು ಭಂಗಮಾಡಿದ ಕೂಡಲೆ ಗಾಂಧಿಯುವರು ಪತ್ರಿಕೆಗಳಿಗೆ ಒಂದು ಹೇಳಿಕೆ ಕೊಟ್ಟರು. ಅದರಲ್ಲಿ ಈ ವಾಕ್ಯಗಳೂ ಇದ್ದುವು:

"ಉಪ್ಪಿನ ಕಾನೂನುಭಂಗದ 'ಶಾಸ್ತ್ರ' ಈಗ ನೆರವೇರಿತಾಗಿ, ಉಪ್ಪಿನ ಕಾನೂನುಭಂಗಕ್ಕಾಗಿ ಶಿಕ್ಷೆ ಅನುಭವಿಸಲು ಸಿದ್ಧರಾಗಿರುವ ಯಾರು ಬೇಕಾದರೂ ಎಲ್ಲಿ ಅನುಕೂಲವೋ ಅಲ್ಲಿ ಉಪ್ಪು ತಯಾರಿಸಬಹುದು.... ಉಪ್ಪಿನ ತೆರಿಗೆಯ ವಿರುದ್ಧದ ಈ ಯುದ್ಧ ಒಂದು ವಾರ ನಡೆಯತಕ್ಕದ್ದು. ಈ ಪವಿತ್ರಕಾರ್ಯದಲ್ಲಿ ಭಾಗ ವಹಿಸಲಾಗದವರು ಪರದೇಶಿ ವಸ್ತ್ರಬಹಿಷ್ಕಾರ ದಲ್ಲಿಯೂ ಖಾದಿಪ್ರಚಾರದಲ್ಲಿಯೂ ತೊಡಗತಕ್ಕದ್ದು."

ಇನ್ನೊಂದು ಹೇಳಿಕೆಯಲ್ಲಿ ಈ ವಾಕ್ಯವಿದ್ದಿತು; ಈ ವೇಳೆಗಾಗಲೇ ಅನೇಕ ಪ್ರಮುಖರ ದಸ್ತಗಿರಿಯಾಗಿತ್ತು:

"ಈ ದಸ್ತಗಿರಿಗಳಾದ ಮೇಲೆಯೂ ವಿದ್ಯಾರ್ಥಿಗಳು ಸರ್ಕಾರದ ಶಾಲೆ ಕಾಲೇಜುಗಳಲ್ಲಿರುವ ವಿದ್ಯಾರ್ಥಿಗಳು ತಮ್ಮ ಶಾಲೆ ಕಾಲೇಜುಗಳನ್ನು

ಬಿಟ್ಟು ಹೊರಬರದೆ ಹೋದರೆ ನನ್ನ ಮನಸ್ಸಿಗೆ ತುಂಬ ವ್ಯಥೆಯಾಗುವುದು."

ಈ ವಾಕ್ಯಗಳನ್ನು ಓದಿ, ತನಗೆ ಒಂದು ಸೇವಾವಕಾಶ ಲಭಿಸಿತೆಂದೂ, ತಾನು ಕಾಲೇಜು ಬಿಟ್ಟು ಬಂದದ್ದು ಸರಿಯಾಯಿತೆಂದೂ ಸುಂದರ ಹಿಗ್ಗಿದನು.

ಎಲ್ಲೆಲ್ಲಿಯೂ ಉಪ್ಪಿನ ಸತ್ಯಾಗ್ರಹ ಮೊದಲಾಯಿತು. ದೇಶದಲ್ಲೆಲ್ಲಾ ಸತ್ಯಾಗ್ರಹದ ಕಾಳ್ಕಿಚ್ಚು ಹಬ್ಬಿದ ಮೇಲೆ, ಮಹಾತ್ಮರು ದರ್ಶನ ಉಪ್ಪಿನ ಕೋಠಿಗೆ ದಾಳಿಯಿಡುವ ಪ್ರತಿಜ್ಞೆ ಕೈಕೊಂಡರು. ತಮ್ಮ ಉದ್ದೇಶವನ್ನು ವೈಸ್‌ರಾಯರಿಗೆ ಪತ್ರ ಮುಖೇನ ತಿಳಿಸಿದರು. ಏಕೆಂದರೆ, ಸತ್ಯಾಗ್ರಹ ಮೋಸದ ಯುದ್ಧವಲ್ಲ. ಸತ್ಯಸೂರ್ಯನ ಹಗಲಿನಲ್ಲಿ ನಡೆಯುವ ಹೋರಾಟ; ಅಹಿಂಸೆ ಅಸ್ತ್ರ. ಅವರಿಗೆ ದೊರೆತ ಉತ್ತರವೆಂದರೆ ಏಪ್ರಿಲ್ ೬ರ ಬೆಳಗಿನ ಜಾವ ಅವರ ದಸ್ತಗಿರಿ. ತಾವು ದಸ್ತಗಿರಿಯಾದ ಕೂಡಲೆ ಸತ್ಯಾಗ್ರಹದಲ್ಲಿ ನಂಬಿಕೆಯುಳ್ಳವರೆಲ್ಲರೂ ಕಾಳಗದ ಕಳಕ್ಕೆ ನುಗ್ಗಬೇಕೆಂಬ ಸೂಚನೆಯನ್ನು ಮೊದಲೆ ಕೊಟ್ಟಿದ್ದರು.

ದಸ್ತಗಿರಿಯಾದ ಕೂಡಲೆ ದೇಶವ್ಯಾದ್ಯಂತ ಸಹಾನುಭೂತಿ ಪ್ರದರ್ಶನಗಳು ನಡೆದುವು. ಬೊಂಬಾಯಿಯಲ್ಲಿ ಹರತಾಳ ಆಚರಿಸಲಾಯಿತು. ದೊಡ್ಡ ಮೆರವಣಿಗೆಯೊಂದು ಹೊರಟಿತು. ಸುಂದರನೂ ಆ ಮೆರವಣಿಗೆಯಲ್ಲಿದ್ದನು. ಈ ಉತ್ಸಾಹ ಪ್ರದರ್ಶನದಲ್ಲಿ ಭಾಗವಹಿಸಿಯಾದ ಮೇಲೆ, ಸುಂದರನೂ ಕುಲಕರ್ಣಿಯೂ ದರ್ಶನದ ಉಪ್ಪಿನ ಕೋಠಿಗೆ ದಾಳಿಮಾಡಲು ಸ್ವಯಂಸೇವಕರಾಗಿ ಹೊರಟರು. ಇವರು ಅಲ್ಲಿಗೆ ಹೋಗಿ ಮುಟ್ಟುವ ವೇಳೆಗೆ ದರ್ಶನ ಸತ್ಯಾಗ್ರಹದ ನಾಯಕರಾಗಿ ಬಂದಿದ್ದ ಅಬ್ಬಾಸ್‌ತಾಯಬ್ಜಿಯವರ ಮತ್ತೂ ಸರೋಜಿನಿ ದೇವಿಯವರ ದಸ್ತಗಿರಿಯಾಗಿತ್ತು. ನಾಯಕರಿಲ್ಲದ ಉಪ್ಪಿನ ಕೋಠಿ ದಾಳಿಯಲ್ಲಿ ಸುಂದರನೂ ಕುಲಕರ್ಣಿಯೂ ಭಾಗವಹಿಸಿ, ಪೋಲೀಸರ ಲಾಠಿಯ ಏಟಿನ ಸವಿ ಕಂಡರು. ಲಾಠಿ ಏಟು ಬಿದ್ದಾಗ ಸುಂದರ 'ಗಾಂಧೀಕಿ ಜೈ' ಎಂದು ಕೂಗಿದ. ಸುಂದರನಿಗೆ ತಲೆಯ ಮೇಲೆ ಏಟು ಬಿದ್ದು ರಕ್ತ ಸೋರುತ್ತ ಇತ್ತು; ಕೆಲಕಾಲ ಎಚ್ಚರವಿಲ್ಲದೆ ನೆಲದ ಮೇಲೆ ಬಿದ್ದಿದ್ದು, ಭಾರತಭೂಮಿಗೆ ತನ್ನ ನೆತ್ತರ-ಕಾಣಿಕೆಯನ್ನೂ ಸಲ್ಲಿಸಿದನು. ಅಂದು ಸುಮಾರು ೪೦೦ ಮಂದಿಗೆ ಮೇಲ್ಪಟ್ಟು ಸ್ವಯಂಸೇವಕರ ದಸ್ತಗಿರಿಯಾಯಿತು. ಪೋಲಿಸಿನವರು ಕೆಳಕ್ಕೆ ಬಿದ್ದಿದ್ದ ಸುಂದರನ ಮೇಲೂ ಅವನಿಗೆ

ಗಾಳಿ ಹಾಕುತ್ತಿದ್ದ ಕುಲಕರ್ಣಿಯ ಮೇಲೂ ಕನಿಕರಗೊಂಡರೋ, ಇಲ್ಲವೆ ಅವರನ್ನು ಗಮನಿಸಲೇ ಇಲ್ಲವೋ, ಅಂತೂ ಅವರ ದಸ್ತಗಿರಿಯಾಗಲಿಲ್ಲ. ಸುಂದರ ಬಹಳ ಗಾಯಗೊಂಡಿದ್ದುದರಿಂದ, ಕುಲಕರ್ಣಿ ಅವನನ್ನು ಸಂಗಡ ಕರೆದುಕೊಂಡು ಬೊಂಬಾಯಿಗೆ ಹಿಂದಿರುಗಿದನು. ಸುಂದರನು ಕುಲಕರ್ಣಿಯ ಸೋದರಮಾವನ ಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ವೇಳೆಯಲ್ಲಿ ಬೊಂಬಾಯಿಯಲ್ಲಿ ಘೋರ ಯುದ್ಧವೇ ನಡೆದುಹೋಯಿತು. ಸುಂದರ ಅನೇಕ ಸಭೆಗಳಲ್ಲಿ ನಡೆದ ಪೊಲೀಸರ ಲಾಠಿಪ್ರಹಾರ ದೃಶ್ಯಗಳನ್ನೂ ಕಣ್ಣಾರೆ ಕಂಡು, 'ಲಾಠಿಗೆ ಮತ್ತೂ ಮತ್ತೂ ನನ್ನ ತಲೆ ಒಡ್ಡಬಾರದೇಕೆ?' ಎಂದುಕೊಳ್ಳುತ್ತಿದ್ದ.

ಆದರೆ ಅವನ ತಲೆಯಲ್ಲಿ ಬೇರೊಂದು ಆಲೋಚನೆ ಹತ್ತಿದ್ದರಿಂದ, ಮತ್ತೆ ತಲೆಯೊಡ್ಡಲು ಮನಸ್ಸು ಮಾಡಲಿಲ್ಲ. ಈ ವೇಳೆಗಾಗಲೇ ಕರ್ನಾಟಕದಲ್ಲಿ ಕರನಿರಾಕರಣ ಚಳವಳಿ ಪ್ರಾರಂಭವಾಗಿತ್ತು. ಕರ್ನಾಟಕದ ಒಂದು ಹಳ್ಳಿಯಲ್ಲಿ ಕುಲಕರ್ಣಿಯ ಮಿತ್ರನೊಬ್ಬನು ಒಂದು ಸತ್ಯಾಗ್ರಹ ಶಿಬಿರವನ್ನು ಸ್ಥಾಪಿಸಿ, ಹಳ್ಳಿಯ ರೈತರನ್ನು ಕರನಿರಾಕರಣ ಚಳವಳಿಗೆ ತರಪೇತು ಮಾಡುತ್ತಿದ್ದನು. ಸುಂದರನೂ ಕುಲಕರ್ಣಿಯೂ ಅಲ್ಲಿಗೆ ಹೋಗಿ ಅವನ ಸಹಾಯಕರಾಗಿ ನಿಂತರು. ಆ ತರುಣನಾಯಕ ರೈತರನ್ನು ಎತ್ತಿಕಟ್ಟಿ ಆ ಹಳ್ಳಿ ಕರನಿರಾಕರಣೆಯ ಚಳವಳಿಯಲ್ಲಿ ಪ್ರಮುಖವಾದ ಪಾತ್ರ ವಹಿಸುವಂತೆ ಮಾಡಿದನು. ಅವನು ಮಾಡಿದ ವಿವರಗಳನ್ನೆಲ್ಲ ಇಲ್ಲಿ ಉಲ್ಲೇಖಿಸಿ ಮುಗಿಯದು. ಹಳ್ಳಿಯವರು ಕಂದಾಯ ಕೊಡದೆ ಮನೆ ಮಠ ಆಸ್ತಿ ಎಲ್ಲವನ್ನೂ ಕಳೆದುಕೊಂಡರು. ಆದರೆ ಕರ್ನಾಟಕದ, ವೀರಯೋಧರು, ವೀರತ್ಯಾಗಿಗಳು ಎಂಬ ದೇಶನಾಯಕರ ಪ್ರಶಂಸೆಗೆ ಪಾತ್ರರಾದರು. ಅಷ್ಟರ ಮಟ್ಟಿಗೆ ಹಳ್ಳಿಯವರನ್ನು ಹುರಿದುಂಬಿಸಿದ ಪ್ರಚಂಡ ವ್ಯಕ್ತಿ – ತೆರೆಮರೆಯ ಹಿಂದೆ ಕೆಲಸ ಮಾಡಿದವನು – ಆ ತರುಣನಾಯಕ. ಸುಂದರನೂ ಕುಲಕರ್ಣಿಯೂ ಆತನ ಬಲಗೈ ಎಡಗೈ ಆಗಿದ್ದರು ಎಂದರೆ ಸುಂದರ ಮಾಡಿದ ಕಾರ್ಯ ಏನೆಂಬುದು ಸ್ಪಷ್ಟವಾಗುತ್ತದೆ. ಸುಂದರನ ಈ ದೇಶಸೇವೆ ಮೂರುನಾಲ್ಕು ತಿಂಗಳ ಕಾಲ ನಡೆಯಿತು. ಆದರೆ ಸೆರೆಮನೆಯ ಆತಿಥ್ಯ ಲಭಿಸಲಿಲ್ಲ.

ಈ ಚಳವಳಿ ಮುಗಿದ ಮೇಲೆ ಸುಂದರ ಕುಲಕರ್ಣಿಯೊಂದಿಗೆ

ಬೊಂಬಾಯಿಗೆ ಹಿಂದಿರುಗಿ, ಅಲ್ಲಿ ಒಂದು ಪತ್ರಿಕಾ ಕಚೇರಿಯಲ್ಲಿ ಪತ್ರಿಕೋದ್ಯೋಗಿಯಾಗಿ ನೆಲಸಿದ. ಅವನ ಬಾಳಿನ ಈ ಹಂತ ಮುಟ್ಟುವವರೆಗೂ ಅವನು ತಂದೆ ತಾಯಿ ಚೆನ್ನಿ ಎಲ್ಲರನ್ನೂ ಸಂಪೂರ್ಣವಾಗಿ ಮರೆತಿದ್ದ. ಕೆಲಸಕ್ಕೆ ಸೇರಿದ ಮೇಲೆ, ಆ ವಿಷಯ ಮಾತ್ರ ತಿಳಿಸಿ ತಂದೆಗೆ ಪತ್ರ ಬರೆದ.

೫೬

ಕುಲಕರ್ಣಿ ಒಬ್ಬ ಸೇಠಜಿ ಬಳಿ ಕೆಲಸಕ್ಕೆ ನಿಂತು, ತನ್ನ ಸೋದರಮಾವನ ಮನೆಯಲ್ಲಿ ಉಳಿದುಕೊಂಡ. ಆ ಸೋದರಮಾವನ ಮನೆ ಬೊಂಬಾಯಿಯ ಸರಹದ್ದಿನ ಉಪನಗರವೊಂದರಲ್ಲಿತ್ತು. ಸುಂದರಮೂರ್ತಿ ನಗರದ ಹೃದಯ ಮಧ್ಯದಲ್ಲಿ ಉಪ್ಪರಿಗೆಯ ಮನೆಯ ಮೂರನೆಯ ಅಂತಸ್ತಿನ ಒಂದು ಕಿರು ಕೋಣೆಯಲ್ಲಿ ಒಂಟಿಯಾಗಿ ವಾಸಮಾಡತೊಡಗಿದ. ಅವನು ಸಾಬರಮತಿಯಲ್ಲಿ ಕೆಲವು ಕಾಲ ಶ್ರೀಧರನ ಅತಿಥಿಯಾಗಿಯೇ ಉಳಿದುಕೊಂಡಿದ್ದರೂ ಆಶ್ರಮವಾಸಿಗಳಿಗೆ ದೊರೆಯುತ್ತಿದ್ದ ಶಿಕ್ಷಣವೆಲ್ಲವೂ ಇವನಿಗೂ ತಾನಾಗಿಯೇ ದೊರಕಿತ್ತು. ಇದರಿಂದಾಗಿ ಅವನ ಈಗಣ ಒಂಟಿಜೀವನ ಅವನಿಗೆ ಕಷ್ಟದ್ದೆನಿಸಲಿಲ್ಲ. ಬೆಳಗ್ಗೆ ಎದ್ದು ಚಹ ಮಾಡಿಕೊಳ್ಳುವುದರಿಂದ ಹಿಡಿದು ರಾತ್ರಿ ತನ್ನ ಹಾಸಿಗೆ ಹಾಸಿಕೊಳ್ಳುವ ವರೆಗಿನ ತನ್ನ ಕೆಲಸವೆಲ್ಲವನ್ನೂ ತಾನೇ ಮಾಡಿಕೊಳ್ಳಬೇಕಾಗಿತ್ತು. ಪತ್ರಿಕಾಕಚೇರಿಯ ಕೆಲಸವೇ ಅವನಿಗೆ ಬೇಕಾದಷ್ಟಿತ್ತು; ಬಿಡುವು ಬಹಳ ಕಡಮೆ. ದೊರೆತ ಸ್ವಲ್ಪ ಬಿಡುವಿನಲ್ಲಿ, ತನ್ನ ಕೋಣೆಯಲ್ಲಿ, ಬೆಳಗ್ಗೆ ಸಂಜೆ ಎರಡು ಹೊತ್ತೂ ಪ್ರಾರ್ಥನೆ ಮಾಡುವನು. ಅವನ ಬಾಳಿನಲ್ಲಿ ಇದು ಹೊಸ ಘಟನೆ; ಗಾಂಧಿಯವರ ಪ್ರಭಾವ ಪ್ರತಿದಿನವೂ ಐದು ನಿಮಿಷಗಳ ಕಾಲವಾದರೂ ತಕಲಿಯ ಮೇಲೋ ಚರಕದ ಮೇಲೋ ಕೈಯಾಡಿಸುವನು. ರಾತ್ರಿ ಮಲಗುವ ಮುನ್ನ, ಪತ್ರಿಕಾಲಯದ ಭಂಡಾರದಿಂದ ಯಾವುದಾದರೂ ರಾಜಕೀಯ ಸಂಬಂಧದ, ಅರ್ಥಶಾಸ್ತ್ರದ, ಸಮಾಜಶಾಸ್ತ್ರದ ಗ್ರಂಥವನ್ನು ಪರೀಕ್ಷೆಗೆ ವ್ಯಾಸಂಗ ಮಾಡುವಂತೆ ಓದುವನು. ಮೊತ್ತಮೊದಲನೆಯದಾಗಿ ಮಹಾತ್ಮಾ ಗಾಂಧಿಯವರ ಆತ್ಮಕಥೆಯನ್ನು ಓದಿ ಸ್ಫೂರ್ತಿಶಾಂತಿಗಳನ್ನು ತುಂಬಿಕೊಂಡನು; ರಾಮಕೃಷ್ಣ ಪರಮಹಂಸ, ವಿವೇಕಾನಂದ, ರಾಜಾರಾಮ

ಮೋಹನರಾಯ, ತಿಲಕ, ಗೋಖಲೆ ಮುಂತಾದ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿದನು; ಕಚೇರಿಯ ಸಹೋದ್ಯೋಗಿಯೊಬ್ಬರ ಸಲಹೆಯ ಮೇರೆ ಬರ್ಟ್ರೆಂಡ್ ರಸೆಲ್‌ರವರ ಒಂದೆರಡು ಗ್ರಂಥಗಳನ್ನೂ, ಬರ್ನಾರ್ಡ್ ಷಾ ಅವರ ಕೆಲವು ನಾಟಕಗಳನ್ನೂ, ಗಾಲ್ಸ್‌ವರ್ದಿಯವರ ನಾಟಕಗಳನ್ನೂ ಓದಿದನು. ಈ ಓದೆಲ್ಲ ಐದಾರು ತಿಂಗಳ ಕಾಲಾವಧಿಯಲ್ಲಿ ನಿರಂತರವಾಗಿ ಸಾಗಿತು. ಪರೀಕ್ಷೆಗೆ ಕುಳಿತುಕೊಳ್ಳದೆ ಹೋದದ್ದರಿಂದ ತನಗೇನೂ ನಷ್ಟವಾಗಲಿಲ್ಲ ಎನಿಸಿತು ಸುಂದರನಿಗೆ. ಪಠ್ಯಪುಸ್ತಕ ವಾಚನಕ್ಕೆ ಮಾತ್ರ ಹೆಚ್ಚಾಗಿ ಗಮನ ಕೊಡುತ್ತ ಕೂಪಕೂರ್ಮದಂತಾಗಿದ್ದ ತಾನು ಜ್ಞಾನ ಸಾಗರದ ತಡಿಗೆ ಬಂದು, ಅದರಲ್ಲಿ ಅವಗಾಹನೆ ಮಾಡದಿದ್ದರೂ ಅದರ ವೈಶಾಲ್ಯವೈಭವಗಳನ್ನು ಅವಲೋಕನ ಮಾಡಿಯಾದರೂ ಕೃತಾರ್ಥನಾದಂತೆ ಭಾವಿಸತೊಡಗಿದನು. ವಿದ್ಯಾರ್ಥಿಯಾಗಿಯೇ ಈ ಗ್ರಂಥಗಳನ್ನು ಈ ಹೊತ್ತಿಗೆ ಓದಬಹುದಾಗಿತ್ತು, ಓದಿರಬೇಕಾಗಿತ್ತು; ಆದರೆ ಓದಿರಲಿಲ್ಲ. ಬಹುಮಂದಿ ವಿದ್ಯಾರ್ಥಿಗಳೆಲ್ಲ ತನ್ನಂತೆಯೇ ತಾನೆ ಎಂದು ಬಗೆದನವನು.

ಪತ್ರಿಕಾಲಯದಲ್ಲಿ, ಸುದ್ದಿ ಸಂಗ್ರಹಕಾರರು ಒದಗಿಸುತ್ತಿದ್ದ ಸುದ್ದಿಗಳನ್ನೆಲ್ಲ ಒಪ್ಪಮಾಡಿ ಓರಣಗೊಳಿಸಿ ಉಪಸಂಪಾದಕರ ಒಪ್ಪಿಗೆಗೆ ಸಿದ್ಧಗೊಳಿಸಿ ಕೊಡುತ್ತ ಇದ್ದ ಇಬ್ಬರು ಮೂವರು ಕೆಲಸಗಾರರಲ್ಲಿ ಸುಂದರನೂ ಒಬ್ಬ. ಸುದ್ದಿಗಳೆಂದರೆ ರಾಜಕೀಯ ಸುದ್ದಿಗಳು, ಬಿರುಸಿನಿಂದ ಸಾಗುತ್ತ ಇದ್ದ ಸತ್ಯಾಗ್ರಹ ಸಮರದ ಸುದ್ದಿಗಳು. ದಿನದಿನದ ಸುದ್ದಿಗಳನ್ನು ಸುಂದರ ಅದೊಂದು ಬಗೆಯ ಆತ್ಮೀಯ ಭಾವದಿಂದ ಸಿದ್ಧಪಡಿಸುತ್ತಿದ್ದನು. ಗಂಟೆ ಗಂಟೆಗೂ ಹಲವಾರು ಬಿಸಿಬಿಸಿ ಹಸಿಹಸಿ ಸುದ್ದಿಗಳು ಅವನ ಮೇಜಿನ ಮೇಲೆ ಬಂದು ಬೀಳುತ್ತ ಇದ್ದವು. ಅವನ್ನೆಲ್ಲಾ ಪುನರ್‌ಲೇಖನ ಮಾಡಿಕೊಳ್ಳುವುದು, ತಾರು ಸುದ್ದಿಗಳನ್ನು ವಿಶದಗೊಳಿಸುವುದು, ಟೆಲಿಫೋನ್ ಮೂಲಕ ಬಂದ ಸುದ್ದಿಗಳನ್ನು ಬರೆದುಕೊಳ್ಳುವುದು – ಇವುಗಳನ್ನೆಲ್ಲಾ ಮಾಡುತ್ತ ಮಾಡುತ್ತ ಭಾರತದ ಸಾರ್ವತ್ರಿಕ ಸತ್ಯಾಗ್ರಹದ ಒಂದೊಂದು ಘಟನೆಯಲ್ಲಿಯೂ ತಾನೇ ಇದ್ದಂತೆ ಭಾವಿಸಿಕೊಳ್ಳುವನು. ಸತ್ಯಾಗ್ರಹದ ಚಿತ್ರಮಾಲೆ ಅವನ ಒಳಗಣ್ಣ ಮುಂದೆ ಹಾಯ್ದು ಹೋಗುವುದು.

ಆ ಚಿತ್ರಮಾಲೆಯನ್ನು ಕಾಣುವನವನು, ಮಾತಿನಲ್ಲಿ ಮೂಡಿಸಿ ಇತರ

ರಿಗೆ ಕಾಣಿಸುವನು; ಹಾಗೆ ಮಾಡುವಂದು, ಹೆಚ್ಚಾಗಿ ವರ್ಣಿಸಿ ಬರೆಯಲು ಅವಕಾಶವಿಲ್ಲವಲ್ಲಾ ಎಂದು, ಬರೆದರೂ ಉಪಸಂಪಾದಕರ ಕತ್ತರಿ ಪ್ರಯೋಗ ವಾಗುವುದಲ್ಲಾ ಎಂದು ಕೊರಗುವನು. ಪುಸ್ತಕ ಮುಚ್ಚಿ ಕೋಣೆಯಲ್ಲಿ ಮಲಗಿದಾಗ ಅಂದಿನ ಹಿಂದಿನ ಹೋರಾಟದ ಚಿತ್ರಗಳನ್ನು ಕಲ್ಪಿಸಿಕೊಳ್ಳಲು ಹೆಣಗುವನು. ಇದು ನಿತ್ಯ ನಡೆಯುವುದು; ದಿನ ಕಳೆದಂತೆ ಒಂದೊಂದು ಘಟನೆಯೂ ನಾಡಿನ ಚರಿತ್ರೆಯ ಮೈಲಿಗಲ್ಲಾಗಿ ಸ್ಥಾಪಿತವಾಗುತ್ತ ಹೋದಂತೆ ಅವನ ಮನಸ್ಸಿನಲ್ಲಿಯೂ ನೆಲಸಿ ನಿಲ್ಲುವುದು:

೧೯೩೦ ರ ಜೂನ್ ೧: ತಾನು ಪತ್ರಿಕಾ ಕಚೇರಿಯಲ್ಲಿ ಕೆಲಸ ಪ್ರಾರಂಭ ಮಾಡಿದ ದಿನ: ವಾಡಲ ಉಪ್ಪಿನ ಕೋಠಿಯ ಮೇಲೆ ಸ್ವಯಂ ಸೇವಕರು ದಾಳಿಯಿಟ್ಟರು. ಅಬ್ಬಾ! ಎಷ್ಟು ಮಂದಿ! ೧೫,೦೦೦! ತಾನೂ ಈಗ ಅಲ್ಲಿ ಇದ್ದಿದ್ದರೆ! ಸುತ್ತ ಪೋಲೀಸರ ಗೋಡೆ, ಮಿಲಿಟರಿ ಯವರು ಬೇರೆ ಬಂದರು. ಜನರನ್ನು ನೂಕುವುದು, ಒದೆಯುವುದು, ಲಾಠಿಯಿಂದ ಬಡಿಯುವುದು ಎಲ್ಲ ನಡೆದುವು. ೧೫೦ ಜನಕ್ಕೆ ಗಾಯ. ತನ್ನ ತಲೆ ಮುಟ್ಟಿ ನೋಡಿಕೊಂಡ; ತಾನು ಅಂದು ತಿಂದಿದ್ದ ಗಾಯ ಮಾದಿತ್ತು ಈಗ. ಯುರೋಪಿಯನ್ ಮಿಲಿಟರಿ ಸವಾರರು ಇದ್ದಕ್ಕಿದ್ದಂತೆ ದಾಳಿ ಮಾಡುತ್ತಿದ್ದ ಸ್ವಯಂಸೇವಕರ ಮೇಲೆ ಅಲ್ಲದೆ ಹಳ್ಳಿಗೂ ನುಗ್ಗಿ ಏನೂ ಮಾಡದವರ ಮೇಲೂ ದಾಳಿ ಮಾಡಿದರು! ರಾವುತರ ದಾಳಿ! ಎಂತಹ ಧೀರ ಸೈನಿಕರು!

ಇಂತಹ ಸುದ್ದಿ ನಿತ್ಯವೂ ಸುಂದರನ ಗಮನಕ್ಕೆ ಬಹಳ ಹತ್ತಿರದಲ್ಲಿ ಎಂಬಂತೆ ಬರುತ್ತಿದ್ದಿತು: ಇಂದು ಕಲ್ಕತ್ತ, ನಾಳೆ ಮದರಾಸ್, ಇನ್ನೊಂದು ದಿನ ಬರಹಾಂಪೂರ್, ಒಂದೇ ದಿನ ಬೇರೆ ಬೇರೆ ಕಡೆಗಳಲ್ಲಿ— ಎಲ್ಲೂರ್, ಕಾಕಿನಾಡ, ರಾಜಮಹೇಂದ್ರಿ; ಮತ್ತೊಂದು ದಿನ ಲಾಹೋರ್. "ಲಾಹೋರಿ ನಲ್ಲಿ ಪೋಲೀಸರು ಯುರೋಪಿಯನ್ ಅಧಿಕಾರಿಯ ಕೈಕೆಳಗೆ ಕಾಲೇಜಿಗೆ ನುಗ್ಗಿ ವಿದ್ಯಾರ್ಥಿಗಳನ್ನು ಮಾತ್ರವೇ ಅಲ್ಲದೆ, ಪ್ರೊಫೆಸರುಗಳನ್ನೂ ಬಡಿದರು. ಇದಕ್ಕೆ ಕಾರಣ, ಬೇರೆ ಯಾವುದೋ ಕಾಲೇಜಿಗೆ ಸೇರಿದ ವಿದ್ಯಾರ್ಥಿಗಳು ಆ ಕಾಲೇಜಿನ ಮುಂದೆ ಶಾಂತರೀತಿಯಲ್ಲಿ 'ಪಿಕೆಟ್' ಮಾಡಿದರು!" ಇದು ಆ ವೇಳೆಯಲ್ಲಿ ಈ ದೇಶಕ್ಕೆ ಬಂದಿದ್ದ ಬ್ರೈಲ್ಸ್‌ಫರ್ಡ್‌ರವರು

ಇಂಗ್ಲೆಂಡಿನ ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಗೆ ಕಳಿಸಿದ ಕರುಳು ಕೊರೆಯುವ ವರದಿಯಲ್ಲಿನ ಒಂದು ವಾಕ್ಯ. ಇದನ್ನು ಓದುತ್ತ, "ನಾನು ಮೈಸೂರಿನಲ್ಲಿಯೆ ಇದ್ದಿದ್ದರೆ ಬಹುಶಃ ಎಂ. ಎ. ತರಗತಿಯಲ್ಲಿ ಸುಖವಾಗಿ ಪಾಠ ಓದಿಕೊಂಡು ಇರುತ್ತ ಇದ್ದೆ. ಈ ಸುದ್ದಿಯನ್ನು ಕೂಡ ಓದುತ್ತಿದ್ದೆನೋ ಇಲ್ಲವೋ!" ಎಂದುಕೊಂಡ ಸುಂದರ.

ಇನ್ನು ತಾನಿದ್ದ ಬೊಂಬಾಯಿ ನಗರದಲ್ಲಿಯೇ! ನಿಷೇಧಾಜ್ಞೆಗಳನ್ನು ಮುರಿದು ಸೇರುತ್ತ ಇದ್ದ ಪ್ರತಿಯೊಂದು ಸಾರ್ವಜನಿಕ ಸಭೆಯ ನೋಟವೂ ಮೈನಡುಗಿಸುವಂತಹುದು, ರಕ್ತಕುದಿಸುವಂತಹುದು! ಹಳೆಯ ಪೊಲೀಸ್ ಕಮಿಷನರು ಇದ್ದಾಗ ಅವರ ಆಜ್ಞೆಯ ಮೇರೆಗೆ ಪೊಲೀಸರು ಸತ್ಯಾಗ್ರಹಿಗಳ ಸೊಂಟ ಮಾತ್ರ ಮುರಿಯುತ್ತಿದ್ದರು; ಆತ ಮೆದುಗಲೆಂದು ವಿಲ್ಸನ್ ಮಹಾಶಯನೆಂಬ ಹೊಸ ಕಮಿಷನರನ್ನು ನೇಮಿಸಿದರು; ಈತನ ಆಜ್ಞೆಯ ಮೇರೆಗೆ ಪೋಲೀಸರು ಸ್ವಯಂಸೇವಕರ ತಲೆ ಒಡೆಯಲು ಪ್ರಾರಂಭಿಸಿದರು. ಒಮ್ಮೆ ನೆತ್ತರ ಹೊಳೆಯಲ್ಲಿ ಮೀಯುತ್ತ ಇದ್ದ ನಿರಪರಾಧಿ ಸ್ವಯಂಸೇವಕರ ನರಳಾಟ ಗೋಳಾಟಗಳನ್ನು ನೋಡಲಾರದೆ ನೋಡುತ್ತ ನಿಂತಿದ್ದ ಜನ ರೊಚ್ಚಿದ್ದಿತು. ಜನದ ನೆರವಿ ನೂರಾರು ಇದ್ದದ್ದು ಸಾವಿರಾರಾಗಿ ೨೫,೦೦೦ ಕ್ಕೆ ಏರಿ, ಪೊಲೀಸರ ಹಿಂಸೆಯ ಮುಂದೆ ಅಹಿಂಸೆಯ ಬೆಳದಿಂಗಳು ಬಿಸಿಲಾಯಿತು: ಜನಸಂದಣಿ ಕ್ರಮಕ್ರಮವಾಗಿ ಮೈಮರೆಯುತ್ತ ಬಂದಿತು. ಸ್ವಾತಂತ್ರನಿರ್ಣಯದ ಅಂಗೀಕಾರದ ವಾರ್ಷಿಕ ದಿನಾಚರಣೆಯ ಸಂದರ್ಭದಲ್ಲಿ ಜನಮನದ ಹಿಂಸಾಪ್ರವೃತ್ತಿ ಹೆಡೆಯೆತ್ತಿತು; ಕೆಣಕಿದವರು ಪೊಲೀಸರವರೆ. ಪ್ರಜೆ ಪೊಲೀಸು ಘರ್ಷಣೆಯಾಯಿತು. ಸರಿ, ಪೊಲೀಸರು ಜನದ ಮೇಲೆ ಗುಂಡುಹಾರಿಸಿದರು.

ಬೊಂಬಾಯಿಯ ಆಜಾದ್ ಮೈದಾನವಂತೂ ಒಂದು ರಣರಂಗವೇ ಆಯಿತು. ಚಳವಳಿಯ ಅವಧಿಯಲ್ಲಿ ಪ್ರತಿ ತಿಂಗಳ ನಾಲ್ಕನೆಯ ತಾರೀಖನ್ನು ಗಾಂಧಿ ದಿನವನ್ನಾಗಿಯೂ ಪ್ರತಿ ತಿಂಗಳ ಕಡೆಯ ಭಾನುವಾರವನ್ನು ಧ್ವಜಾರೋಹಣ ದಿನವನ್ನಾಗಿಯೂ ತಪ್ಪದೆ ಆಚರಿಸುತ್ತ ಬಂದಿದ್ದರು. ಮೈದಾನಕ್ಕೆ ಸಾವಿರಾರು ಮಂದಿ ಬಂದು ನೆರೆಯುತ್ತ ಇದ್ದರು. ಸುಂದರನೂ ಒಂದೆರಡು ಭಾನುವಾರ ಅಲ್ಲಿಗೆ ಹೋಗಿದ್ದು ಪೋಲೀಸರ ಕ್ರೌರ್ಯವನ್ನು ಕಣ್ಣಾರೆ

ಕಂಡನು. ಪ್ರತಿ ಸಭೆಗೂ ಜನ ಬಂದು ನೆರೆಯುವುದು, ಪೋಲೀಸರು ಲಾಠಿಪ್ರಯೋಗ ಮಾಡಿ ಅವರನ್ನು ಬೆದರಿಸುವುದು—ಇದೇ ಕೆಲಸವಾಯಿತು. ಒಂದು ಕಡೆ ಬೆದರಿಸಿದರೆ ಇನ್ನೊಂದು ಕಡೆ ನೆರೆಯುವರು. ಬಿಕನೀರ್ ಮಹಾರಾಜರು ಒಂದು ಮರೆವಣಿಗೆಯನ್ನು ನೋಡಹೊರಟರು; ಆಗ ಪಂಡಿತ ಮೋತೀಲಾಲರೂ ಬೊಂಬಾಯಿಯಲ್ಲಿಯೇ ಇದ್ದರು. (ಜೂನ್ ೩೦ ರಲ್ಲಿ ಅವರು ದಸ್ತಗಿರಿಯಾಗುವುದಕ್ಕೆ ಮುಂಚೆ); ಲಾಠೀ ಪ್ರಹಾರದ ದೃಶ್ಯವನ್ನು ಕಂಡ ಮಹಾರಾಜರು, "ಲಾಠಿಪ್ರಯೋಗಕ್ಕಿಂತ ಮಾರ್ಷಲ್ ಲಾ ಉತ್ತಮ. ಇದನ್ನು ಸಹಿಸಿದವರು ಅದನ್ನೂ ಸಹಿಸಬಲ್ಲರು" ಎಂದು ನುಡಿದರು.

ಮದರಾಸಿನಲ್ಲಿ, ಪೋಲೀಸ್ ಸ್ಟೇಷನ್ ಬಳಿ ರೆವರೆಂಡ್ ಎಫ್. ಪೇಟನ್ ಎಂಬ ಪಾದ್ರಿಗಳು ಬಳಿ ಪೋಲೀಸರ ಬಾಕಚರ್‍ಯವನ್ನು ನೋಡುತ್ತ ನಿಂತಿದ್ದರು. ದೊಣ್ಣೆಯ ಸೇವೆಗೆ ಅವರೂ ಪಾತ್ರರಾದರು. ಪಾದ್ರಿಯಾದ ಅವರು ಖಾದಿ ಧರಿಸಿದ್ದರು; ಅದು ಅವರ ಅಪರಾಧ. ಕೈಥಾನ್ ಎಂಬ ಮತ್ತೊಬ್ಬ ಕ್ರೈಸ್ತ ಪ್ರಚಾರಕರನ್ನು ಇಂಡಿಯಾ ಬಿಟ್ಟು ಹೊರಡುವಂತೆ ಆಜ್ಞೆ ಮಾಡಿದರು. ಪ್ರಚಾರಕ್ಕೆ ಬಂದ ಅವರು ಗಾಂಧಿ ಬೋಧೆಯಿಂದ ಪರಿವರ್ತಿತರಾಗಿ ಊರೂರು ಅಲೆಯುತ್ತ ಇದ್ದರು. ಮೈಸೂರಿನಲ್ಲಿ ಅವರನ್ನು ತಾನೂ ನೋಡಿದ್ದಂತೆ ಸುಂದರನಿಗೆ ನೆನಪಾಯಿತು.

ಹೀಗೆಯೇ ದೇಶಾದ್ಯಂತ ಘಟನೆಗಳು; ಎಲ್ಲೆಲ್ಲಿಯೂ ಪೋಲೀಸ್ ರಾಜ್ಯ. ಪೋಲೀಸರ ಕೈ ಬಲಪಡಿಸಲೋಸುಗ ಸರ್ಕಾರ ಕಾನೂನುಗಳಲ್ಲಿ ಉಪ್ಪಿನ ಶಿಕ್ಷೆಯನ್ನೂ ಅಳವಡಿಸಿತು. ದಿನಬೆಳಗಾದರೆ ವಿಶ್ವಾಮಿತ್ರ ಸತ್ಯ ಹರಿಶ್ಚಂದ್ರನನ್ನು ಕಾಡಿದಂತೆ ವೈಸ್‌ರಾಯ್ ಇರ್ವಿನ್ನರು ಹೊಸ ಹೊಸ ಆರ್ಡಿನೆನ್ಸ್‌ಗಳನ್ನು ಹೊರಡಿಸಲು ಮೊದಲು ಮಾಡಿದರು. ಈ ವಿಷಮಯ ವಿಶೇಷ ಶಾಸನಾಸ್ತ್ರಗಳು ಸ್ವಾತಂತ್ರ್ಯವೇ ಇಲ್ಲದ ಜನದ ಸಣ್ಣ ಮೇಲುಸಿರನ್ನು ಇನ್ನೂ ಮೆತ್ತಗೆ ಮಾಡತೊಡಗಿದುವು. ತಲೆಗಳು ಒಡೆದವು, ನೆತ್ತರ ಹೊಳೆ ಹರಿಯಿತು; ಗುಂಡು ಹಾರಿಸಿ, ಸಾವಿರಾರು ಮಂದಿ ಮಡಿದರು; ಜೈಲುಗಳು ಭರ್ತಿಯಾದುವು. ಆದರೆ, ಜನರ ದೇಶಾಭಿಮಾನ, ಉತ್ಸಾಹ ಒಂದೂ ತಗ್ಗಲಿಲ್ಲ. ಸರ್ಕಾರದ ಹೆಂಡದ ಉತ್ಪತ್ತಿ ಇಳಿದುಹೋಯಿತು;

ಪರದೇಶದ ಬಟ್ಟೆಯ ವ್ಯಾಪಾರ ಕುಸಿಯಿತು. ಸುಂದರ ಎಲ್ಲಿಗೆ ಬಿಟ್ಟು ಬಂದಿದ್ದನೋ ಅಲ್ಲಿಂದ ಮುಂದಕ್ಕೆ, ಕರ್ನಾಟಕದಲ್ಲಿ ಕರನಿರಾಕರಣ ಚಳವಳಿ ಪ್ರಚಂಡವಾಗಿ ಬೆಳೆದಿತ್ತು. ಕರನಿರಾಕರಣೆಯ ಸಂಬಂಧದಲ್ಲಿ ಮಾಡಿದ್ದ ಹೊಸ ಆರ್ಡಿನೆನ್ಸ್ ಕರ್ನಾಟಕಕ್ಕೂ ಅನ್ವಯಿಸಿತು. ಹರಾಜಿನ ಮೇಲೆ ಹರಾಜು ನಡೆಯತೊಡಗಿತು. ಕರನಿರಾಕರಣದ ಪ್ರಭಾವ ಅಂಕೋಲೆ, ಸಿದ್ದಾಪುರ, ಸಿರಸಿ ತಾಲ್ಲೂಕುಗಳಲ್ಲಿ ಅತಿ ಪ್ರಬಲವಾಗಿತ್ತು. ಸುಂದರ ತನ್ನ ನಾಯಕನಾಗಿದ್ದವನನ್ನು ನೆನೆದ; ತಾನು ಅವನೊಂದಿಗೆಯೇ ಇನ್ನೂ ಕೆಲವು ಕಾಲ ಇದ್ದಿದ್ದರೆ ಸೆರೆಮನೆಯಲ್ಲಿ ಇರಬಹುದಾಗಿತ್ತೇನೋ ಎಂದು ಹಂಬಲಿಸಿದ. ಆಗ ಪ್ರತಿಯೊಬ್ಬ ಸತ್ಯಾಗ್ರಹಿಯಲ್ಲಿಯೂ ಮೂಡುತ್ತಿದ್ದ ಸಹಜವಾದ ಹಂಬಲು.

ಕರ್ನಾಟಕದಂತೆಯೇ ಗುಜರಾತಿನಲ್ಲಿಯೂ ಕರನಿರಾಕರಣ ಚಳವಳಿ ಪ್ರಚಂಡವಾಗಿತ್ತು. ಪೊಲೀಸರ ದೌರ್ಜನ್ಯದ ಪರಿಣಾಮವಾಗಿ ಸುಮಾರು ೮೦,೦೦೦ ಪ್ರಜೆಗಳು ಆಸಿಪಾಸ್ತಿಗಳನ್ನು ಕಳೆದುಕೊಂಡು ನಿರಾಶ್ರಿತರಾಗಿ ಬರೋಡ ಸಂಸ್ಥಾನವನ್ನು ಆಶ್ರಯಿಸಿದರು. ಒಂದು ಕರುಣಾಜನಕ ದೃಶ್ಯ ಸಾಕು, ಅಲ್ಲಿನ ಭೀಕರ ದೌರ್ಜನ್ಯಕ್ಕೆ ಕನ್ನಡಿಯಾಗಿ. ವಲ್ಲಭಭಾಯಿ ಪಟೇಲರ ೮೦ ವರ್ಷದ ಮುದಿ ತಾಯಿ ಅಡಿಗೆ ಮಾಡುತ್ತ ಇದ್ದಾಗ ಪೊಲೀಸರು ಅಲ್ಲಿಗೆ ನುಗ್ಗಿ, ತಪ್ಪಲೆಯನ್ನು ಒಲೆಯ ಮೇಲಿಂದ ಒದೆದು ಕೆಡವಿ, ಅನ್ನಕ್ಕೆ ಮಣ್ಣನ್ನೂ ಸೀಮೆಯೆಣ್ಣೆಯನ್ನೂ ಬೆರಸಿ, ಸೆರೆಮನೆಯಲ್ಲಿದ್ದ ವೀರ ವಲ್ಲಭಭಾಯಿಯವರ ಮೇಲೆ ಸೇಡು ತೀರಿಸಿಕೊಂಡರು!

ಇಂತಹ ನೂರಾರು ಹೃದಯವಿದ್ರಾವಕ ಸನ್ನಿವೇಶಗಳನ್ನು ಸುಂದರ ಓದುತ್ತಿದ್ದ, ಬರೆಯುತ್ತಿದ್ದ. ಈ ಸುದ್ದಿ ಸಮಾಚಾರಗಳ ಹಗ್ಗ ಹೊಸೆಯುವುದು ಪ್ರಯೋಜನವಿಲ್ಲ, ರಾಷ್ಟ್ರರಥದ ಹಗ್ಗವನ್ನು ಮತ್ತೆ ಹಿಡಿದು ಎಳೆಯಬೇಕು ಎಂಬ ಹಂಬಲು ಅವನನ್ನು ಕಾಡುತ್ತಿತ್ತು.

೫೭

ಸುಂದರಮೂರ್ತಿ ಕುಲಕರ್ಣಿ ಆಗಿಂದಾಗ್ಗೆ ಭೇಟಿಯಾಗುತ್ತಿದ್ದರು. ಸಾಮಾನ್ಯವಾಗಿ ಸಂಜೆಯಾದ ಮೇಲೆ ಕುಲಕರ್ಣಿಯೇ ಒಮ್ಮೊಮ್ಮೆ ಸುಂದರ

ಮೂರ್ತಿ ಕೆಲಸ ಮಾಡುತ್ತ ಇದ್ದ ಕಚೇರಿಗೆ ಬಂದು ಅವನನ್ನು ತಿರುಗಾಡಲು ಒಯ್ಯುತ್ತಿದ್ದನು. ಆಗ ರಾಜಕಾರ್ಯವಲ್ಲದೆ ಇತರ ಎಷ್ಟೋ ವಿಚಾರಗಳನ್ನು ಇಬ್ಬರೂ ಮಾತಾಡಿಕೊಳ್ಳುತ್ತಿದ್ದರು. ಇಬ್ಬರಿಗೂ ಹತ್ತಿರದ ಗೆಳೆತನ, ಬೆಳೆಯುತ್ತ ಬಂದಿತ್ತು. ಸಲಿಗೆ ಹೆಚ್ಚಾದ ಮೇಲೆ, ಇಬ್ಬರೂ ಪರಸ್ಪರ ಸ್ವವಿಚಾರಗಳನ್ನು ಹೇಳಿಕೊಂಡಿದ್ದರು. ಸುಂದರಮೂರ್ತಿಯ ಆತ್ಮಚರಿತ್ರೆಯ ಸಂಗತಿಗಳನ್ನು ಕೇಳಿ ಕುಲಕರ್ಣಿ ಬಹುವಾಗಿ ಮೆಚ್ಚಿಕೊಂಡಿದ್ದ. ಅನೇಕ ಸಲ, “ನೀವು ನಿಜವಾಗಿಯೂ ಸ್ವಾರ್ಥತ್ಯಾಗ ಮಾಡಿದ್ದೀರಿ, ಸುಂದರಮೂರ್ತಿ” ಎಂದು ಕುಲಕರ್ಣಿ ತನ್ನ ಮೆಚ್ಚಿಗೆಯನ್ನು ಸುಂದರನಿಗೆ ತಿಳಿಸುತ್ತಿದ್ದ. ಆಗ ಸುಂದರ ನಿಜವಾಗಿಯೂ ಭೂಮಿಗೆ ಕುಸಿದುಹೋಗುತ್ತಿದ್ದ. “ನನ್ನ ತ್ಯಾಗವೇನೋ ದೇವರೇ ಬಲ್ಲ. ಅಥವಾ ನಿಮ್ಮ ಔದಾರ್ಯಗುಣ ಬಲ್ಲದು. ನಾನಂತೂ ಕಾಣೆ” ಎನ್ನುತ್ತಿದ್ದ ಸುಂದರಮೂರ್ತಿ.

ಕುಲಕರ್ಣಿ ತನ್ನ ಸೋದರಮಾವ ಗೋವಿಂದರಾಯರಿಗೆ ಸುಂದರಮೂರ್ತಿಯ ವಿಚಾರವನ್ನು ಆಗಾಗ್ಗೆ ಹಿಗ್ಗಿನಿಂದ ಹೇಳುತ್ತಿದ್ದ. ಇದಕ್ಕೆ ಕಾರಣ ಒಂದಿತ್ತು. ಗೋವಿಂದರಾಯರು ಹೈಕೋರ್ಟ್ ವಕೀಲರು. ಒಬ್ಬಳೇ ಮಗಳು. ಕುಲಕರ್ಣಿ ತಂದೆಯಿಲ್ಲದ ತಬ್ಬಲಿ. ತಾಯಿಯೊಂದಿಗೆ ಧಾರವಾಡದಲ್ಲಿದ್ದ; ಅವನಿಗೆ ಇಬ್ಬರು ತಮ್ಮಂದಿರು. ಗೋವಿಂದರಾಯರು ಸಹಜವಾದ ಔದಾರ್ಯದಿಂದಲೇ ಕುಲಕರ್ಣಿಯ ಕುಟುಂಬಕ್ಕೆ ಸಹಾಯ ಮಾಡುತ್ತ ಇದ್ದರು. ದೂರದ ಆಸೆಯೂ ಒಂದಿತ್ತು. ಕುಲಕರ್ಣಿಯನ್ನು ಲಾ ಪರೀಕ್ಷೆಗೆ ಓದಿಸಿ, ಸೋದರಳಿಯನನ್ನು ಅಳಿಯನನ್ನಾಗಿ ಮಾಡಿಕೊಂಡು, ತಮ್ಮ ಕೈಕೆಳಗೇ ವಕೀಲಿ ಅಭ್ಯಾಸ ಮಾಡಿಸಿ, ತಮ್ಮ ವೃತ್ತಿಯನ್ನು ಅವನ ಕೈಗಿಟ್ಟು, ತಮ್ಮ ಮಗಳು ಶಾಂತಕುಮಾರಿ ಸುಖವಾಗಿರುವುದನ್ನು ಕಾಣಬೇಕೆಂಬುದೇ ಅವರ ಆ ದೂರದ ಆಸೆ. ಕುಲಕರ್ಣಿ ಬಿ. ಎ. ಮಾಡಲಿ ಎಂದು ಕಾದಿದ್ದರು. ಅವನೂ ಸುಂದರಮೂರ್ತಿಯಂತೆಯೇ ಕಾಲೇಜಿಗೆ ಕೈಮುಗಿದು ಸತ್ಯಾಗ್ರಹ ಚಳವಳಿಗೆ ಸೇರಿ, ತಾಯಿಯ ಅಂಕೆ ತಪ್ಪಿಸಿಕೊಳ್ಳಲು ಈಗ ಬೊಂಬಾಯಿಗೆ ಬಂದಿದ್ದಾನೆ. ಸೋದರಮಾವನ ಮಾತಿಗೆ ಮನ್ನಣೆ ಕೊಡುವ ರೀತಿಯಲ್ಲಿ, “ಈ ವರ್ಷ ಆಯಿತಲ್ಲ. ಮುಂದಿನ ವರ್ಷ ಇಲ್ಲೇ ಇದ್ದು ನಿಮ್ಮ ಕಣ್ಣೆದರೇ ಕಲೀಲಿಕ್ಕೆ ಸುರುವು ಮಾಡತೀನಿ”

ಎಂದಿದ್ದನವನು. ಅಲ್ಲಿಯ ವರೆಗೆ, ತನ್ನ ಕಾಲಮೇಲೆ ತಾನು ನಿಲ್ಲಬಲ್ಲೆ, ನಿಮ್ಮ ಮಗಳ ಕೈ ಹಿಡಿಯಲು ಯೋಗ್ಯನಾಗಿರುವೆ ಎಂಬುದನ್ನು ತೋರಿಸಿ ಕೊಳ್ಳಲೋ ಎಂಬಂತೆ ಒಬ್ಬ ಸೇಠಜಿ ಹತ್ತಿರ ಕೆಲಸಕ್ಕೆ ನಿಂತಿದ್ದನು. "ನೋಡಿ, ನನ್ನ ಅಂತೀರಲ್ಲ? ನನ್ನ ಗೆಳೆಯ ಸುಂದರಮೂರ್ತಿ ಮೈಸೂರಿ ನಿಂದ ಇಲ್ಲಿಗೆ ಬಂದಿದಾನೆ ಚಳವಳಿಗೆ. ಅವರದ್ದು ಸಂಸ್ಥಾನಿ ಸರಕಾರ. ನಾವು ಬ್ರಿಟಿಷರ ಬೂಟ ಕೆಳಗೇ ಇದ್ದು ಹಾಯಂತ ಇರುವದು ಹೇಗೆ?" ಎಂದು ತನ್ನ ಸೋದರಮಾವನಿಗೆ ಹೇಳುತ್ತ ಇದ್ದ. ಅವರು ಸುಂದರ ಮೂರ್ತಿಯನ್ನು ಮೆಚ್ಚಿಕೊಂಡಂತೆ ತೋರಿ, "ಅವನ್ನ ಮನೀ ಕಡೆ ಒಮ್ಮೆ ಕರಕೊಂಡು ಬಾ. ಆ ಸಂಸ್ಥಾನಿ ಮನುಷ್ಯನ್ನ ನೋಡುವ" ಎಂದಿದ್ದರು. ಸುಂದರಮೂರ್ತಿ ಹಿಂದೆ ಗೋವಿಂದರಾಯರ ಮನೆಯಲ್ಲಿ ಇಳಿದುಕೊಂಡಿ ದ್ದಾಗ ಅವರು ಕಾರ್ಯಾಂತರವಾಗಿ ಬೇರೆ ಊರಿಗೆ ಹೋಗಿದ್ದರು. ಅವರು ಹಿಂದಿರುಗುವಲ್ಲಿ ಸುಂದರ ರೂಮು ಗೊತ್ತುಮಾಡಿಕೊಂಡು ಅಲ್ಲಿಗೆ ಹೊರಟು ಹೋಗಿದ್ದ. ಆದ್ದರಿಂದ, ಗೋವಿಂದರಾಯರ ಅಪೇಕ್ಷೆಯಂತೆ, ಒಂದು ದಿನ ಕುಲಕರ್ಣಿ ಸುಂದರನನ್ನು ಅವರ ಮನೆಗೆ ಕರೆದೊಯ್ದ.

ಅಂದು ಭಾನುವಾರ. ಗೋವಿಂದರಾಯರು ಮನೆಯಲ್ಲಿಯೇ ಇದ್ದರು. ಕುಲಕರ್ಣಿ ಟ್ರಾಂ ಹತ್ತಿ ಸುಂದರನ ಬಿಡಾರಕ್ಕೆ ಬಂದು, ಟ್ರಾಮಿನಲ್ಲೇ ಅವನನ್ನು ಅವರ ಮನೆಗೆ ಕರೆದೊಯ್ದನು. ಗೋವಿಂದರಾಯರು ಸುಂದರನ ನಿರೀಕ್ಷಣೆಯಲ್ಲಿಯೇ ಎಂಬಂತೆ ಆರಾಮವಾಗಿ ಬೆಠಕ್‌ಖಾನೆಯಲ್ಲಿ ಬೆಳಗ್ಗೆ ಆಗ ತಾನೇ ಬಂದಿದ್ದ ಆಂಗ್ಲ ಪತ್ರಿಕೆಯನ್ನು ಕೈಲಿ ಹಿಡಿದು ಕುಳಿತಿದ್ದರು. ಸುಂದರಮೂರ್ತಿ ಬಂದ ಕೂಡಲೆ ಮೇಲೆದ್ದು "ಬನ್ನಿ ಬನ್ನಿ, ಭಾಳ ಸಂತೋಷಾಯ್ತು. ಬನ್ನಿ" ಎಂದು ಬಾಯಿತುಂಬ ಆದರವನ್ನು ಹರಿಸಿ, ಸುಂದರಮೂರ್ತಿ ತಮ್ಮ ಮನೆಯಲ್ಲಿದ್ದಾಗ ತಾವು ಊರಿನಲ್ಲಿ ಇಲ್ಲದಿದ್ದು ದಕ್ಕಾಗಿ ವಿಷಾದಿಸಿ, ಅವನ ಹೆಗಲ ಮೇಲೆ ಕೈಯಿಟ್ಟು ಕರೆದುಕೊಂಡು ಹೋಗಿ ಪಕ್ಕದ ಸೋಫಾದ ಮೇಲೆ ಕುಳ್ಳಿರಿಸಿದರು. ಅವನ ಪಕ್ಕದಲ್ಲಿಯೇ ಕುಲಕರ್ಣಿಯೂ ಕುಳಿತ.

ಕುಶಲಪ್ರಶ್ನೆಗಳಾದ ಮೇಲೆ, ಗೋವಿಂದರಾಯರು ಪ್ರಾರಂಭಿಸಿದರು:

"ಈ ಹೊತ್ತಿನ ಸುದ್ದಿ ನೋಡಿದಿರಾ? ಗಾಂಧಿಯವರ ಮತ್ತಿತರರ

ಬಿಡುಗಡೆಯಾಗುವದಂತೆ!.... ಅಲ್ಲ, ಆದೆಂಥ ಮೂರ್ಖನಿದ್ದೀನಿ ನಾ, ಪತ್ರಿಕಾ ಕಚೇರಿಯವರಿಗೆ ಸುದ್ದಿ ಹೇಳ ಹೊರಟಿದೀನಿ .... ಹಹ್ಹಹಾ! .... ಇರಲಿ, ನಿಮ್ಮ ವಿಷಯ ನಮ್ಮ ಕುಲಕರ್ಣಿ ನನಗೆ ಭಾಳ ಹೇಳಿದಾನೆ. ನಾ ಹೇಳೂದೇನಂದರೆ, ಈ ವರ್ಷ ಆನಕ ಆಯ್ತು. ನೀವು ನೆಟ್ಟಗೆ ಊರಿಗೆ ಹೋಗಿ, ನಿಮ್ಮ ತಂದೆ ತಾಯಿಗೆ ಅಡ್ಡಬಿದ್ದು, ಇಳಿದ ಕಾಲೇಜು ಪಾವಟಿಗೆ ಮತ್ತೆ ಹತ್ತರಿ. ಇಲ್ಲಾ, ಇಲ್ಲೆ ಇರ್ರಿ. ಇವನನಕ ದಾರಿಗೆ ಬರೋ ಹಾಗೆ ಕಾಣವೊಲ್ಲದು. ನಿಮ್ಮನ್ನ ನಾ ಓದಿಸತೀನಿ ನೀವು ಬ್ರಾಹ್ಮಣರಂತೆ. ಅಷ್ಟು ಸಾಕು. ನಮ್ಮ ಅಳಿಯದೇವರಾಗಿಬಿಡರಿ'' ಎಂದು ಗೊಳ್ಳನೆ ನಕ್ಕು, ಕುಲಕರ್ಣಿಯ ಕಡೆ ತಿರುಗಿ ನೋಡಿ, ಮತ್ತೆ ಗಂಭೀರವಾಗಿ ''ಶಾಂತ, ಚಹಾ ತಗೊಂಡು ಬಾ'' ಎಂದು ಕೂಗಿದನು.

ಕೆಲ ನಿಮಿಷಗಳಲ್ಲೇ, ಶಾಂತ ತಟ್ಟೆಯಲ್ಲಿ ಮೂರು ಲೋಟ ಚಹಾ ತಂದು ಟೀಪಾಯ ಮೇಲೆ ಇರಿಸಿದಳು ಗೋವಿಂದರಾಯರು ಹಾಸ್ಯಕ್ಕೆ ಹೇಳಿದ್ದಷ್ಟೆ. ಆದನ್ನು ಅವನೂ ಬಲ್ಲ. ಆದರೂ, ಶಾಂತಳನ್ನು ತನ್ನ ಭಾವೀ ಪತ್ನಿಯೋ ಎಂಬಂತೆ ಸುಂದರ ದಿಟ್ಟಿಸಿ ನೋಡಿದನು— ಕ್ಷಣ ಕಾಲ ಮಾತ್ರ. ಹಿಂದೆ ಅವನಿಗೆ ಈ ಆವಕಾಶ ಲಭಿಸಿರಲಿಲ್ಲ. ಇವಳ ಮುಂದೆ ಕಮಲೆಯೂ ಇಲ್ಲ, ಚೆನ್ನಿಯೂ ಇಲ್ಲ ಎನ್ನಿಸಿತವನಿಗೆ. ಸಹಜಸೌಂದರ್ಯಕ್ಕೆ ಬೊಂಬಾಯಿ ನಾಗರಿಕತೆಯ ವಿಶಿಷ್ಟ ಉಡಿಗೆ ತೊಡಿಗೆ ಆ ಕನ್ನೆಯ ಚೆಲುವಿಗೆ ಒಪ್ಪವಿಟ್ಟಿದ್ದುವು. ತನಗಲ್ಲದ ಆ ಹೆಣ್ಣನ್ನು ಮೆಚ್ಚಿ, ಸುಂದರಮೂರ್ತಿ ಹೇಳಿದ :

''ಗೋವಿಂದರಾಯರೆ, ಕುಲಕರ್ಣಿಗೆ ಒಂದು ಮಾತು ಹೇಳುತ್ತೇನೆ, ಕ್ಷಮಿಸಬೇಕು. (ಕುಲಕರ್ಣಿಯ ಕಡೆ ತಿರುಗಿ) ಕುಲಕರ್ಣಿ, ನಾನಾಗಿದ್ದರೆ ಗೋವಿಂದರಾಯರು ತಮ್ಮ ಮಗಳನ್ನು ಯಾವ ಕಾರಣಕ್ಕೆ ಆಗಲಿ, ನಿನಗೆ ಕೊಡುವುದಿಲ್ಲ ಎಂದಿದ್ದರೆ, ಅವರ ಮಗಳನ್ನು ಪಡೆಸಲು ನಾನು ಅವರ ಮನೆಯಲ್ಲಿ ಸತ್ಯಾಗ್ರಹ ಪ್ರಾರಂಭಿಸಿಬಿಡುತ್ತಿದ್ದೆ. ಈಗ ಹೇಳು, ಶಾಂತಮ್ಮನನ್ನು ನೀನು ಮದುವೆ ಮಾಡಿಕೊಳ್ಳುತ್ತೀಯೋ ಇಲ್ಲ ನಾನು ಮಾಡಿಕೊಳ್ಳಲೋ? ನೀನು ಸಿದ್ಧನಾಗಿಲ್ಲದಿದ್ದರೆ, ನಾನು ಸತ್ಯಾಗ್ರಹ ಬಿಟ್ಟು, ಸತ್ಯಾಗ್ರಹ ಮಾಡದೆಯೇ ಅವಳನ್ನು ಮದುವೆಯಾಗುತೇನೆ. ಹೇಗೋ

ನನಗೆ ಅವಳನ್ನು ಕೊಡಲೊಪ್ಪಿದ್ದಾರೆ" ಎಂದು ನಕ್ಕ. ಎಲ್ಲರೂ ಗೊಳ್ಳನೆ ನಕ್ಕರು. ನಾಚಿಕೆಯಿಂದ ಶಾಂತಾ ಒಳಕ್ಕೆ ಓಡಿಹೋದಳು.

ಸುಂದರಮೂರ್ತಿ ಅಂದು ಅಲ್ಲಿಯೇ ಊಟಮಾಡಿ, ಸಂಜೆ ತನ್ನ ಕೊಠಡಿಗೆ ಹಿಂದಿರುಗಿದ.

೫೮

ಸುಂದರಮೂರ್ತಿ ರಾತ್ರಿ ಮಲಗಿಕೊಂಡಾಗ ಬಹಳ ಹೊತ್ತು ಏನು ಮಾಡಿದರೂ ನಿದ್ರೆ ಬರಲಿಲ್ಲ. ಶಾಂತಕುಮಾರಿಯ ರೂಪರಾಶಿಯ ನೆನಪು, ಧ್ಯಾನ, ಪರಿಭಾವನೆಗಳು ಅವನ ಮನಸ್ಸಿಗೆ ಶಾಂತಿಯನ್ನು ತರುವುದರ ಬದಲು ಅಶಾಂತಿಯನ್ನುಂಟುಮಾಡುವ ಚಾಂಚಲ್ಯವನ್ನು ಹುಟ್ಟಿಸಿದುವು. ನಿಜವಾಗಿ ಅವನು ಈ ಬಗೆಯ ಚಿತ್ತಚಾಂಚಲ್ಯವನ್ನು ಎಂದೂ ಅನುಭವಿಸಿರಲಿಲ್ಲ. ಮನೆಮಠ ಬಿಟ್ಟು, ಸತ್ಯಾಗ್ರಹಕ್ಕೆ ಹೊರಟು ಬರುವಾಗ ಕೂಡ ಅವನ ಚಿತ್ತ ಚಂಚಲವಾಗಿರಲಿಲ್ಲ; ಹೋರಾಟ ಹೊಯ್ದಾಟಗಳೇನೋ ಇದ್ದುವು: ಅತ್ತಲೋ ಇತ್ತಲೋ ಎಂಬ ಒಲೆದಾಟದಲ್ಲಿ ಇತ್ತ ಎಂದು ಮನಸ್ಸು ನುಡಿದು, ಈ ಕಡೆಗೆ ನಡೆದು ಬಂದಿದ್ದ. ಆದರಿಂದ ಚಿತ್ತ ಕಲಕಲಿಲ್ಲ. ಈಗ ಚಿತ್ತ ಕಲಕುತ್ತಿರುವುದೇಕೆ? ಅದಕ್ಕೆ ಕಾರಣ ಮನಸ್ಸಲ್ಲ; ತನ್ನ ಹೃದಯ. ರಾಜಕೀಯದಲ್ಲಿ ಮನಸ್ಸು ಬಿದ್ದು ಹೃದಯದ ಕರೆ-ಕೋರಿಕೆ ಏನು ಎಂಬುದರ ಕಡೆಗೆ ಅವನ ಲಕ್ಷ್ಯ ಹೋಗಿರಲಿಲ್ಲ. ಅವನು ಎಲ್ಲರನ್ನೂ ಎಲ್ಲವನ್ನೂ ಮರೆತಿದ್ದನು. ಇಂದು ಶಾಂತಕುಮಾರಿಯ ನೆನಪಿನಿಂದಾಗಿ ಕಮಲೆ ಚೆನ್ನಿಯರ ನೆನಪು ಮರುಕೊಳಿಸಿತು. ಅವರಿಬ್ಬರಿಗಿಂತಲೂ ಶಾಂತಕುಮಾರಿ ಚೆಲುವೆಯೆ? ಚೆಲುವಿಗೆ ಅಳತೆ ತೂಕ ಬಣ್ಣ ಎಲ್ಲಿ ಬಂತು? ಗುಲಾಬಿ ಚೆನ್ನೊ ಕಮಲ ಚೆನ್ನೊ ಎಂದು ಕೇಳಿದಂತೆ ಈ ಪ್ರಶ್ನೆ. "ನಿಜವಾಗಿ ಹೇಳು ಸುಂದರಾ, ನೀನು ಶಾಂತಕುಮಾರಿಯನ್ನು ಒಲಿದಿರುವೆಯಾ, ಮೋಹಿಸಿರುವೆಯಾ,.... ಕಡೆಗೆ .... ಕಾಮಿಸಿರುವೆಯಾ? ನಿಜವಾಗಿ ಹೇಳು. ನೀನು ಸತ್ಯಾಗ್ರಹಿ. ಸತ್ಯವನ್ನು ನುಡಿ. ಇದು ನಿನಗೆ ನಾನು ಹೇಳಿಕೊಳ್ಳುವ ಉತ್ತರ. ಸುಳ್ಳು ಬೇಡ. ನಿನ್ನ ತಲೆ ಹೋಗುವುದಿಲ್ಲ, ನಿಜ ಹೇಳು" ಎಂದು ತನ್ನನ್ನು ತಾನು ಪ್ರಶ್ನಿಸಿಕೊಂಡ. ರೂಪ, ಮನೋಹರ ರೂಪ, ಚಿತ್ತಾಪಹಾರಕ ಸೌಂದರ್ಯಸೇಚಿತ ರೂಪ, ಕಣ್ಣಿನ ಮೂಲಕ

ಅಂತರಂಗಕ್ಕೆ ಹರಿದು ಹೃದಯವನ್ನು ಕವರಿ ಅಲ್ಲಿ ಪ್ರಕೃತಿದತ್ತವಾಗಿ, ಅದೃಶ್ಯವಾಗಿ, ಅಮರವಾಗಿ, ಅನುಭವೈಕವೇದ್ಯವಾಗಿ ಅಂತರ್ಗತವಾಗಿ ನೆಲಸಿರುವ ಪ್ರೇಮವನ್ನು ಸೂರೆಗೊಳ್ಳುವ ರೂಪ, ಸೂರೆಗೊಂಡು ಹೃದಯವನ್ನು ತೊತ್ತೊಳದುಳಿಯುವ ರೂಪ—ಚೆಲುವಿರುವೆಡೆಯಲ್ಲೆಲ್ಲ ಹಂಚಿಕೆಯಾಗಿರುವ ಆ ರತಿರೂಪ — ಅದಕ್ಕೆ ಪ್ರವಣಗೊಳ್ಳದಿರುವ ಪುರುಷಹೃದಯವೂ ಈ ಲೋಕದಲ್ಲಿ ಉಂಟೆ? ಅದೂ ಯೌವನದ ಹೊಸಿಲಿನಲ್ಲಿರುವಾಗ? ಇಲ್ಲ, ಖಂಡಿತ ಇಲ್ಲ. ಶಾಂತಕುಮಾರಿಯ ಚೆಲುವಿಗೆ ಮನಸೋತುದು ದಿಟ. ಮನ ಸೋಲುವುದು ಒಲಿದಂತೆಯೂ ಅಲ್ಲ; ಕಾಮಿಸಿದಂತೆಯೂ ಅಲ್ಲ; ಈ ಮನಸೋಲು ಮೆಚ್ಚಿಗೆಯಲ್ಲೂ ಮೆಚ್ಚಿಗೆಯಲ್ಲೆ, ಮುಗಿಯಬಹುದು. ಚೆಲುವನ್ನು ಕಂಡಾಗ ಅದು ಚೆಲುವು ಎಂದು ಗುರುತಿಸುವುದು ದೋಷವಲ್ಲ. ತನ್ನ ಮನಸ್ಸು ಶಾಂತಕುಮಾರಿಯನ್ನು ಮೆಚ್ಚಿದೆ, ಆದರೆ ಹೃದಯ ಅವಳನ್ನು ಬಯಸದು. ಏಕೆಂದರೆ, ತಾನು ಹಿಂದೆ ಬಯಸಿದ ಒಂದು ವಸ್ತು ಕೇವಲ ಬಯಕೆಗೆ ಮಾತ್ರ ಗುರಿಯಾಗದೆ ಒಲವನ್ನು ಉಕ್ಕಿಸಿತು. ಆ ವಸ್ತು ಈ ವಸ್ತುವಿನಷ್ಟೆ ಚೆಲುವು. ಆದರೆ ಅದು ಕಳೆದುಕೊಂಡ ವಸ್ತು: ಕಮಲೆ. ತನ್ನ ಅಕ್ಕರೆಗೆ, ನಿಜವಾದ ಹೃದಯದ ಒಲವಿಗೆ, ಪಾತ್ರವಾಗಿರುವ ಇನ್ನೊಂದು ವಸ್ತು: ಚೆನ್ನಿ; ಮಾದನ ಮಗಳು. ಚೆಲುವಿನಲ್ಲಿ ಅವರಿಬ್ಬರು ಶಾಂತಕುಮಾರಿಗೆ ಯಾವ ವಿಧದಲ್ಲೂ ಕಡಮೆಯಲ್ಲ, ಕೀಳಲ್ಲ. ಇವಳ ವೇಷಭೂಷಣಗಳನ್ನು ಅವರಿಗೆ ತೊಡಿಸಿ, ನಾಗರಿಕ ವಾತಾವರಣಕ್ಕೆ ತಕ್ಕಂತೆ ತಿದ್ದಿ, ಅವರನ್ನು ಆ ಹಳ್ಳಿಯ ಮುಗುದೆಯರನ್ನು ಈ ಬೊಂಬಾಯಿನ ಬಣ್ಣದ ಬೊಂಬೆಯ ಪಕ್ಕದಲ್ಲಿ ನಿಲ್ಲಿಸಿದರೆ — ಛೆ, ಎಲ್ಲಿಂದೆಲ್ಲಿಗೆ! ಅವರ ಸಮಕ್ಕೆ ಇವಳು ಬಾರಳು. ಅವರಿಬ್ಬರೂ ತನ್ನವರೇ ಆಗಿದ್ದರು – ಒಬ್ಬಳು ಬಾಳ ಗೆಳತಿಯಾಗಬೇಕಾದವಳಾಗಿ, ಇನ್ನೊಬ್ಬಳು ತಂಗಿಯಂತಾಗಿ. ಅವಳು ತಪ್ಪಿಹೋದಳು; ಹೃದಯದಲ್ಲಿ ಅವಳಿದ್ದ ಸ್ಥಾನ ಇಂದು ತೆರವು. ಅವಳಿಂದು ಪರಪತ್ನಿ; ನೆನೆಯುವುದೂ ಪಾಪಕರ. ಆದೇ ಸ್ಥಾನವನ್ನು ಇಂದು ಚೆನ್ನಿಗೆ ಇತ್ತರೋ? ಚೆನ್ನಿ ಚಿನ್ನದಂಥ ಹುಡುಗಿ. ಅವಳಿಗೆ ವಿದ್ಯೆ ಸಂಸ್ಕೃತಿ ಇವನ್ನು ಊಡಿಸಿದರೆ — ಸುವರ್ಣಪುಷ್ಪಕ್ಕೆ ಪರಿಮಳ ಬಂದಂತಾಗುವುದಲ್ಲವೆ? ಅವಳನ್ನು ತಂಗಿಯಂತೆ ಕಾಣುತ್ತಿದ್ದುದು ದಿಟ: ಆದರೆ ತಂಗಿಯಲ್ಲ. ಮದುವೆ

ಯಾಗುವ ಮುನ್ನ ನೋಡಿದ ಹೆಣ್ಣುಗಳೆಲ್ಲರೂ ತಂಗಿಯರೇ! ಒಬ್ಬಳನ್ನು ಮಾತ್ರ ಹೆಂಡತಿ ಎಂದು ಆಯ್ದು ಕೈ ಹಿಡಿಯುವುದಿಲ್ಲವೆ? ಚೆನ್ನಿಯನ್ನು ತಾನು ಮದುವೆಯಾಗಲು ಬಾಧಕವೇನು? ಅದರಲ್ಲಿ ತಪ್ಪೇನು? ಕಮಲೆ ತಪ್ಪಿ ಆದ ಗಾಯಕ್ಕೆ ಚೆನ್ನಿಯೇ ಲೇಪ, ಅಮೃತಲೇಪ. ತಾನು ಬ್ರಾಹ್ಮಣ, ಅವಳು ಮಾದನ ಮಗಳು: ಹೊಲೆಯರ, ಅಲ್ಲ, ಮಾದಿಗರ ಹುಡುಗಿ. ತಂದೆ ತಾಯಿ ಒಪ್ಪುವುದಿಲ್ಲ. ಹೃದಯದ ಬೇಕು ಬೇಡಗಳಿಗೆ ತಂದೆ ತಾಯಿಯ ಒಪ್ಪಿಗೆಗೆ ಕಾದು ಕುಳಿತರಾಗುವುದಿಲ್ಲ. ಈಗ ತಾನು ತಂದೆ ತಾಯಿಯ ಅಪೇಕ್ಷೆಗೆ ವಿರುದ್ಧವಾಗಿ ಇತ್ತ ಬಂದಿಲ್ಲವೆ? ಇದು ಅವಿಧೇಯತೆ— ದೇಶಮಾತೆಗಾಗಿ, ತನ್ನ ಹೃದಯ ಪರಿಪೂರ್ಣತೆಗಾಗಿ, ಪ್ರೇಮಪ್ರಸಾದಕ್ಕಾಗಿ—ಅದಕ್ಕೂ ತಂದೆಯ, ತಾಯಿಯ ಮಾತನ್ನು ಮೀರ ಬೇಕು. ತನ್ನ ಹರಿಜನದ ಉದ್ಧಾರಕಾರ್ಯ ಚೆನ್ನಿಯನ್ನು ಮದುವೆಯಾಗಲು ಒಂದು ಸೋಗು ಎಂದು ಜನ ಆಡಿಕೊಳ್ಳಬಹುದು. ಕೆಲವರು—ತನ್ನ ಊರಿನವರು ಮಾತ್ರ —ಆಡಿಕೊಳ್ಳುವರು. ಚೆನ್ನಿಯನ್ನು ಮದುವೆಯಾಗುವುದರಿಂದ ವಿಶಾಲಲೋಕಕ್ಕೆ ಅಖಂಡ ಭಾರತಕ್ಕೆ ತಾನು ಮೇಲು ಪಂಕ್ತಿ ಹಾಕಬಹುದು. ಮಹಾತ್ಮ ಗಾಂಧಿಯವರು ಹರಿಜನ ಬಾಲಿಕೆಯನ್ನು ಸಾಕಿಕೊಂಡು ನುಡಿದಂತೆ ನಡೆದಿಲ್ಲವೆ? ತಾನೂ ಚೆನ್ನಿಯನ್ನು ಮದುವೆಯಾಗಿ, ರಾಚಪ್ಪನೊಡನೆ ಕುಳಿತು ಊಟಮಾಡಿದಂತೆ, ಅವನ ಗೆಳೆತನ ಬೆಳೆಸಿದಂತೆ, ಚೆನ್ನಿಯನ್ನು ಮದುವೆಯಾಗಿಯೇ ಏಕೆ ನುಡಿದಂತೆ ನಡೆಯಬಾರದು? ನುಡಿದು ತೋರುವುದಕ್ಕಿಂತ ಮಾಡಿ ತೋರುವುದು ಮೇಲಲ್ಲವೆ? "ನೀವು ಹೊಲೆಯರೊಂದಿಗೆ ಊಟ ಮಾಡಬೇಡಿ; ಅವರೊಡನೆ ವಿವಾಹ ಸಂಬಂಧವನ್ನೂ ಮಾಡಬೇಡಿ. ಮಾಡಿದರೆ ಮೇಲು, ಮಾಡದಿದ್ದರೆ ಅಪರಾಧವಿಲ್ಲ. ಗಾಂಧಿಯವರು ಹೇಳುವುದೂ ಇದನ್ನೆ. ಆದರೆ ಅವರನ್ನು ಈಗ ಹಾಕಿರುವಂತೆ ಸಮಾಜದಿಂದ ಹೊರಕ್ಕೆ ಹಾಕಬೇಡಿ. ನೀವು ಅನುಭೋಗಿಸುವ ಪ್ರಜೆಗಳ ಹಕ್ಕುಗಳೆಲ್ಲವನ್ನೂ ಅವರಿಗೂ ಕೊಡಿ" ಎಂದು ತಾನು ಹೇಳಿದರೆ ತನ್ನ ಮಾತಿಗೆ ಆಗ ಹೆಚ್ಚಿನ ಬೆಲೆ ಬರುವುದಲ್ಲವೆ?.... ಮದುವೆ ಹಾಗಿರಲಿ; ಈಗ ಚೆನ್ನಿ ಏನಾಗಿದ್ದಾಳೆಯೋ? ಡಾಕ್ಟರು ಅವಳನ್ನು ಎಲ್ಲಿಗಾದರೂ ಕರೆದೊಯ್ದು ಕ್ರಿಸ್ತಮತಕ್ಕೆ ಸೇರಿಸಿಬಿಟ್ಟಿದ್ದಾರೆಯೋ ಹೇಗೆ? ಊರಿಗೆ

ಹಿಂದಿರುಗಿ ಈಗಲಾದರೂ ಚೆನ್ನಿಯ ಯೋಗಕ್ಷೇಮವನ್ನು ತಾನು ಸಂಪೂರ್ಣವಾಗಿ ವಹಿಸಿಕೊಳ್ಳಬೇಕಲ್ಲವೆ? ಊರಿಗೆ ಹಿಂದಿರುಗಬೇಕು—ತಂದೆ ತಾಯಿಗಾಗಿ ಅಲ್ಲ, ಚೆನ್ನಿಗಾಗಿ.

ಅವನ ಚಿತ್ತ ಕಲಕಿದ್ದು ಈ ರೀತಿ. ಛೆ ಛೆ, ಎಂಥ ಸ್ವಾರ್ಥಿ ತಾನು. ಕೇವಲ ಚೆನ್ನಿಯ ಉದ್ಧಾರ ಎಂದು ಬಗೆದಿದ್ದರೆ ಅವರ ಮಾತು ಬೇರೆ; ಈಗ ಅವಳನ್ನು ಮದುವೆಯಾಗುವ ಆಲೋಚನೆಯೂ ಮೂಡಿ ಸ್ವಾರ್ಥ ಮೂಡಿದೆ. ಕುಲಕರ್ಣಿ ಹೊಗಳಿದಂತೆ ತಾನು ಇನ್ನೂ ಸ್ವಾರ್ಥತ್ಯಾಗಿಯಾಗಿಲ್ಲ. ಕಮಲೆಯನ್ನು ಮರೆತರೂ ಒಂದೆ, ನೆನೆದರೂ ಒಂದೇ, ಚೆನ್ನಿಯ ಹಣೆಯಬರಹ, ಅವಳೇನಾದರೂ ಆಗಲಿ. ತಾನು ಸದ್ಯಕ್ಕೆ ಚೆನ್ನಿಯನ್ನು ಮರೆಯಲೇಬೇಕು. "ಮರೆತುಬಿಡು ಸುಂದರ, ಮರೆತುಬಿಡು, ಮರೆತುಬಿಡು, ಮರೆತು,........ ಮರೆ....ಮ...." ಅವನಿಗೆ ನಿದ್ರೆ ಹತ್ತಿತು.

೫೯

ಬ್ರಿಟಿಷ್ ಸರ್ಕಾರ ದುರಾಲೋಚನೆ — ದೂರಾಲೋಚನೆಯನ್ನು ಮಾಡಿ ಮಹಾತ್ಮಾ ಗಾಂಧಿಯವರನ್ನೂ ಇತರ ವರ್ಕಿಂಗ್ ಕಮಿಟಿ ಸದಸ್ಯರನ್ನೂ ಸೆರೆಮನೆಯಿಂದ ಬಿಡುಗಡೆ ಮಾಡಲು ನಿರ್ಧರಿಸಿತು. ಅದರಂತೆ ೧೯೩೧ರ ಜಾನೆವಾರಿಯಲ್ಲಿ ಅವರ ಬಿಡುಗಡೆಯೂ ಆಯಿತು. ಫೆಬ್ರುವರಿಯಲ್ಲಿ ಪಂಡಿತ ಮೋತೀಲಾಲರು ಅಲಹಾಬಾದಿನಲ್ಲಿ ತೀರಿಕೊಂಡರು. ಇಂಗ್ಲೆಂಡಿನಿಂದ ಸ್ವಾತಂತ್ರ್ಯದಾನದ ಪ್ರಚಾರವಾಕ್ಯಗಳು ಮಾಗಿಯ ಕೋಗಿಲೆಯ ಕೂಗಿನಂತೆ ಅನಿರೀಕ್ಷಿತವಾಗಿ ಕೇಳಬರುತ್ತಿದ್ದರೂ ಇಲ್ಲಿ ಇಂಡಿಯಾ ಸರ್ಕಾರದ ದಬ್ಬಾಳಿಕೆಯ ನೀತಿ ಬದಲಾಗಿರಲಿಲ್ಲ. ಪ್ರಮುಖರ ಬಿಡುಗಡೆಯಾಗಿದ್ದರೂ, ಕಾಂಗ್ರೆಸ್ ಚಳವಳಿ ಮುಂದುವರಿಯುತ್ತಿರಬೇಕೆಂದೇ ಸೂಚನೆ ಕೊಟ್ಟಿತ್ತು. ಇತ್ತ ಸರ್ಕಾರಕ್ಕೂ ಕಾಂಗ್ರೆಸ್ಸಿಗೂ 'ರಾಜಿ' ಮಾಡಿಸುವ ಪ್ರಯತ್ನಗಳೂ ನಡೆಯುತ್ತಿದ್ದುವು. ಅತ್ತ ದಸ್ತಗಿರಿಗಳೂ ನಡೆಯುತ್ತಿದ್ದುವು. ಫೆಬ್ರವರಿ ತಿಂಗಳಿನಲ್ಲಿ ಕಾನಪುರ ನಗರವೊಂದರಲ್ಲಿಯೇ ೧೩೭ ದಸ್ತಗಿರಿಗಳಾದುವು.

ಗಾಂಧಿ-ಇರ್ವಿನ್ನರ ಮಾತುಕತೆಗಳು ಪ್ರಾರಂಭವಾಗಿ ಮುಂದುವರಿ

ಯುತ್ತ ಇದ್ದುವು. ಮುಂದೇನಾಗುವುದೋ ಎಂದು ದೇಶ ಆತಂಕದಿಂದ ನಿರೀಕ್ಷಿಸುತ್ತಿತ್ತು. ಕಡೆಗೆ, ಮಾರ್ಚಿ ೫ ರಲ್ಲಿ ಗಾಂಧಿ–ಇರ್ವಿನ್ನರ ಒಪ್ಪಂದ ವಾಯಿತು. ಕಾನೂನು-ಭಂಗ ಚಳವಳಿಯನ್ನೂ ಕರನಿರಾಕರಣ ಚಳವಳಿ ಯನ್ನೂ ಬ್ರಿಟಿಷ್ ಸರಕುಗಳ ಬಹಿಷ್ಕಾರವನ್ನೂ ಸದ್ಯದ ಮಟ್ಟಿಗೆ ನಿಲ್ಲಿಸಬೇಕೆಂದು ಒಪ್ಪಂದವಾಗಿದ್ದ ಮೇರೆಗೆ ಕಾಂಗ್ರೆಸ್ಸಿಗರಿಗೆ ಸೂಚನೆ ಹೋಯಿತು; ಆದರೆ ಹೆಂಡದ ಅಂಗಡಿಗಳ ಮುಂದೆ ಶಾಂತರೀತಿಯಿಂದ ಪಿಕೆಟಿಂಗ್ ನಡೆಸಬಹುದಾಗಿತ್ತು. ಇದರ ಪರಿಣಾಮವಾಗಿ ದೇಶದಲ್ಲಿ ಒಂದು ತಟಸ್ಥಸ್ಥಿತಿ ಮೂಡಿತು. ಭಾರತದ ಭವಿಷ್ಯನಿರ್ಣಯಕ್ಕಾಗಿ ಲಂಡನ್ನಿನಲ್ಲಿ ನೆರೆದ ರೌಂಡ್‌ಟೇಬಲ್ ಕಾನ್‌ಫರೆನ್ಸಿಗೆ ಗಾಂಧಿಯವರು ತೆರಳಿದರು.

ಇತ್ತ ಸುಂದರಮೂರ್ತಿ 'ಊರಿಗೆ ಹೋಗಿ ಬರಬಾರದೇಕೆ? ತನ್ನ ತಾಯಿ-ತಂದೆ ತನಗಾಗಿ ಅದೆಷ್ಟು ಪರಿತಪಿಸಿರುವರೋ? ಮುಖ ತೋರಿಸಿ, ಅವರನ್ನು ಸಮಾಧಾನಪಡಿಸಿ ಹಿಂದಿರುಗಬಹುದಲ್ಲವೆ!' ಎಂದು ಆಲೋಚಿಸಿ, ಕಚೇರಿಯಲ್ಲಿ ಹದಿನೈದು ದಿನಗಳ ರಜೆ ಪಡೆದು, ತನ್ನ ಊರಿಗೆ ಹಿಂದಿರುಗಿದ.

ಸುಂದರಮೂರ್ತಿ ಹಿಂದಿರುಗಿ ಬಂದದ್ದಕ್ಕಾಗಿ ಊರಿಗೆ ಊರೇ ಹಿಗ್ಗಿ ತೆಂದು ಹೇಳಬೇಕು. ಕೃಷ್ಣಪ್ಪನವರು ವಾಸ್ತವವಾಗಿ ಊರಿಗೆ ಬೇಕಾದ ಮನುಷ್ಯರು. ಎಲ್ಲರೊಡನೆಯೂ ಹೊಂದಿಕೊಂಡು ಎಲ್ಲರನ್ನೂ ಎಲ್ಲ ಬಗೆಯ ಜನರನ್ನೂ ಕೂಡಿಕೊಂಡು ಹೋಗತಕ್ಕವರು. ಅವರ ಮಗ ಸುಂದರಮೂರ್ತಿ. ಅವನೂ ಯಾರ ವೈರವನ್ನೂ ಕಟ್ಟಿಕೊಂಡವನಲ್ಲ. ಅವನು ಬಸ್ಸು ಇಳಿದು ಕೋಟೆ ಹಾಯ್ದು ಮನೆಗೆ ಬರುವ ದಾರಿಯಲ್ಲಿ ಅವ ನಿಗೆ ಅನೇಕರು ಸ್ವಾಗತ ಬಯಸಿದರು. ಸುಂದರಮೂರ್ತಿ ಗಾಂಧಿ ಚಳ ವಳಿಗೆ ಹೋಗಿದ್ದಾನೆಂದು ಊರಿನವರಿಗೆಲ್ಲ ಗೊತ್ತು. ಚಳವಳಿಯಲ್ಲಿ ಆಸ್ಥೆ ಮಾತ್ರ ಇಲ್ಲ. ಅದೂ ಅವರ ತಪ್ಪಲ್ಲ. ಸಂಸ್ಥಾನದ ಪ್ರಜೆಗಳಾಗಿದ್ದುದು ಮಾತ್ರ ಅವರ ತಪ್ಪು. ದಾರಿಯಲ್ಲೆ ಊರ ಗೆಳೆಯರು ಕೆಲವರು — ಮಿಡಲ್‌ಸ್ಕೂಲಿನ ವರೆಗೆ ಓದಿ, ಓದು ಬಿಟ್ಟದ್ದ ಸಹಪಾಠಿಗಳು— ಕುತೂಹಲ ದಿಂದ ಅವನನ್ನು ಅನೇಕ ಪ್ರಶ್ನೆಗಳನ್ನು ಕೇಳುತ್ತ ಮನೆಯವರೆಗೂ ಹಿಂಬಾ ಲಿಸಿದ್ದರು. ಕೆಲವು ಮಂದಿ ಹಿರಿಯರು ಮಾತ್ರ ಅವನನ್ನು ಕಂಡು, ಜಗ

ಲಿಯ ಮೇಲೆ ನಿಂತು, ಅವನ ಬಗ್ಗೆ ತಿರಸ್ಕಾರದ ಮಾತುಗಳನ್ನಾಡಿದ್ದು ಉಂಟು. ಆದರೂ, "ಈಗಲಾದರೂ ಹಿಂದಿರುಗಿ ಬಂದನಲ್ಲ. ಕೃಷ್ಣಪ್ಪನವರ ಪುಣ್ಯ" ಎಂದೇ ಹಿಗ್ಗಿದರು.

ಸುಂದರಮೂರ್ತಿ ಮನೆಯೊಳಕ್ಕೆ ಕಾಲಿಟ್ಟಾಗ ಮಧ್ಯಾಹ್ನದ ವೇಳೆ. ಎಲ್ಲರೂ ಊಟಕ್ಕೆ ಕುಳಿತಿದ್ದರು. ತಾನು ಬರುವ ವಿಷಯವನ್ನು ಅವನು ಬರೆದು ತಿಳಿಸದೆ ಇದ್ದುದರಿಂದ — ಎಲ್ಲರಿಗೂ ಆಶ್ಚರ್ಯ, ಸಂತೋಷ. ಬಡಿಸುತ್ತ ಇದ್ದ ನರಸಮ್ಮನವರು ಮಗನನ್ನು ಕಂಡ ಕೂಡಲೆ, "ಬಂದೆಯಾ ಅಪ್ಪ! ಬಂದೆಯಾ ಮಗು!" ಎಂದು ಸೌಟನ್ನು ಕೆಳಗಿಟ್ಟು ಅವನನ್ನು ಬಾಚಿ ತಬ್ಬಿಕೊಂಡರು. "ಮೊದಲು ಸ್ನಾನಮಾಡಿ ಊಟಕ್ಕೇಳಪ್ಪ. ಮಾತುಕತೆ ಆಮೇಲಾಗಲಿ" ಎಂದರು ಕೃಷ್ಣಪ್ಪನವರು. ಮಗ ಹಿಂದಿರುಗಿದನೆಂಬ ಹಿಗ್ಗಿನಿಂದ ಅವರ ಕಣ್ಣು ಹಸಿಗೂಡಿದ್ದನ್ನು ಯಾರೂ ಗಮನಿಸಲಿಲ್ಲ. ನರಸಮ್ಮನವರ ಮುಖ ಕಾಣುವಂತೆಯೇ ಒದ್ದೆಯಾಗಿತ್ತು.

ಸುಂದರಮೂರ್ತಿಯ ಊಟ ಮುಗಿಯಿತು. ಹಜಾರದಲ್ಲಿ ಒಂದು ಚಿಕ್ಕ ಸಭೆಯೂ ಸೇರಿಯಿತು. ಸಂಜುಂಡಶಾಸ್ತ್ರಿಗಳ ಮನೆಯ ಪಾತಿ, ಸಾತಿ; ಮೈಲಾರಯ್ಯನವರ ಮಕ್ಕಳು ರಾಮು ಸೋಮು; ನೆರೆಮನೆಯ ಹುಡುಗರು ಇನ್ನೂ ಕೆಲವರು. ಸುಂದರಮೂರ್ತಿ ಬೊಂಬಾಯಿಂದ ತಂದಿದ್ದ ಸಿಹಿ ತಿಂಡಿಯನ್ನು ಮಕ್ಕಳಿಗೆಲ್ಲ ಹಂಚಿದ. ಅವರೆಲ್ಲ ಕುಣಿಕುಣಿಯುತ್ತ ಎದ್ದು ಹೋದರು. ಹಜಾರದಲ್ಲಿ ತಾಯಿ-ತಂದೆ-ಮಗ, ತುಂಗಮ್ಮ ಇಷ್ಟು ಮಂದಿ ಮಾತ್ರ ಉಳಿದರು.

ಕೃಷ್ಣಪ್ಪನವರ ಭಾವನೆಯಲ್ಲಿ ಸುಂದರ ದಾರಿ ತಪ್ಪಿದನೆಂದೇ ತೀರ್ಮಾನ. ಅವನ ಕುರಿತು ಒಳಗೆ ಕೋಪವೂ ಕೆರಳದೆ ಇರಲಿಲ್ಲ. ಆದರೆ ಅವರದ್ದು ಯಾವಾಗಲೂ ಉಕ್ಕಿದ ಕೋಪವನ್ನು ನುಂಗಿಕೊಳ್ಳುವುದೇ ಸ್ವಭಾವ. ಕೋಪವನ್ನು ನುಂಗಿಕೊಂಡು ಮೆಲುದನಿಯಲ್ಲಿ ಆಕ್ಷೇಪಿಸಿದರು:

"ನಮಗೆ ತಿಳಿಸದೆ ಹೀಗೆ ಹೋಗಬಹುದೆ ಸುಂದರ? ನಾನು ಸತ್ತುಹೋದೆನೆಂದು ತಿಳಿದೆಯಾ?" ಎಂಬ ಪ್ರಶ್ನೆ ಗಂಟಲಿನಿಂದ ಹೊರಬರದಾಯಿತು.

"ಆಮೇಲೆ ಒಂದು ಕಾಗದ ಬರೆದಿದ್ದನಲ್ಲ. ಅದು ಹೋಗಲಪ್ಪ.

ಇನ್ನು ನೀನು ಎಲ್ಲಿಗೂ ಹೋಗಕೂಡದು, ತಿಳಿಯಿತೆ? ನೀನು ಬಿ. ಎ. ಪ್ಯಾಸುಮಾಡಿ ನಮಗೆ ಚಿನ್ನದ ಕಿರೀಟ ಇಡದೆ ಹೋದರೆ ಕೆಟ್ಟಿತು. ನನಗೆ ಖಾಯಿಲೆ ದಿನದಿನಕ್ಕೆ ಹೆಚ್ಚಾಗುತ್ತ ಇದೆ. ತೊಡೆಯಲ್ಲಿ ಶಕ್ತಿಯೇ ಇಲ್ಲ, ಬಿದ್ದುಹೋಗಿದೆ. ಇಂದೋ ನಾಳೆಯೋ ನನ್ನ ಪ್ರಯಾಣ ಕಾದಿದೆಯಪ್ಪ. ನೀನು ಮದುವೆ ಒಂದು ಮಾಡಿಕೊಂಡುಬಿಟ್ಟರೆ, ಬೇಗ ಸೊಸೆ ಮನೆಗೆ ಬಂದಹಾಗಾಗುತ್ತೆ. ರಾಮುಸ್ವಾಮಯ್ಯ ಹೇಳಿಕಳಿಸಿ ಬೆಂಗಳೂರಿಂದ ಇಬ್ಬರು ಬಂದಿದ್ದರಪ್ಪ. ಜಾತಕವನ್ನು ನೋಡಿಸಿ ಆಗಿದೆ...." ಸುಂದರ ನಡುವೆ ಬಾಯಿಹಾಕಿ ತಾಯಿಯ ಮಾತನ್ನು ನಿಲ್ಲಿಸಿದ.

"ನನ್ನ ಮದುವೆ ಹಾಗಿರಲಿ, ತುಂಗೆಯ ಮದುವೆ ಮೊದಲು ಆಗಲಿ. ಯಾವುದಾದರೂ ವರ ಗೊತ್ತಾಗಿದೆಯೋ?"

"ಹೌದಪ್ಪ. ಅವಳ ಮದುವೆಯೂ ಆದರೆ ಈ ವರ್ಷವೇ ಆಗಬೇಕು. ಇನ್ನೂ ತಡೆದರೆ ಆಗುವುದಿಲ್ಲ. ಬೆಳೆದ ಹುಡುಗಿ ಅಂತ ಈಗಾಗಲೆ ಊರಿನಲ್ಲಿ ಆಡಿಕೆಯಾಗಿದೆ. ಅವಳ ಮದುವೆ ತಾನೆ ನೀನಿಲ್ಲದೆ ಹೇಗಪ್ಪ ಆಗಬೇಕು?"

"ಅದಿರಲಮ್ಮಾ, ಗಂಡು ಗೊತ್ತಾಗಿದೆಯೇನಮ್ಮಾ?"

"ರಾಮುಸ್ವಾಮಯ್ಯ ಬಂದು ಗಂಡು ನೋಡಿದ್ದಾನೆ. ಪಾಪ, ಬಡವರು ಮುಂದಕ್ಕೆ ಓದಬೇಕಂತೆ. ಸಹಾಯವಾಗಬೇಕಂತೆ...."

"ವರದಕ್ಷಿಣೆ ಅನ್ನು."

"ಹೌದಪ್ಪ. ವಿದ್ಯಾವಂತನಿಗೆ ಕೊಡಬೇಕಾದರೆ ದಕ್ಷಿಣೆ ಕೊಡಲೇ ಬೇಕು."

"ಎಷ್ಟಂತೆ?"

"ಸಾವಿರ ರೂಪಾಯಿ."

"ನಾವೇನು ದೊಡ್ಡ ಮನುಷ್ಯರೆ?"

"ಗಂಡಿನವರು ಅದನ್ನೆಲ್ಲಾ ಕೇಳುತಾರೆಯೆ? ಗಂಡು ಬೇಕಾದರೆ ಎಷ್ಟು ಕೇಳಿದರೂ ಕೊಡಬೇಕು."— ಎಂದರು ಕೃಷ್ಣಪ್ಪನವರು.

"ದುಡ್ಡಿನ ಏರ್ಪಾಡು ಹೇಗೆ?"—ಸುಂದರ ಪ್ರಶ್ನಿಸಿದ.

"ಅದಕ್ಕೇ ಹಿರಿಯ ಮಗ ನೀನು ನಮ್ಮ ಕಣ್ಣೆದುರಿಗೆ ಇರಬೇಕು.

ಎನ್ನುವುದು. ಅವರಿಗೂ ವಯಸ್ಸಾಗುತ್ತ ಬಂತು. ಇನ್ನು ಸಂಸಾರದ ಭಾರ ನೀನು ವಹಿಸಿಕೊಳ್ಳಬೇಕಪ್ಪ."

" ದುಡ್ಡಿನ ಆಲೋಚನೆ ಏನು ಮಾಡಿದ್ದೀಯಪ್ಪ ? "

" ಇನ್ನೇನು ಯೋಚನೆ. ಒಂದು ಹೊಲ ಮಾರುವುದು."

" ಆಗಲಿ ಅಪ್ಪ. ನಾಳೆ ನಾಡಿದ್ದರಲ್ಲೆ ಅದಕ್ಕೆ ಏರ್ಪಾಡು ಮಾಡಿ, ರಾಮಸ್ವಾಮಯ್ಯನಿಗೆ ಕಾಗದ ಹಾಕಿಬಿಡಿ. ನೋಡಿದ ಗಂಡನ್ನು ಗೊತ್ತು ಮಾಡಿಬಿಡಲಿ."

ಮಗನ ಮುಖವನ್ನು ಕಂಡದ್ದಷ್ಟೆ ಸಾಕಾಗಿತ್ತು ಗಂಡಹೆಂಡಿರಿಗೆ. ಸುಂದರಮೂರ್ತಿ ಚಳವಳಿಯಲ್ಲಿ ಮಾಡಿದ್ದೇನು, ಈಗ ಮಾಡುತ್ತಿರುವುದೇನು ಎಂಬ ಬಗ್ಗೆ ವಿವರಗಳನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲ ಅವರನ್ನು ಕಾಡಲಿಲ್ಲ. ಆ ವಿಷಯದಲ್ಲಿ ಅವರಿಗೆ ಆಸಕ್ತಿಯೇ ಇರಲಿಲ್ಲ.

"ಚೆನ್ನಿ ಡಾಕ್ಟರ ಮನೆಯಲ್ಲಿಯೇ ಇದ್ದಾಳೆಯೇ ?" ಸುಂದರ ತಂದೆಯ ಕಡೆ ತಿರುಗಿ ಕೇಳಿದ.

" ಇಲ್ಲ. ಈ ಊರಿಗೆ ಒಬ್ಬ ಬೈರಾಗಿ ಬಂದಿದಾನೆ; ಹೊಳೆಯ ದಡದಲ್ಲಿ ವಾಸಮಾಡಿಕೊಂಡಿದ್ದಾನೆ. ನನ್ನನ್ನು ಕೇಳಿ, ಡಾಕ್ಟರ ಮನೆಯಿಂದ ಚೆನ್ನಿಯನ್ನು ಕರೆದುಕೊಂಡು ಹೋಗಿ ಅವಳನ್ನು ಸಾಕಿಕೊಂಡಿದ್ದಾನೆ. "

" ಯಾರು, ಬೈರಾಗಿಯೆ ? "

" ನೀನು ಊರು ಬಿಡುವುದಕ್ಕೆ ಮುಂಚೆ ಒಂದು ಸಲ ಇಲ್ಲಿಗೆ ಬಂದಿದ್ದರಂತೆ. ನಿನ್ನನ್ನು ನೋಡಿದ್ದಾರಂತೆ. ಆವೊತ್ತು ನನ್ನ ಕೂಡ ಮಾತಾಡಿದರು. ಈಗ ಯಾರ ಕೂಡಲೂ ಮಾತಾಡುವುದಿಲ್ಲ. ಮೌನ ವ್ರತವಂತೆ. ಊರಿನವರೆಲ್ಲ 'ಮೂಗ ಸನ್ಯಾಸಿ, ಮಾದಿಗ ಬೈರಾಗಿ' ಅಂತ ಕರೀತಾರೆ. "

ಸುಂದರನಿಗೆ ನಗು ಬಂದಿತು.

ಕೃಷ್ಣಪ್ಪನವರು ಹೆಗಲ ಮೇಲೆ ಚೌಕ ಹಾಕಿಕೊಂಡು, "ಸ್ವಲ್ಪ ಕಾಳೇಗೌಡನನ್ನ ನೋಡಿಕೊಂಡು ಬರುತ್ತೇನೆ. ಸಂಜೆ ಮನೆಯಲ್ಲಿಯೇ ಇರುತ್ತೀ ತಾನೆ?" ಎಂದು ಹೇಳಿ ಹೊರ ಹೊರಡಲು ಸಿದ್ಧರಾದರು. "ಏನಾದರೂ ಕೆಲಸ ಇದೆಯೇನು ?" ಎಂದು ಕೇಳಿದ ಸುಂದರ. "ಹೊಲದ

ವಿಚಾರ ಫೈಸಲು ಮಾಡಬೇಕಲ್ಲ" ಎಂದು ಹೇಳಿ ಕೃಷ್ಣಪ್ಪನವರು ಹೊರಟರು.

ಸುಂದರ ಅತ್ಯಂತ ತ್ವರೆಯಿಂದ ಹೊಳೆಯ ಕಡೆಗೆ ಹೊರಟ. ಬೈರಾಗಿ ಎಲ್ಲಿರುವರೆಂಬುದು ಅವನಿಗೆ ಗೊತ್ತು. ಮುರುಕು ಮಂಟಪದ ಬಳಿಗೆ ಹೋದ. ಎಲ್ಲವೂ ಮೊದಲಿದ್ದಂತೆಯೇ ಇದೆ; ಮುರುಕು ಮಂಟಪ ಮುರುಕು ಮಂಟಪವಾಗಿಯೇ ಇದೆ. ಆದರೆ ಅದರ ಆವರಣ ಹೂ ಗಿಡಗಳಿಂದ ನಗುತ್ತ ನಲಿಯುತ್ತ ಇದೆ; ಪಕ್ಕದಲ್ಲಿ ಬಾಳೆಯ ಗಿಡ ಮೂರು ನಾಲ್ಕು ಏಳುತ್ತ ಇವೆ; ಮಂಟಪದ ಮೇಲ್ಭಾಗವನ್ನು ಚಪ್ಪರದವರೆ ಕುಂಬಳ ಬಳ್ಳಿಗಳು ಹಸುರಿನಿಂದ ಮುಚ್ಚಿವೆ. ಮಂಟಪದ ಮುಂದೆ ಒಂದು ಚಪ್ಪರ. ಅದಕ್ಕೆ ಒಂದು ಜಾಜಿಯ ಬಳ್ಳಿ ಮೆಲ್ಲನೆ ಹಬ್ಬುತ್ತ ಇದೆ.

ಚಪ್ಪರದಡಿಯಲ್ಲಿ ಹೋಗಿ ನಿಂತ ಸುಂದರ. ಒಂದು ಋಷ್ಯಾಶ್ರಮಕ್ಕೆ ಬಂದು ನಿಂತಂತೆ ಭಾಸವಾಯಿತವನಿಗೆ.

"ಸುಂದರಾ, ಯಾವಾಗ ಬಂದೆ. ಬಾ?" ಎಂದು ಮೂಗ ಬೈರಾಗಿ ಸಲಿಗೆಯ ದನಿಯಿಂದ ಕರೆದ. ಬೈರಾಗಿ ಯಾವುದೋ ಪುಸ್ತಕಾವಲೋಕನದಲ್ಲಿ ಮಗ್ನರಾಗಿದ್ದರು. ಚೆನ್ನಿಯೂ ಒಂದು ಪುಸ್ತಕ ಓದುತ್ತ ಕುಳಿತಿದ್ದಳು.

ಚೆನ್ನಿ ತಟ್ಟನೆ ಎದ್ದು ನಿಂತಳು. ಸುಂದರ ಅವಳನ್ನು ನೋಡಿ ದಿಗ್ಭ್ರಮೆಗೊಂಡ. ಒಂದು ವರ್ಷದಲ್ಲಿ ಎಂತಹ ಮಾರ್ಪಾಟು! ತನ್ನ ಕಣ್ಣನ್ನು ತಾನೇ ನಂಬಲಾರದೆ ಹೋದ. ಆ ಶಾಂತಕುಮಾರಿಗಿಂತಲೂ ಈ ಸರಳಕುಮಾರಿಯೇ ಹೆಚ್ಚು ಸುಂದರಿ ಎಂದು ತೋರಿತವನಿಗೆ.

"ಚೆನ್ನಿಯಲ್ಲವೇ ನೀನು?" ಎಂದು ಕೇಳಿದ ಸುಂದರ. ಚೆನ್ನಿಯೆಂಬುದು ಅವನಿಗೆ ಗೊತ್ತು. ಆದರೂ ಕೇಳಿದ — ತನ್ನ ಅಚ್ಚರಿಗೆ ಮಾತುಕೊಟ್ಟು.

"ಅಲ್ಲ" ಎಂದ ಬೈರಾಗಿ.

"ಅಲ್ಲ?" — ಸುಂದರನ ಆಶ್ಚರ್ಯದ ಪ್ರಶ್ನೆ.

"ಅವಳಿಗೀಗ ಪುನರ್ಜನ್ಮವಾಗಿದೆ. ಇಂದು ಅವಳ ಹೆಸರು .... ಏನಿರಬಹುದು ಹೇಳು?"

ಸುಂದರ ಸ್ವಲ್ಪ ಯೋಚಿಸಿದ.

"ಕಾವೇರಿ ?"

"ಅಲ್ಲ"

"ಭಾಗೀರಥಿ .... ?"

"ಉಹ್ಞು."

ಸುಂದರಮೂರ್ತಿ ಯೋಚಿಸುತ್ತ ಸುಮ್ಮನಾದ.

"ಸಾಧನಾ" — ಬೈರಾಗಿ ಹಿಗ್ಗಿನಿಂದ ಹೇಳಿದ.

"ಸಧನಾ ?"

"ಹೌದು. ಸಾಧನಾ. ನೀನು ಅಂದು ನನಗೆ ಹೇಳಿದೆಯಲ್ಲ, ಹೊಲಿ ಮಾದಿಗರಿಗೆಲ್ಲ ಪುನರ್ಜನ್ಮ ಕೊಡಬೇಕೆಂಬ ನಿನ್ನ ಆದರ್ಶಸಾಧನೆಯ ಸಂಕೇತ ಇವಳು : ಸಾಧನಾ."

"ಹೌದು, ಹೌದು. ನಾನು ಸಾಧಿಸಲಾಗದ್ದನ್ನು ಸಾಧಿಸ ಹೊರಟಿರುವ ನಿಮ್ಮ ಸಾಧನೆಯು, ಸಿದ್ಧಿಯು, ಸಂಕೇತ: ಸಾಧನಾ."

"ಸಾಧಿಸುತ್ತೀಯೆ, ಸಾಧಿಸುತ್ತೀಯೆ. ಆತುರಪಡಬೇಡ. ಈಗ ನೀನು ಹಿಡಿದಿರುವುದು ಸಾಧನೆಯ ಪಥವನ್ನೇ ಅಲ್ಲವೆ ? .... ಇರಲಿ. ನಿಂತೇ ಇದ್ದೀಯಲ್ಲ. ಬಾ, ಕುಳಿತುಕೋ."

ಸುಂದರ ಹೋಗಿ ಕುಳಿತ. ಅರ್ಥವಾಗದ ಮಾತನ್ನು ಆಲಿಸುತ್ತ ಕುಳಿತಿದ್ದ ಚೆನ್ನಿ ಮತ್ತೆ ತಲೆಬಗ್ಗಿಸಿ ಕುಳಿತಳು.

"ಸಾಧನಾ" ಎಂದ ಸುಂದರಮೂರ್ತಿ. ಮತ್ತೆ "ಸಾಧನಾ" ಎಂದು ಕರೆದ. ಚೆನ್ನಿ ತಲೆ ಎತ್ತಲಿಲ್ಲ.

"ಅವಳು ಹಾಗೆಯೇ. ಸಾಧನಾ ಎಂದರೆ ಮಾತೇ ಆಡುವುದಿಲ್ಲ. ಚೆನ್ನಿ ಎಂದೇ ಕರೆಯಬೇಕು. ನಾನು ಚೆನ್ನಮ್ಮಾ ಎಂದು ಕರೆಯುತ್ತೇನೆ."

"ಇನ್ನುಮೇಲೆ ನಿನ್ನ ಹೆಸರು ಸಾಧನಾ, ತಿಳಿಯಿತೋ ಚೆನ್ನಿ." ಎಂದ ಸುಂದರ. ಚೆನ್ನಿ ತಲೆ ಅಲ್ಲಾಡಿಸಿದಳು.

"ಚೆನ್ನಿ ಎಂದು ಕರೆದರೆ ಮಾತಾಡಕೂಡದು, ತಿಳಿಯಿತೋ ಸಾಧನಾ ?" ಆಗಲಿ ಎನ್ನುವಂತೆ ತಲೆಯಲ್ಲಾಡಿಸಿದಳು ಚೆನ್ನಿ— ಅಲ್ಲ, ಸಾಧನಾ.

"ಇದೇನು, ಮಾತೇ ಆಡುವುದಿಲ್ಲ ?

" ಯಾರೊಂದಿಗೂ ಮಾತಾಡಕೂಡದೆಂದು ನನ್ನ ಆಜ್ಞೆ. ಅವಳಿಗೂ ಈಗ ಮೌನವ್ರತ."

" ಯಾಕೆ ? "

" ಇಲ್ಲದಿದ್ದರೆ ಮೊದಲಿನಂತೆಯೇ ಮಾತು ಹೊರಡುತ್ತದೆ. ಈಗ ಎರಡನೆಯ ಪುಸ್ತಕ ಓದಿಸುತ್ತ ಇದೀನಿ. ನಾಲಗೆಗೆ ಹಳೆಯ ಮಾತಿನ ರೀತಿ ಬರದಂತೆ ವಿಶ್ರಾಂತಿ ಕೊಟ್ಟರೆ ಹೊಸ ರೀತಿ ತಾನಾಗಿ ಹತ್ತುತ್ತದೆ. ನನ್ನ ಸಾಧನೆಯ ಕ್ರಮದ ಸಿದ್ಧಿಯನ್ನು ಪರೀಕ್ಷಿಸಿ ನೋಡುವ ಕಾಲ ಇನ್ನೂ ಬಂದಿಲ್ಲ. "

" ಅವಳಿಗೆ ಬೇಸರವಾಗುವುದಿಲ್ಲವೆ ? "

" ನನ್ನ ಮಾತುಗಳನ್ನು ಕೇಳುತ್ತಾ ಇರುತ್ತಾಳೆ. ನಾನು ಓದುವುದನ್ನು ಕೇಳುತ್ತ ಇರುತ್ತಾಳೆ. ಬೇಸರವಾಗದ ರೀತಿ ಅವಳಿಗೆ ಬೇಕಾದಷ್ಟು ಕೆಲಸ ಒದಗಿಸಿದ್ದೇನೆ. ಗುಡಿಸುವುದು, ಅಡಿಗೆ ಮಾಡುವುದು, ಬಟ್ಟೆ ಒಗೆಯುವುದು, ಗಿಡಗಳಿಗೆ ನೀರು ಹಾಕುವುದು, ಓದುವುದು, ಬರೆಯುವುದು – ಸಾಲದೆ ? "

" ಓಹೋ, ಇದೊಂದು ಸಂಕ್ಷಿಪ್ತ ಸಾಬರಮತಿಯೇ ಆಯಿತು ! "

"ಇಲ್ಲ. ಆಗಿಲ್ಲ, ನೀನು ಬಂದು ಇಲ್ಲಿ ನೆಲಸಿದರೆ ಆದೀತು. ' ಸಾಧನೆ ' ಒಬ್ಬಳಿದ್ದರೆ ಸಾಬರಮತಿ ಆದೀತೆ? ನಿನ್ನ ಸಾಧನೆ ಇಲ್ಲಿ ಸಿದ್ಧಿಸಿದಂದು ಸಾಬರಮತಿ ಆದೀತು. "

" ಅದಕ್ಕೆ ಪೀಠಿಕೆ ಹಾಕಿ ಹೋಗುತ್ತೇನೆ... "

" ಹೋಗುವುದು, ಮತ್ತೆ ಹೋಗುತ್ತೀಯ ? "

" ಹೌದು. ಹೋಗಬೇಕು. ಸ್ವಾತಂತ್ರ್ಯದ ಕರೆ ಮತ್ತೆ ಬಂದಾಗ ಅದಕ್ಕೆ ನಾನು ಸಿದ್ಧನಾಗಿರಬೇಕು " ಎಂದು ಸುಂದರ ತುಸು ತಡೆದು, ತಾನು ಇದುವರೆಗೆ ಮಾಡಿದ್ದ ಅಲ್ಪ ಕಾರ್ಯವನ್ನು ಇನ್ನೂ ಅಲ್ಪಮಾಡಿ ಸಂಗ್ರಹ ವಾಗಿ ಬೈರಾಗಿಗೆ ಹೇಳಿದ; ದೇಶದ ಸ್ಥಿತಿಯನ್ನು ವಿವರಿಸಿದ; ತನ್ನ ತಂದೆ ತಾಯ ಅಪೇಕ್ಷೆಯನ್ನು ತಿಳಿಸಿದ; ಮನೆಯ ಸ್ಥಿತಿಗತಿಯನ್ನು ವಿವರಿಸಿದ; ತನ್ನ ನಿರ್ಧಾರವನ್ನೂ ಸೂಚಿಸಿದ; ಬೈರಾಗಿಯ ಸಲಹೆಯನ್ನು ಬೇಡಿದ.

" ಸುಂದರ, ನಿನ್ನ ಆಲೋಚನೆಯೆಲ್ಲ ಸರಿಯಾಗಿದೆ. ನೀನು ಮದುವೆ ಯಾಗಬೇಕೆಂದಿದ್ದ ಹೆಣ್ಣು ತಪ್ಪಿ ಹೋದ ಮೇಲೆ, ನಿನ್ನ ಸಾಧನೆ ಮುಗಿಯುವ

ವರೆಗೂ ಬ್ರಹ್ಮಚಾರಿಯಾಗಿರಬೇಕೆಂದು ನೀನು ನಿರ್ಧರಿಸಿರುವುದನ್ನು ನ ಒಪ್ಪಿದೆ. ಈಗ ನಿನ್ನ ತಂಗಿಯ ಮದುವೆಯಾಗಬೇಕು. ಹೊಲದ ವಿಕ್ರ ಪತ್ರಕ್ಕೆ ನೀನು ರುಜು ಹಾಕಿ ಹೋಗು. ಸಾಧ್ಯವಾದರೆ ಮದುವೆಗೆ ಅಗತ್ಯ ಬಾ. ಸಾಧ್ಯವಾಗಲಿಲ್ಲ, ಬೇಡ. ಅದಕ್ಕಾಗಿ ಕೊರಗಬೇಡ. ನಿನ್ನ ಮದುವ ಮಾತು ಬಂದರೆ — ಮುಂದೆ ಆಗಲಿ ಎನ್ನು. ಒಲ್ಲೆ ಎಂದು ತಂದೆ-ತಾಯಿ ಮನಸ್ಸು ನೋಯಿಸಬೇಡ. ತಂದೆ-ತಾಯಿಯಲ್ಲಿ ಭಕ್ತಿ ಗೌರವಗಳ ಮಾತ್ರ ಬಿಡಬೇಡ. ಅದು ಏನಿದ್ದರೂ ಹೃದಯದಲ್ಲಿ. ಈಗ ದೇಶಮಾತೆ ಸೇವೆ ದೊಡ್ಡದು. ಅಗತ್ಯವಾಗಿ ಹೊರಡು. ಸುಖವಾಗಿ ಹಿಂದಿರುಗಿ ದೇಶಕ್ಕೂ ಒಳ್ಳೆಯದಾಗಲಿ. ನಿನಗೂ ಒಳ್ಳೆಯದಾಗಲಿ."

ಇಂಥ ಮಾತನ್ನು ತನಗೆ ಹೇಳುವವರು ಯಾರು? ಈ ಬೈ ಬರಿಯ ವೇಷದ, ಹೊಟ್ಟೆಯ ಪಾಡಿಗಾಗಿ ಅಲೆಯುವ, ಬೈರಾಗಿಯ ಕಾಣಲಿಲ್ಲ. ದೇಶದ ಸ್ಥಿತಿಯ ಅರಿವನ್ನೂ ಲೋಕಾನುಭವವನ್ನೂ ಅಪೂರ್ವ ಬೈರಾಗಿಯಾಗಿ ಅನುಭವಕ್ಕೆ ಬಂದಿತು ಸುಂದರನಿಗೆ. ಆ ವಿಚಾರ, ಆತನ ಸಾಧನೆ ಸಿದ್ಧಿ, ಇವುಗಳನ್ನು ಕೇಳಿ ತಿಳಿದುಕೊಳ್ಳಬೇಕೆ ಕುತೂಹಲವಾಯಿತು. ಒಂದು ವೇಳೆ ಚೆನ್ನಿಯನ್ನು – ಅಲ್ಲ, 'ಸಾಧ ಯನ್ನು – ಮದುವೆಯಾಗಲಾಗದಿದ್ದರೆ ತಾನು ಆಜೀವ ಬ್ರಹ್ಮಚಾರಿಯ ಉಳಿಯಬೇಕಾಗಬಹುದು; ಇನ್ನೇನೂ ಸಾಧಿಸಲಾಗದಿದ್ದರೆ ಆತ್ಮಸಾಧನೆ ದರೂ ಈ ಸಂನ್ಯಾಸಿಯ ಬದುಕಿನಿಂದ ತನಗೆ ಆದರ್ಶ ದೊರೆಯಬಹು ಎಂದು ಸುಂದರ ಬಗೆದ.

"ಹಾಗಾದರೆ, ಇನ್ನು ಬರುತ್ತೇನೆ. ಇರುವಷ್ಟು ದಿನ ನಿತ್ಯ ಬ ಹೋಗುತ್ತ ಇರುತ್ತೇನೆ." ಎಂದು ಹೇಳಿ ಸುಂದರ ಹೊರಟ.

ಮಾರನೆಯ ಬೆಳಿಗ್ಗೆ ಎದ್ದ ಕೂಡಲೆ ಮನೆಯಲ್ಲಿ ತಾನು ಎಲ್ಲಿಯೆ ಮೂಲೆಯಲ್ಲಿ ಬಿಸುಟಿದ್ದ ಚರಕವನ್ನೂ ಹುಡುಕಿ ತೆಗೆದ. ಅದನ್ನು ತೆ ಕೊಂಡು ಹೋಗಿ ಬೈರಾಗಿಯ ಮುಂದೆ ಇರಿಸಿ, "ಇದೇ, ನಾನು ಈ ಆಶ್ರ ವನ್ನು ಸಾಬರಮತಿ ಮಾಡಲು ಹಾಕುವ ಪೀಠಿಕೆ" ಎಂದ. "ಒಳ್ಳೆ ಕೆಲಸ" ಎಂದರು ಬೈರಾಗಿ. ಅಂದೇ 'ಸಾಧನೆ'ಗೆ ನೂಲುವುದನ್ನು ಕ ಕೊಡಲು ಪ್ರಾರಂಭಿಸಿಯೇಬಿಟ್ಟ.

ಹೊಲದ ವಿಕ್ರಯಕಾರ್ಯ ಮುಗಿಯಿತು. ಸುಂದರ ಪತ್ರಕ್ಕೆ ರುಜು ಹಾಕಿದ. ಮನೆಯಲ್ಲಿ ಪಿತ್ರಾರ್ಜಿತದ ಸೊತ್ತನ್ನು ಮಾರಿಂತಿದ್ದುದು ಇದೇ ಮೊದಲ ಸಲ ಹೊಲ ಕೈ ತಪ್ಪಿ ಹೋದಾಗ, ಎಲ್ಲರಿಗಿಂತ ಹೆಚ್ಚಾಗಿ ಕಾಳೇಗೌಡ ಕಣ್ಣೀರುಗರೆದ. "ಕಣ್ಣೀರಿನಲ್ಲಿ ಮಗಳ ಧಾರೆಯೆರೆಯಬೇಕಾಗಿ ಬಂದಿತೆ? ನಮ್ಮ ದೇಶದ ವಿದ್ಯಾವಂತ ತರುಣರು ಎನ್ನಿಸಿಕೊಂಡವರಿಗೆ ಬುದ್ಧಿ ಬರುವುದು ಎಂದು? ಈ ವರದಕ್ಷಿಣೆಯ ಪಿಡುಗು ತಪ್ಪುವುದೆಂದು?" ಎಂದು ಸುಂದರ ಮರುಗಿದ.

ವರನನ್ನು ಗೊತ್ತುಮಾಡಬೇಕೆಂದೂ, ಸಾಧ್ಯವಾದರೆ ಬರುವ ಚೈತ್ರ ವೈಶಾಖಗಳಲ್ಲಿಯೇ ಏರ್ಪಾಡು ಮಾಡಬಹುದೆಂದೂ ರಾಮಸ್ವಾಮಯ್ಯನಿಗೆ ಕೃಷ್ಣಪ್ಪನವರು ಕಾಗದ ಹಾಕಿ ಅವನಿಂದ ಉತ್ತರದ ನಿರೀಕ್ಷಣೆಯಲ್ಲಿದ್ದರು. ಸುಂದರಮೂರ್ತಿ ತಂದೆ ತಾಯಿ ಎಷ್ಟು ಹೇಳಿದರೂ ಕೇಳದೆ, ಅವರ ಇಷ್ಟಕ್ಕೆ ವಿರುದ್ಧವಾಗಿ ಬೊಂಬಾಯಿಗೆ ಹಿಂದಿರುಗಿದ.

೬೦

ಜ್ಯೇಷ್ಠಮಾಸದಲ್ಲಿ ತುಂಗೆಯ ಲಗ್ನ ನಿಶ್ಚಯವಾಗಿತ್ತು. ಸುಂದರ ಮೂರ್ತಿ ತಂದೆಗೆ ತನ್ನ ವಿಳಾಸವನ್ನು ಕೊಟ್ಟು ಬಂದಿದ್ದ. ಮದುವೆಗೆ ಖಂಡಿತ ಬಂದೇ ತೀರಬೇಕೆಂದು ಒತ್ತಾಯ ಮಾಡಿ ತಂದೆಯಿಂದ ಸುಂದರ ಮೂರ್ತಿಗೆ ಕಾಗದ ಬಂದಿತ್ತು. ಹೋಗುವುದೇ ಬಿಡುವುದೇ ಎಂದು ಮನಸ್ಸು ಇಬ್ಬಗೆಯಾಯಿತು. ದೇಶದ ಪರಿಸ್ಥಿತಿಯೇನೋ ಮತ್ತೆ ಹದ ಗೆಡುತ್ತಿತ್ತು; ಆದರೆ ಇನ್ನೂ ಉತ್ಕಟಾವಸ್ಥೆಗೆ ಬಂದಿರಲಿಲ್ಲ. ಮತ್ತೊಂದು ಸಮರದ ಮುಂದಿನ ಶಾಂತಿಕಾಲವಾಗಿತ್ತು ಅದು. ಆದರೂ, ಬಂಧು ದರ್ಶನವೂ ಒಂದು ಭಾಗ್ಯವೇ ಎಂದು ಭಾವಿಸಿ, ಅವನು ಮದುವೆಗೆ ಹೋಗಿ, ನಾಲ್ಕು ದಿನ ವಿವಾಹ ವಿಜೃಂಭಣೆಯಲ್ಲಿ ಭಾಗಿಯಾಗಿ, ಸೊಗಸಾದ ಖಾದಿ ಸೀರೆಯೊಂದನ್ನು ತಂಗಿಗೆ ಉಡುಗೊರೆಯಾಗಿ ಓದಿಸಿ, ಸಾಧನೆಗೂ ಒಂದು ಸೀರೆಯನ್ನು ಕೊಟ್ಟು ಸಂತೃಪ್ತನಾಗಿ, ಅದನ್ನವಳು ಉಟ್ಟಿದ್ದನ್ನು ನೋಡಿ ಸಂತಸಗೊಂಡು, ಹಗುರವಾದ ಹೃದಯದಿಂದ ಬೊಂಬಾಯಿಗೆ ಮರಳಿದನು.

೬೧

ಮಹಾತ್ಮಾ ಗಾಂಧಿಯವರು ೧೯೩೧ನೆಯ ಇಸವಿ ಡಿಸೆಂಬರ್ ೨೮

ರೌಂಡ್ ಟೇಬಲ್ ಕಾನ್ಫರೆನ್ಸಿನಿಂದ ಸ್ವದೇಶಕ್ಕೆ ಮರಳಿದರು. ಇದಕ್ಕೆ ಮುಂಚೆ ಏಪ್ರಿಲ್‌ನಲ್ಲೇ ಇರ್ವಿನ್ನರ ಸ್ಥಾನದಲ್ಲಿ ಲಾರ್ಡ್ ವಿಲಿಂಗ್‌ಡನ್ನರು ವೈಸ್‌ರಾಯ್ ಸ್ಥಾನವನ್ನು ಅಲಂಕರಿಸಿದ್ದರು.

ಕೆಲವು ಕಾಲ ಗಾಂಧಿ-ಇರ್ವಿನ್ನರ ಒಪ್ಪಂದದ ಪಾಲನೆ ನಡೆಯಿತು. ಕಾಂಗ್ರೆಸ್ ಬಲಗೊಳ್ಳುತ್ತಿತ್ತು ; ಪ್ರದರ್ಶನಗಳು, ಮೆರವಣಿಗೆಗಳು, ಹೆಂಡದಂಗಡಿಗಳ ಪಿಕೆಟಿಂಗೂ ಶಾಂತರೀತಿಯಿಂದ ನಡೆಯುತ್ತಿದ್ದುವು. ಇತ್ತ ಸರ್ಕಾರ ಒಳಗೇ ಒಪ್ಪಂದದ ಮುಸುಕಿನಲ್ಲಿ ಸಮರಕ್ಕೆ ಸನ್ನದ್ಧವಾಗುತ್ತಿತ್ತು. ವಿಲಿಂಗ್‌ಡನ್ನರು ನುಡಿಯಲ್ಲಿ ಜೇನು ಹನಿಸಿ ನಡೆವಳಿಯಲ್ಲಿ ವಿಷದ ಬೀಜ ಬಿತ್ತತೊಡಗಿದರು. ಗಾಂಧಿಯವರು ಹಿಂದಿರುಗುವ ಮುನ್ನವೇ ನೆಹರೂ ಅವರ ದಸ್ತಗಿರಿಯಾಯಿತು. ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ಪ್ರಮುಖರ ಮತ್ತು ಇತರ ಕಾಂಗ್ರೆಸ್ಸಿನವರ ದಸ್ತಗಿರಿಗಳೂ, ಲಾಠೀ ಪ್ರಹಾರಗಳೂ ನಡೆಯುತ್ತಲೇ ಬಂದುವು. ಒಪ್ಪಂದವನ್ನು ಮುರಿಯುವುದೇ ಸರ್ಕಾರದ ಗುರಿ ಎಂದು ಎಲ್ಲರಿಗೂ ಸ್ಪಷ್ಟವಾಗುತ್ತ ಬಂದಿತು. ಆರ್ಡಿನೆನ್ಸ್ ರಾಜ್ಯ ಮತ್ತೆ ಪ್ರಾರಂಭವಾಯಿತು.

೧೯೩೨ ನೆಯ ಜನವರಿ ೪ ರಲ್ಲಿ ವಿಲಿಂಗ್‌ಡನ್ನರು ಕೆಲವು ಆರ್ಡಿನೆನ್ಸ್‌ಗಳನ್ನು ಹೊರಡಿಸಿದರು. ಕಾಂಗ್ರೆಸ್ಸನ್ನು ಕೆಣಕಿ, ಯುದ್ಧಕ್ಕೆ ಕರೆದು, ಅದನ್ನು ಮಟ್ಟ ಹಾಕಬೇಕೆಂಬುದೇ ಸರ್ಕಾರ ಕೈಕೊಂಡ ಪಣ. ಆರ್ಡಿನೆನ್ಸುಗಳ ಅಧಿಕಾರವ್ಯಾಪ್ತಿಯಲ್ಲಿ ಇದು ಸ್ಪಷ್ಟವಾಗಿ ಗೋಚರವಾಗುತಇತ್ತು. ೧೯೩೨ ನೆಯ ಜನವರಿ ನಾಲ್ಕನೆಯ ತಾರೀಖು, ರೌಂಡ್ ಟೇಬಲ್ ಕಾನಫರೆನ್ಸಿನಿಂದ ಐದಾರು ದಿನ ಹಿಂದೆ ಅದೇ ತಾನೆ ಹಿಂದಿರುಗಿದ್ದ ಮಹಾತ್ಮರ ದಸ್ತಗಿರಿಯಾಯಿತು ರೌಂಡ್ ಟೇಬಲ್ ಸಮ್ಮೇಳನ ಒಂದು ಕಪಟನಾಟಕವಾಯಿತು.

ಎಲ್ಲ ರಾಷ್ಟ್ರೀಯ ಸಂಸ್ಥೆಗಳೂ, ರಾಷ್ಟ್ರೀಯ ಕಾರ್ಯಕಲಾಪಗಳೂ ಕಾನೂನು ವಿರುದ್ಧ ಎಂದು ಘೋಷಣೆಯಾಗಿ, ಅನೇಕ ರಾಷ್ಟ್ರಸೇವಕರು ಸೆರೆಮನೆ ಸೇರಿದರು. ಈ ಪರಿಸ್ಥಿತಿಯಲ್ಲಿ ಸುಂದರನಿಗೆ ಸುಮ್ಮನೆ ಕೂಡ್ರುವುದಾಗಲಿಲ್ಲ. ಕಚೇರಿಯ ಕೆಲಸವನ್ನು ಹೇಳದೆ ಕೇಳದೆ ಬಿಟ್ಟು, ಗೆಳೆಯ ಕುಲಕರ್ಣಿಯೊಂದಿಗೆ ಮತ್ತೆ ಕಾಂಗ್ರೆಸ್ ಸತ್ಯಾಗ್ರಹ ಸೇನಾನಿಗಳ ಮುಂಚೂ

ಣೆಗೆ ನುಗ್ಗಿ, ಹೋರಾಟಕ್ಕೆ ಧುಮುಕಿದನು. ಸುಂದರಮೂರ್ತಿಗೂ ಕುಲಕರ್ಣಿಗೂ ಕರ್ನಾಟಕದ ಕಾರ್ಯರಂಗ ಹಿಂದೆ ಪರಿಚಿತವಾದದ್ದರಿಂದ, ಅವರು ಮೊದಲು ಧಾರವಾಡಕ್ಕೆ ಬಂದು ಅಲ್ಲಿನ ಸತ್ಯಾಗ್ರಹಿಗಳ ಸೇನೆಯಲ್ಲಿ ಸ್ವಯಂಸೇವಕರಾಗಿ ಸೇರಿದರು.

೧೯೩೨-೩೩ರ ಸತ್ಯಾಗ್ರಹ ಚಳವಳಿಯೂ ಬಹುಮಟ್ಟಿಗೆ ೧೯೩೦-೩೧ರ ಚಳವಳಿಯ ಮಾದರಿಯಲ್ಲಿಯೇ ನಡೆಯಿತು. ಹೆಂಡದಂಗಡಿಗಳ ಪಿಕೆಟಿಂಗ್, ಪರದೇಶಿ ಮತ್ತು ಬ್ರಿಟಿಷ್ ಸರಕುಗಳ ಬಹಿಷ್ಕಾರ ಇವು ಎಲ್ಲ ಪ್ರಾಂತಗಳಲ್ಲಿಯೂ ಸಾಮಾನ್ಯವಾಗಿದ್ದ ಕಾರ್ಯಕ್ರಮ. ಹೆಂಡದಂಗಡಿಗಳ ಪಿಕೆಟಿಂಗ್ ಕಾರ್ಯದಲ್ಲಿ ತೊಡಗಿದ್ದಾಗ ಸುಂದರ ಕುಲಕರ್ಣಿ ಇಬ್ಬರೂ ಅನೇಕ ಸಲ ಲಾಠಿಪ್ರಹಾರಕ್ಕೆ ತಲೆಯೊಡ್ಡಿದರು.

ಈ ಹೊತ್ತಿಗೆ ಎಲ್ಲ ಕಡೆಯೂ ಸರಕಾರ ಕಾಂಗ್ರೆಸ್ ಕಚೇರಿಗಳನ್ನೂ ಆಶ್ರಮಗಳನ್ನೂ ಸ್ವಾಧೀನಪಡಿಸಿಕೊಂಡಿದ್ದಿತು. ವಿಶೇಷ ಕಾನೂನುಗಳ ಮೇರೆ ಕಾಂಗ್ರೆಸ್ ಬಹಿರಂಗವಾಗಿ ಯಾವ ಪ್ರಚಾರಪತ್ರಿಕೆಯನ್ನೂ ಪ್ರಚಾರ ಮಾಡುವಂತಿರಲಿಲ್ಲ. ಪ್ರಕಟವಾಗುತ್ತಿದ್ದ ಪತ್ರಿಕೆಗಳಲ್ಲಿ ಬರುತ್ತ ಇದ್ದ ಸುದ್ದಿಗಳೆಲ್ಲವೂ ಸರಕಾರದ ಅಧಿಕಾರಿಗಳು ಜರಡಿಯಾಡಿದ ಮೇಲೆ ಹೊರ ಬರುತ್ತಿದ್ದಂಥವು. ಕಾಂಗ್ರೆಸ್ ಚಟುವಟಿಕೆಯ ಸುದ್ದಿಗಳು ಜನಕ್ಕೆ ತಿಳಿಯುವ ಬಗೆ ಹೇಗೆ? ಈ ಕೊರತೆಯನ್ನು ತುಂಬುವುದಕ್ಕಾಗಿ ಕಾಂಗ್ರೆಸ್ ಕಾರ್ಯಕರ್ತರು ತೆರೆಯಮರೆಯಲ್ಲಿ ನಿಂತು ಪ್ರಚಾರಪತ್ರಿಕೆಗಳನ್ನೂ, ವರದಿಗಳನ್ನೂ, ತಿಳಿವಳಿಕೆಯ ಹಸ್ತಪತ್ರಿಕೆಗಳನ್ನೂ ಟೈಪು ಮಾಡಿಯೋ ಸೈಕ್ಲೋಸ್ಟೈಲು ಮಾಡಿಯೋ ಅಚ್ಚುಮಾಡಿಸಿಯೋ ಕಡೆಗೆ ಕೈಲಿ ಪ್ರತಿ ಮಾಡಿಯೋ ಹೊರಡಿಸುತ್ತಿದ್ದರು. ಯಾರು ಇವನ್ನು ಹೊರಡಿಸುವವರು, ಅಚ್ಚಾಗುವುದು ಎಲ್ಲಿ, ಹಂಚಿಕೆಯಾಗುವುದು ಹೇಗೆ ಎಂಬುದು ಏನು ಮಾಡಿದರೂ ಸರಕಾರಕ್ಕೆ ಗೊತ್ತಾಗುತ್ತಿರಲಿಲ್ಲ. ಈ ವೇಳೆಗಾಗಲೇ ಸರ್ಕಾರದ ಕ್ರೂರವಾದ ದಬ್ಬಾಳಿಕೆಯ ಕಾರ್ಯನೀತಿಯ ಪರಿಣಾಮವಾಗಿ ಚಳವಳಿಯೂ ತೆರೆಯ ಮರೆಗೆ ಸರಿದಿತ್ತು. ಈ ರಹಸ್ಯಚಳವಳಿಯ ಕಾರ್ಯಕಲಾಪಗಳನ್ನು ಈ ರಹಸ್ಯಅನಾಮಿಕ ಪತ್ರಿಕೆಗಳು ಜನಕ್ಕೆ ಬಹಿರಂಗಪಡಿಸುತ್ತಿದ್ದುವು. ಸುಂದರಮೂರ್ತಿ ಬೊಂಬಾಯಿನಲ್ಲಿ ಕೆಲವು ಕಾಲ ಪ್ರಸಿದ್ಧವಾದ ಪತ್ರಿಕಾ

ಕಚೇರಿಯಲ್ಲಿ ಅನುಭವ ಪಡೆದಿದ್ದನಾದ್ದರಿಂದ ಕಾಂಗ್ರೆಸ್ ಕಾರ್ಯಕರ್ತರು ಒಂದು ಹೊಸ ಗುಪ್ತಪತ್ರಿಕೆಯನ್ನು ಹೊರಡಿಸುವ ಜವಾಬುದಾರಿಯನ್ನು ಅವನಿಗೆ ವಹಿಸಿದ್ದರು. ಸುಂದರ ಸಂಪಾದಕನಂತೆಯೂ, ಕುಲಕರ್ಣಿ ಉಪಸಂಪಾದಕ ಮತ್ತು ಬಾತ್ಮೀದಾರನಂತೆಯೂ ಕೆಲಸ ಮಾಡುತ್ತಿದ್ದರು. ಆದರೆ ಹಾಗೆಂದು ಅವರ ಹೆಸರುಗಳು ಮಾತ್ರ ಪ್ರಕಟವಾಗುತ್ತಿರಲಿಲ್ಲ, ಅಷ್ಟೆ! ಸುಂದರ ತನ್ನ ಪತ್ರಿಕೆಗೆ 'ಕಾಂಗ್ರೆಸ್ ಕಹಳೆ' ಎಂದು ಹೆಸರಿಟ್ಟನು. ಯಾವ ಕಾಂಗ್ರೆಸ್ ಕಾರ್ಯಕರ್ತರು ಇವನಿಗೆ ಈ ಹೊಣೆ ಹೊರಿಸಿದರ್ದೋ ಅವರಿಗೇ 'ಕಹಳೆ'ಯ ಕಚೇರಿ ಯಾವುದು ಎಂಬುದು ಗೊತ್ತಿರಲಿಲ್ಲ; ಸುದ್ದಿಯನ್ನೂ ಲೇಖನಗಳನ್ನೂ ಒದಗಿಸುವುದು ಮಾತ್ರ ಅವರ ಜಾವಾಬುದಾರಿ. ಈ ಗೌಪ್ಯತೆಯನ್ನು ಅವರೆ ಮೆಚ್ಚಿಕೊಂಡರು. ಆಗಿನ ತೆರೆಮರೆಯ ಚಳವಳಿಯಲ್ಲಿ ಅಷ್ಟು ಗೌಪ್ಯತೆ ಇತ್ತು. ಸುಂದರ ತಾನಾಗಿ 'ಕಹಳೆ'ಯ ಕೈ ಬಿಡುವವರೆಗೂ ಅದರ ಇರವು ಪೋಲೀಸರಿಗೆ ಗೊತ್ತಾಗಲಿಲ್ಲ. ಕುಲಕರ್ಣಿಗೊಬ್ಬನಿಗೆ ಮಾತ್ರ ಗೊತ್ತು. ಸ್ಥಳಪರಿಚಯ ಸುಂದರನಿಗೆ ಅಷ್ಟಾಗಿ ಇರಲಿಲ್ಲವಾದ್ದರಿಂದ, ಪತ್ರಿಕೆಗಳ ಹಂಚಿಕೆಯ ವ್ಯವಸ್ಥೆಯನ್ನು ಕುಲಕರ್ಣಿ ವಹಿಸಿಕೊಂಡಿದ್ದನು. ಅವನು ತಮ್ಮ ಮನೆಗೆ ಮೊಸರು ಹಾಕುವವಳನ್ನು ಕೂಡ ತನ್ನ ಕಡೆ ಮಾಡಿಕೊಂಡು, ಅವಳ ಮೂಲಕ ಎಷ್ಟೋ ಮಂದಿಗೆ 'ಕಹಳೆ' ಪತ್ರಿಕೆ ಕೈಸೇರುವಂತೆ ವ್ಯವಸ್ಥೆ ಮಾಡಿದ್ದ. ಸುತ್ತಮುತ್ತ ಐದಾರು ಹಳ್ಳಿ ಊರುಗಳಲ್ಲಿ 'ಕಹಳೆ' ಆಗ ಭೋರ್ಗರೆಯುತ್ತಿತ್ತು. ಕಾಂಗ್ರೆಸ್ ವಾಣಿಯನ್ನು ಜನತೆಗೆ ಕೇಳಿಸುವ ಕಾರ್ಯವನ್ನು ಸುಂದರನೂ ಕುಲಕರ್ಣಿಯೂ ಬಹು ದಕ್ಷತೆಯಿಂದ ನಿರ್ವಹಿಸುತ್ತಿದ್ದರು. ಈ ಪ್ರಚಾರ ಕಾರ್ಯದ ಜೊತೆಗೆ, ಕಾಂಗ್ರೆಸ್ ಕಾರ್ಯಕರ್ತರು ತಮ್ಮ ಸ್ವಂತ ಅಂಚೆಯ ವ್ಯವಸ್ಥೆಯನ್ನು ಏರ್ಪಡಿಸಿಕೊಂಡಿದ್ದರು. ಕುಲಕರ್ಣಿ 'ಕಹಳೆ' ಪತ್ರಿಕೆಯ ಹಂಚಿಕೆಯೊಂದಿಗೆ ಅಂಚೆ ಒಯ್ಯುವ ಕೆಲಸವನ್ನೂ ಇಟ್ಟುಕೊಂಡಿದ್ದನು. ಈ ಪತ್ರಿಕೆಯ ಸಂಪಾದನ ಕಾರ್ಯವನ್ನು ಸುಂದರ ಅವ್ಯಾಹತವಾಗಿ ಆರು ತಿಂಗಳ ಕಾಲ ನಡಸಿಕೊಂಡು ಬಂದ. ಹೆಚ್ಚಾಗಿ ಹೊರಗಡೆ ಕೆಲಸ ಮಾಡಬೇಕಾಗಿದ್ದ ಕುಲಕರ್ಣಿ ಒಮ್ಮೆ ಅಂಚೆ ತೆಗೆದುಕೊಂಡು ಹೋಗುತ್ತಿದ್ದ ಸಂದರ್ಭದಲ್ಲಿ ದಸ್ತಗಿರಿಯಾದ. ಆಗ ಸುಂದರ ಆ ಕೆಲಸವನ್ನು ಕೈಬಿಟ್ಟ.

೬೨

ಸುಂದರ ‘ಕಹಳೆ’ ಪತ್ರಿಕೆಯ ಸಂಪಾದಕನಾಗಿದ್ದ ಕಾಲದಲ್ಲಿ ಚಳವಳಿಯ ಘಟನೆಗಳಲ್ಲದೆ ದೇಶದ ಗಮನವನ್ನು, ಅಂತೆಯೇ ಸುಂದರನ ಹೃದಯವನ್ನು, ಸೆರೆಹಿಡಿದು ನಿಲ್ಲಿಸಿ, ಚಿರಸ್ಮರಣೀಯವಾದ ಮುಖ್ಯ ಘಟನೆಯೊಂದು ನಡೆಯಿತು. ದೇಶದ ಕಣ್ಣು ತೆರೆದ ಘಟನೆಯದು; ಭಾರತೀಯರನ್ನು ಆತ್ಮಪರೀಕ್ಷೆಗೆ ಗುರಿಮಾಡಿದ ಘಟನೆಯದು; ಹಿಂದೂ ಧರ್ಮದ ಕಳಂಕವನ್ನು ನಿರ್ಮೂಲ ಮಾಡಲು ಉಜ್ಜುಗಿಸಿದ ಘಟನೆಯದು; ಅತ್ತ ಇತ್ತ ಹೊರಳುತ್ತಿದ್ದ ಸುಂದರನ ಮನಸ್ಸಿಗೆ ಗುರಿಗಾಣಿಸಿದ ಘಟನೆಯದು. ಆ ಘಟನೆಯೆಂದರೆ, ಹರಿಜನರ ಪ್ರಶ್ನೆ ಬಿಡಿಸುವ ಸಂಬಂಧದಲ್ಲಿ ಮಹಾತ್ಮರು ಕೈಕೊಂಡ ಮಹೋಪವಾಸ. ಸುಂದರನ ಕಥೆಯೊಂದಿಗೆ ಅದೂ ಹೆಣೆದುಕೊಂಡಿದೆ: ಸುಂದರ ಅದರಲ್ಲಿ ಪಾತ್ರಧಾರಿಯಾಗಿದ್ದನೆಂದಲ್ಲ; ಅವನ ಜೀವನಾದರ್ಶವನ್ನು ಖಚಿತಗೊಳಿಸಿದ ಕಾರಣದಿಂದ.

ಎರಡನೆಯ ರೌಂಡ್‌ಟೇಬಲ್ ಸಮ್ಮೇಳನಕ್ಕೆ ಮಹಾತ್ಮಾ ಗಾಂಧಿಯವರು ಹೋಗಿದ್ದರಷ್ಟೆ. ಅಲ್ಲಿ ಅಲ್ಪಸಂಖ್ಯಾಕರ ಪ್ರಶ್ನೆ ಬಿಡಿಸಲಾಗದ ಕಗ್ಗಂಟಾಯಿತು; ಅಥವಾ ಹಾಗೆ ಕಗ್ಗಂಟು ಮಾಡಬೇಕೆಂಬುದೇ ಬ್ರಿಟಿಷರ ಹಂಚಿಕೆಯಾಗಿತ್ತು. ಹಿಂದುಗಳು ಒಂದು ಪಂಗಡ; ಮುಸ್ಲಿಮರು ಒಂದು ಪಂಗಡ. ಭರತಖಂಡಕ್ಕೆ ಈ ಒಂದು ಬಿರುಕು ಸಾಲದು ಎಂಬಂತೆ ಇನ್ನೊಂದು ಬಿರುಕು ಕಲ್ಪಿಸುವ ಕುಟಿಲವನ್ನು ಹೂಡಿತು ಬ್ರಿಟಿಷ್ ಸರ್ಕಾರ; ಅಥವಾ, ಹಿಂದೂ ಸಮಾಜದಲ್ಲಿ ಎಳೆ ಕಾಣುತ್ತಿದ್ದ ಬಿರುಕನ್ನು ಸ್ಪಷ್ಟವಾಗಿ ಬಿಡಿಸಿ ಅದಕ್ಕೆ ಬೆಣೆಹೊಡೆಯುವ ಕುಟಿಲ ಮಾಡಿತು ಎನ್ನೋಣ. ಸಮ್ಮೇಳನದಲ್ಲಿ ರೂಪಗೊಳಿಸ ಹೊರಟ ಭಾರತದ ಭವಿಷ್ಯ ರಾಜ್ಯಾಂಗದಲ್ಲಿ ಮುಸ್ಲಿಮರಿಗೆ ಏರ್ಪಡಿಸಿದಂತೆ ನಿಮ್ನ ವರ್ಗಗಳಿಗೂ ಪ್ರತ್ಯೇಕ ಚುನಾವಣಾ ಕ್ಷೇತ್ರವನ್ನು ಕಲ್ಪಿಸುವ ಸೂಚನೆಯನ್ನು ಬ್ರಿಟಿಷ್ ಮುಖ್ಯ ಮಂತ್ರಿ ಮಂಡಿಸಿದರು. ಅದಕ್ಕೆ ಡಾ. ಅಂಬೇಡಕರರ ಒತ್ತಾಸೆ ಬಲವಾಗಿತ್ತು. ಆಗಲೇ ಗಾಂಧಿಯವರು ಖಡಾಖಂಡಿತವಾಗಿ ಹೇಳಿದರು:

“.... ಡಾ. ಅಂಬೇಡಕರರು ಭಾರತದಲ್ಲಿನ ಎಲ್ಲ ಅಸ್ಪೃಶ್ಯರ ಪರವಾಗಿ ನಾನು ಮಾತನಾಡುವೆ ಎನ್ನುತ್ತಾರೆ. ಅವರಿಗೆ ಆ ಹಕ್ಕಿಲ್ಲವೆಂದು ನಾನು

ಹೇಳುತ್ತೇನೆ. ನಾನು ಹೊಣೆಗಾರಿಕೆಯಿಂದ ಹೇಳುವ ಮಾತಿದು. ಈ ಹಂಚಿಕೆ ಹಿಂದೂ ಧರ್ಮದಲ್ಲಿ ಒಡಕನ್ನುಂಟುಮಾಡುವುದು. ಹೀಗಾಗುವುದು ನನಗೆ ಏನೇನೂ ತೃಪ್ತಿಯಿಲ್ಲ. ಅಸ್ಪೃಶ್ಯರೆಲ್ಲರೂ ಇಸ್ಲಾಂ ಧರ್ಮಕ್ಕೋ ಕ್ರೈಸ್ತ ಮತಕ್ಕೋ ಸೇರಿದರೂ ಚಿಂತೆಯಿಲ್ಲ. ಅದನ್ನು ಸಹಿಸಬಲ್ಲೆ. ಆದರೆ, ಪ್ರತಿಯೊಂದು ಹಳ್ಳಿಯೂ ಇಬ್ಭಾಗವಾದರೆ ಹಿಂದೂ ಧರ್ಮಕ್ಕೆ ಏನಾಗಬಹುದೆಂಬುದನ್ನು ನಾನು ಸಹಿಸಲಾರೆ. ಅಸ್ಪೃಶ್ಯರ ರಾಜಕೀಯ ಹಕ್ಕುಗಳಿಗಾಗಿ ವಾದಿಸುವವರು ಭಾರತವನ್ನರಿಯರು, ಭಾರತದ ಇಂದಿನ ಸಮಾಜರಚನೆಯನ್ನು ಅರಿಯರು. ಆದ್ದರಿಂದ, ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಒತ್ತಿ ಹೇಳುತ್ತೇನೆ: ಈ ಹಂಚಿಕೆಯನ್ನು ನಾನೊಬ್ಬನೇ ಎದುರಿಸಬೇಕಾಗಿ ಬಂದರೂ ಸರಿಯೆ, ಎದುರಿಸುತ್ತೇನೆ; ಪ್ರಾಣಾರ್ಪಣೆ ಮಾಡಿ ಎದುರಿಸುತ್ತೇನೆ."

ಭಾರತಕ್ಕೆ ಹಿಂತಿರುಗಿದ ಕೂಡಲೆ ಮಹಾತ್ಮರು ಸರ್ಕಾರದ ಅತಿಥಿಗಳಾದರಷ್ಟೆ. ಆ ವೇಳೆಯಲ್ಲಿ ಲೋಲೆಯನ್ ಸಮಿತಿ ಆಗಮಿಸಿತು: ಚುನಾವಣೆಯ ಅಧಿಕಾರ ಮತ್ತು ಸ್ಥಾನಗಳ ಸಂಬಂಧದ ವಿವರಗಳನ್ನು ಗೊತ್ತು ಮಾಡುವುದಕ್ಕಾಗಿ. ಅವರ ವರದಿ ಸಿದ್ಧವಾದ ಕೂಡಲೆ ಬ್ರಿಟಿಷರ ಹಂಚಿಕೆ ಹಣ್ಣಾಗುವುದು. ಕಾಲಮಾನದ ಮೇಲೆ ಮಾತಾಡಿ ಪ್ರಯೋಜನವಿಲ್ಲವೆಂದು, ಅಸ್ಪೃಶ್ಯರಿಗೆ ಪ್ರತ್ಯೇಕ ಚುನಾವಣೆಯ ಕ್ಷೇತ್ರಗಳನ್ನು ಕಲ್ಪಿಸುವುದಾದರೆ ತಾವು ಆಮರಣಾಂತ ಉಪವಾಸ ಕೈಕೊಳ್ಳುವುದಾಗಿ ಗಾಂಧಿಯವರು ಸರ್ಕಾರಕ್ಕೆ ಜೇಲಿನಿಂದಲೇ ಕಾಗದ ಬರೆದರು. ಯೋಗ್ಯ ಕಾಲದಲ್ಲಿ ಸೂಕ್ತ ಕಾರ್ಯ ಮಾಡಲಾಗುವುದೆಂದು ಪತ್ರಕ್ಕೊಂದು ಮಾಮೂಲು ಉತ್ತರ ಬಂತು. ಗಾಂಧಿಯವರು ಕಾದು ಕುಳಿತರು. ೧೯೩೨ ರ ಆಗಸ್ಟ್ ೧೭ ರಲ್ಲಿ ಬ್ರಿಟಿಷ್ ಮುಖ್ಯ ಮಂತ್ರಿ ತಮ್ಮ ಯೋಜನೆಯನ್ನು ಸ್ಥಿರಗೊಳಿಸಿ ಪ್ರಕಟಪಡಿಸಿದರು. ಗಾಂಧಿಯವರು ನುಡಿದಂತೆ ನಡೆದುಕೊಂಡರು; ಸೆಪ್ಟೆಂಬರ್ ೨೦ ರ ಮಧ್ಯಾಹ್ನ ತಮ್ಮ ಆಮರಣಾಂತ ಉಪವಾಸವನ್ನು ಪ್ರಾರಂಭಿಸುವುದಾಗಿ ಮುಖ್ಯ ಮಂತ್ರಿಗೆ ತಿಳಿಸಿದರು.

ಉಪವಾಸಕ್ಕೆ ಇನ್ನು ಒಂದು ವಾರ ಉಳಿದಿದೆ. ಈ ಸುದ್ದಿ ಕೇಳಿ, ದೇಶವೇಕೆ, ಇಡಿಯ ಜಗತ್ತೇ ತಲ್ಲಣಗೊಂಡಿತು. ಗಾಂಧಿಯವರ ತೀರ್ಮಾನ

ವನ್ನು ಕದಲಿಸಲು ಹಲವರು ಪ್ರಯತ್ನಪಟ್ಟರು. ಪ್ರಯತ್ನವೆಲ್ಲ ವ್ಯರ್ಥವಾಯಿತು. ಮಹಾತ್ಮರ ಮಹೋಪವಾಸ ಪ್ರಾರಂಭವಾಯಿತು.

ಮಹಾತ್ಮರ ಉಪವಾಸ ನಿಲ್ಲಬೇಕಾದರೆ ಇದ್ದುದೊಂದೇ ದಾರಿ: ಮುಖ್ಯ ಮಂತ್ರಿಯ ಯೋಜನೆಯನ್ನು ಭಂಗಗೊಳಿಸುವುದು. ಅದಾಗಬೇಕಾದರೆ, ಹಿಂದೂ ಸಮಾಜದ ಎಲ್ಲ ಪಕ್ಷಗಳು ಒಂದು ಒಪ್ಪಂದಕ್ಕೆ ಬರಬೇಕು. ಈ ಒಪ್ಪಂದವುಂಟುಮಾಡುವ ಕಾರ್ಯಭಾರವನ್ನು ಪಂಡಿತ ಮಾಲ್ವಿಯವರು ಹೊತ್ತುಕೊಂಡರು. ಪೂನಾದಲ್ಲಿ ಎಲ್ಲ ಪಕ್ಷಸಂಗಡಗಳ ನಾಯಕರೂ ಕಲೆತು ಒಂದು ಒಪ್ಪಂದಕ್ಕೆ ಬಂದರು. ಅಸ್ಪೃಶ್ಯರಿಗೆ ಹಿಂದೂಗಳು ಕೆಲವು ವಿಶಿಷ್ಟ ಹಕ್ಕುಬಾಧ್ಯತೆಗಳನ್ನು ಬಿಟ್ಟುಕೊಡತಕ್ಕದ್ದು; ಅಸ್ಪೃಶ್ಯರು ಅಖಂಡ ಹಿಂದೂ ಸಮಾಜದ ಅಂಗಭೂತವಾಗಿಯೇ ಉಳಿಯತಕ್ಕದ್ದು; ಅವರಿಗಾಗಿ ಪ್ರತ್ಯೇಕ ಚುನಾವಣೆಯ ಕ್ಷೇತ್ರವಿರತಕ್ಕದ್ದಲ್ಲ. ಇದು ಒಪ್ಪಂದ. ಬ್ರಿಟಿಷ ಸರ್ಕಾರಕ್ಕೂ ನಿಮ್ನ ವರ್ಗದ ನಾಯಕರಿಗೂ ಈ ಒಪ್ಪಂದ ಒಪ್ಪಿಗೆಯಾಯಿತು. ಇದನ್ನು ಒಪ್ಪಿಕೊಂಡುದಾಗಿ, ೨೬ರ ಬೆಳಗ್ಗೆ ಇಂಗ್ಲೆಂಡಿನಲ್ಲೂ ಭಾರತದಲ್ಲೂ ಸರ್ಕಾರ ಘೋಷಿಸಿತು. ೨೬ ನೆಯ ತಾರೀಖಿನ ಸಂಜೆಯೇ ತಮ್ಮ ಉಪವಾಸವನ್ನು ನಿಲ್ಲಿಸುವುದಾಗಿ ಮಹಾತ್ಮರು ನಿಶ್ಚಯಿಸಿದರು. ಹಾಗೆಯೇ, ನಿಲ್ಲಿಸಿದರು. ಮಹಾತ್ಮರ ಸಂಕಲ್ಪ ಈಡೇರಿತು. ಅವರಿಗೆ ಸಾಂಕೇತಿಕ ವಿಜಯ ಲಭಿಸಿತು.

ಮಹಾತ್ಮರು ತಮ್ಮ ಉಪವಾಸದ ಉದ್ದೇಶವನ್ನು ಸರ್ಕಾರಕ್ಕೂ ಜಗತ್ತಿಗೂ ಸ್ಪಷ್ಟಗೊಳಿಸಿದ್ದರು; ಅದರಲ್ಲಿ ಸರ್ಕಾರದ ಕರ್ತವ್ಯವೇನೆಂಬುದು ಮಾತ್ರವಲ್ಲದೆ ಹಿಂದೂಗಳ ಕರ್ತವ್ಯವೇನೆಂಬುದೂ ಸೂಚಿತವಾಗಿತ್ತು. ತಮ್ಮ ಸಪ್ಟೆಂಬರ್ ೨೧ ರ ಹೇಳಿಕೆಯಲ್ಲಿ ಅವರು ಈ ರೀತಿ ಹೇಳಿದರು:

“ನಾನು ಈಗ ಕೈಕೊಂಡಿರುವ ಉಪವಾಸವನ್ನು ದೇವರ ಹೆಸರಿನಲ್ಲಿ ನಿಶ್ಚಯಿಸಿದ್ದೇನೆ—ಆತನ ಕಾರ್ಯಕ್ಕಾಗಿ, ಆತನ ಕರೆಯನ್ನು ಕೇಳಿ.... ‘ತೇನ ವಿನಾ ತೃಣಮಪಿ ನ ಚಲತಿ’ ಎಂಬ ವಾಕ್ಯದ ಸತ್ಯದಲ್ಲಿ ನನಗೆ ಅಚಲವಿಶ್ವಾಸ. ನನ್ನ ಪ್ರಾಣ ಈ ದೇಹದಲ್ಲಿದ್ದು ಇನ್ನೂ ಸೇವೆ ಮಾಡಬೇಕೆಂದಿದ್ದರೆ ಅವನು ಅದನ್ನು ಉಳಿಸುತ್ತಾನೆ. ಆತನ ಇಚ್ಛೆಗೆ ವಿರುದ್ಧವಾಗಿ ಅದನ್ನು ಯಾರೂ ಉಳಿಸಲಾರರು.

"ಈ ಪ್ರತ್ಯೇಕ ಚುನಾವಣೆ ಎಂಬುದು ಅಸ್ಪೃಸ್ಯರು ಹೊತ್ತಿರುವ ಅನ್ಯಾಯಗಳ ಹೊರೆಯನ್ನು ಇನ್ನು ಹೊರಲಾಗದಂತೆ ಮಾಡುವ ಕಡೆಯ ಕುಸರಿನ ಭಾರ. ಸವರ್ಣ ಹಿಂದೂಗಳಿಗೂ ನಿಮ್ನ ವರ್ಗದ ನಾಯಕರಿಗೂ ಆಗುವ ಹರುಕುಮುರುಕು ಒಪ್ಪಂದದಿಂದ ಏನೂ ಪ್ರಯೋಜನವಿಲ್ಲ. ಒಪ್ಪಂದ ಊರ್ಜಿತವಾಗಬೇಕಾದರೆ ಅದು ನಿಜವಾದುದಾಗಬೇಕು. ಹಿಂದೂ ಜನತೆಯ ಮನಸ್ಸು ಅಸ್ಪೃಶ್ಯತೆಯನ್ನು ಆಮೂಲಾಗ್ರವಾಗಿ ನಿರ್ಮೂಲ ಮಾಡಲು ಇನ್ನೂ ಸಿದ್ಧವಾಗಿಲ್ಲದಿದ್ದರೆ, ಅದು ಹಿಂದೆ ಮುಂದೆ ನೋಡದೆ ನನ್ನನ್ನು ಕಳೆದುಕೊಳ್ಳಲು ಸಿದ್ಧವಾಗಬೇಕು.

"ಸ್ಪೃಶ್ಯರಿಗೂ ಅಸ್ಪೃಶ್ಯರಿಗೂ ಆದ ತೀರ್ಪೆಯ ಒಪ್ಪಂದದಿಂದ ನಾನು ತೃಪ್ತನಾಗಲಾರೆ. ನನಗೆ ಬೇಕಾದುದು ಜೀವಂತ ಒಪ್ಪಂದ. ಅದರ ಸಜೀವ ಪರಿಣಾಮ ಮುಂದೆಂದೋ ಅಲ್ಲದೆ ಇಂದೇ ಕಾಣಬರಬೇಕು. ಭಾರತದಲ್ಲೆಲ್ಲಾ ಸ್ಪೃಶ್ಯರೂ ಅಸ್ಪೃಶ್ಯರೂ ಒಬ್ಬರನ್ನೊಬ್ಬರು ಆಲಂಗಿಸಿಕೊಳ್ಳುವ ದೃಶ್ಯಗಳು ಕಾಣಬರಬೇಕು: ನಾಟಕದಲ್ಲಿಯಂತೆ ಅಲ್ಲ, ನಿಜವಾದ ಭ್ರಾತೃತ್ವಗಳಂತೆ. ಇದನ್ನು ಸಾಧಿಸುವುದಕ್ಕಾಗಿಯೇ ಈ ಉಪವಾಸದ ಅಗ್ನಿಕುಂಡವನ್ನು ನಾನಿಂದು ಪ್ರವೇಶಿಸಿರುವುದು.

"ಪ್ರತ್ಯೇಕ ಚುನಾವಣೆಗಳ ಯೋಜನೆಯನ್ನು ರದ್ದುಗೊಳಿಸುವುದರಿಂದ ನಾನು ಉಪವಾಸವನ್ನು ನಿಲ್ಲಿಸಿ ಬದುಕಬಹುದು; ಆದರೆ, ನಾನು ಹಂಬಲಿಸುತ್ತಿರುವ ಸ್ಪೃಶ್ಯಾಸ್ಪೃಶ್ಯರ ಜೀವಂತ ಬಾಂಧವ್ಯವು ನೆಲೆಗೊಳ್ಳದೆ ಹೋದರೆ ನಾನು ಬದುಕಿದ್ದರೂ ಸತ್ತಂತೆಯೇ. ಈ ಉಪವಾಸವನ್ನು ನಿಲ್ಲಿಸಿ, ಮತ್ತೊಂದು ಉಪವಾಸ ಕೈಗೊಳ್ಳಬೇಕಾದೀತು.

"ಅಸ್ಪೃಶ್ಯತೆಯು ನಿಜವಾಗಿ ನಿರ್ಮೂಲಗೊಂಡದ್ದೇ ಆದರೆ, ಅದರಿಂದ ಹಿಂದೂ ಧರ್ಮದ ಒಂದು ಭಯಂಕರ ಕಳಂಕವು ಅಳಿದಂತಾಗುವುದು ಮಾತ್ರವಲ್ಲದೆ ಅದರ ಪರಿಣಾಮವು ವಿಶ್ವವ್ಯಾಪಕವಾಗಿರುವುದು. ಅಸ್ಪೃಶ್ಯತೆಯ ವಿರುದ್ಧವಾಗಿ ನನ್ನ ಹೋರಾಟ ಮಾನವತೆಯಲ್ಲಿಯೇ ಇರುವ ಮಲಿನತೆಯ ವಿರುದ್ಧವಾಗಿ ಕೈಕೊಂಡ ಹೋರಾಟ."

ಮಹಾತ್ಮರ ಈ ಕರೆಗೆ ದೇಶ ಕಿವಿಗೊಟ್ಟಿತು. ಬೊಂಬಾಯಿಯಲ್ಲಿ ಪಂಡಿತ ಮಾಳವೀಯರವರ ಅಧ್ಯಕ್ಷತೆಯಲ್ಲಿ ನೆರೆದ ಸಭೆ ೧೯೩೨ ರ ಸೆಪ್ಟೆಂಬರ್

೨೫ರಲ್ಲಿ ಸರ್ವಾನುಮತದಿಂದ ಈ ರೀತಿ ನಿರ್ಣಯಮಾಡಿತು :

"ಹಿಂದೂಗಳಲ್ಲಿ ಇನ್ನು ಮುಂದೆ ತನ್ನ ಹುಟ್ಟಿನ ಕಾರಣದಿಂದಾಗಿ ಯಾರನ್ನೂ ಅಸ್ಪೃಶ್ಯನೆಂದು ಪರಿಗಣಿಸತಕ್ಕದ್ದಲ್ಲ; ಈ ವರೆಗೆ ಹಾಗೆಂದು ಪರಿಗಣಿಸಲ್ಪಟ್ಟವರಾಗಿರುವವರು ಇನ್ನು ಮುಂದೆ ಸರ್ವ ಜನರ ಉಪಯೋಗಕ್ಕಾಗಿರುವ ಬಾವಿಗಳು, ಶಾಲೆಗಳು, ಸಾರ್ವಜನಿಕ ರಸ್ತೆಗಳು ಮತ್ತು ಇತರ ಎಲ್ಲ ಸಾರ್ವಜನಿಕ ಸಂಸ್ಥೆಗಳು ಇವುಗಳ ಉಪಯೋಗದಲ್ಲಿ ಇತರ ಹಿಂದುಗಳೊಂದಿಗೆ ಸಮಭಾಗಿಗಳಾಗುವಹಕ್ಕು ಹೊಂದಿರತಕ್ಕದ್ದು – ಎಂಬುದಾಗಿ ಈ ಸಮ್ಮೇಳನ ನಿರ್ಣಯಿಸುತ್ತದೆ. ಮೊತ್ತಮೊದಲಿನ ಅವಕಾಶ ದೊರೆತ ಕೂಡಲೆ ಈ ಹಕ್ಕು ಬಾಧ್ಯತೆ ಶಾಸನಬದ್ಧವಾಗತಕ್ಕದ್ದು ; ಹಾಗೆ ಶಾಸನಬದ್ಧವಾಗದೆ ಹೋದಲ್ಲಿ ಮುಂದೆ ಸ್ವರಾಜ್ಯದ ಪಾರ್ಲಿಮೆಂಟಿನಲ್ಲಿ ಪ್ರಥಮ ಶಾಸನಗಳಲ್ಲಿ ಒಂದಾಗಿ ಅಂಗೀಕೃತವಾಗತಕ್ಕದ್ದು.

"ಅಲ್ಲದೆ, ದೇವಾಲಯ ಪ್ರವೇಶಕ್ಕೆ ಇರುವ ನಿಷೇಧದ ಜೊತೆಗೆ ಸಾಂಪ್ರದಾಯಿಕವಾಗಿ ಇನ್ನೂ ಯಾವಯಾವ ಸಾಮಾಜಿಕ ನಿಷೇಧಗಳನ್ನು ನಿಮ್ನವರ್ಗದವರೆನ್ನಿಸಿಕೊಂಡವರ ಮೇಲೆ ಹೊರಿಸಲಾಗಿದೆಯೋ ಅವೆಲ್ಲವನ್ನೂ ನ್ಯಾಯಬದ್ಧವಾದ ಮತ್ತು ಶಾಂತಿಯುತವಾದ ಮಾರ್ಗದಲ್ಲಿ ನಿರ್ಮೂಲವಾಗುವಂತೆ ಮಾಡುವುದು ಹಿಂದೂ ನಾಯಕರ ಕರ್ತವ್ಯ ಎಂದು ಒಪ್ಪಲಾಗಿದೆ."

ಬ್ರಿಟಿಷ್ ಸರ್ಕಾರ ತಾನು ಮಾಡಿದ್ದ ತಪ್ಪನ್ನು ತಿದ್ದಿಕೊಂಡಿತು; ಹಿಂದುಗಳು ತಮ್ಮ ತಪ್ಪನ್ನು ತಿದ್ದಿಕೊಳ್ಳುವುದಾಗಿ ನಿರ್ಣಯಮಾಡಿದರು; ಮಹಾತ್ಮರು ತಮ್ಮ ಉಪವಾಸವನ್ನು ನಿಲ್ಲಿಸಿದರು.

ಬೊಂಬಾಯಿನ ನಿರ್ಣಯ ಮಾತ್ರವಲ್ಲದೆ, ದೇಶಾದ್ಯಂತವೂ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ನವೋತ್ಸಾಹ ಮೂಡಿತು. ಸತ್ಯಾಗ್ರಹದ ಹೋರಾಟದಲ್ಲಿ ಭಾಗ ವಹಿಸದೆ ಸೆರೆಮನೆಗೆ ಹೋಗದೆ ಇದ್ದ ಕಾಂಗ್ರೆಸ್ ಒಲವುಳ್ಳವರಿಗೆ ಒಂದು ಹೊಸ ಕಾರ್ಯಕ್ಷೇತ್ರ ತೆರೆದಂತಾಯಿತು. ಸುಂದರಮೂರ್ತಿಯೂ ಕೂಡ ತಾನು ಕೈಕೊಂಡಿದ್ದ ಕಾರ್ಯವನ್ನು ಅಷ್ಟಕ್ಕೇ ಬಿಟ್ಟು ತನ್ನ ಹಳ್ಳಿಗೆ ಹಿಂದಿರುಗಿ ಅಸ್ಪೃಶ್ಯರ ಉದ್ಧಾರಕಾರ್ಯಕ್ಕೆ ಇನ್ನಾದರೂ ಸೊಂಟ ಕಟ್ಟಿ ನಿಲ್ಲಬಾರದೇಕೆ ಎಂದು ಆಲೋಚಿಸಿದನು. "ಆ ಕಾರ್ಯ ನಿನಗೆ ಕಾದೇ

ಇದೆ. ಜೀವಾವಧಿಯ ಕೆಲಸ. ಜನ ಈಗ ಅಲ್ಲಿ ಇಲ್ಲಿ ಉತ್ಸಾಹ ತೋರುತ್ತಾರೆ
ಆಮೇಲೆ ತಣ್ಣಗಾಗುತ್ತಾರೆ. ಸ್ವರಾಜ್ಯವಾದರೂ ಬಂದೀತು; ಹರಿಜನ
ಸ್ಥಿತಿ ನೀನು ಎಣಿಸಿರುವಷ್ಟು ಬೇಗ ಸುಧಾರಿಸುತ್ತದೆಂದು ನನಗೆ ಅನ್ನಿಸು
ದಿಲ್ಲ" ಎಂದು ಕುಲಕರ್ಣಿ ಹೇಳಿದ್ದರ ಮೇರೆಗೆ, ಸುಂದರ ಸುಮ್ಮನಾದ.

ಸುಂದರ ತಾತ್ಕಾಲಿಕವಾಗಿ ತಟಸ್ಥನಾದ, ದಿಟ; ಕಾರಣ, ಅವನ
ದೇಶಸೇವೆಯ ಇನ್ನೊಂದು ಕಾರ್ಯಕ್ಷೇತ್ರದಲ್ಲಿ ಪ್ರವೃತ್ತನಾಗಿದ್ದದು ಒಂದು
ಮುಂದೆ ಆ ಕಾರ್ಯಕ್ಕೇ ಕೈಯಿಕ್ಕುವನೆಂಬ ಭರವಸೆ ಒಂದು. ಆದರೆ
ದೇಶದಲ್ಲಿ, ಗಾಂಧಿಯ ಕರೆಗೆ ಕಿವಿಗೊಟ್ಟು ಹರಿಜನಕಾರ್ಯಕ್ಕೆಂದು ತತ
ಕ್ಷಣ ಮುಂದೆ ಬಂದವರು ಅನೇಕಾನೇಕ ಮಂದಿ. ಹರಿಜನರಿಗೆ ದೇವಾಲಯ
ಪ್ರವೇಶವನ್ನು ದೊರಕಿಸಬೇಕೆಂದು ಹಲವಾರು ಉತ್ಸಾಹಶಾಲಿಗಳು ಆಮ
ಣಾಂತ ಉಪವಾಸಮಾಡುವುದಾಗಿ ಮನಸ್ಸುಮಾಡಿದರು. ಆದರೆ, ಗಾಂ
ಯುವರು ಅದಕ್ಕೆ ಅಧಿಕಾರ ಬೇಕೆಂದು ಅಂಥವರನ್ನು ತಡೆದರು.

ಗಾಂಧಿಯುವರು ಮಹೋಪವಾಸವನ್ನು ಕೈಕೊಂಡ ಕಾಲದಲ್ಲಿಯೆ
ಮಲಬಾರಿನಲ್ಲಿ ಸಮಾಜಸೇವಾ ಕಾರ್ಯದಲ್ಲಿ ನಿರತರಾಗಿದ್ದ ಕೇಳಪ್ಪನ
ಎಂಬವರು ಆಮರಣಾಂತ ಉಪವಾಸವನ್ನು ಕೈಕೊಂಡರು. ಗುರುವ
ಯೂರು ದೇವಸ್ಥಾನಕ್ಕೆ ಅಸ್ಪೃಶ್ಯರಿಗೆ ಪ್ರವೇಶಾವಕಾಶ ದೊರಕಿಸಬೇಕೆ
ಬುದೇ ಅವರ ಉಪವಾಸದ ಉದ್ದೇಶ. ದೇವಾಲಯದ ಧರ್ಮದರ್ಶಿಗಳಿ
ಕೇಳಪ್ಪನ್ ಅವರು ಪರ್ಯಾಲೋಚನೆಗೆ ತಕ್ಕಷ್ಟು ಕಾಲಾವಕಾಶ ಕೊಟ್ಟಿ
ಲ್ಲಿಲ್ಲ. ಇದು ಸರಿಯಲ್ಲವೆಂದು ಗಾಂಧಿಯುವರಿಗೆ ಕಂಡಿತು. ನೈತಿಕ ದೃಷ್ಟಿ
ಯಿಂದ ಉಪವಾಸ ನಿಲ್ಲಿಸಬೇಕೆಂದು ಅವರು ಕೇಳಪ್ಪನ್ ಅವರಿಗೆ ತಂ
ಕಳಿಸಿದರು. ಗಾಂಧಿಯುವರ ಮಾತಿಗೆ ತಲೆಬಾಗಿ ಅವರು ಉಪವಾ
ನಿಲ್ಲಿಸಿದರು.

೧೯೩೩ ರ ಮೇ ೮ ರಲ್ಲಿ ಮಹಾತ್ಮಾ ಗಾಂಧಿಯುವರು ೨೧ ದಿನಗ
ಉಪವಾಸವನ್ನು ಮತ್ತೆ ಕೈಕೊಂಡರು. "ಹರಿಜನ ಸಮಸ್ಯೆಯ ಸಂಬಂ
ವಾಗಿ ನಾನೂ ನನ್ನ ಸಹೋದ್ಯೋಗಿಗಳೂ ಹೆಚ್ಚು ಜಾಗರೂಕರಾಗಿರಬೆ
ಕೆಂಬ ಉದ್ದೇಶದಿಂದ ನನ್ನ ಮತ್ತು ಅವರ ಪರಿಶುದ್ಧ್ಯರ್ಥವಾಗಿ ಈ ಉ
ವಾಸ ನನ್ನ ಹೃತ್ಪೂರ್ವಕ ಪ್ರಾರ್ಥನೆ" ಎಂದು ಗಾಂಧಿಯುವರು ಹೇಳಿದರೆ

ಅದೇ ದಿನ ಸಂಜೆ ಸರ್ಕಾರ ಅವರನ್ನು ಬಿಡುಗಡೆ ಮಾಡಿತು. ಆದರೂ, ಅವರು ತಮ್ಮ ಉಪವಾಸವನ್ನು ಬಿಡದೆ ಮುಂದುವರಿಸಿ, ಅಗ್ನಿಪರೀಕ್ಷೆಯನ್ನು ಹಾಯ್ದುಬಂದರು. ಉಪವಾಸ ಮುಗಿದ ಮೇಲೆ ಸತ್ಯಾಗ್ರಹದ ಚಳವಳಿಯ ಪ್ರಗತಿಯ ವಿಚಾರವಾಗಿ ಕೇಳಿ ತಿಳಿದುಕೊಂಡರು; ಅದು ಯಶಸ್ವಿಯಾಗಿ ನಡೆದದ್ದರ ಬಗ್ಗೆ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು.

ಗಾಂಧಿಜಿಯವರು ಬಿಡುಗಡೆಯಾಗಿದ್ದ ಅವಕಾಶವನ್ನು ಸದುಪಯೋಗಪಡಿಸಿಕೊಂಡು ರಾಜಕೀಯ ಪರಿಸ್ಥಿತಿಯನ್ನು ಪರಿಶೀಲಿಸಲೋಸುಗ ೧೯೩೩ ಜುಲೈ ೧೨ ರಲ್ಲಿ ಪೂನಾ ನಗರದಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಸಮ್ಮೇಳನ ನಡೆಯಿತು. ಸಾಮೂಹಿಕ ಸತ್ಯಾಗ್ರಹವನ್ನು ನಿಲ್ಲಿಸಿ ವೈಯಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಿಸತಕ್ಕದ್ದೆಂದು ಅಲ್ಲಿ ತೀರ್ಮಾನವಾಯಿತು. ಆ ಸತ್ಯಾಗ್ರಹವನ್ನು ತಾವೇ ಸ್ವತಃ ತಮ್ಮ ಸಾಬರಮತಿಯ ಆಶ್ರಮವಾಸಿಗಳೊಂದಿಗೆ ಪ್ರಾರಂಭಿಸುವುದಾಗಿ ನಿಶ್ಚಯಿಸಿ, ಆಶ್ರಮನ್ನು – ತಮಗೆ ಅತ್ಯಂತ ಪ್ರಿಯವಾಗಿದ್ದ ಆಶ್ರಮವನ್ನು – ಮುಚ್ಚಿದರು. ಆಶ್ರಮದ ಆಸ್ತಿಪಾಸ್ತಿಯನ್ನು ಸರ್ಕಾರಕ್ಕೆ ಕೊಡಹೋದರು. ಅವರ ದಾನವನ್ನು ಸರಕಾರ ನಿರಾಕರಿಸಲು, ಅವರು ಅದನ್ನು ಹರಿಜನ ಉದ್ಧಾರ ಕಾರ್ಯದ ಚಳವಳಿಗೆ ಮೀಸಲಿಟ್ಟರು. ಗಾಂಧಿಯವರು ೧೯೩೩ ರ ಆಗಸ್ಟ್ ೧ ನೆಯ ತಾರೀಖು ಸತ್ಯಾಗ್ರಹಕ್ಕಾಗಿ ರಾಸ್ ಗ್ರಾಮಕ್ಕೆ ಯಾತ್ರೆ ಮಾಡುವುದಾಗಿ ನಿಶ್ಚಯಿಸಿದರು. ಆದರೆ ಅದರ ಹಿಂದಿನ ರಾತ್ರಿಯೇ ಸರ್ಕಾರ ಅವರನ್ನೂ ಅವರ ಜೊತೆಯ ೩೪ ಮಂದಿ ಆಶ್ರಮವಾಸಿಗಳನ್ನೂ ಬಂಧಿಸಿತು. ಗಾಂಧಿಯವರ ದಸ್ತಗಿರಿಯಾದ ಮೇಲೆ ದೇಶಾದ್ಯಂತ ವೈಯಕ್ತಿಕ ಸತ್ಯಾಗ್ರಹ ಮೊದಲಾಗಿ, ಆಗೆಸ್ಟ್ ೧೯೩೩ರಿಂದ ಮಾರ್ಚ್ ೧೯೩೪ ರ ವರೆಗೆ ಒಂದೇ ಸಮನಾಗಿ ನಡೆಯಿತು.

ಕುಲಕರ್ಣಿ ಈ ಹಿಂದೆಯೇ ಸೆರೆಮನೆಯನ್ನು ಪ್ರವೇಶಿಸಿದ್ದ; ಯಾವುದೊಂದೂ ನಿರ್ದಿಷ್ಟ ಕಾರ್ಯವಿಲ್ಲದೆ, ತನ್ನ ಊರಿಗೂ ಹಿಂದಿರುಗದೆ, ಡೋಲಾಯಮಾನಸ್ಕನಾಗಿದ್ದ ಸುಂದರನಲ್ಲಿ ಹೊಸ ಉತ್ಸಾಹದ ಚಿಲುಮೆ ಚಿಮ್ಮಿತು. ನಾನು ಮುಂದೆ ತಾನು ಮುಂದೆ ಎಂದು ತಂಡೋಪತಂಡವಾಗಿ ಬರುತ್ತಿದ್ದ ಸತ್ಯಾಗ್ರಹಿಗಳ ದಳದಲ್ಲಿ ಸುಂದರನೂ ಸೇರಿ ಬಹು ಸುಲಭವಾಗಿ ಸೆರೆಮನೆಯನ್ನು ಸೇರಿದ. ಅವನಿಗೆ ಒಂದು ವರ್ಷ ಕಾಲದ ಸಜಾ ಆಯಿತು.

ತಾವು ದಸ್ತಗಿರಿಯಾದ ಕೆಲವು ದಿನಗಳಲ್ಲಿಯೆ ಮಹಾತ್ಮಾ ಗಾಂಧಿಯವರು ಜೈಲಿನಲ್ಲಿ ಮತ್ತೊಂದು ಉಪವಾಸ ಮಾಡುವುದಾಗಿ ನಿರ್ಧರಿಸಿದರು. ಇದಕ್ಕೆ ಕಾರಣ, ಜೈಲಿನಲ್ಲಿ ಅವರಿಗೆ ಹಿಂದೆ ಕಲ್ಪಿಸಿಕೊಟ್ಟಿದ್ದ ಕೆಲವು ಸೌಕರ್ಯಗಳನ್ನು ಕೊಡಲು ನಿರಾಕರಿಸಿದುದು. ಸರ್ಕಾರ ತನ್ನ ನಿರ್ಧಾರದಿಂದ ಕದಲಲಿಲ್ಲ; ಗಾಂಧಿಯವರೂ ಕದಲಲಿಲ್ಲ. ಉಪವಾಸವನ್ನು ಪ್ರಾರಂಭಮಾಡಿಯೇ ಬಿಟ್ಟರು. ಈ ಸಲ ಅವರ ದೇಹಸ್ಥಿತಿ ಕೆಡುತ್ತ ಬಂದಿತು. ಆಗಸ್ಟ್ ೨೩ ರ ಹೊತ್ತಿಗೆ, ಅವರು ಉಳಿಯುವುದೇ ಕಷ್ಟವೆಂದು ಸರ್ಕಾರ ಮನಗಂಡಿತು. ಜೈಲಿನಲ್ಲಿ ಅವರು ಸತ್ತು, ಅವರ ಕೊಲೆಯ ಅಪವಾದ ಹೊತ್ತುಕೊಳ್ಳಲು ಸರ್ಕಾರ ಇಷ್ಟಪಡಲಿಲ್ಲ ಅದೇ ತಾರೀಖಿನ ದಿನ, ಸರ್ಕಾರ ಯಾವ ಷರತ್ತೂ ಇಲ್ಲದೆ ಗಾಂಧಿಯವರನ್ನು ಸೆರೆಯಿಂದ ಬಿಡುಗಡೆ ಮಾಡಿತು. ಆದರೆ, ಇದರಿಂದ ಗಾಂಧಿಯವರು ತಮ್ಮ ಮಟ್ಟಿಗೆ ಒಂದು ಧರ್ಮಸಂಕಟಕ್ಕೆ ಸಿಲುಕಿದರು. ಬಿಡುಗಡೆಯ ಸಂದರ್ಭ ವಿಶೇಷರೀತಿಯದಾಗಿದ್ದಿತು. ಮತ್ತೆ ಕಾನೂನು ಭಂಗ, ದಸ್ತಗಿರಿ, ಉಪವಾಸ, ಬಿಡುಗಡೆ – ಈ ‘ ಇಲಿ ಬೆಕ್ಕಿನ ಆಟ ’ ಅವರಿಗೆ ಸಾಕಾಗಿತ್ತು. ವಾಸ್ತವವಾಗಿ, ಅವರ ಬಂಧವನದ ಅವಧಿ ಆಗಸ್ಟ್ ೩, ೧೯೩೪ ರ ವರೆಗೆ ನಡೆಯುವುದಾಗಿತ್ತು. ಆ ವರೆಗೆ ತಾವು ಹೊರಗಿದ್ದರೂ, ಬಂದಿಗಳೇ ಎಂಬ ಭಾವನೆಯಿಂದ ಗಾಂಧಿಯವರು ಯಾವ ರಾಜಕೀಯಕ್ಕೂ ಕೈಯಿಕ್ಕಲು ಇಷ್ಟಪಡದೆ, ಈ ಕಾಲಾವಧಿಯನ್ನು ಬಹುಮಟ್ಟಿಗೆ ಹರಿಜನ ಚಳವಳಿಯನ್ನು ಮುಂದುವರಿಸುವುದಕ್ಕೆ ವಿನಿಯೋಗಿಸುವುದಾಗಿ ನಿರ್ಧರಿಸಿ, ಆ ಉದ್ದೇಶದಿಂದ ಅಖಂಡ ಭಾರತದ ಹರಿಜನ ಯಾತ್ರೆಯನ್ನು ಕೈಕೊಂಡು ಧರ್ಮಸಂಕಟದಿಂದ ಪಾರಾದರು. ಅವರ ಈ ಹರಿಜನ ಯಾತ್ರೆ ೧೯೩೩ ರ ನೊವೆಂಬರಿನಲ್ಲಿ ಪ್ರಾರಂಭವಾಗಿ ಹತ್ತು ತಿಂಗಳ ಕಾಲ ನಡೆಯಿತು. ಭಾರತದ ಪ್ರತಿಯೊಂದು ಪ್ರಾಂತವನ್ನೂ ಸುತ್ತಿದ್ದರು. ಹರಿಜನ ಸಮಸ್ಯೆಯ ಹತ್ತಾರು ಮುಖಗಳನ್ನು ಪ್ರತ್ಯಕ್ಷ ಕಂಡು ಅರಿತರು, ಅದರ ಪರಿಹಾರಕ್ಕೆ ಉಪಾಯ ಮಾರ್ಗವನ್ನು ಅನ್ವೇಷಣ ಮಾಡತೊಡಗಿದರು. ಹರಿಜನೋದ್ಧಾರಕ್ಕೆ ಅವರು ಯಾತ್ರೆ ಹೊರಟದ್ದೇ ಒಂದು ಮಹಾಪ್ರಚಾರಸಾಧನವಾಯಿತು. ಹೋದ ಕಡೆಯಲ್ಲೆಲ್ಲ ಜನ ಅಮಿತೋತ್ಸಾಹವನ್ನು ಪ್ರದರ್ಶಿಸಿದರು. ಅವರ ಹರಿಜನ ನಿಧಿಗೆ ಬಡವರು ಬಲ್ಲಿದ

ರೆಲ್ಲರೂ ಕೈಯೆತ್ತಿ ದಾನಮಾಡಿದರು. ತಮ್ಮ ಕೈಯ ಚಿನ್ನದ ಬಳೆಗಳನ್ನೆ ತೆಗೆದುಕೊಟ್ಟ ಮಹಿಳೆಯರು ಎಷ್ಟು ಮಂದಿಯೋ! ಆಗ ಗಾಂಧಿಯವರು ತಮ್ಮ ಹಸ್ತಾಕ್ಷರಕ್ಕೂ ಹಣ ವಸೂಲು ಮಾಡಿದರು!

ಆದರೆ, ಈ ಯಾತ್ರೆಯಲ್ಲಿ ಡಿಸೆಂಬರ್ ತಿಂಗಳು ಒಂದು ಮಹಾ ಪರೀಕ್ಷಾ ಸಂಧಿಯಾಯಿತು. ಕೇರಳದ ಕೇಳಪ್ಪನ್ ಅವರು ಗುರುವಾಯೂರು ದೇವಾಲಯದ ಧರ್ಮದರ್ಶಿಗಳಿಗೆ ಮೂರು ತಿಂಗಳ 'ನೋಟೀಸು' ಕೊಟ್ಟು, ತಮ್ಮ ಬೇಡಿಕೆ ಸಲ್ಲದೆ ಹೋದರೆ ಆಮರಣಾಂತ ಉಪವಾಸ ಮಾಡುವುದಾಗಿ ನಿಶ್ಚಯಿಸಿದ್ದರು ಅವರ ಆಮರಣಾಂತ ಉಪವಾಸವೆಂದರೆ ಗಾಂಧಿಯವರ ಆಮರಣಾಂತ ಉಪವಾಸವೇ. ಆದ್ದರಿಂದ, ದೇವಾಲಯದ ಊರಿನ ಭಕ್ತವೃಂದದ ಅಭಿಮತವನ್ನು ತೆಗೆದುಕೊಳ್ಳುವ ತೀರ್ಮಾನವಾಯಿತು. ಹಾಗೆಯೇ ಮಾಡಲಾಯಿತು. ೨೦,೧೬೩ ಮಂದಿ ಅಭಿಮತ ಕೊಟ್ಟರು; ಇದರಲ್ಲಿ ೧೫,೫೬೩ ಮಂದಿ ದೇವಾಲಯ ಪ್ರವೇಶದ ಪರವಾಗಿ ಅಭಿಮತ ಕೊಟ್ಟಿದ್ದರು; ಇವರ ಪೈಕಿ ೮,೦೦೦ ಮಂದಿ ಮಹಿಳೆಯರೇ ಇದ್ದರು. ಇದು ಭಾರತಕ್ಕೆಲ್ಲಾ ಮಾರ್ಗದರ್ಶಕವಾಯಿತು. ಗಾಂಧಿಯವರ ಉಪವಾಸ ಸಂಭವ ನಿವಾರಣೆಯಾಯಿತು. ಅವರ ಮಹಾ ಯಾತ್ರೆ ಸರ್ವವಿಧದಿಂದಲೂ ಯಶಸ್ವಿಯಾಯಿತು.

ಈ ಮಧ್ಯೆ, ಚಳವಳಿಯಲ್ಲಿಯೂ ಉತ್ಸಾಹ ತಗ್ಗುತ್ತಿದ್ದುದನ್ನು ಕಂಡು ಕೆಲವು ಕಾಂಗ್ರೆಸ್ ಪ್ರಮುಖರು ಗಾಂಧಿಯವರೊಡನೆ ಚರ್ಚೆಮಾಡಿದರು. ಚುನಾವಣೆಗಳಲ್ಲಿ ಕಾಂಗ್ರೆಸ್ ಭಾಗ ವಹಿಸಿ ಶಾಸನಸಭೆಗಳ ಮೂಲಕ ಕಾಂಗ್ರೆಸ್ ಕಾರ್ಯನೀತಿಯನ್ನು ಕಾರ್ಯರೂಪಕ್ಕೆ ತರಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಗಾಂಧಿಯವರು ಈ ಅಭಿಪ್ರಾಯವನ್ನು ಅನುಮೋದಿಸಿ, ೧೯೩೪ರ ಎಪ್ರಿಲ್ ೭ರಲ್ಲಿ ಒಂದು ಹೇಳಿಕೆ ಹೊರಡಿಸಿ, ಸತ್ಯಾಗ್ರಹ ಚಳವಳಿಯನ್ನು ನಿಲ್ಲಿಸಿದರು.

ಸತ್ಯಾಗ್ರಹ ನಿಂತರೂ ಸರ್ಕಾರ ಸೆರೆಯಾಳುಗಳನ್ನು ಬಿಡುವುದರಲ್ಲಿ ಸಾವಕಾಶ ಮಾಡಿತು. ಅವಧಿ ಮುಗಿಯುವುದಕ್ಕೆ ಮುಂಚೆಯೇ ಕೆಲವರನ್ನು ಬಿಟ್ಟರು; ಕೆಲವು ಮಂದಿ ಪ್ರಮುಖರನ್ನು ಬಿಡುಗಡೆ ಮಾಡಲು ಮೀನ ಮೇಷ ಎಣಿಸುತ್ತಿದ್ದರು; ಸಾಮಾನ್ಯ ಸತ್ಯಾಗ್ರಹಿಗಳು ಕೆಲವರು ಅವರ

ಗಮನಕ್ಕೇ ಬರಲಿಲ್ಲ. ಹೀಗಾಗಿ, ಸುಂದರ ತನ್ನ ವರ್ಷಪೂರ್ತಿ ಶಿಕ್ಷೆಯನ್ನು ಅನುಭವಿಸಿ, ೧೯೩೪ ರ ಅಕ್ಟೋಬರಿನಲ್ಲಿ ತನ್ನ ಊರಿಗೆ ಹಿಂದಿರುಗಿದನು.

೬೩

ಸುಂದರಮೂರ್ತಿ ಸೆರೆಮನೆಯಲ್ಲಿದ್ದಾಗ ಅವನ ತಾಯಿ ನರಸಮ್ಮ ನವರಿಗೆ ಅವರ ದೇಹದಲ್ಲಿ ಅಡಗಿಕೊಂಡಿದ್ದ ಹಳೆಯ ರೋಗ ಮರುಕೊಳಿಸಿಕೊಂಡು ಪ್ರಬಲವಾಯಿತು. ಪಂಡಿತರು ಎಂಥದೋ ವಾತರೋಗ ಎಂದು ಕಷಾಯ ಸೇವನೆ ತೈಲಲೇಪನ ಪಥ್ಯಪಾನ ಮೊದಲಾದುವನ್ನೆಲ್ಲ ವಿಧಿಸಿದ್ದರು. ಇವರ ರೋಗದ ದೆಸೆಯಿಂದಾಗಿ, ಸ್ವಲ್ಪ ದೂರದೂರವಾಗಿದ್ದ ನಂಜುಂಡ ಶಾಸ್ತ್ರಿಗಳ ಮನೆಯವರೂ ಮೈಲಾರಯ್ಯನವರ ಹೆಂಡತಿ ಕಾವೇರಮ್ಮನೂ ಹತ್ತಿರ ಹತ್ತಿರವಾದರು. ಮೈಲಾರಯ್ಯನಂತೂ ಬೆನ್ನಲ್ಲಿ ಬಿದ್ದ ತಮ್ಮ; ಹಿರಿಯ ಮಗ ಸುಂದರನೂ ಇಲ್ಲ, ಶಾಮಿ ಬೆಂಗಳೂರಿನಲ್ಲಿ ಬಿ. ಎಸ್‌ಸಿ, ಕ್ಲಾಸಿನಲ್ಲಿ ಓದುತ್ತಿದ್ದಾನೆ; ಮನೆಗೆಲಸದ ಭಾರವೆಲ್ಲ ಕಿರುವರೆಯದ ತುಂಗೆಯ ಮೇಲೆ ಬಿದ್ದಿದೆ; ಇನ್ನು ಸೂರಿ, ಚಿಕ್ಕವನು; ಮನೆಯಲ್ಲಿ ಯಾರೂ ದಿಕ್ಕಿಲ್ಲದಂತಾಗಿತ್ತು. ಕಾಳೇಗೌಡ ದಿನಕ್ಕೆ ಮೂರು ಸಲ ಬಂದು ವಿಚಾರಿಸಿಕೊಂಡು ಹೋಗುವನು, ಕೃಷ್ಣಪ್ಪನವರ ಜೊತೆ ಜಗಲಿಯ ಮೇಲೆ ತಲೆಯ ಮೇಲೆ ಕೈಯಿಟ್ಟು ಕುಳಿತುಕೊಳ್ಳುವನು. ಇನ್ನೇನು ಮಾಡಬಲ್ಲ, ಪಾಪ, ಅವನು? ಬೆಂಗಳೂರಿಗೆ ರಾಮಸ್ವಾಮಯ್ಯನಿಗೆ ಕಾಗದ ಹಾಕಿತ್ತು; ಅವನೂ ಶಾಮಿ ಇಬ್ಬರೂ ಬಂದು ನರಸಮ್ಮನವರನ್ನು ನೋಡಿಕೊಂಡು ಹೋಗಿದ್ದರು. ಗಂಗಮ್ಮ ತುಂಬು ಬಸಿರಿ, ಬರುವಂತಿರಲಿಲ್ಲ: ಅವಳು ಬಸಿರಿ ಎಂದು ತಾಯಿಗೆ ಒಂದು ಕಡೆ ಹಿಗ್ಗು; ತಾನು ಹಾಸಿಗೆ ಹಿಡಿದು ಮಲಗಿ, ಒಂದು ಮಗು ಕಂಡೇನೇ ಎಂದು ಕಾದು ಕಾದು ಈಗ ಬಸಿರಿಯಾಗಿದ್ದ ಮಗಳನ್ನು ಕರಸಿಕೊಂಡರೆ ಬಾಣಂತಿತನ ಮಾಡುವವರು ಯಾರು? ತಾಯಾಗಿ ಮಗಳ ಬಾಣಂತಿತನ ಮಾಡುವುದಕ್ಕೆ ಇಲ್ಲವಾಯಿತೆ ಎಂದು ಇನ್ನೊಂದು ಕಡೆ ಕೊರಗು. ಸುಂದರನ ವಿಚಾರವಂತೂ ಏನೂ ತಿಳಿಯದು. ಅವನಿಗೆ ಮೊದಲು ಮನೆಯಲ್ಲಿ ಕೊಟ್ಟಿದ್ದ ಪತ್ರಿಕೆಯ ವಿಳಾಸಕ್ಕೆ ಕೃಷ್ಣಪ್ಪನವರು ಕಾಗದ ಹಾಕಲು, 'ಅವನು ಈಗ ಇಲ್ಲಿ ಇಲ್ಲ' ಎಂದಷ್ಟೇ ಬೊಂಬಾಯಿಂದ

ಉತ್ತರ ಬಂದಿತ್ತು. ಅವನೇನು ಸೆರೆಮನೆಗೇ ಹೋದನೋ ಪೋಲೀಸರ ಗುಂಡಿನೇಟಿಗೆ ಗುರಿಯಾದನೋ ಎಂದು ಊರವರೆಲ್ಲರ ಶಂಕೆಯಾಗಿತ್ತು. ಸೆರೆಮನೆಗೆ ಹೋದ ಎಂಬ ಶಂಕೆಗಿಂತ ಸತ್ತೇ ಹೋಗಿರಬೇಕೆಂಬ ಶಂಕೆ ನರಸಮ್ಮನವರಲ್ಲಿ ಬಲವಾಗಿ, 'ಪುತ್ರಶೋಕ' ಅವರನ್ನು ತಿನ್ನ ತೊಡಗಿತು. ಮನಸ್ಸಿನ ವ್ಯಥೆ ದೇಹದ ವ್ಯಾಧಿಯನ್ನು ಉತ್ಕಟಾವಸ್ಥೆಗೆ ಒಯ್ದಿತು. ಅವರು ಉಳಿಯುವ ಆಸೆ ದಿನದಿನಕ್ಕೆ ಕಡಮೆಯಾಗುತ್ತ ಬರುತ್ತಿತ್ತು. ನರಸಮ್ಮ ನವರ ಈ ಎಲ್ಲ ಕೊರಗುಗಳೂ ಇದ್ದು, ಹೆಂಡತಿಗೆ ಹೀಗೆ ಆಯಿತೆ ಎಂದು ಕೃಷ್ಣಪ್ಪನವರಿಗೆ ಹೆಚ್ಚಿನ ಕೊರಗು. ತಮ್ಮ ಸೂರಪ್ಪ ದೇಶಾಂತರ ಹೋದಾಗಲೇ ಅವರು ಮಗನನ್ನು ಕಳೆದುಕೊಂಡಂತೆ ದುಃಖಪಟ್ಟಿದ್ದರು; ಈಗ ಸುಂದರ, ನರಸಮ್ಮನವರ ಮಾತಿನಲ್ಲಿ, 'ಚಿಕ್ಕಪ್ಪನ ದಾರಿ ಹಿಡಿದಿದ್ದ.' ಕೃಷ್ಣಪ್ಪನವರು ಕಂಗೆಟ್ಟು ಕೃಶವಾಗುತ್ತ ಬರುತ್ತಿದ್ದರು.

ಈ ಸ್ಥಿತಿಯಲ್ಲಿ, ನರಸಮ್ಮನವರು ಕೊರಗಿನ ಹಾಸಿಗೆಯ ಮೇಲೆ ಮಲಗಿದ್ದಾಗ, ವಿಶ್ವನಾಥ, ಕಮಲೆ ಬಸಿರು ಎಂದು ಕಾಗದ ಹಾಕುವ ಮುನ್ನವೇ ತವರುಮನೆಗೆ ಕರೆದು ತಂದು ಬಿಟ್ಟಿದ್ದ. ಈ ಸುದ್ದಿ ಕೇಳಿದಾಗ ನರಸಮ್ಮನವರ ಕೊರಗು ಕವಲೊಡೆಯಿತು. ಕಮಲೆಯ ಹಾಗೆ ಗಂಗಮ್ಮ ನನ್ನು ಕರಸಿಕೊಳ್ಳಲಾಗಲಿಲ್ಲವಲ್ಲಾ ಎಂಬ ಹಳೆಯ ಕೊರಗು ಹೊಸದಾ ಯಿತು; ಕಮಲೆ ವಿಶ್ವನಾಥನ ಹೆಂಡತಿಯಾಗುವ ಬದಲು ಸುಂದರನ ಹೆಂಡತಿಯಾಗಿದ್ದಿದ್ದರೆ ತಾವು ಈಗ ಮಗನ ಮಗುವನ್ನು, ಕುಲದೀಪಕನನ್ನು, ಕಾಣಬಹುದಾಗಿತ್ತು. ಆ ಭಾಗ್ಯ ತಮಗೆ ಆಗಿಬರಲಿಲ್ಲ. ಇದು ಹೊಸ ಕೊರಗು. ಈ ಕೊರಗಿನ ಮೂಟೆ ಬಡಜೀವಕ್ಕೆ ಭಾರವಾಗುತ್ತ ಬಂತು.

ಕೃಷ್ಣಪ್ಪನವರಿಗೆ ಈ ಸಂದರ್ಭದಲ್ಲಿ ಮುರುಕು ಮಂಟಪದ ಬೈರಾಗಿಯ ನೆನಪಾಯಿತು. ಆತನಿಗೆ ಏನಾದರೂ ಯಂತ್ರ ಮಂತ್ರ ಬರಬಹುದು, ಹೆಂಡತಿಯನ್ನು ಗುಣಪಡಿಸುತ್ತಾನೆ ಎಂಬ ಆಶೆ ತಲೆದೋರಿತು. ಹೆಂಡತಿಯ ಸ್ಥಿತಿಯನ್ನು ಆತನಿಗೆ ತಿಳಿಸಿದರು. ಬೈರಾಗಿ 'ನಾನು ಬರೀ ಗಡ್ಡದ ಬೈರಾಗಿ. ನನಗೇನೂ ತಿಳಿಯದು. ನನ್ನ ಮಾತನ್ನು ಕೇಳುವುದಾದರೆ, ಆಸ್ಪತ್ರೆಯ ಡಾಕ್ಟರಿಗೆ ತೋರಿಸಿ, ಅವರು ಹೇಳಿದ ಹಾಗೆ ಮಾಡಿ' ಎಂದು ಸಲಹೆ ಕೊಟ್ಟು, 'ಆದರೂ ಬಂದು ನೋಡಿಕೊಂಡು ಹೋಗುತ್ತೇನೆ'

ಎಂದು ಪ್ರತಿದಿನ ಸಂಜೆಯೂ ಬಂದು ನೋಡಿಕೊಂಡು ಹೋಗುತ್ತಿದ್ದನು. ಬೈರಾಗಿಯ ಸಲಹೆಯಂತೆ ಕೃಷ್ಣಪ್ಪನವರು ಆಸ್ಪತ್ರೆಯ ಡಾಕ್ಟರನ್ನು ಕರೆದು ತಂದು ಹೆಂಡತಿಯ ರೋಗಪರೀಕ್ಷೆ ಮಾಡಿಸಿದರು. 'ಆಸ್ಪತ್ರೆ ಔಷಧಿ ನಾನು ಕುಡಿಯುವುದಿಲ್ಲ' ಎಂದು ನರಸಮ್ಮನವರು ಹಟ ಹಿಡಿದರು. 'ಇವರು ಆ ಡಾಕ್ಟರಲ್ಲ ಬೇರೆಯ ಡಾಕ್ಟರು, ಬ್ರಾಹ್ಮಣರು' ಎಂದು ಕೃಷ್ಣಪ್ಪನವರು ಎಷ್ಟು ಸಮಾಧಾನ ಹೇಳಿದರೂ ಕೇಳಲಿಲ್ಲ. ಡಾಕ್ಟರೂ ಕೂಡ, 'ಇಲ್ಲಿನ ಚಿಕಿತ್ಸೆಯಿಂದ ಏನೂ ಪ್ರಯೋಜನವಾಗುವುದಿಲ್ಲ, ಬೆಂಗಳೂರಿಗೆ ಕರೆದು ಕೊಂಡು ಹೋಗಬೇಕು' ಎಂದು ಸಲಹೆ ಮಾಡಿದರು. ನರಸಮ್ಮನವರು ಅದಕ್ಕೂ ಒಪ್ಪಲಿಲ್ಲ; ಆದರೆ ಕೃಷ್ಣಪ್ಪನವರು ನಿಶ್ಚಯಮಾಡಿಬಿಟ್ಟರು. ತಮ್ಮ ಸ್ವಯಾರ್ಜಿತವಾದ ತೋಟವನ್ನು – ಮಾದ ಚೆನ್ನಿ ಇದ್ದ ತೋಟವನ್ನು – ಆಧಾರ ಮಾಡಿ ಐನೂರು ರೂಪಾಯಿ ಸಾಲ ತೆಗೆದರು. ಆದರೆ ಕೃಷ್ಣಪ್ಪ ನವರ ಎಣಿಕೆ ಮಣ್ಣುಗೂಡಿತು; ನರಸಮ್ಮನವರು ಕಣ್ಣು ಮುಚ್ಚಿದರು. ತೆಗೆದ ಸಾಲ ನರಸಮ್ಮನವರ ಅಪರಕರ್ಮಗಳಿಗೆ ವಿನಿಯೋಗವಾಯಿತು. ಬೆಂಗಳೂರಿನಿಂದ ರಾಮಸ್ವಾಮಯ್ಯ ಗಂಗಮ್ಮ ಶಾಮಿ ಎಲ್ಲ ಬಂದಿದ್ದರು. ಸುಂದರ ಮಾಡಬೇಕಾದ ಕಾರ್ಯಗಳನ್ನೆಲ್ಲ ಶಾಮಿ ಮಾಡಬೇಕಾಯಿತು.

## ೬೪

ವಿಶ್ವನಾಥ ಕಮಲೆಯನ್ನು ತವರುಮನೆಗೆ ಬಿಡುವುದಕ್ಕೆ ಬಂದಿದ್ದ ವನು ಹೆಚ್ಚಾಗಿ ಅತ್ತೆಯ ಮನೆಯಲ್ಲಿಯೇ ಇರುತ್ತಿದ್ದನು. ಮಾವನ ಅಕ್ಕ ಎಂದಾಗಿ ಹಾಸಿಗೆ ಹಿಡಿದಿದ್ದ ನರಸಮ್ಮನವರನ್ನೂ ಮೈಲಾರಯ್ಯನವರೊಂದಿಗೆ ಹೋಗಿ ಎರಡು ಮೂರು ಸಲ ನೋಡಿಕೊಂಡು ಬಂದಿದ್ದನು. ಉಸಿರು ಮೆತ್ತಗಾಗುತ್ತ ಬರುತ್ತಿದ್ದ ನರಸಮ್ಮನವರು ಕುಗ್ಗಿದ ದನಿಯಲ್ಲಿಯೇ, "ನೋಡು, ವಿಶ್ವ, ನಿನ್ನನ್ನು ಕಂಡು ನನಗೆಷ್ಟೋ ಸಂತೋಷವಾಯಿತು. ನೀನು ಬಿ. ಎ. ಮಾಡಿ, ಮದುವೆ ಮಾಡಿಕೊಂಡು, ಬೆಂಗಳೂರಿನಲ್ಲಿ ಕೈತುಂಬ ಹಣ ಸಂಪಾದಿಸುತ್ತ, ಸಂಸಾರವೊಂದಿಗನಾಗಿ ಸುಖವಾಗಿ ದ್ದೀಯೆ. ಸುಂದರ ಹಾಳಾಗಿ ಹೋದ!" ಎಂದು ಅವನನ್ನು ಮೆಚ್ಚಿ ನುಡಿದು, ಸುಂದರನನ್ನು ನೆನೆದು ಕೊರಗಿದ್ದರು. ಊರಿನವರೂ ಕೂಡ

ಹಲವರು ವಿಶ್ವನಾಥನನ್ನು ಮೆಚ್ಚಿಕೊಂಡು ಹೊಗಳುತ್ತ ಇದ್ದರು. ಅವನ ಜುಟ್ಟು ಜನಿವಾರ ಎಲ್ಲ ಮೊದಲಿನಂತೆಯೇ ಇದ್ದುವು; ಹಣೆಯಲ್ಲಿ ವಿಭೂತಿಯೋ ಅಕ್ಷತೆಯ ಬೊಟ್ಟೋ ಇದ್ದೇ ಇರುತ್ತಿತ್ತು; ಬ್ರಾಹ್ಮಣಿಕೆಯ ಬೈರೂಪ ಸ್ವಲ್ಪವೂ ಬಣ್ಣಗುಂದಿರಲಿಲ್ಲ. ಆದರೆ, ಅವನ ಮೈಬಣ್ಣ ಮಾತ್ರ ಕಡಮೆಯಾಗುತ್ತ ಇತ್ತು; ಕಣ್ಣುಗಳು ಗುಳಿ ಬಿದ್ದಿದ್ದುವು; ಕೆನ್ನೆ ಸುಕ್ಕುಗಟ್ಟಿತ್ತು; ಮುಖ ಸಪ್ಪೆಯಾಗಿತ್ತು.

ಬೈರಾಗಿ ಕೃಷ್ಣಪ್ಪನವರ ಮನೆಗೆ ಸಂಜೆಯ ಹೊತ್ತು ಬರುತ್ತ ಇದ್ದುದು ವಿಶ್ವನಾಥನಿಗೆ ಗೊತ್ತಾಯಿತು. ಒಂದು ಸಂಜೆ ಅವನು ಹೊಳೆಯ ಕಡೆಗೆ ಹೋಗಿ ಮುರುಕು ಮಂಟಪಕ್ಕೆ ಭೇಟಿ ಕೊಟ್ಟನು. ಅವನು ನಿರೀಕ್ಷಿಸಿದಂತೆ ಅವನು ನೆನೆದ ಚೆನ್ನಿ ಅಲ್ಲಿ ಇದ್ದಳು. ನೆಟ್ಟನೆ ಹೋಗಿ ಚಪ್ಪರದಡಿಯಲ್ಲಿ ನಿಂತನು. ಚೆನ್ನಿ ಹೂಗಿಡಗಳಿಗೆ ನೀರೆರೆಯುತ್ತಿದ್ದಳು. ಅವನಿಗೆ, 'ಅಬ್ಬಾ! ಚೆನ್ನಿ' ಎನ್ನಿಸಿತು. ಅವನು ಎಷ್ಟಾದರೂ ಸಂಸ್ಕೃತ ಶಾಕುಂತಲ ನಾಟಕ ಓದಿದವನು ತಾನೆ! ಚೆನ್ನಿ–'ಸಾಧನೆ' — ಶಕುಂತಲೆಯಂತೆ ಕಂಡಳವನಿಗೆ. ತಾನೇ ದುಷ್ಯಂತ ಎಂಬ ಭಾವನೆ ಬಂದು ಅವನಿಗೆ ಮಂಕು ಹಿಡಿಸಿತು. ಹೆಚ್ಚು ಹೊತ್ತು ನಿಂತಿರಲು ಅವಕಾಶವಿಲ್ಲ. ದಕ್ಕಿದಷ್ಟು ಲಾಭ. ಆತುರದಿಂದ —'ಚೆನ್ನಿ!' ಎಂದನು. ಮಾತಾಡಲಿಲ್ಲ. ಸುಮ್ಮನೆ ತಿರುಗಿ ನೋಡಿದಳು. ಹಿಂದಿನ ಮುಗ್ಧಭಾವ, ಮುಗುಳುನಗೆ, ಅವಳ ಮುಖದಲ್ಲಿ ಕಾಣಲಿಲ್ಲ. ಆದರೆ, ಸಂಜೆಯ ಹೊಂಬಣ್ಣದ ಛಾಯೆಯಲ್ಲಿ ಮಾಗಿದ ಮಾವಿನ ಹಣ್ಣಿನಂತೆ ಬಣ್ಣಗೆ ಕಂಡಳು. ಸವಿ ನೋಡಲು ತವಕಿಸಿದನು; ತುಡುಕಿದನು. 'ಚೆನ್ನಿ, ಮರೆತೆಯಾ, ನಾನು ವಿಶ್ವನಾಥ' ಎಂದನು. ಅವಳೀಗ ಮಡಕೆಯನ್ನು ಕೆಳಗಿಟ್ಟು ಮಂಟಪದ ಹತ್ತಿರ ಹೋಗಿ ನಿಂತಿದ್ದಳು. ವಿಶ್ವನಾಥನ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಮರಗಳ ಸಂದಿಯಿಂದ ತೂರಿ ಬಂದ ಹೊಂಗಿರಣ ಅವಳ ಮುಖದ ಮೇಲೆ ಬಿದ್ದು, ರಾಗಪೂರ್ಣವಾಗಿ ಮೆರೆಯುತ್ತ, ಅವನಿಗೆ ಹುಚ್ಚು ಹಿಡಿಸಿತು. ಮುಖದ ಮೇಲಿನ ಮುನಿಸಿನ ಮುದ್ರೆ ಚೆಲುವಿನ ಅಂಶವಾಗಿಯೇ ಕಂಡಿತವನಿಗೆ. 'ನನ್ನ ಕೂಡ ಮಾತಾಡುವುದಿಲ್ಲವೋ?' ಎಂದು ಹತ್ತಿರ ಹೋಗಿ ಬಲಗೈಯಿಂದ ಅವಳ ಎಡಗೈಯನ್ನು ಹಿಡಿಯಹೋದನು; ಅವಳ ಬಲ ಅಂಗೈ ವಿಶ್ವನಾಥನ

ಎಡಕೆನ್ನೆಯ ಮೇಲೆ ಘಳಾರನೆ ಬಿತ್ತು. ವಿಶ್ವನಾಥನ ಕೆನ್ನೆಗೆ ತಳಿರು ಗೈಯಿಂದ ಹೊಡೆದ ಪೆಟ್ಟು ಬಲವಾಗೇನೊ ಬಿದ್ದಿರಲಿಲ್ಲ; ಮನಸ್ಸಿಗೆ ಮಾತ್ರ ಬಲವಾದ ಪೆಟ್ಟು ತಾಕಿತು. ಹೆಚ್ಚು ಹೊತ್ತು ನಿಂತರೆ ಬೈರಾಗಿಯನ್ನು ಎದುರಿಸಬೇಕಾದೀತು ಎಂದು ವಿಶ್ವನಾಥ ಮಂಟಪವನ್ನು ಬಳಸಿಕೊಂಡು, ಒಲಿಯದೆ ಹೋದ 'ಮಾರಿ'ಗೆ ನಮಸ್ಕಾರ ಹಾಕಿ, ಹಿಂದಿರುಗಿದನು.

ವಿಶ್ವನಾಥನ ಈ ವಿಪರೀತ ಚರ್ಯೆ ಇದು ಮೂರನೆಯ ಸಲ: ಯಾರ ಅರಿವಿಗೂ ಬರಲಿಲ್ಲ. ಇದೇ ಚರ್ಯೆಯ ಬೆಂಗಳೂರಿನ 'ಆವೃತ್ತಿ' ಮಾತ್ರ ಕಮಲೆಯ ಗಮನಕ್ಕೆ ಬಂದು, ಯಾರಿಗೂ ಹೇಳಿಕೊಳ್ಳಲಾಗದೆ, ನುಂಗಿ ಕೊಂಡಿದ್ದಳು.

ವಿಶ್ವನಾಥ ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿದ ಮೇಲೆ, ಮನೆಮಾಡಿ, ಹೆಂಡತಿಯೊಡನೆ ಸಂಸಾರ ಹೂಡಿದನು. ಹಳ್ಳಿಯ ಹುಂಬನಾಗಿದ್ದವನು ಬೆಂಗಳೂರಿನ ಕೆಲವು ಬೆಡಗುಗಾತಿಯರನ್ನು ಕಂಡು ಕಮಲೆಯೂ ಹಾಗಾಗ ಬೇಕೆಂದು ಹಂಬಲಿಸಿದನು. ಸಾಧನೆ ಮಾಡಿದ್ದರೆ ಕಮಲೆಯನ್ನು ತಾನು ಬಯಸುವಂಥ ಥಳುಕಿನ ಹೆಣ್ಣನ್ನಾಗಿಯೇ ಮಾರ್ಪಡಿಸಿಕೊಳ್ಳಬಹು ದಾಗಿತ್ತು. ಆ ತಾಳ್ಮೆ, ಆ ಸಂಸ್ಕೃತಿ, ಅವನಲ್ಲಿ ಇರಲಿಲ್ಲ. ಕಮಲೆಯ ಸಹನೆ, ಸಾಧುಗುಣ, ಹಳ್ಳಿಯ ಸರಳತೆ ಈ ಗುಣಾವಳಿ ಅವನ ಮನಸ್ಸಿಗೆ ಅರಿವಾಗಲಿಲ್ಲ. ಅವಳೇನೋ ವಿಶ್ವನಾಥನನ್ನೆ ತನ್ನ ಭಾಗದ ದೈವ ಎಂದು ತಿಳಿದು ಅದರಂತೆ ಅವನನ್ನು ಭಯಭಕ್ತಿ ಗೌರವಗಳಿಂದ ಕಾಣುತ್ತಿದ್ದಳು. ಸುಂದರನನ್ನು ಕೈಹಿಡಿಯುವೆನೆಂದು ಕನಸು ಕಾಣುತ್ತಿದ್ದ ಆ ಮುಗ್ಧ ಬಾಲೆ ವಿಶ್ವನಾಥನೊಂದಿಗೆ ನವಯೌವನದ ಚೆಲ್ಲಾಟದ ಯುವತಿಯಂತೆ ಸರಸ ವಾಡಲು ಮಾತ್ರ ಸಿದ್ಧವಾಗಿರಲಿಲ್ಲ. ವಿಶ್ವನಾಥನ ನಡತೆ, ಅವನ ರೂಪು ಇವು ಅವಳಲ್ಲಿ ಆ ಬಗೆಯ ಸರಸವೃತ್ತಿಯನ್ನು ಪ್ರಚೋದಿಸುವಂತೆಯೂ ಇರಲಿಲ್ಲ. ಈ ಕಾರಣದಿಂದ, ಹೆಂಡತಿಯಲ್ಲಿ ಕೈಗೂಡದ ಬಯಕೆ ಹೊರಗಡೆ ಸಾಮಗ್ರಿಯನ್ನು ಹುಡುಕತೊಡಗಿತು. ಸಿದ್ಧವಸ್ತು ಸಿಕ್ಕುವಾಗ ಕಚ್ಚಾ ಮಾಲು ಏಕೆ? ಅಂತಹ ಸಿದ್ಧವಸ್ತು ಮಿತ್ರಸಹಾಯದಿಂದ ಅವನ ಗಮನಕ್ಕೆ ಬಂತು. ಹಲವರು ಹೆಂಡಿರನ್ನು ಹೊಟ್ಟೆ ಉರಿಸುತ್ತಿದ್ದ ಮಹಾ ತಾಯಿ ಒಬ್ಬಳ ಪರಿಚಯ ವಿಶ್ವನಾಥನಿಗಾಯಿತು. ಅವನ ಹೊತ್ತು ಹಣ ಎಲ್ಲ

ಅವಳಿಗೆ ವಿನಿಯೋಗವಾಗುತ್ತ ಬಂದಿತು. ದೇವೀಪೂಜೆಗೆ ದಕ್ಷಿಣೆ ಸಾಲದೆ ಬಂದಿತು. ಸಾಲ ಕೊಡುವವರು ಯಾರು ? ಸುಲಭವಾಗಿ ಸಾಲ ಕೊಡುವ ಪಠಾಣರನ್ನು ಹೆಣ್ಣು ಹುಡುಕಿ ಕೊಟ್ಟ ಗೆಳತಿಯರೇ ಗುರುತುಮಾಡಿ ಕೊಟ್ಟರು. ಪಠಾಣರು ಮನೆಯ ಬಾಗಿಲಿಗೆ ಬರುವುದಕ್ಕೆ ತೊಡಗಿದಾಗ ಗಂಡನ ಅರ್ಧ ಬಂಡವಾಳ ಕಮಲೆಗೆ ಗೊತ್ತಾಯಿತು ; ದೇವಿಯೋ ಒಂದೆರಡು ಸಲ ಪೂಜಾರಿಯ ಮನೆಗೆ ಕೃಪೆಗೈದು ದಯಮಾಡಿಸಿದಾಗ ಗಂಡನ ಪೂರ್ತಿ ಬಂಡವಾಳ ಗೊತ್ತಾಯಿತು. ಮನೆಯಲ್ಲಿ ಉಪ್ಪಿಗೂ ಸೊನ್ನೆಯಾಗುವ ಕಾಲ ಬಂದಾಗ ಗಂಡನ ಬಂಡವಾಳ ಬರಿದಾಗುತ್ತ ಇದ್ದುದು ಚೆನ್ನಾಗಿ ವ್ಯಕ್ತವಾಯಿತು. ದಕ್ಷಿಣೆಯನ್ನು ಹಿರಿಯುತ್ತ ಇದ್ದ ದೇವಿಯ ಸನ್ನಿಧಿಯಲ್ಲಿ 'ಸುಂದರ ಪುರುಷ'ನಾದ ವಿಶ್ವನಾಥನ ಚಪಲ ಮಾತ್ರ ತೀರುತ್ತಿತ್ತು ; ಕಾಮತೃಪ್ತಿಗೆ ಕೈ ಹಿಡಿದ ಹೆಂಡತಿ ಇದ್ದೇ ಇದ್ದಳು.

ಬೆಂಗಳೂರಿನಲ್ಲಿ ಸಂಪಾದಿಸಿ ಮಗ ಸಂಸಾರಕ್ಕೆ ನೆರವಾಗುತ್ತಾನೆ ಎಂದು ನಂಜುಂಡಶಾಸ್ತ್ರಿಗಳು ನಂಬಿದ್ದರು. ನಿರಾಶೆಗೊಂಡರು. ಏಕೆ ಹೀಗೆ ಎಂದು ಕೇಳಿದರೆ ಉತ್ತರವಿಲ್ಲ; ದೇಹವೋ ಕೃಶಗೊಂಡಿದೆ. 'ಏನಗೇನೂ ಹೊರಿಸಬೇಡ. ಚೆನ್ನಾಗಿ ಆರೈಕೆಮಾಡಿಕೊಂಡು ದೇಹಾರೋಗ್ಯ ನೋಡಿಕೋ'ಎಂದು ಮಗನ ಮೇಲಿನ ವಿಶ್ವಾಸದಿಂದ ಅವರು ನುಡಿಯುವರು. ದೇಹಕ್ಕಾಗಿಯೇ ಹಣ ದುರ್ವ್ಯಯವಾಗುತ್ತಿರುವುದನ್ನು ಅವರು ಅರಿಯರು, ಪಾಪ! ಅಂತೂ ಮಗನ ಮೇಲೆ ಅಸಮಾಧಾನ ಅವರಿಗೆ. ಅವರಿಗೆ ಮುಖ ಕೊಟ್ಟು ಮಾತಾಡಲು ವಿಶ್ವನಾಥನಿಗೆ ಬೇಕಿಲ್ಲ. ಬಂದಾಗ ಮೈಲಾರಯ್ಯ ನವರ ಮನೆಯಲ್ಲಿಯೇ ಹೆಚ್ಚು ಹೊತ್ತು ಕಳೆಯುತ್ತಿದ್ದನು.

ನರಸಮ್ಮನವರು ತೀರಿಕೊಳ್ಳುವುದಕ್ಕೆ ಮೊದಲೇ ವಿಶ್ವನಾಥ ಬೆಂಗ ಳೂರಿಗೆ ಹಿಂದಿರುಗಿದ್ದನು.

## ೬೫

ಕೊಳಲೂರಿನ ಜನ ಕ್ರಮಕ್ರಮವಾಗಿ ರಾಜಕೀಯದಲ್ಲಿ ಸ್ವಲ್ಪ ಆಸಕ್ತಿ ತೋರುತ್ತ ಬಂದಿದ್ದರೇ ಹೊರತು, ರಾಜಕೀಯದ ಗಾಳಿ ಅಲ್ಲಿಗೆ ಇನ್ನೂ ಬೀಸಿ ಬಂದಿರಲಿಲ್ಲ. ಅಲ್ಲಿಗೆ ಇಪ್ಪತ್ತು ಮೂವತ್ತು ಮೈಲಿ ದೂರದಲ್ಲಿದ್ದ

ಗೌರೂರು ಗ್ರಾಮ ಕೊಳಲೂರಿಗಿಂತ ಚಿಕ್ಕದೇ ಆದರೂ ಎಂದಿನಿಂದಲೂ ರಾಜಕೀಯ ಜಾಗೃತಿ ಅಲ್ಲಿ ಹೆಚ್ಚಾಗಿದ್ದು, ಕೆಲವು ಉತ್ಸಾಹಶಾಲಿ ಕಾಂಗ್ರೆಸ್ ಭಕ್ತರಿಗೆ ತವರಾಗಿತ್ತು. ಹಾಸನ ಜಿಲ್ಲೆಯ ಕೇಂದ್ರ, ಹೈಸ್ಕೂಲನ್ನು ಉಳ್ಳದು, ಹೆಚ್ಚುಮಂದಿ ವಿದ್ಯಾರ್ಥಿಗಳನ್ನೂ ವಿದ್ಯಾವಂತರನ್ನೂ ಅಧಿಕಾರಿಗಳನ್ನೂ ಒಳಗೊಂಡದ್ದು; ಅಲ್ಲಿಯೂ ಕೆಲವರು ಕಾಂಗ್ರೆಸ್ ಪ್ರಮುಖರು ಹುಟ್ಟಿಕೊಂಡಿದ್ದರು. ಆದರೆ, ಈಗ ಕೊಳಲೂರಿನಲ್ಲಿ ಕೂಡ ಗಾಂಧಿ, ನೆಹರು, ಪಟೇಲ್, ಸರೋಜಿನಿ ಇವರು ಮನೆಮಾತಾಗಿದ್ದರು. ಕಾಂಗ್ರೆಸ್ ಸತ್ಯಾಗ್ರಹದ ಕೆಲವು ಪ್ರಮುಖ ಪ್ರಕರಣಗಳೂ, ಕಾಂಗ್ರೆಸ್ ನಾಯಕರೂ ಇತರ ಸತ್ಯಾಗ್ರಹಿಗಳೂ ಜೈಲಿಗೆ ಹೋದುದೂ, ಗಾಂಧಿಯವರ ಉಪವಾಸಗಳೂ ಊರಿನಲ್ಲಿ ಪ್ರಚಾರಗೊಂಡಿದ್ದುವು. ಈ ಪ್ರಚಾರಕೇಂದ್ರ ಕೆಲವು ಸಲ ರಾಮದೇವರ ಗುಡಿಯ ಮುಂದಿನ ಆವರಣ, ಕೆಲವು ಸಲ ಮಿಡ್ಲ್ ಸ್ಕೂಲಿನ ಜಗಲಿ, ಹಲವೊಮ್ಮೆ ಆಸ್ಪತ್ರೆಯ ಜಗಲಿ; ಗುಡಿಯ ಮುಂದೆ ಈ ಸುದ್ದಿ ಸಮಾಚಾರಗಳ ಪ್ರಚಾರವಾಗುತ್ತಿದ್ದಾಗ ಅದರಲ್ಲಿ ವೈದಿಕರೂ ಸನಾತನ ಧರ್ಮಾಭಿಮಾನಿಗಳೂ ಭಾಗವಹಿಸುತ್ತ ಇದ್ದರು. ಮಿಡ್ಲ್ ಸ್ಕೂಲು ಹೆಡ್ಮಾಸ್ಟರು – ಹೊಸಬರು — ಖಾದಿಧಾರಿಗಳು, ಸುದ್ದಿ ಸಮಾಚಾರಗಳನ್ನು ಸ್ವಲ್ಪ ಉತ್ಸಾಹದಿಂದಲೇ ಪ್ರಕಟಗೊಳಿಸುತ್ತ ಇದ್ದವರು. ಅವರು, "ಗಾಂಧಿಯವರು ಅನೇಕ ಕಡೆ ದೇವಾಲಯಗಳಿಗೆ ಹೊಲೆಯರನ್ನು ಪ್ರವೇಶಮಾಡಿಸುತ್ತ ಇದಾರೆ. ನಮ್ಮ ದೇವಾಸ್ಥಾನಕ್ಕೂ ಹೊಲೆಯರನ್ನು ಬಿಡಬೇಕಾಗುತ್ತೆ ಇನ್ನುಮುಂದೆ" ಎಂದು ಮುಗುಳುನಗೆ ಬೀರುವರು. "ಹೊಲೆಯರನ್ನು ಬಿಟ್ಟರೆ ಒಬ್ಬ ಹೊಲೆಯ ಪೂಜಾರಿಯೇ ಬಂದು ದೇವರ ಪೂಜೆ ಮಾಡಿಕೊಳ್ಳಲಿ. ನಾನು ಬಿಟ್ಟು ಹೊರಟು ಹೋಗುತ್ತೇನೆ" ಎನ್ನುವರು ಪೂಜಾರಿ ಶಿವರಾಮಭಟ್ಟರು. ಅವರ ಮಗ ಸುಬ್ಬಾಭಟ್ಟ – ಸುಂದರನ ಜೊತೆ ಓದುತ್ತ ಇದ್ದು ಸ್ಕೂಲು ಬಿಟ್ಟು ಉಂಡಾಡಿ ಭಟ್ಟನಾಗಿದ್ದವನು – "ಅವರು ದೇವಸ್ಥಾನದ ಹೊಸಿಲು ಮೆಟ್ಟಲಿ, ತಲೆ ಬಡೆದುಬಿಡುತ್ತೇನೆ" ಎಂದು ಹೆಗಲ ಮೇಲಿದ್ದ ಚೌಕವನ್ನು ತಲೆಗೆ ಲಪ್ಪಟ್ಟೆ ಸುತ್ತಿ, ಎದ್ದು ನಿಂತು ಗರ್ಜಿಸುವನು. ನಂಜುಂಡಶಾಸ್ತ್ರಿಗಳು ಅವನ ವರ್ತನೆಯನ್ನು ನೋಡಿ – "ಅವರ ತಲೆ ಒಡೆಯುವೆಯಂತೆ, ಮೊದಲು ನಿನ್ನ ತಲೆಯ ಲಪ್ಪಟ್ಟೆ ಬಿಚ್ಚು"

ತೀರ್ಥರೂಪರವರಿದ್ದಾರೆ" ಎಂದು ಅವನಿಗೆ ಹೇಳಿ, "ಆ ಹೊಲೆಮುಂಡೇವು ಒಂದು ದಿನ ತಾನೆ ಬರುತ್ತವೆ ? ಬರಲಿ. ಮಾರಿ ಮಸಣಿ ಬಿಟ್ಟು ಅವು ರಾಮನನ್ನು ಯಾಕೆ ಪೂಜೆ ಮಾಡಿಯಾವು! ಆಮೇಲೆ ಚಂಡಾಲ ಸಂಪರ್ಕಕ್ಕೆ ಪ್ರಾಯಶ್ಚಿತ್ತ ಇದ್ದೇ ಇದೆ" ಎಂದು ಸಭೆಗೆ ತಮ್ಮ ಶಾಸ್ತ್ರಜ್ಞಾನವನ್ನು ಪ್ರಕಟಿಸುವರು. "ಇದೇನು ಸ್ವಾಮಿ ನೀವು ಹೇಳುವ ಮಾತು! ಅಮೇಧ್ಯ ತಿಂದು ಅಮೃತದಲ್ಲಿ ಬಾಯಿ ಮುಕ್ಕಳಿಸಿದ ಹಾಗೆ! ನಮ್ಮ ತಲೆ ಹೋದರೂ ಅವರನ್ನು ದೇವಾಲಯಕ್ಕೆ ಬಿಡುವುದಕ್ಕೆ ಸಾಧ್ಯವಿಲ್ಲ" ಎಂದು ನರಸಿಂಹಾಚಾರ್ರು ಉಗ್ರರೂಪ ತಾಳುವರು. "ರಾಮಾನುಜಾಚಾರ್ಯರು ಹೊಲೆ ಮಾದಿಗರಿಗೆಲ್ಲ ನಾಮ ಹಾಕಿದರಂತೆ. ರಾಮಾನುಜ ಶಿಷ್ಯರಾದ ನರಸಿಂಹಾಚಾರ್ರೇ ಹಾಗೆ ಹೇಳುವಾಗ ನಾವು ಸುಮ್ಮನಿರುವುದಕ್ಕಾಗುತ್ತದೆಯೇ ಸ್ವಾಮಿ!" ಎಂದು ಕಿಲಾಡಿ ಕಿಟ್ಟಪ್ಪ ( ಕೃಷ್ಣಪ್ಪನವರಲ್ಲ; ಬೇರೆ ಇನ್ನೊಬ್ಬ ವ್ಯಕ್ತಿ ) ನರಸಿಂಹಾಚಾರ್ಯರನ್ನು ಕೀಟಲೆಮಾಡುವನು. ರಾಮಾನುಜಾಚಾರ್ಯರ ಸಮಾಜಸುಧಾರಣಾ ಕಾರ್ಯ, ಅಂದೇ ಪ್ರಾರಂಭಿಸಿದ್ದ ಹರಿಜನೋದ್ಧಾರ ಕಾರ್ಯ, ಆ ಬಡಪಾಯಿಗೆ ಹೇಗೆ ಅರ್ಥವಾಗಬೇಕು, ಪಾಪ! "ನಿಮ್ಮ ಶಂಕರ ಭಗವತ್ಪಾದರು ಹೊಲೆಯನ ಕೈಯಿಂದ ಅಭಕ್ಷ್ಯಭಕ್ಷಣ ಮಾಡಿದರಂತೆ!" ಎಂದು ನರಸಿಂಹಾಚಾರ್ರು ಯಾವುದೋ ಕಗ್ಗದ ಕಟ್ಟುಕತೆ ಹೇಳಿ ಪ್ರತಿಭಟಿಸುವರು. "ಶಂಕರರು ಏನು ಮಾಡಿದರೋ ಬಿಟ್ಟರೋ. ಸ್ವಾಮಿ ವಿವೇಕಾನಂದರವರನ್ನು ಒಂದು ಸಲ ಒಬ್ಬ ಹೊಲೆಯ ತಮ್ಮ ಮನೆಗೆ ಊಟಕ್ಕೆ ಕರೆದನಂತೆ. ವಿವೇಕಾನಂದರು ಮೊದಲು ಒಪ್ಪಿಕೊಂಡು, ಬಳಿಕ 'ನಾನು ಬ್ರಾಹ್ಮಣ. ಹೊಲೆಯನ ಮನೆಯಲ್ಲಿ ಊಟ ಮಾಡುವುದು ಸರಿಯೇ ?' ಎಂದು ಸಂದೇಹ ಪಟ್ಟರಂತೆ. ಆಮೇಲೆ, 'ಛಿ ಛಿ! ಅದ್ವೈತದ ಪ್ರಕಾರ ಎಲ್ಲ ವಸ್ತುಗಳಲ್ಲಿಯೂ ಪರಬ್ರಹ್ಮನಿದ್ದಾನೆ. ಹೊಲೆಯ ಬೇರೆ ನಾನು ಬೇರೆಯೆ ?' ಎಂದು ಅವನ ಮನೆಗೆ ಊಟಕ್ಕೆ ಹೋದರಂತೆ" ಎಂದು ( ಹೊಸ ) ಡಾಕ್ಟರು — ಆಧುನಿಕ ಮತದವರು — ಅಂತ್ಯಜಪರವಾದಕ್ಕೆ ಪುಷ್ಟಿ ಕೊಟ್ಟು ನಿದರ್ಶನ ಕೊಡುವರು. ನಂಜುಂಡಶಾಸ್ತ್ರಿಗಳು ನಿಧಾನವಾಗಿ — "ಆ ಅವಿವೇಕಾನಂದ ಯಾರೋ ನಾವು ಕಾಣೆವು. ಅವನ ನಡತೆ ನಮಗೆ ಪ್ರಮಾಣವಲ್ಲ ಅಲ್ಲದೆ, ವೇದಾಂತವೇ ಬೇರೆ, ವ್ಯವಹಾರವೇ ಬೇರೆ. ನೋಡಿ ಡಾಕ್ಟರೆ, ಎರಡು

ಶೀಸೆಗಳು. ಚೊಕ್ಕಟವಾಗಿವೆ. ಒಂದರಲ್ಲಿ ಹೆಂಡ, ಇನ್ನೊಂದರಲ್ಲಿ ಹಾಲು. ಯಾವುದು ಪರಿಗ್ರಾಹ್ಯ? ಮನುಷ್ಯರೆಲ್ಲ ಒಂದೇ ಆಗಿ ಕಂಡರೂ ಕರ್ಮ ಪರಿಪಾಕವಿಶೇಷದಿಂದ ಜನ್ಯವಾದ ಜಾತಿ ಎಲ್ಲಿ ಹೋಗುತ್ತೆ ಸ್ವಾಮಿ, ಜಾತಿ? ಹೊಲೆಯ ನಿಮ್ಮ ಹಾಗೇ ಕೆಂಪಗಿರಬಹುದು, ಶುಭ್ರವಸ್ತ್ರಧಾರಣ ಮಾಡ ಬಹುದು, ಕುಡಿಯುವುದನ್ನು ತಿನ್ನುವುದನ್ನು ಬಿಡಬಹುದು, ಎಂದೂ ಇಟ್ಕೊಳ್ಳೋಣ. ಆದರೆ ಒಳಗೆ ಪರಮಾತ್ಮ ಜೀವಾತ್ಮಸ್ವರೂಪನಾಗಿ ತಾನೇ ಕುಳಿತಿರುವುದು? ನಿಮ್ಮ ಜೀವಾತ್ಮ ಹಾಲು, ಅವನ ಜೀವಾತ್ಮ ಹೆಂಡ. ಹಾಲನ್ನೂ ಹೆಂಡವನ್ನೂ ಬೆರಸುವುದಾದರೆ ಬೆರಸಿ ಸ್ವಾಮಿ, ನಾನು ಬೇಡ ಎನ್ನುವುದಿಲ್ಲ" — ಎಂದು ತರ್ಕಬದ್ಧವಾಗಿ ಮಾತಾಡುವರು. ಎಲ್ಲರೂ ಏಕಕಂಠದಿಂದ "ಒಪ್ಪತಕ್ಕದ್ದು ಒಪ್ಪತಕ್ಕದ್ದು" ಎನ್ನುವರು. ಮಿಡ್ಲ್ ಸ್ಕೂಲು ಹೆಡ್ಮಾಸ್ಟರು, ಡಾಕ್ಟರು, ಮಾತ್ರ ವಿಚಾರಪರರಾಗಿ ಮೌನ ತಾಳುವರು. ಇದು ವರೆಗೂ ಮಾತಾಡದೆ ಮೌನವಾಗಿದ್ದ ತಿಪ್ಪಾವಧಾನಿ ಗಳು ಇದ್ದಕ್ಕಿದ್ದ ಹಾಗೇ ಏನನ್ನೋ ನೆನೆದು, "ಅದು ಸರಿಯೆ. ಆ ಮೂಗ ಬೈರಾಗಿ ಇದ್ದಾನಲ್ಲ, ಅವನ ಬಳಿ ಮಾದಿಗನ ಮಗಳಂತಲ್ಲ, ಆ ಹುಡಿಗಿ ಇದ್ದಾಳೆ ನೋಡಿ. ಅದು ಹೇಗೆ ಈಗ ಬೂದಗುಂಬಳಕಾಯಿಯ ಹಾಗೆ ಬೆಳೆದುಬಿಟ್ಟಿದ್ದಾಳೆ ಅಂತ! ಮೂರು ವರ್ಷದ ಕೆಳಗೆ ಹಂಚಿಯ ಕಡ್ಡಿಯ ಹಾಗಿದ್ದಳು! ಯಾವನೋ ಊರೂರು ಅಲೆಯುವ ಬೈರಾಗಿ ಇಲ್ಲಿ ಬಂದು ಠಿಕಾಣಿ ಹಾಕಿ ಅವಳನ್ನು ಬೆಳಸುತ್ತಾ ಇದ್ದಾನಲ್ಲ, ಇದರ ಅಂತರ್ಯ ಏನು ಸ್ವಾಮಿ?" ಎಂದು ಪ್ರಶ್ನೆ ಎತ್ತಿದರು "ಇದರಲ್ಲಿ ಅಂತರ್ಯವೇನು, ಎಲ್ಲ ಬಹಿರಂಗವೇ! ನೀವೇ ಹೇಳಿ ಸ್ವಾಮಿ, ನಾವು ಬೂದಗುಂಬಳಕಾಯನ್ನ ಬೆಳಸುವುದು ಯಾತಕ್ಕೆ?" ಎಂದು ನರಸಿಂಹಾಚಾರ್ರು ನಕ್ಕರು. ಎಲ್ಲರೂ ನಕ್ಕರು. "ಸ್ನಾನಘಟ್ಟದಲ್ಲಿ ಇದೊಂದು ಅಪಸ್ಮಾರ, ನಾವು ನೋಡುತ್ತ ಕುಳಿತಿರುವುದಾಗಿದೆಯಲ್ಲ" ಎಂದು ಜುಗುಪ್ಸೆ ತೋರಿಸಿದರು ಶಿವರಾಮ ಭಟ್ಟರು. "ನಮ್ಮ ವಿಶ್ವನಾಥನೇ ಹೇಳಿದ. ಹಿಂದಿದ್ದ ಡಾಕ್ಟರು ಆ ಮಾದನ ಮಗಳನ್ನ ಕಿರಿಸ್ತಾನ ಜಾತಿಗೆ ಸೇರಿಸಿಬಿಟ್ಟಿದ್ದರು ಅಂತ. ಇಲ್ಲದೆ ಹೋದರೆ ಇಷ್ಟರ ವರೆಗೆ ನಾನು ಸುಮ್ಮನಿರುತ್ತಿದ್ದೆನೆ?" ಎಂದರು ನಂಜುಂಡಶಾಸ್ತ್ರಿ ಗಳು "ಅಧಿರಲಿ. ತಾಯಿ ಸತ್ತರೂ ಸುಂದರಮೂರ್ತಿ ಈ ಊರಿಗೆ

ಬರಲಿಲ್ಲವಲ್ಲ! ಅದೆಂಥ ಕಲ್ಲೆದೆ ಸ್ವಾಮಿ!" ಎಂದು ಉದ್ಗಾರ ತೆಗೆದರು, ನರಸಿಂಹಾಚಾರ್ರು. "ಪಾಪ, ಯಾವ ಜೈಲಿನಲ್ಲಿ ಕೊಳೆಯುತ್ತ ಬಿದ್ದಿದ್ದಾನೋ. ತಾಯಿ ಸತ್ತದ್ದು ಅವನಿಗೆ ಹೇಗೆ ತಿಳಿಯಬೇಕು, ಪಾಪ. ತಿಳಿದಿದ್ದರೆ ಬರದೆ ಇರುತ್ತಿದ್ದನೆ! ಗಾಂಧಿಯವರ ಬಿಡುಗಡೆ ಎಂದೋ ಆಯಿತು. ಇನ್ನೇನು ಸುಂದರಮೂರ್ತಿಯೂ ಬಂದರೂ ಬಂದನೇ." ಎಂದು ಅವನ ಪರವಾಗಿ ಮಾತಾಡುವರು ಮಿಡ್ಲ್‌ಸ್ಕೂಲ ಹೆಡ್ಮಾಸ್ಟರು. "ಚಳಿವಳಿ ( ಚಳವಳಿ ) ನಿಂತುಹೋಯಿತೇನು ಸ್ವಾಮಿ?"– ನರಸಿಂಹಚಾರ್ಯರ ಪ್ರಶ್ನೆ. "ಸಧ್ಯಕ್ಕೆ ನಿಂತಹಾಗೆಯೇ"— ಹೆಡ್ಮಾಸ್ಟರ ಉತ್ತರ. "ಸ್ವರಾಜ್ಯ ಯಾವಾಗ ಬರುತ್ತೆ ಸ್ವಾಮಿ?"— ಮತ್ತೆ ಪ್ರಶ್ನೆ. "ಹೊಲೆಯರಿಗೆಲ್ಲ ಜನಿವಾರ ಹಾಕಿದಾಗ, ಬನ್ನಿ ಸ್ವಾಮಿ ಬನ್ನಿ. ಈ ರಾಮಾಯಣ ಇದ್ದೇ ಇದೆ ಮಂಗಳಾರತಿ ಮಾಡಿಕೊಂಡು ಹೋಗುವಿರಂತೆ" ಎಂದು ಶಿವರಾಮಭಟ್ಟರು ಎಲ್ಲರನ್ನೂ ದೇವಸ್ಥಾನದೊಳಕ್ಕೆ ಕರೆದುಕೊಂಡು ಹೋಗುವರು

೬೬

ಸುಂದರ ಹಿಂದಿರುಗಿದಾಗ ಊರಿನ ಜನದ ಮನಸ್ಸು ರಾಜಕೀಯ ಸಾಮಾಜಿಕ ವಿಚಾರಗಳಲ್ಲಿ ಹೀಗೆ ಪ್ರವರ್ತಿಸುತ್ತಿದ್ದಿತು. ತರುಣ ವಿದ್ಯಾರ್ಥಿಗಳು ಎನ್ನಿಸಿಕೊಂಡವರು ಹೊರಗಡೆ ಓದುತ್ತಿದ್ದರು; ಬೇಸಗೆ ರಜಗಳಲ್ಲಿ ಕೂಡ ಊರಿನಲ್ಲಿ ಏನೂ ಕಾರ್ಯಮಾಡುತ್ತಿರಲಿಲ್ಲ. ಒಬ್ಬಿಬ್ಬರು ಮಾತ್ರ ಖಾದಿ ಧರಿಸುತ್ತ ಇದ್ದರು. ಸ್ಫೂರ್ತಿಪಡೆಯುವುದಕ್ಕೆ ಆ ಊರು ಸುಂದರನಿಗಾಗಿ ಕಾದಿತ್ತು ಎಂದು ಹೇಳಬಹುದು.

ಈ ಸಲ ಸುಂದರ ಹಿಂದಿರುಗಿದಾಗ, ತಾಯಿ ಸತ್ತಾಗಲೂ ಬಾರದಿದ್ದವನು ಎಂಬ ಭಾವದಿಂದ, ಅವನನ್ನು ಯಾರೂ ಉತ್ಸಾಹದಿಂದ ಎದುರುಗೊಳ್ಳಲಿಲ್ಲ. ಹಿಂದೆಲ್ಲ, ಕೋಟೆಯನ್ನು ಹಾಯ್ದು ಬರುವಾಗಲೇ ಜಗಲಿಯ ಮೇಲೆ ನಿಂತಿದ್ದವರು ಕುಳಿತಿದ್ದವರು ಎಲ್ಲ, ಸುಂದರ ಊರಿಗೆ ಹಿಂದಿರುಗಿದನೆಂದು ಹಿಗ್ಗುತ್ತಿದ್ದರು. ಈಗ ಯಾರೂ ಅವನನ್ನು ಮಾತಾಡಿಸಲಿಲ್ಲ. ಎಲ್ಲರ ಮುಖಗಳೂ ತಿರಸ್ಕಾರಸೂಚಕಗಳಾಗಿಯೇ ಇದ್ದುವು. ಏನೋ ಅಶುಭವನ್ನು ಸೂಚಿಸುತ್ತಿದ್ದುವು. ಕೆಲವರು ಹೆಂಗಸರಿಗೇನೋ ಮಾತಾಡಿಸಬೇಕೆಂದು

ಮನಸ್ಸು; ಆದರೆ ಈಗ ಸುಂದರ ವಯಸ್ಸಾದವನು. ೮-೧೦ ದಿನಗಳಿಂದ ಮುಖಕ್ಷೌರವನ್ನೂ ಮಾಡಿಕೊಂಡಿರಲಿಲ್ಲವಾದ್ದರಿಂದ, ಅವನು ವಯಸ್ಕ ಎಂಬುದು ಎಲ್ಲರಿಗೂ ಎದ್ದು ಕಾಣುತ್ತಿದ್ದಿತು.

ಪ್ರೇಮಾದರಗಳ ಸೂಚನೆಯನ್ನು ಕಾಣದ ಸುಂದರನ ಮನಸ್ಸು ಕೂಡ ಖಿನ್ನವಾಗಿಯೇ ಇದ್ದಿತು. ಈ ಊರಿನಲ್ಲಿ ಇನ್ನು ಮುಂದೆ ನಾನು ಒಬ್ಬೊಂಟಿಗ ಎಂಬ ಭಾವನೆ ಅವನ ಹೃದಯದಲ್ಲಿ ಕಾಲಿಡತೊಡಗಿತು. ತನ್ನ ಒಂದೆರಡು ಬಟ್ಟೆಬರೆ ತುಂಬಿದ್ದ ಕೈಚೀಲವನ್ನು ಹಿಡಿದುಕೊಂಡು ಮನೆಯ ಬಾಗಿಲಿಗೆ ಬಂದ. ಹಿಂದೆ, ಸಾತಿ ಪಾಕಿ ರಾಮು ಸೋನು ಎಲ್ಲರೂ ಕುಣಿ ಕುಣಿಯುತ್ತ ಬಂದು ಇವನನ್ನು ಸ್ವಾಗತಿಸುತ್ತಿದ್ದರು. ಈಗ ಅವರೆಲ್ಲ ಬೆಳೆದಿದ್ದರು; ಅವರು ಇವನನ್ನು ಕಂಡಿದ್ದರೂ ಆ ರೀತಿಯಲ್ಲಿ ಸ್ವಾಗತಿಸುವುದು ಅಸಂಭವ. ಆದರೂ, ಸುಂದರನಿಗೇನೋ ಅದೇ ನೆನಪು. ಮಾರ್ಪಟ್ಟ ವಾತಾವರಣದಲ್ಲಿ ಆ ನೆನಪು ಹೆಚ್ಚು ಪರಿಸ್ಫುಟಗೊಂಡಿತ್ತು.

"ತಪ್ಪು ನನ್ನದೆ. ಮನೆಯವನಾಗಿ ಊರಿನವನಾಗಿ ಮನೆಯ ಊರಿನ ಜನದೊಂದಿಗೆ ಬೆಳೆದು ಮನೆಯವನಾಗಲಿಲ್ಲ, ಊರಿನವನಾಗಲಿಲ್ಲ. ಮನೆ ಊರು ನನ್ನನ್ನು ಇನ್ನು ಹೇಗೆ ತಾನೇ ಕಂಡೀತು, ಕರೆದುಕೊಂಡೀತು?" ಎಂದುಕೊಂಡು ಮನೆಯ ಬಾಗಿಲಿಗೆ ಹೋದನು. ಮನೆಯ ಬಾಗಿಲು ಹಾಕಿತ್ತು. ಮನೆಯ ಬಾಗಿಲಿಗೆ ಕಟ್ಟಿದ್ದ ತೋರಣದ ಹಗ್ಗದಲ್ಲಿ ಒಂದೋ ಎರಡೋ ಒಣಮಾವಿನ ಎಲೆಯ ತರಗು ನೇತಾಡುತ್ತ ಇದ್ದುವು. ಮನೆಯ ಮುಂದೆ, ಜಗಲಿಯ ಮೇಲೆ, ನಿತ್ಯ ತನ್ನ ತಾಯಿ ಎಡೆಸಾಲದಂತೆ ಇಟ್ಟು ತುಂಬಿಸುತ್ತಿದ್ದ ರಂಗೋಲಿಯ ಹಸೆಗಳು ಕಾಣದಾದವು; ಲಕ್ಷಣಕ್ಕೆಂದು ಎರಡೆಳೆ ಕಾಣುತ್ತಿತ್ತು: ವಿಧಿ ಬರೆದ ಮನೆಯ ಬರಹದಂತೆ. ತಾಯಿ ಹಾಸಿಗೆ ಹಿಡಿದಿರಬಹುದೆಂಬ ಶಂಕೆ ತಲೆದೋರಿತು. ತಳ್ಳಿದ ಕೂಡಲೆ ಬರಿಯ ಬಾಗಿಲು ತೆರೆಯಿತು. ಸುಂದರ ಒಳಕ್ಕೆ ಕಾಲಿಟ್ಟ. ಚಾಪೆಯ ಮೇಲೆ ತಂದೆ ಮಲಗಿದ್ದರು. ನಿದ್ದೆಯಲ್ಲಿ ಎಬ್ಬಿಸಬಾರದೆಂದು, ತಾಯಿ ಹಾಸಿಗೆ ಹಿಡಿದಿಲ್ಲವೆಂಬ ಹಿಗ್ಗಿನಿಂದ, ಅಡಿಗೆಯ ಮನೆಯ ಕಡೆಗೆ ಮೆಲ್ಲನೆ ಹೋಗಿ "ಅಮ್ಮಾ!" ಎಂದ. ತುಂಗೆ ಅಗ ತಾನೇ ಬಡಿಸಿಕೊಂಡು ಊಟ ಮಾಡಿ ಗೋಮಯ ಇಡುತ್ತಿದ್ದವಳು ಬೆಚ್ಚಿ ಹಿಂದಿರುಗಿ

ದಳು. 'ಸುಂದರಾ!' ಎಂದು ಚೀರಿದಳು; ಬಿಕ್ಕಿ ಬಿಕ್ಕಿ ಅಳತೊಡ ಗಿದಳು. "ಏನಾಯಿತು ತುಂಗ, ಅಮ್ಮ ಎಲ್ಲಿ? ಯಾಕೆ ಅಳುತ್ತೀಯೆ?" ಎಂದು ಕೇಳಿದನು. ತುಂಗೆ ಹೊರಕ್ಕೆ ಬಂದು "ಅಪ್ಪಾ, ಅಪ್ಪಾ!" ಎಂದು ಅಳುತ್ತಲೇ ಕೂಗಿದಳು. ಹೂನಿದ್ದೆಯಲ್ಲಿದ್ದ ಕೃಷ್ಣಪ್ಪನವರು "ತುಂಗಾ, ತುಂಗಾ! ಏನಾಯಿತಮ್ಮಾ?" ಎಂದು ಎದ್ದು ಕುಳಿತರು. "ಸುಂದರಾ....ಸುಂದರ....ಬಂದಿ........" ಮಾತು ಹೊರಡಲಿಲ್ಲ, ತುಂಗೆಯ ಕೊರಳು ಕಟ್ಟಿತು. ಸುಂದರ ಎದುರಿಗೆ ಬಂದು ತಲೆತಗ್ಗಿಸಿ ನಿಂತಿದ್ದನು. ತಾಯಿಲ್ಲದ್ದು — ಯಾಕೆ ಇಲ್ಲವೊ, ಎಲ್ಲಿಗೆ ಹೋದಳೊ — ಕರುಳಿಗೆ ಅರಿವಾಯಿತು, ಹೊಟ್ಟೆ ಕಿವಿಚಿ ಬರುತ್ತಿತ್ತು; ಬುದ್ಧಿಗೆ ಮಾತ್ರ ವೇದ್ಯವಾಗಿರಲಿಲ್ಲ. ಕೃಷ್ಣಪ್ಪನವರು, ಕಣ್ಣು ಹೊಸಕಿಕೊಳ್ಳುತ್ತ, "ಸುಂದರನೇ! ಸುಂದರನೇ!.... ಹಾ! ಸುಂದರಾ! ಬಂದೆಯಾ, ಬಾಪ್ಪ!" ಎಂದು ತಟ್ಟನೆ ಎದ್ದು ಮಗನನ್ನು ತಬ್ಬಿಕೊಂಡು ಗೋಳೋ ಎಂದು ಅತ್ತರು. ಬಡ ಮಾತು ಏನು ತಾನೇ ಹೇಳೀತು? ಸುಂದರನಿಗೆ ಎಲ್ಲವೂ ವಿಶದವಾಯಿತು. ಮಗುವಿನಂತೆ ಅವನು ಬಿಕ್ಕಿ ಬಿಕ್ಕಿ ಅತ್ತನು. ಅಳುವಾದ ಮೇಲೆ ಕೆಲ ಹೊತ್ತು ಮೌನಭಾಷೆ.

ಸುಂದರನೆ ಮೌನ ಮುರಿದನು: "ಅಮ್ಮನಿಗೆ ಏನಾಗಿತ್ತಪ್ಪ?"

"ಅದೇ ಖಾಯಿಲೆ ಕಣಪ್ಪ, ಅದೇ ಅವಳನ್ನ ತಿಂದುಕೊಂಡಿತು."

"ಇಷ್ಟು ಬೇಗ ಹೀಗಾಗುತ್ತೆ ಅಂತ ನಾನು ಎಣಿಸಿರಲಿಲ್ಲ ಕಣಪ್ಪ. ಅಮ್ಮನ ಮುಖ ಕಳೆದುಕೊಂಡ ಪಾಪಿ ನಾನು."

ಮತ್ತೆ ಮೂವರ ಅಳು; ಮತ್ತೆ ಮೌನ.

"ಹ್ಞೂ, ಆಗಿಹೋಯಿತು. ಇನ್ನು ಅತ್ತು ಫಲವೇನು? ತುಂಗಾ, ನೀರು ಕಾಯಿಸಮ್ಮ. ಸ್ನಾನಮಾಡಿ ಮೊದಲು ಊಟ ಮಾಡಲಿ."

ಕೃಷ್ಣಪ್ಪನವರು ನಂಜುಂಡಶಾಸ್ತ್ರಿಗಳ ಮನೆಗೆ ಹೋದರು; ಸುಂದರ ಬಂದ ಸಮಾಚಾರ ಅರುಹಿದರು; ಅವನಿಗೆ ಮೂರು ದಿನ ಸೂತಕ ಎಂಬ ಶಾಸ್ತ್ರವಾಕ್ಯ ಕೇಳಿ ಬಂದರು.

ಈ ಮೂರು ದಿನಗಳ ಸೂತಕದ ಅವಧಿಯಲ್ಲಿ ಸುಂದರ ಎಲ್ಲಿಗೂ ಕದಲಲಿಲ್ಲ. ರಾಜಕೀಯ, 'ಸಾಧನೆ' — ಅವನ ಮನಸ್ಸಿನಿಂದ ಎಲ್ಲ

ಮರೆ. ತಾಯಿಯ ನೆನಪು ಅವನನ್ನು ಒಂದೇ ಸಮನಾಗಿ ಕಾಡತೊಡಗಿತು. "ನಾನು ಇಲ್ಲೇ ಕಣ್ಣೆದುರಿಗೆ ಇದ್ದಿದ್ದರೆ ಬದುಕಿಕೊಳ್ಳುತ್ತ ಇದ್ದಳೇನೋ!" ಎಂದು ಕೊರಗಿದ. ತುಂಗೆ ತಂದೆ ಇಬ್ಬರೂ ಮಾತು ಮಾತಿಗೂ "ಅಮ್ಮನಿಗೆ ಕಡೆಯವರೆಗೂ ನಿನ್ನದೇ ಹಂಬಲಾಗಿತ್ತು" ಎನ್ನುತ್ತಿದ್ದರು. ಅವರ ಮಾತು ಅವನ ಕರುಳು ಕೊರೆಯುತ್ತಿತ್ತು. ತನ್ನ ತಾಯಿಯನ್ನು ಕೊಂದವನು ತಾನೇ ಎಂದು ಭಾವಿಸಿಕೊಂಡು ಹೇಳಿಕೊಳ್ಳಲಾಗದ ವೇದನೆಯನ್ನು ಅನುಭವಿಸತೊಡಗಿದನು.

ಈ ಅವಧಿಯಲ್ಲಿ ಗೃಹಕೃತ್ಯದ ವಿಚಾರವಾಗಿ ಹೆಚ್ಚು ಮಾತುಕತೆ ತಂದೆ ಮಕ್ಕಳಿಗೆ ಏನೂ ನಡೆಯಲಿಲ್ಲ. ತುಂಗೆಯನ್ನು ಅತ್ತೆಯ ಮನೆಗೆ ಇನ್ನೂ ಕಳಿಸಿರಲಿಲ್ಲ; ಅವಳ ಮಾವನವರೇನೋ ಒತ್ತಾಯ ಮಾಡಿ ಕಾಗದ ಬರೆದಿದ್ದರು. ತಮ್ಮ ಹೆಂಡತಿಯ ವರ್ಷದ ಶ್ರಾದ್ಧ ಆಗುವವರೆಗೂ ಯಾವುದೂ ಆಲೋಚನೆಯಿಲ್ಲವೆಂದು ಅವರಿಗೆ ಕಾಗದ ಬರೆದು ಹಾಕಿರುವುದಾಗಿ ತಿಳಿಸಿದರು. ತೋಟವನ್ನು ಐನೂರು ರೂಪಾಯಿಗೆ ಆಧಾರಮಾಡಿ ಆ ಸಾಲದಿಂದ ನರಸಮ್ಮನವರ ಉತ್ತರಕ್ರಿಯೆ ಮುಂತಾದ್ದನ್ನು ಮಾಡಿ, ಉಳಿದ ಸ್ವಲ್ಪವನ್ನು ಶಾಮಿಯ ವಿದ್ಯಾಭ್ಯಾಸಕ್ಕೆ ಇಟ್ಟುಕೊಳ್ಳಲಾಯಿತೆಂದು ಹೇಳಿದರು. ಅವನು ಬಿ. ಎಸ್‌ಸಿಗೆ ಕಟ್ಟಿದ್ದ. ಇಷ್ಟೇ ಹೆಚ್ಚಿನ ಮಾತುಕತೆ. ಉಳಿದ ಮಾತುಕತೆಯೆಲ್ಲ ತಮ್ಮ ಹೆಂಡತಿಯ ನೆನಪಿನ ದುಃಖದ ಪಲ್ಲವಿ; ಅದಕ್ಕೆ ತುಂಗೆಯದೊಂದು ನುಡಿ, ಸುಂದರನದು ಇನ್ನೊಂದು ನುಡಿ ಸೇರಿ, ಮೂರು ದಿನ ಶೋಕಗೀತೆಯೇ ಕೃಷ್ಣಪ್ಪನವರ ಮನೆಯಲ್ಲಿ ಕೇಳಿಬರುತ್ತಿತ್ತು.

ಮೈಲಾರಯ್ಯನವರು, ಕಾವೇರಮ್ಮ ತಾನಾಗಿಯೇ ಬಂದು ಸುಂದರನ ಕ್ಷೇಮವನ್ನು ವಿಚಾರಿಸಿದರು; ಶೋಕದಲ್ಲಿ ಪಾಲುಗೊಂಡರು; ಕೃಷ್ಣಪ್ಪನವರಿಗೂ ಸುಂದರನಿಗೂ ಮತ್ತೆ ಮತ್ತೆ ಸಮಾಧಾನ ಹೇಳಿದರು; ತಮ್ಮ ಸೌಜನ್ಯವನ್ನು ಮೆರೆದರು. ಕಮಲೆಯೂ ಬಂದಿದ್ದಳು; ಕೊಂಕುಳಲ್ಲಿ ನಾಲ್ಕು ತಿಂಗಳ ಗಂಡುಮಗು ಯಾವ ದುಃಖದ ಸೋಂಕಿಗೂ ಸಿಲುಕದೆ ಹಸುಳೆತನದ ಹೊಂಬಿಸಿಲನ್ನು ಬೀರುತ್ತಿತ್ತು; ಮುಗ್ಧನಗೆಯ ಮಿಂಚಿನ ಬಿಲ್ಲನ್ನು ಮೂಡಿಸಿ, ಸುಂದರನ ಮನಸ್ಸನ್ನು ಸಾವಿನ ಕೊನೆಯಿಂದ ಜೀವ

ವದ ಕೊನೆಗೆ ತಂದು ಬಿಟ್ಟ ಸೇತುವೆಯಾಯಿತು. "ಕಮಲೆಯು ಹಾಗೆಯೇ ಮಗು, ಹಚೀ ಕಳ್ಳ" ಎಂದು ನಕ್ಕನವನು. "ಏಕೆ, ಬಹಳ ಬಡವಾಗಿದ್ದಾಳೆ, ಕಮಲೆ ?" ಎಂದು ಕಾವೇರಮ್ಮನವರ ಮುಖ ನೋಡಿ ತುಂಬ ಅಕ್ಕರೆಯಿಂದ ಕೇಳಿದನು. "ಹೆರಿಗೆಯಾದದ್ದೇ ಕಷ್ಟವಾಯಿತು. ಆಗಿನಿಂದಲೂ ಹಾಗೆಯೇ. ಪಂಡಿತರಿಂದ ಔಷಧವನ್ನು ಕೊಡಿಸುತ್ತ ಇದೆ. ಬೆಂಗಳೂರಿಗೆ ಹೋದ ಮೇಲೆ ಏನಾದರೂ ಚೇತರಿಸಿಕೊಳ್ಳುತ್ತಾಳೇನೋ, ನೋಡಬೇಕು" ಎಂದು ನಿಟ್ಟುಸಿರು ಬಿಟ್ಟು ನುಡಿದರು ಕಾವೇರಮ್ಮ.

ಸುಂದರನ ಸೂತಕ ಕಳೆಯಿತು; ದುಃಖವೂ ಶಮನವಾಗುತ್ತ ಬಂದಿತ್ತು. ಕೃಷ್ಣಪ್ಪನವರು ಸಮಾಧಾನಚಿತ್ತದಿಂದಲೇ ಮಗನೊಡನೆ ಸಂಭಾಷಣೆಗೆ ತೊಡಗಿದರು; ಎರಡು ವರ್ಷ ಹೊರಗಿದ್ದು ಮಾಡಿದ್ದಾದರೂ ಏನು, ಸಾಧಿಸಿದ್ದು ಏನು ಎಂದು ಯಾವ ಕೊಂಕನ್ನೂ ಸೂಚಿಸದೆ ನೇರವಾಗಿ ಆಸಕ್ತಿಯನ್ನೆ ಸೂಚಿಸಿ ಕೇಳಿದರು. ಸುಂದರ ಅವರಿಗೆ ಸಂಗ್ರಹವಾಗಿ ಸತ್ಯಾಗ್ರಹದ ಚಳವಳಿಯ ಕಥೆಯನ್ನು ತಿಳಿಸಿದ; ಜೈಲಿನಲ್ಲಿ ತನ್ನ ಕಷ್ಟದ ಜೀವನವನ್ನು ಮನಮುಟ್ಟ ಹೇಳಿದ; ಸಾವಿರಾರು ಸತ್ಯಾಗ್ರಹಿಗಳು ಪಟ್ಟ ಕಷ್ಟದಲ್ಲಿ ತನ್ನದು ಶತಾಂಶವೂ ಇಲ್ಲವೆಂದು ನುಡಿದ; ಗಾಂಧಿಯವರ ಹರಿಜನರ ಚಳವಳಿ, ಅವರ ಉಪವಾಸಗಳು ಇವನ್ನೆಲ್ಲ ವರ್ಣಿಸಿದ. ಕೃಷ್ಣಪ್ಪನವರಿಗೆ ಇವೆಲ್ಲ ಹೊಸ ಸುದ್ದಿಗಳಾದ್ದವು. ಸಾಹಸದ ಕಥೆಯನ್ನು ಆಲಿಸುವಂತೆ ಆಲಿಸಿದರು. ಆಲಿಸಿ, ಕಡೆಯಲ್ಲಿ ಒಂದೇ ಮಾತು ಹೇಳಿದರು: "ಊರಿಗೆ ಊರೇ ಗಾಂಧಿಯನ್ನು ಬಯ್ಯುತ್ತೆ. ಅವನಿಂದ ವರ್ಣಸಂಕರ ಆಗುತ್ತಿದೆ ಎಂದು ಜನ ಶಪಿಸುತ್ತಾರೆ. ಏನಾದರೂ ಆಗಲಿ, ಸಾವಿರಾರು ಜನ ಅವನ ಮಾತು ಕೇಳಬೇಕಾದರೆ, ಇಂಗ್ಲಿಷು ಜನ ಅವನ ಮಾತಿಗೆ ಹೆದರುತ್ತ ಇರಬೇಕಾದರೆ, ಅವನೊಬ್ಬ ಮಹಾತ್ಮನೇ ಸರಿ." ಮಗ ತನ್ನ ತಮ್ಮನ ಹಾಗೆ ದೇಶಾಂತರ ಹೋಗಲಿಲ್ಲವಲ್ಲ, ಇನ್ನು ಯಾವ ರೀತಿಯಲ್ಲೂ ಕೆಟ್ಟಿಲ್ಲ ವಲ್ಲ ಎಂಬುದೇ ಅವರ ಆಂತರಿಕವಾದ ಪರಮ ತೃಪ್ತಿ. 'ಮಗ ಏನೋ ಮಾಡುತ್ತ ಇದಾನೆ. ಓದಿದವನು. ತಪ್ಪುದಾರಿಗೆ ಹೋಗಲಾರ' ಎಂದು ಒಳದನಿಯೊಂದು ಅವರಿಗೆ ಬೋಧಿಸುತ್ತ ಇತ್ತು. ಬಹಿರಂಗದಲ್ಲಿ ಅತೃಪ್ತಿ: ಎಲ್ಲರ ಹಾಗೆ ಫ್ಯಾಸುಮಾಡಿ ಉದ್ಯೋಗ ಹಿಡಯಲಿಲ್ಲವಲ್ಲ ಎಂದು, ಇನ್ನೂ

ಮದುವೆಯಾಗಲಿಲ್ಲವಲ್ಲ ಎಂದು.

ಹೃದಯದಲ್ಲಿ ಮೂಡಿದ ತೃಪ್ತಿಯನ್ನು ಹುದುಗಿಸಿಟ್ಟುಕೊಳ್ಳಬಹುದು; ಅತೃಪ್ತಿಯನ್ನು ಅಡಗಿಸಿಕೊಳ್ಳುವುದು ಕಷ್ಟ. ಕೃಷ್ಣಪ್ಪನವರು ಬೇಗನೆಯೇ ಮಗನ ಮುಂದೆ ಅದನ್ನು ಪ್ರಕಟಪಡಿಸಿದರು :

" ಈಗಲೂ ಮತ್ತೆ ಕಾಲೇಜಿಗೆ ಸೇರಿ ವಿದ್ಯಾಭ್ಯಾಸ ಮಾಡಬಹುದಲ್ಲವೆ, ಸುಂದರಾ ? "

" ನಾನು ಪ್ಯಾಸುಮಾಡಿ ಏನಾಗಬೇಕು ? "

" ಕೆಲಸಕ್ಕೆ ಸೇರಿಕೊಳ್ಳುವುದಿಲ್ಲವೆ ? "

" ಇಲ್ಲ. "

" ಹಾಗಾದರೆ ಏನು ಮಾಡುತ್ತೀಯೆ ? "

" ಬಡಜನರ ಸೇವೆ, ಹೊಲೆಯರ ಊಳಿಗ ! "

" ಅದು ಸರಿ. ಮದುವೆ ಮಾಡಿಕೊಂಡು ಮಕ್ಕಳು ಮರಿ ಆದರೆ, ಉಳಿದಿರುವ ಅಲ್ಪಸ್ವಲ್ಪ ಆಸ್ತಿ ಯಾವ ಮೂಲೆಗಪ್ಪ ? ಅವರನ್ನು ಸಾಕುವ ಬಗೆ ಹೇಗೆ ? "

" ನಾನು ಮದುವೆಯನ್ನೆ ಮಾಡಿಕೊಳ್ಳುವುದಿಲ್ಲವಪ್ಪ ? "

" ಹಾಗಾದರೆ ನಿನ್ನ ಚಿಕ್ಕಪ್ಪನ ದಾರಿ ಹಿಡಿಯುತ್ತಿಯೇನು ? ಹೆಂಡತಿ ಹೋದ ಮೇಲೆ ಮತ್ತೆ ಮದುವೆಯಾಗದೆ ಅವನು ಕೆಟ್ಟ. ನೀನು ಮದುವೆಯಾಗದೆಯೇ ಕೆಡುತ್ತೀಯ, ಅಷ್ಟೆ. "

ಸುಂದರ ಮೌನವಾಗಿದ್ದ. ಅವನಿಗೂ ತನ್ನ ಬಾಳಿನಲ್ಲಿ ಏನೋ ಕೊರತೆ ಎನ್ನಿಸುತ್ತಿತ್ತು. ಈಗಲಂತೂ, ಕಮಲೆಯನ್ನು ಕಂಡಾಗ ಆ ಹಿಂದಿನ ಪ್ರೇಮಭಾವ ಉಕ್ಕಿ ಅವನಿಗೆ ಹುಚ್ಚುಹಿಡಿಸುವಂತೆ ಮಾಡಲಿಲ್ಲ. ಬಾಲ್ಯದ ಪ್ರೇಮ, ಎಷ್ಟಾದರೂ ಎಳಸುಪ್ರೇಮ ಎಂದು ಭಾಸವಾಗತೊಡಗಿತು. ಈಗ ಆ ಸ್ಥಾನವನ್ನೆಲ್ಲ ಸಾಧನೆ ಆಕ್ರಮಿಸಿಕೊಂಡಿದ್ದಿತು. ಚೆನ್ನಿ ಎಂದಿದ್ದಾಗ ತಂಗಿ ಎಂದು ತಿಳಿದಿದ್ದ; ಈಗ ಅವಳಲ್ಲಿ ಎಲ್ಲ ಬಗೆಯ ಮಾರ್ಪಾಟೂ ಆಗಿದೆ, ಹೆಣ್ಣು ವಿದ್ಯಾವತಿಯೂ ಆಗಿರಬಹುದು, ತನಗೆ ತಕ್ಕವಳು ಅವಳೆ; ತನ್ನ ಹರಿಜನ ಉದ್ಧಾರಕಾರ್ಯಕ್ಕೆ ಜೊತೆಗಾತಿ, ಜೀವನಕ್ಕೆ ಸಂಗಾತಿ; ಮದುವೆಯಾದರೆ ಅವಳನ್ನೆ, ಇಲ್ಲವಾದರೆ ಯಾರನ್ನೂ ಇಲ್ಲ — ಇದು ಖಂಡಿತ.

ಸಾಧನೆಯ ಮದುವೆಗೆ ತಂದೆ ಒಪ್ಪುವರೋ ಇಲ್ಲವೋ? ಬಹುಶಃ ಒಪ್ಪಲಾರರು; ಹಾಳು ಜಾತಿಯ ಅಡ್ಡಿ. ಅವರ ಮುಪ್ಪಿನಲ್ಲಿ ತಂದೆಗೆ ವಿರೋಧವಾಗಿ ನಡೆದು ಮನಸ್ಸು ನೋಯಿಸಲೂ ಇಷ್ಟವಿಲ್ಲ. ಅವರು ಒಪ್ಪದಿದ್ದರೆ — ಬೇಡ, ಮದುವೆಯೇ ಬೇಡ. ಚೆನ್ನಿ ಎಂದಿದ್ದಾಗ ತಂಗಿ ಎಂದು ಭಾವಿಸುತ್ತಿದ್ದನಲ್ಲವೆ? ಈಗ ಕಮಲೆಯನ್ನು ಹಾಗೆಯೇ ಭಾವಿಸ ಬೇಕಾಗಿ ಬಂದಿದೆಯಲ್ಲವೆ? ಸಾಧನೆಯನ್ನೂ ಅಂತೆಯೇ ಭಾವಿಸುವುದು. ಭಾವಿಸಬೇಕಾದೀತು. ಮೌನದ ಬಸಿರಿನ ಭಾವತರಂಗ.

"ಯಾಕೆ, ಮದುವೆ ಮಾಡಿಕೊಂಡುಬಿಡಪ್ಪ. ನಿನಗೆ ಒಪ್ಪಿಗೆಯಾಗುವ ಹೆಣ್ಣನ್ನೆ ಮದುವೆಮಾಡಿಕೋ. ನಾನು ಬೇಡ ಎನ್ನುವುದಿಲ್ಲ."

ಈಗ ತನ್ನ ಮನಸ್ಸನ್ನು ಯಾಕೆ ಬಿಚ್ಚಿ ಹೇಳಬಾರದು? ಮುಚ್ಚು ಮರೆಯಿಂದ ಏನು ಪ್ರಯೋಜನ? ಸತ್ಯಾಗ್ರಹಿ ಎನ್ನಿಸಿಕೊಂಡು ಮನಸ್ಸಿನಲ್ಲಿರುವುದನ್ನು, ಸತ್ಯವನ್ನು, ಯಾರ ಮುಂದೇ ಆಗಲಿ ನುಡಿಯಲಾಗದ ಭಯ ಏತರದು? ಮನಸ್ಸಿನಲ್ಲಿರುವುದನ್ನು ಹೇಳಿಬಿಡುವುದು; ಆಗುವುದು ಆಗಲಿ.

"ಅಪ್ಪಾ, ನೀನು ಏನೂ ತಿಳಿದುಕೊಳ್ಳಬೇಡ, ಕೋಪಿಸಿಕೊಳ್ಳಬೇಡ. ನನ್ನ ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತೇನೆ."

ಮಗ ಏನೇ ಹೇಳಲಿ, ಏನೇ ಮಾಡಲಿ — ಕೋಪಿಸಿಕೊಳ್ಳಕೂಡದು, ಸಾಧ್ಯವಾದಷ್ಟು ಮಟ್ಟಿಗೆ ಅವನ ಇಷ್ಟವನ್ನು ನಡಸುವುದು ಎಂದು ಕೃಷ್ಣಪ್ಪನವರು ತೀರ್ಮಾನಿಸಿಬಿಟ್ಟಿದ್ದರು. ಊರಿನ ಜನ ಹೆಚ್ಚೊ, ಮುದ್ದು ಹಿರಿಯ ಮಗ ಹೆಚ್ಚೊ? ಕೋಪಿಸಿಕೊಂಡು, ತೆಗಳಿ, ಝಂಕಿಸಿ, ಹಿಂದಿರುಗಿದ ಮಗನನ್ನು ಮತ್ತೆ ಅಟ್ಟಲು ಅವರ ಮನಸ್ಸು ಸಿದ್ಧವಾಗಿರಲಿಲ್ಲ. ಬೆಳೆದ ಮಗನನ್ನು ಭಯದಿಂದ ತಿದ್ದಲಾದೀತೆ? ನಯಕ್ಕೂ ಬಗ್ಗದಿದ್ದರೆ — ಅವನ ದಾರಿ ಅವನಿಗೆ, ದೇವರ ಚಿತ್ತ. ತಂದೆಯಾದವನು ಹೇಗೆ ಯೋಚಿಸಬೇಕೋ ಹಾಗೆ ಯೋಚಿಸಿದರು: ಬುದ್ಧಿಹೃದಯಗಳಿಗಿಂತ ಅವರ ಕರುಳು ಮುಂದಾಗಿತ್ತು; ಹೇಗೆ ಮಿಡಿಯಬೇಕೋ ಹಾಗೆ ಮಿಡಿಯಿತು.

"ಅದೇನು ಹೇಳಪ್ಪ ಅಗತ್ಯವಾಗಿ ಮಾಡೋಣ."

ಸುಂದರ ಸ್ವಲ್ಪ ತಲುಪಿದ, ತಡವರಿಸಿದ, ತೊಳಲಿಕೆಗೊಂಡ.

“ ನೀನು ಹೋದ ಕಡೆ ಯಾವದಾದರೂ ಜಾತಿಯಿಲ್ಲದ ಜಾತಿಯ ಹೆಣ್ಣನ್ನ.... ”

“ ಇಲ್ಲಪ್ಪ. ಅಂದಾದ್ದೇನೂ ಇಲ್ಲ ” ಎಂದು ಸುಂದರ ನಡುವೆಬಿ ನುಡಿದ.

“ ಹಾಗಾದರೆ, ಹೇಳು. ಅದೇನು ನಿನ್ನ ಮನಸ್ಸಿನಲ್ಲಿರುವುದು ? ”

“ ಅಪ್ಪ, ಕೋಪಿಸಿಕೊಳ್ಳಬೇಡ. ಈಗ ನ್ನಿ ಮೊದಲಿನ ಚೆನ್ನಿಯಲ್ಲ ಎಲ್ಲ ಬಗೆಯಲ್ಲೂ ನನಗೆ ತಕ್ಕವಳಾಗಿದ್ದಾಳೆ. ಊರಿನ ಜನ ನಮಗೆ ಬಹಿಷ್ಕಾ ಹಾಕುತ್ತಾರೆ, ಈಗಾಗಲೇ ಅರ್ಧವಾಸಿ ಹಾಕಿದ್ದಾರೆ; ನನಗೆ ಗೊತ್ತು ಅವಳನ್ನು ಮದುವೆಯಾಗಲು ಅಡ್ಡಿಯೇನು ? ನಿಮಗೆ ಇಷ್ಟವಿಲ್ಲದಿದ್ದರೆ ನನ್ನಿಂದ ನಿಮ್ಮ ಬದುಕು ಹಾಳಾಗುವುದಾದರೆ.... ”

“ ಅಯ್ಯೋ ದೇವರೆ ! ” ಎಂದು ಉದ್ಗಾರ ತೆಗೆದು, ಕೃಷ್ಣಪ್ಪನವರ ದೀರ್ಘವಾಗಿ ನಿಟ್ಟುಸಿರುಬಿಟ್ಟರು.

“ ಬೇಡವೇನಪ್ಪ ? ”

ತಂದೆ ಮೌನವಾಗಿದ್ದರು; ಏನೋ ಗಾಢವಾಗಿ ಆಲೋಚಿಸುತ್ತಿದ ದೆಂಬುದು ಅವರ ನೋಟದಲ್ಲಿ ಅಷ್ಟೊತ್ತಿ ಮೂಡಿತ್ತು.

“ ನನ್ನಿಂದ ನಿಮಗೆ ತೊಂದರೆಯಾಗುವುದು ಬೇಡ. ಜಾತಿಭ್ರಷ್ಟನಾಗ ತ್ತೇನೆಂಬ ಹೆದರಿಕೆಯಾದರೆ, ನನ್ನ ಪಾಡಿಗೆ ನಾನು ಇಲ್ಲಿರುತ್ತೇನೆ. ನಿಮ ಇಲ್ಲಿ ಆಗಬೇಕಾದ್ದೇನು ? ನೀವು ಬೆಂಗಳೂರಿಗೆ ಹೋಗಿ ಶಾಮಿಗೆ ಕೆಲಸ ಆ ಸಂಸಾರ ಹೂಡುವವರೆಗೆ ಗಂಗಮ್ಮನ ಮನೆಯಲ್ಲಿರಿ. ನಾನು ಮನೆ ಅ ಶಾನುಭೋಗಿಕೆ ಎಲ್ಲ ನೋಡಿಕೊಂಡು ಭತ್ತ ರಾಗಿ ಕಳಿಸಿಕೊಡುತ್ತೇನೆ. ನ ಪಾಲಿನ ಆಸ್ತಿಯೂ ನನಗೆ ಬೇಡ. ಚಿಕ್ಕಪ್ಪ ನನಗೆ ಬಿಟ್ಟಿರುವುದೆಂದು ನೀ ಹೇಳುವ ಅಷ್ಟೇ ಸಾಕು. ನಿನಗೇನಪ್ಪ ತೊಂದರೆ. ನನಗೆ ಸುಖವಾಗು ಮಾತನ್ನು ನಾನು ಹೇಳಿದ್ದೇನೆ. ನಿಮಗೆ ಅದರಿಂದ ಅಸುಖ ಆಗುವುದಾದ ಬೇಡ. ”

ವ್ಯವಹಾರ ದೃಷ್ಟಿಯಿಂದ ಸುಂದರನ ಮಾತು ಕೃಷ್ಣಪ್ಪನವರಿಗೆ ಒಪ್ಪಿತ

“ ಆದರೂ, ಕೂಡದಪ್ಪ.... ”

“ ಯಾಕಪ್ಪ, ಬೇಡ ? ”

"ಬೇಡ ಎಂದೆನೆ? ಕೂಡದು ಎಂದೆ."

"ಮಾದನ ಮಗಳು, ಹೀನ ಜಾತಿಯವಳು ಎಂದೆ?"

"ಜಾತಿಯನ್ನು ಕುರಿತು ನಾನು ಅಷ್ಟಾಗಿ ಯೋಚಿಸುತ್ತಿಲ್ಲ. ಏನು ಜಾತಿಯೋ ಏನೋ ನನಗೂ ಬೇಸರವಾಗಿದೆ. ಜಾತಿ ಜಾತಿ ಎಂತ ಜೀವ ಕೊಲ್ಲುತ್ತೇವೆ ನಾವು. ನನಗೆ ಕಾಳೇಗೌಡ ಬೇರೆ ಆಗಿರಲಿಲ್ಲ. ಮಾದ ಬೇರೆ ಆಗಿರಲಿಲ್ಲ. ನನಗೆ ಎಲ್ಲ ಒಂದೆ. ತುಂಗೆ ಹೇಗೋ ಚೆನ್ನಿಯೂ ಹಾಗೇ. ಸ್ವಜನ ಎನ್ನಿಸಿಕೊಂಡು ನಂಜುಂಡಶಾಸ್ತ್ರಿಗಳೂ ವೈಲಾರಯ್ಯನವರೂ ನನಗೆ ಹಾಕಿದ ಕಿರೀಟ ಏನು? ಕೀಳುಜಾತಿಯವರು ಎನ್ನಿಸಿಕೊಂಡು ಮಾದ ಕಾಳೇಗೌಡ ಮಾಡದೆ ಇರುವುದೇನು? ನನಗಾಗಿ ಮಾದ ಜೀವ ತೆಯ್ದಿದ್ದಾನೆ. ಅವನಿಗೆ ನಾನು ಮಾಡಿದ್ದೇನು? ತಬ್ಬಲಿ ಹುಡುಗಿ ಚೆನ್ನಿಯನ್ನ ತೋಟದಲ್ಲಿ ಶೀತದಲ್ಲಿ, ಮಳೆಯಲ್ಲಿ, ಗಾಳಿಯಲ್ಲಿ ಬೆಳೆಯುವ ಹಾಗೆ ಮಾಡಿದೆ, ಹಾಳು ಜಾತಿಯ ಕಟ್ಟಿಗೆ ಹೆದರಿ. ಜಾತಿಯಲ್ಲ ಸುಂದರಾ, ಜಾತಿಯಲ್ಲ." ತಂದೆಯ ಗದ್ಗದಿತ ಕಂಠ, ಅವರ ಹೃದಯದಲ್ಲಿ ಅದೆಲ್ಲಿಯೋ ಚಿಲುಮೆಯುಕ್ಕಿದ ಆ ಮರುಕದ ಸೆಲೆ — ಇದನ್ನು ಅರಿತ ಸುಂದರನಿಗೆ ಅದೇನೋ ಸಮಾಧಾನವಾಯಿತು. ಏಳೆಂಟು ವರ್ಷಗಳ ಹಿಂದಿನ ತಂದೆ ನೆನಪಾದರೂ: ಮಾದನ ಬಗ್ಗೆ, ಚೆನ್ನಿಯ ಬಗ್ಗೆ ಕನಿಕರ ತೋರುತ್ತಿದ್ದ ತಂದೆ. ಮಾದ ಇಲ್ಲವಾದ; ಸಾಕಿದ ಚೆನ್ನಿಯನ್ನು ಜಾತಿಯ ಭೂತಕ್ಕೆ ಹೆದರಿ, ಮನೆಯ ಮಡದಿ ಮಕ್ಕಳ ಕ್ಷೇಮ ನೆಮ್ಮದಿಗಳನ್ನು ಮುಂದುಮಾಡಿಕೊಂಡು, ಊಟ ಉಪಚಾರ ಉಡಿಗೆ ತೊಡಿಗೆಯಲ್ಲಿ ವಂಚನೆ ಮಾಡಿದರೂ ತುಂಬೊಲವನ್ನು ಊಡಿಸಿ ಮನೆ ಮಗಳಂತೆ ಸಾಕಿದ ಚೆನ್ನಿಯನ್ನು — ಯಾವನೋ ಬೈರಾಗಿಗೆ ಒಪ್ಪಿಸಿದ್ದಾಯಿತು; ಇದು ಅವರ ಮನಸ್ಸನ್ನು ಕೊರೆಯುತ್ತಿರಬೇಕು. ತಂದೆಯ ಬಗ್ಗೆ ಸುಂದರನಿಗೆ ಹೆಮ್ಮೆಯಾಯಿತು. ನಿಜವಾಗಿಯೂ ತನ್ನ ತಂದೆ, ಅವರ ಮಗನೆ ತಾನು.

"ಹಾಗಾದರೆ ಯಾಕಪ್ಪ ಕೂಡದು?"

"ಮಾದನ ಮಗಳನ್ನು ನಾನು ಮಗಳು ಎಂತ ಸಾಕಿದ್ದೇನೆ. ಅವಳು ನಿನ್ನ ತಂಗಿಗೆ ಸಮಾನ. ಹಾಗೆಂದೇ ತಿಳಿಯತಕ್ಕದ್ದು. ಬೇರೆ ಭಾವಿಸ ಕೂಡದು. ನೀನು ಅವಳನ್ನು ಖಂಡಿತ ಮದುವೆಯಾಗಕೂಡದು." ಆಗಿದು

ಆಗಿದು ಖಂಡಿತ ವಾಕ್ಯನಿಂದ ನುಡಿದರವರು.

"ಹಾಗೇ ಆಗಲಪ್ಪ. ಪ್ರಯತ್ನಪಡುತ್ತೇನೆ. ನೀನು ಮಾದನಿಗೆ ಅವನ ಮಗಳಿಗೆ ತೋರಿದ ಪ್ರೀತಿಯನ್ನೇ ನಾನು ಊರಿನ ಇತರ ಹೊಲೆ ಮಾದಿಗರೆನ್ನಿಸಿಕೊಂಡ ಬಡಜನಕ್ಕೂ ತೋರಿ ಅವರಿಗೆ ಕೈಲಾದ ಉಪಕಾರ ಮಾಡುವುದಕ್ಕೆ ನಿನ್ನ ಅಡ್ಡಿ ಏನಾದರೂ ಇದೆಯೇನಪ್ಪ ?"

"ಆ ವಿಚಾರ ನನಗೆ ಏನೂ ತಿಳಿಯದು. ನಿನಗೆ ದೇವರು ಬುದ್ಧಿ ಕೊಟ್ಟ ಹಾಗೆ ಮಾಡು. ಮುಖ್ಯ ಊರಿನವರ ವಿರೋಧ ಕಟ್ಟಿಕೋಬೇಡ."

ತನ್ನ ಮುಂದಿನ ಕಾರ್ಯಕ್ಕೆ ಒಂದು ರೀತಿಯಲ್ಲಿ ತಂದೆಯ ಆಶೀರ್ವಾದ ದೊರಕಿತೆಂದು ಸುಂದರ ಸಂತೃಪ್ತನಾದ. ಸಾಧನೆಯನ್ನು ತಂಗಿಯಂತೆ ಭಾವಿಸಬೇಕು, ಅಲ್ಲವೆ? ಆಗಲಿ, ಪ್ರಯತ್ನಪಡೋಣ. ತೃಪ್ತಿಗೊಂಡ ಜೀವ ನಲಿಯಿತು, ಮೂಕವಾಯಿತು.

೬೭

ಶಾಮಿಗೆ ಪರೀಕ್ಷೆ ತೀರ ಸಮೀಪವಾಗಿತ್ತು. ಹತ್ತು ಹನ್ನೆರಡು ದಿನಗಳಾದರೂ ರಜ ತೆಗೆದುಕೊಳ್ಳಬೇಕು. ಓದಿಗೆ ವಿಘ್ನ. ಆದ್ದರಿಂದ ನರಸಮ್ಮನವರ ವಾರ್ಷಿಕ ಶ್ರಾದ್ಧವನ್ನು ಬೆಂಗಳೂರಿನಲ್ಲಿ ರಾಮಸ್ವಾಮಯ್ಯನ ಮನೆಯಲ್ಲಿ ನೆರವೇರಿಸುವುದೆಂದು ಕೃಷ್ಣಪ್ಪನವರು ತೀರ್ಮಾನಿಸಿದ್ದರ ಪ್ರಕಾರ, ಅದು ಅಲ್ಲಿಯೇ ನಡೆಯಿತು. ಬಂಧುಗಳೆಲ್ಲಾ ಒಂದು ಕಡೆ ಕಲೆತಿದ್ದರು. ತುಂಗೆಯ ಪ್ರಸ್ತವನ್ನೂ ಬೆಂಗಳೂರಿನಲ್ಲಿಯೇ ನೆರವೇರಿಸುವುದು ಒಳ್ಳೆಯದೆಂದು ಗಂಗಮ್ಮ ಸಲಹೆಯಿತ್ತಳು. ಇನ್ನು ಕೆಲವು ಗೃಹಕೃತ್ಯವಿಚಾರಗಳು ಚರ್ಚೆಗೆ ಬಂದುವು. ತುಂಗೆ ಗಂಡನ ಮನೆಗೆ ಹೋಗುವವಳಾದ್ದರಿಂದ, ಊರಿನಲ್ಲಿ ಮನೆಯಲ್ಲಿ ಅಲ್ಲಿಗೆ ಮಾಡಲು ಯಾರೂ ಇಲ್ಲ. ಯಾರು ಎಷ್ಟು ಬಲವಂತ ಮಾಡಿದರೂ ಮದುವೆಗೆ ಸುಂದರಮೂರ್ತಿ ಒಪ್ಪಲಿಲ್ಲ. ಅವನ ಮನಸ್ಸನ್ನು ಅರಿತಿದ್ದ, ಕೃಷ್ಣಪ್ಪನವರು ಬಲವಂತ ಮಾಡಹೋಗಲಿಲ್ಲ. "ರಾಮಸ್ವಾಮಯ್ಯ ಹೇಳಿದ ಹಾಗೆ ಮಾಡಿದರೆ ಸಂತೋಷ" ಎಂದಿದ್ದರು, ಅಷ್ಟೆ. ಕೃಷ್ಣಪ್ಪನವರು ಸದ್ಯದ ಮಟ್ಟಿಗೆ ಊರಿಗೆ ಹಿಂತಿರುಗತಕ್ಕದ್ದೆಂದೂ, ಅಲ್ಲಿ ಶ್ಯಾನುಭೋಗಿಕೆಯನ್ನು ಸುಂದರನಿಗೋ ಇನ್ನು ಯಾರಿಗಾದರೋ

ವಹಿಸಿ, ರೈತರಿಗೆಲ್ಲ ಸುಂದರನ ಮುಖಾಬಿಲೆ ಮಾಡಿಸಿ, ಆಮೇಲೆ ಬೆಂಗಳೂರಿನಲ್ಲಿಯೇ ಬಂದು ಮಗಳ ಮನೆಯಲ್ಲಿಯೇ ಸದ್ಯದ ಮಟ್ಟಿಗೆ ಉಳಿಯತಕ್ಕದ್ದೆಂದೂ ತೀರ್ಮಾನವಾಯಿತು. ಸೂರಿ ಲೋವರ್ ಸೆಕಂಡರಿ ಪರೀಕ್ಷೆಗೆ ಕಟ್ಟಿದ್ದನಾದ್ದರಿಂದ ಅವನು ಕೃಷ್ಣಪ್ಪನವರೊಂದಿಗೆ ಹಿಂದಿರುಗಬೇಕಾಗಿದ್ದಿತು.

ಬೆಂಗಳೂರಿನಲ್ಲಿ ಇದ್ದ ವೇಳೆಯಲ್ಲಿ ಒಂದು ದಿನ ಸುಂದರ ಲಕ್ಷ್ಮೀಪತಿಯಿದ್ದ ಸ್ಕೂಲಿಗೆ ಹೋಗಿ ಅವನನ್ನು ಭೇಟಿಮಾಡಿ, ಒಂದು ಸಂಜೆ ನೆಮ್ಮದಿಯಾಗಿ ಅವನೊಡನೆ ಕಾಲ ಕಳೆದ. ಲಕ್ಷ್ಮೀಪತಿ ಈಗ ತಕ್ಕಮಟ್ಟಿನ ಪ್ರಸಿದ್ಧಿಯನ್ನು ಪಡೆದಿದ್ದ ತರುಣ ಸಾಹಿತಿ ಎನ್ನಿಸಿಕೊಂಡಿದ್ದ. ಅವನ ಮೂರು ನಾಲ್ಕು ಪುಸ್ತಕಗಳು ಆಗಲೇ ಪ್ರಕಟವಾಗಿದ್ದವು. ಅವನು ಸುಂದರನ ಸತ್ಯಾಗ್ರಹ ಸಂಬಂಧವಾದ ಅನುಭವಗಳನ್ನೂ ಅವನು ಮುಂದೆ ಮಾಡಬೇಕೆಂದಿದ್ದ ಕಾರ್ಯಗಳ ವಿಷಯವನ್ನೂ ಕೇಳಿ, "ನೀನು ಅಜ್ಞಾತ ಕರ್ಮಯೋಗಿ ಸುಂದರ. ಸಾಹಿತಿಗಳು ಬೇಸರವಿಲ್ಲದೆ ಒಂದೇ ಸಮನಾಗಿ ಗಳಹುತ್ತಾರೆ. ನುಡಿದಂತೆ ನಡೆಯರು" ಎಂದು ಆತ್ಮನಿರಾಕರಣೆಯಂಥ ಮಾತನಾಡಿದ.

"ಕವಿಗಳ ಕೆಲಸ ನುಡಿಯುವುದು, ಹಾಡುವುದು; ಗಾಂಧಿಯಂಥ ಕರ್ಮಯೋಗಿಗಳ ಕೆಲಸ ನಡೆಯುವುದು. ಒಬ್ಬರ ಕೆಲಸ ಇನ್ನೊಬ್ಬರು ಮಾಡುವುದು ಹೇಗೆ? ಇಬ್ಬರೂ ಪರಸ್ಪರ ಪೂರಕರು. ರಾಮನ ಚರಿತೆ ವಾಲ್ಮೀಕಿಯಿಂದ ತಾನೆ ಅಮರವಾಗಿರುವುದು? ಮುಂದೆ ಒಬ್ಬ ಮಹಾಕವಿ ಹುಟ್ಟಿ ಗಾಂಧಿಯವರ ಚರಿತೆ ಅಮರವಾಗಬೇಕಾಗಿದೆ. ಕನ್ನಡದಲ್ಲಿ ಆ ಕೆಲಸ ನೀನೇ ಏಕೆ ಮಾಡಬಾರದು?" ಎಂದ ಸುಂದರ.

ಸುಂದರಮೂರ್ತಿಯ ಮಾತಿಗೆ ಲಕ್ಷ್ಮೀಪತಿ ಗೊಳ್ಳನೆ ನಕ್ಕ. ಹೀಗೆಯೇ ಮಾತು ಮುಂದೆ ಸಾಗಿತು.

"ವಿಶ್ವನಾಥನನ್ನು ಎಂದಾದರೂ ಕಂಡಿದ್ದೆಯೋ?"

"ಅನೇಕ ಸಲ ನೋಡಿದ್ದೆ. ಈಚೆಗೆ ಕಂಡಿಲ್ಲ. ಇಬ್ಬರೂ ಬಸವನಗುಡಿಯಲ್ಲಿಯೇ ಇದ್ದೆವು. ಈಗ ಅವನು ಮನೆ ಬಿಟ್ಟು, ಮಾವಳ್ಳಿಯಲ್ಲಿ ಅದೆಲ್ಲಿಯೋ ರೂಮು ಮಾಡಿಕೊಂಡು ಇದ್ದಾನಂತೆ. ಅವನ ಕಥೆ ಅದು ಯಾಕೆ ಕೇಳುತಿ, ಸುಮ್ಮನಿರು."

"ಅದೇನಂ ವಿಚಾರ?"

"ಮೈ ಕೈಯೆಲ್ಲ ಸಾಲ. ಅದು ಯಾವಳನ್ನೊ ಕಟ್ಟಿಕೊಂಡಿದ್ದನಂತೆ. ಈಗ ಇನ್ನು ಯಾವಳನ್ನೋ ಕಟ್ಟಿಕೊಂಡಿದಾನಂತೆ. ರೋಗ ಬೇರೆ ಅಂಟಿಸಿಕೊಂಡಿದಾನೆ ಅಂತ ಕೇಳಿದೆನಪ್ಪ. ಅದೇನೋ ನಾನು ಕಾಣೆ."

ಸುಂದರ ಸ್ವಲ್ಪ ಹೊತ್ತು ಮೌನವಾಗಿದ್ದ. ಕಮಲೆಗಾಗಿ ಕೊರಗಿದ.

"ಅವನಿರುವ ಸ್ಥಳ ಪತ್ತೆಮಾಡಬೇಕಲ್ಲ ಮತ್ತೆ?"

"ಅದಕ್ಕೇನು, ಕಚೇರಿಗೆ ಹೋದರೆ ಗೊತ್ತಾಗುತ್ತೆ. ಆದರೆ, ನನ್ನ ಮಾತು ನೀನು ಕೇಳುವುದಾದರೆ, ಈಗ ನೀನು ಸುಮ್ಮನಿರುವುದು ಒಳ್ಳೆಯದು. ನಾನು ಏನು ಹೇಳಿದೆ ಎನ್ನು, ಇನ್ನು ಕೆಲವು ದಿನದಲ್ಲಿ ತಲೆ ತಪ್ಪಿಸಿಕೊಳ್ಳಲು ಊರಿಗೆ ಹಿಂತಿರುಗುತ್ತಾನೆ. ಆಗ ನೀತಿ ಹೇಳಿದರೆ ಏನಾದರೂ ಹಿಡಿದೀತೋ ಏನೋ."

"ಹಾಗೇ ಆಗಲಿ, ನೋಡೋಣ" ಎಂದು ಸಮ್ಮತಿಸಿದ ಸುಂದರ.

ಸುಂದರ ಊರಿಗೆ ಹಿಂದಿರುಗುವ ಮೊದಲು, ಬೆಂಗಳೂರಿನಲ್ಲಿ ಇದ್ದ ಪ್ರಮುಖ ಹರಿಜನ ಸೇವಕರೊಬ್ಬರನ್ನು ಕಂಡು ಮಾತಾಡಿ, ತಾನು ಮಾಡಬೇಕೆಂದಿದ್ದ ಕಾರ್ಯದ ಬಗ್ಗೆ ಕೆಲವು ಅಮೂಲ್ಯ ಸಲಹೆಗಳನ್ನು ಪಡೆದ. ಕೆಂಗೇರಿಯ ಗುರುಕುಲಾಶ್ರಮವನ್ನೂ ನೋಡಿಕೊಂಡು ಬಂದ. ಆ ಸಲಹೆಗಳನ್ನು ಕೇಳಿ, ಆ ಬೆಳೆಯುತ್ತಿದ್ದ ಆಶ್ರಮ ನೋಡಿ, ತನ್ನ ಹಳ್ಳಿಯಲ್ಲಿ ಎಲೆಮರೆಯ ಕಾಯಂತೆ ಕೆಲಸ ಮಾಡಬೇಕೆಂದು ನಿರ್ಧರಿಸಿದ.

೩೮

ಸತ್ಯಾಗ್ರಹದಿಂದ ಹಿಂದಿರುಗಿದ ಮೇಲೆ ಏನೂ ಕಾರ್ಯವಿಲ್ಲದೆ ಊರಿನಲ್ಲಿ ಇದ್ದಾಗ, ತಂದೆಯೊಡನೆ ಮಾತುಕತೆಯಾದ ತರುಣದಲ್ಲಿ, ಸುಂದರಮೂರ್ತಿ ಸಾಧನೆಯನ್ನು ನೋಡಕೂಡದೆಂದು ತೀರ್ಮಾನಿಸಿದ್ದ. ತಂದೆ ಹೇಳಿದಂತೆ, ಸಾಧನೆಯನ್ನು ತಂಗಿಯಂತೆ ಕಾಣಬೇಕು; ಹಾಗೆ ಭಾವಿಸುವುದು ಈಗ ಅದೇಕೋ ತನ್ನಿಂದ ಸಾಧ್ಯವಾಗುವಂತೆ ಕಾಣುತ್ತಿಲ್ಲ; ನಿತ್ಯವೂ, ಕಡೆಗೆ ಕೆಲವೊಮ್ಮೆಯಾದರೂ, ಸಾಧನೆಯನ್ನು ಕಾಣುತ್ತ ಇದ್ದರೆ ತನ್ನ ದುರ್ಬಲ ಮನಸ್ಸು ತನ್ನನ್ನು ಎತ್ತ ಸೆಳೆಯುವುದೋ ಎಂದು ಶಂಕಿಸಿದ.

ಆದರಿಂದ ತಪ್ಪಿಸಿಕೊಳ್ಳುವ ಉಪಾಯವೆಂದರೆ, ಅವಳನ್ನು ಮರೆಯುವ ದಾರಿಯೆಂದರೆ, ಇಂಗ್ಲಿಷು ಗಾದೆ ಹೇಳುವ ಹಾಗೆ, ಕಣ್ಣಿಂದ ಮರೆಯಾದರೆ ಮನಸ್ಸಿನಿಂದಲೂ ಮರೆಯಾಗುವಳು. ಮತ್ತೆ ಹೀಗೆ ಬಗೆಹರಿಯಿತು: ಮರೆಯುವುದೆಂದರೆ ತೊರೆಯುವುದು. ಚೆನ್ನಿಯನ್ನು ತೊರೆಯುವುದಿಲ್ಲವೆಂದು ಹಿಂದೆ ತಾನು ಪ್ರತಿಜ್ಞೆಮಾಡಿರಲಿಲ್ಲವೆ? ಈಗ ಅದು ಏನಾಯಿತು? ಆ ಬೈರಾಗಿ ಯಾರೋ ಏನೋ? ಅವಳನ್ನು ಅವನು ತನ್ನ ಜೊತೆ ಕರೆದೊಯ್ದರೆ? ಈಗ ಅವನು ಉಪಕಾರಿಯಾಗಿದ್ದಾನೆ, ದಿಟ. ಆ ಅಪರಿಚಿತ ದೇಶಸಂಚಾರಿ ಸದಾ ಇಲ್ಲಿಯೇ ನೆಲಸಿರುತ್ತಾನೆ ಎಂದು ನಂಬುವುದು ಹೇಗೆ? ತಾನು ಅವಳನ್ನು ಮದುವೆಯಾಗದಿದ್ದರೂ ಹೆಣ್ಣಿಗೆ ಸಹಜವಾದ ಅಪೇಕ್ಷೆಗಳು ಅವಳಲ್ಲಿ ಇರುವು ದಿಲ್ಲವೇ? ಅವಳ ಭವಿಷ್ಯವನ್ನು ಕುರಿತು ಲೋಕವ್ಯವಹಾರದ ಗಂಧವರಿಯದ ಬೈರಾಗಿ ಚಿಂತಿಸಬಲ್ಲನೆ? ಚಿಂತಿಸಿ ಅದಕ್ಕೆ ರೂಪ ಕೊಡಬಲ್ಲನೆ? ಬೈರಾಗಿಗಿಂತ ಹೆಚ್ಚಾಗಿ ಸಾಧನೆಯ ಸಂರಕ್ಷಣೆ ಪೋಷಣೆ ತನ್ನ ಕರ್ತವ್ಯವಲ್ಲವೇ? ತನ್ನ ತಂದೆ ತಾನೆ ಅದು ಯಾವ ಧೈರ್ಯದ ಮೇಲೆ ಚೆನ್ನಿಯನ್ನು ಈ ಬೈರಾಗಿಯ ವಶಕ್ಕೆ ಒಪ್ಪಿಸಿದರು? ಆ ಡಾಕ್ಟರ ಬಳಿಯೇ ಇದ್ದರೆ ಕ್ರಿಸ್ತಮತಕ್ಕೆ ಸೇರಿ ತಮ್ಮ ವಶ ತಪ್ಪಿ ಹೋಗುವಳೆಂಬ ಕೊರತೆಯೇ ವಿನಾ ಬಹುಶಃ ಚೆನ್ನಿ ಜೀವನದಲ್ಲಿ ಸುಖ ಕಾಣುತ್ತಿದ್ದಳೆಂಬುದರಲ್ಲಿ ಸಂದೇಹವಿಲ್ಲ. ಈಗ? ಅವಳು ಬೈರಾಗಿಯ ಜೊತೆ ಇದ್ದು ಸಂನ್ಯಾಸಿನಿಯಾಗಬಹುದು, ಅಷ್ಟೆ. ತನಗಂತೂ ಪ್ರೇಮಜೀವನದ ಪ್ರಾಪ್ತಿಯಿಲ್ಲ. ಅವಳಿಗೂ ಬೇಡವೆ? ಅವಳನ್ನು ಕಾಣ ವುದು ಮಾತ್ರವಲ್ಲ, ಅವಳನ್ನು ಕಾಯುವುದೂ ತನ್ನ ಕರ್ತವ್ಯ. ಎಷ್ಟೆ ಉದಾರಬುದ್ಧಿಯಿದ್ದರೂ ಜಾತಿಸಂಸ್ಕಾರ ಅಳಿಯುವುದು ಕಷ್ಟ. ಹೀನ ಕುಲದ ಹೆಣ್ಣನ್ನು ತಾನು ಮದುವೆಯಾಗಿ ತಮ್ಮ ಕುಲವೇ ಎಲ್ಲಿ ಭ್ರಷ್ಟವಾಗ ವುದೋ, ವಂಶ ಎಲ್ಲಿ ಕಳಂಕಿತವಾಗುವುದೋ ಎಂಬುದೇ ತಂದೆಯ ಹಿತವಚ ನದ ಆಶಯ. ಮನುಷ್ಯನ ಬಾಳಿನಲ್ಲಿ ಪ್ರೇಮ ಪವಿತ್ರವಾದುದು, ಅತ್ಯಮೂಲ್ಯ ವಾದುದು ಪ್ರೇಮವೂ ಅದಕ್ಕೆ ಪಾತ್ರವಾದ ವಸ್ತುವೂ ದೊರೆತಾಗ ನ್ಯಾಯ ವಾದ ಪ್ರಬಲವಾದ ಕಾರಣವಿಲ್ಲದೆ ಅದನ್ನು ಯಾಕೆ ತ್ಯಾಗಮಾಡಬೇಕು? ಕಮಲೆಯಲ್ಲಿ ತನಗೆ ಮೂಡಿದ್ದ ಒಲವು ಎಳೆಯತನದ್ದು, ಸಲಿಗೆಯಿಂ ಬೆಳೆದದ್ದು, 'ಕಮಲೆ ನಿನ್ನ ಹೆಂಡತಿ' ಎಂದು ಇತರರು ಹೇಳಿಹೇಳಿ ಸೂಚ

ಯಿಂದ ಬೆಳೆದ ಕೃತಕ ಪ್ರೇಮವದು. ಚೆನ್ನಿಯಲ್ಲಿ ಸಲಿಗೆಗಿಂತ ನಿಜವಾದ ಕೆಳೆ, ಗಂಡು ಹೆಣ್ಣಿನ ಕೆಳೆ, ಒಡನಾಡಿದ ಕೆಳೆ, ಹೂವಿನೊಡನೆ ಚಿಟ್ಟೆ ಬೆಳೆಸುವಂಥ ಕೆಳೆ; ಆಮೇಲೆ ಆದರೊಂದಿಗೆ ಮರುಕ; ಆಮೇಲೆ ಅವಳನ್ನು ಕಾಪಾಡ ಬೇಕು, ಅದು ತನ್ನ ವಸ್ತು ಎಂಬ ಮಮತೆ, ಆತ್ಮೀಯತೆ; ಕಡೆಯ ಮೆಟ್ಟಲು ಈಗ ಕಟ್ಟೆರಕ. ಮರುಕದಿಂದ ಮೊದಲಾದ ಈ ಎರಕ ಸಹಜವಾದದ್ದು, ಪರಿಶುದ್ಧವಾದ್ದು, ಪವಿತ್ರವಾದದ್ದು. ಸಾಧನೆಯೂ ತನ್ನನ್ನು ಒಲಿದರೆ ಅವಳನ್ನು ಒಲಿಯುವುದು; ಇಲ್ಲ, ಬೇಡ. ಅಂದು ಅವಳನ್ನು ಮರೆಯುವುದು. ಯಾವ ಸಂದರ್ಭದಲ್ಲಿಯೂ ತೊರೆಯುವುದು ಸಾಧ್ಯವಿಲ್ಲ. ತಂದೆಯ ಹಿತೋಕ್ತಿಯನ್ನು ಮೀರಬೇಕಾದ ಸನ್ನಿವೇಶ ಒದಗಿದರೂ ಸರಿಯೆ, ಅವಳನ್ನು ನೋಡದೆ ಮಾತಾಡಿಸದೆ ಇರುವುದು ಸರಿಯಲ್ಲ. ಅಥವಾ, ತಂದೆ ಹೇಳಿದಂತೆ ನಡೆಯಬೇಕೆಂದರೂ, ಅವಳೊಡನೆ ಇದ್ದೂ ಅವಳೊಡನೆ ಮಾತಾಡಿಯೂ ನಲಿದೂ, ತನ್ನ ದುರ್ಬಲ ಮನಸ್ಸನ್ನು ಗೆಲ್ಲುವುದು ನಿಜವಾದ ಆದರ್ಶವಾದೀತು. ಗೆದ್ದರೂ ಸರಿಯೆ ಸೋತರೂ ಸರಿಯೆ. ಹೇಗೂ ಅವಳನ್ನು ಬಿಟ್ಟು ಇರಲು ಸಾಧ್ಯವಿಲ್ಲ.

ಹೀಗೆ ಆಳವಾಗಿ ಆಲೋಚನೆ ಮಾಡಿ, ನಿರ್ಧರಿಸಿ, ಮುರುಕುಮಂಟಪದ ಬಳಿಗೆ ಹೋಗಿ ಬರುತ್ತ ಇದ್ದ. ಮೊದಲ ದಿನ, ತನ್ನ ತಾಯಿಯ ಸಾವಿನ ಸುದ್ದಿಯನ್ನು ಬೈರಾಗಿಗೂ ಸಾಧನೆಗೂ ಹೇಳಬೇಕೆಂದು ಮಾಡಿಕೊಂಡಿದ್ದ ಸುಂದರ. ಆದರೆ ಅವನನ್ನು ಕಂಡ ಕೂಡಲೆ ಬೈರಾಗಿಯೇ ಆ ವಿಷಯದ ಮಾತಿಗೆ ಮೊದಲು ಮಾಡಿ, ಮುತ್ತೈದೆಯಾಗಿ ಸತ್ತ ತಾಯಿಯ ಸಾವಿಗೆ ಕೊರಗಕೂಡದೆಂದು ಸಮಾಧಾನ ಹೇಳಿ, ಧೈರ್ಯಹೇಳಿ, ಈಗ ಮಿಕ್ಕ ಎಲ್ಲ ಯೋಜನೆಗಳನ್ನೂ ಬದಿಗೊತ್ತಿ ಮನೆಯ ಕಡೆ ಮನಸ್ಸು ಕೊಡಬೇಕಾದದ್ದು ಕರ್ತವ್ಯವೆಂದು ಬೋಧಿಸಿ, ಸುಂದರನಿಗೆ ಚಿತ್ತಸ್ವಾಸ್ಥ್ಯ ಬರುವಂತೆ ಮಾಡಿದ್ದ. ಸುಂದರ ಅಂತೆಯೇ ನಡೆದುಕೊಂಡಿದ್ದ.

ಈಗ ಬೆಂಗಳೂರಿನಿಂದ ಕೃಷ್ಣಪ್ಪನವರು ಸುಂದರ ಸೂರಿ ಹಿಂದಿರುಗಿದ್ದರಷ್ಟೆ. ತಂದೆಗೆ ತೊಂದರೆ ಕೊಡಬಾರದೆಂದು ಸುಂದರ ಪ್ರತಿನಿತ್ಯವೂ ಬೆಳಿಗ್ಗೆ ತಾನೆ ಕಾಫಿ ಕಾಯಿಸಿ, ಅಡಿಗೆ ಮಾಡುತ್ತಿದ್ದ. ಅವರಿಗೆ ಬಡಿಸಿ, ತನ್ನ ಊಟವಾದ ಮೇಲೆ ಮತ್ತೆ ಕಾಫಿ ಕಾಯಿಸಿ, ವಿಶ್ರಾಂತಿ ತೆಗೆದು

ಕೊಂಡು, ಹೊಳೆಯ ಕಡೆ ಹೋಗುತ್ತಿದ್ದ. ಅಲ್ಲಿ ಸಂಜೆಯುವರೆಗೆ ಇದ್ದು, ಹಿಂದಿರುಗಿ ಮನೆಗೆ ಬಂದು ಮತ್ತೆ ಬಿಸಿಯಾಗಿ ಅಡಿಗೆ ಮಾಡಿ, ತಮ್ಮನಿಗೆ ಪರೀಕ್ಷೆಗಾಗಿ ವಿಶೇಷ ಶಿಕ್ಷಣ ಕೊಟ್ಟು, ಮಲಗುವ ಮುನ್ನ ಸ್ವಲ್ಪ ಓದಿ ಮಲಗುತ್ತ ಇದ್ದ. ಈ ಕಾರ್ಯಕ್ರಮದಲ್ಲಿ ಅವನಿಗೆ ವಿರಾಮವೇ ಇಲ್ಲ: ಆದರೆ, ಬೇಸರವೂ ಇಲ್ಲ, ಆಯಾಸವೂ ಇಲ್ಲ. ಈ ಬಗೆಯ ಬದುಕು ಅವನಿಗೆ ಒಗ್ಗಿ ಬಂದಿತ್ತು. ಒಮ್ಮೊಮ್ಮೆ ಬಿಡುವಾದರೆ, ಹೆಡ್ಮಾಸ್ಟರಲ್ಲಿಗೋ ಡಾಕ್ಟರಲ್ಲಿಗೋ ಹೋಗಿ ರಾಜಕೀಯ ಸಾಮಾಜಿಕ ಸಮಾಚಾರಗಳನ್ನು ಅವರೊಂದಿಗೆ ಚರ್ಚಿಸುತ್ತ ಕಾಲ ಕಳೆಯುವನು. ಸರ್ಕಾರದವರು ಸದ್ಯದಲ್ಲಿಯೇ ಈ ಊರಿಗೆ ಹೈಸ್ಕೂಲೊಂದನ್ನು ಕೊಡಲಿದುವರೆಂಬ ಸಂಗತಿಯನ್ನು ಹೆಡ್ಮಾಸ್ಟರು ಸುಂದರನಿಗೆ ತಿಳಿಸಿದರು.

ಸುಂದರ ಬೆಂಗಳೂರಿನಿಂದ ಕೆಲವು ಕನ್ನಡ ಪುಸ್ತಕಗಳನ್ನು ಸಾಧನೆಗೆಂದು ಕೊಂಡು ತಂದಿದ್ದನು; ಆ ಗ್ರಂಥಸಂಗ್ರಹದಲ್ಲಿ ಲಕ್ಷ್ಮೀಪತಿ ತನ್ನ ಪುಸ್ತಕಗಳ ಒಂದೊಂದು ಪ್ರತಿಯನ್ನು ಅವನಿಗೆ ಸ್ನೇಹದ ಕಾಣಿಕೆಯಾಗಿ ಅರ್ಪಿಸಿದ್ದನು. ಸುಂದರ ಪುಸ್ತಕಗಳನ್ನೆಲ್ಲ ಹೊಸ ಟ್ರಂಕೊಂದರಲ್ಲಿ ಇಟ್ಟು ಆ ಪುಸ್ತಕಪೆಟ್ಟಿಗೆಯನ್ನು ಸಾಧನೆಗೆ ತನ್ನ ಒಲವಿನ ಕಾಣಿಕೆಯಾಗಿ ಅರ್ಪಿಸಿದನು.

ವಯೋಧರ್ಮದ ಪ್ರಭಾವದಿಂದಲೂ ಸಹಜ ಸೌಂದರ್ಯದಿಂದಲೂ ಸಾಧನೆ ಈಗ ಸುಂದರಸ್ತ್ರೀಯಾಗಿ ಬೆಳೆದಿದ್ದಳು. ಬೈರಾಗಿ ಕೊಟ್ಟ ಶಿಕ್ಷಣದಿಂದ ಅವಳು ಯಾವ ಕನ್ನಡ ಪುಸ್ತಕವನ್ನಾದರೂ ಸ್ವತಃ ಓದಿಕೊಂಡು ತಾನಾಗಿ ಅರ್ಥಮಾಡಿಕೊಳ್ಳುವ ಮಟ್ಟಿಗಾಗಿದ್ದಳು. ಆದರೆ, ಅವಳ ಬಳಿ ಪುಸ್ತಕಗಳಿರಲಿಲ್ಲ; ಸುಂದರ ಆ ಕೊರತೆಯನ್ನು ನೀಗಿಸಿದನು.

ಸಾಧನೆಯ ಬಳಿ ಬೈರಾಗಿ ಸರ್ಪಕಾವಲಿನಂತೆ ಇರುತ್ತಿದ್ದನು. ಆ ಕಾವಲಿನ ಬೇಲಿಯನ್ನು ದಾಟಿ ಸಾಧನೆಯ ಸಾನ್ನಿಧ್ಯದಲ್ಲಿ ಏಕಾಂತದ ಮಾತುಕತೆಯಾಡಲು ಸುಂದರನಿಗೂ ಸಾಧ್ಯವಾಗುತ್ತಿರಲಿಲ್ಲ. ಆದರೆ, ಸುಂದರ ತನ್ನ ಕಣ್ಣುಗಳಿಂದಲೇ ಸಾಧನೆಯ ಸೌಂದರ್ಯಾಮೃತ ಪಾನಮಾಡುತ್ತ ತೃಪ್ತನಾಗಿರುತ್ತಿದ್ದನು. ಸಾಧನೆಯೂ ಕೂಡ ಸುಂದರನನ್ನು ಒಬ್ಬ ಹೊಸ ಮನುಷ್ಯನೆಂಬಂತೆ ಭಾವಿಸತೊಡಗಿದ್ದಳು. ಲಜ್ಜೆಯನ್ನೇ ಕಾಣದಿದ್ದ ಹುಡುಗಿ

ಈಗ ನೋಟದಲ್ಲಿ ನುಡಿಯಲ್ಲಿ ನಡೆಯಲ್ಲಿ ಲಜ್ಜೆಯ ಲಹರಿಯನ್ನು ಹರಿಸುತ್ತಿದ್ದಳು. ಇದು ಬೈರಾಗಿ ಕಲಿಸಿದ ಕಲಿಕೆಯಲ್ಲ; ಲಜ್ಜೆಯ ಬಿಜ್ಜೆ ಕಲಿಸುವ ಕಲಿಸಿರುವ, ಗುರು ಬೇರೆ: ಪ್ರೇಮಗುರು, ಮನ್ಮಥ– ಎಂದು ಭಾವಿಸಿ ಚೋದ್ಯಪಡುತ್ತಿದ್ದನು ಸುಂದರ.

ಪುಸ್ತಕಪೋದಿಸ ವಿಚಾರವಾಗಿ ಸುಂದರ ಯಾವ ಮನಸ್ಸಿನ ಆತಂಕವೂ ಇಲ್ಲದೆ ಬೈರಾಗಿಯ ಎದುರಿನಲ್ಲಿಯೇ ಸಲಿಗೆಯಿಂದ ಸಾಧನೆಯೊಂದಿಗೆ ಮಾತಾಡುತ್ತಿದ್ದ. ಬೈರಾಗಿಯೂ ಕೂಡ 'ಸಾಧನೆ ಇನ್ನು ಮೇಲೆ ನಿನ್ನ ಶಿಷ್ಯೆ' ಎಂದು ಹೇಳಿಬಿಟ್ಟಿದ್ದ. ಲಕ್ಷ್ಮೀಪತಿ ಬರೆದಿದ್ದ ಕಥಾ ಸಂಕಲನವೊಂದರಲ್ಲಿ 'ಹರಿಜನ ಹುಡುಗಿ' ಎಂಬ ಒಂದು ಕಥೆ ತನ್ನನ್ನೆ ಕುರಿತು ಬರೆವಂತೆ ಇದ್ದಿತು: ಕಥೆಯಲ್ಲಿ ಸುಂದರ– ತಾನು – ಶ್ಯಾಮಸುಂದರನಾಗಿದ್ದ; ಚೆನ್ನಿ ಚೆನ್ನಿಯಾಗಿಯೇ ಉಳಿದಿದ್ದು ಶ್ಯಾಮಸುಂದರನನ್ನು ಮದುವೆಯಾದ ಮೇಲೆ ಸುಂದರಿಯಾಗಿದ್ದಳು. ಸುಂದರ ಸಾಧನೆಯನ್ನು ಪ್ರಶ್ನಿಸಿದ:

"ಹರಿಜನ ಹುಡುಗಿ ಎಂಬ, ಕತೆ ಓದಿದೆಯಾ?"

"ಓದಿದೆ."

"ಹೇಗಿದೆ?"

"ಚೆನ್ನಾಗಿದೆ."

"ಹಾಗೆ ನಡೆಯುವುದು ಸಾಧ್ಯವೆ?"

"ಹೇಗೆ?"

'ಒಬ್ಬ ಬ್ರಾಹ್ಮಣ ವಿದ್ಯಾವಂತ ತರುಣ ತನಗೆ ಗೊತ್ತಾಗಿದ್ದ ಹೆಣ್ಣನ್ನು ಮದುವೆಯಾಗದೆ ವಿದ್ಯಾವಂತೆಯಲ್ಲದ ಹರಿಜನ ಹುಡುಗಿಯನ್ನು ಮದುವೆಯಾಗುವುದು."

"ಯಾಕಾಗಬಾರದು?" ಎಂದು ಸಾಧನೆ ಕಡೆಗಣ್ಣ ನೋಟವೊಂದನ್ನು ಬೀರಿ, ತಲೆತಗ್ಗಿಸಿ, ಸುಮ್ಮನಾದಳು.

"ಹೌದು, ಯಾಕಾಗಬಾರದು? ನನಗೂ ಹಾಗೇ ಅನ್ನಿಸುತ್ತೆ" ಎಂದು ಸುಂದರ ಆ ಅವಳ ನೋಟಕ್ಕೆ ತನ್ನ ನೋಟವನ್ನು ಹೆಣೆದಿದ್ದ. ಬೈರಾಗಿ ಇದನ್ನೆಲ್ಲ ನೋಡುತ್ತ ಕೇಳುತ್ತ ಮುಗುಳುನಗೆ ನಗುತ್ತ ಪುಸ್ತಕದ

ಓದಿನಲ್ಲಿ ಮಗ್ನನಾಗಿರುವಂತೆ ನಟಿಸುತ್ತ ಸುಮ್ಮನೆ ಕುಳಿತಿದ್ದ.

ಈ ಕಾಲದಲ್ಲಿ, ಏನೂ ಮಾತಿಲ್ಲದಿದ್ದರೂ, ಏನೂ ಕೆಲಸವಿಲ್ಲದಿದ್ದರೂ, ಸಾಧನೆಯನ್ನು ನೋಡುತ್ತ ನಲಿಯುತ್ತ ಕುಳಿತಿರುವುದೇ ಸುಂದರನ ಸಾಧನೆಯಾಯಿತು, ತಪಸ್ಸಾಯಿತು.

ಈ ನಡುವೆ, ಸುಂದರ ಲಕ್ಷ್ಮೀಪತಿಗೆ ಒಂದು ಪತ್ರವನ್ನು ಬರೆದು, ಹೀಗೆ ಮುಗಿಸಿದ್ದ :

"........ನಿನ್ನ ಕಥೆಗಳಲ್ಲೆಲ್ಲ 'ಹರಿಜನ ಹುಡುಗಿ' ವಿಚಿತ್ರವಾಗಿ ಕಾಣುತ್ತದೆ. ನಿರೂಪಣೆ ಸಹಜಸುಂದರವಾಗಿದ್ದರೂ ಘಟನೆ ಅಸಂಭವವಾಗಿ ಕಾಣುತ್ತದೆ. ಜೀವನದಿಂದ ವಸ್ತುವನ್ನು ಆಯುವಾಗ ಎಚ್ಚರಿಕೆಯಿಂದ ಅದನ್ನು ಸಾಹಿತ್ಯದ ಪಾಕಕ್ಕೆ ಇಳಿಸಬೇಕಲ್ಲವೆ? ನೀನು ವರ್ಣಿಸಿರುವ ಘಟನೆ–ಸುಂದರ-ಸುಂದರಿಯರ ಮದುವೆ — ಇಂದಿನ ಸಮಾಜಸ್ಥಿತಿಯಲ್ಲಿ ಅಸಾಧ್ಯ ಮಾತ್ರವಲ್ಲ, ಅಸಂಭವನೀಯವಾಗಿಯೂ ಕಾಣುತ್ತದೆಯಲ್ಲವೆ? ನನ್ನ ಅಭಿಪ್ರಾಯವನ್ನು ನೀನು ಒಪ್ಪುತ್ತೀಯೊ ಇಲ್ಲವೋ ನಾನು ಕಾಣೆ. ಇಷ್ಟಕ್ಕೂ ಸಾಹಿತ್ಯವಿಮರ್ಶೆಯಲ್ಲಿ ನಾನು ಕೇವಲ ಪಾಮರ........"

ಇದಕ್ಕೆ ಲಕ್ಷ್ಮೀಪತಿಯ ಉತ್ತರ ಹೀಗಿತ್ತು :

"ನನ್ನ ಕೃತಿಗಳನ್ನು, ಮುಖ್ಯವಾಗಿ ನನ್ನ ರಾಷ್ಟ್ರಭಾವನೆಯ ಕವನಗಳನ್ನು ನೀನು ಮೆಚ್ಚಿಕೊಂಡದ್ದಕ್ಕಾಗಿ ನನಗೆ ಸಂತೋಷ. ಗೆಳೆಯರ ಹೃತ್ಪೂರ್ವಕವಾದ ಮೆಚ್ಚಿಕೆಯ ಮಾತುಗಳು ವಕ್ರದೃಷ್ಟಿಯ ವಿಮರ್ಶಕರ ಬಾಣಾಘಾತಕ್ಕೆ ಅಮೃತಲೇಪ.... ಅದಿರಲಿ. 'ಹರಿಜನ ಹುಡುಗಿ' ಕಥೆಯ ವಿಚಾರ. ಒಂದು ದೃಷ್ಟಿಯಲ್ಲಿ ನಿನ್ನ ಮಾತು ಸಹಜ. ಇದ್ದುದನ್ನು ಇದ್ದಂತೆಯೇ ಚಿತ್ರಿಸುವುದು ಒಂದು ಪ್ರಕಾರದ ಸಾಹಿತ್ಯ. ನನ್ನ ಅಭಿಪ್ರಾಯದಲ್ಲಿ, ಸಾಹಿತಿ ದ್ರಷ್ಟಾರನೂ ಆಗಬೇಕು. ತನ್ನ ಕೃತಿಯಲ್ಲಿ ಸಮಾಜ ಹೇಗೆ ರೂಪಗೊಳ್ಳಬೇಕೆಂಬುದನ್ನು ಮುಂಗಂಡು ಅದನ್ನು ತೋರಿಸಬೇಕು. ಸಾಹಿತಿ ಮಾರ್ಗದರ್ಶಕನೂ ಆಗಬೇಕು. ಆ ಮಾರ್ಗದರ್ಶನಕಾರ್ಯದಲ್ಲಿ, ನಡೆದ ಇಲ್ಲವೆ ಇನ್ನೇನು ನಡೆಯಲಿರುವ ಘಟನೆಯೊಂದನ್ನು ಕಂಡು ಸಾಹಿತಿ ಆದರ್ಶಸಮಾಜಪ್ರಗತಿಯ ಜಾಡಿನ ಸುಳಿವು ಹಿಡಿಯುತ್ತಾನೆ. ಈಗ ಕಥೆ ಕಥೆಯಾಗಿಯೇ ಉಳಿದಿದೆ; ಸಾಹಿತಿಯ ಕನಸು. ಅದನ್ನು

ನನಸಾಗಿಸಬೇಕಾದವನು ನೀನು....''

ಇದಕ್ಕೆ ಸುಂದರ ಹೆಚ್ಚಿನ ಪ್ರತ್ಯುತ್ತರ ಕೊಡಲಿಲ್ಲ; ತನ್ನ ಊರಿಗೆ ಯಾವಾಗಲಾದರೂ ಬರಬೇಕೆಂದು ಗೆಳೆಯನಿಗೆ ಒಲವಿನ ಕರೆ ಕಳುಹಿಸಿದ.

ಹಲವಾರು ಸಣ್ಣ ಪುಟ್ಟ ಅಂಶಗಳ ಕಾರಣದಿಂದ, ಸಾಧನೆಯಲ್ಲಿ ಸುಂದರನ ಒಲವು ಪುಟಗೊಳ್ಳುತ್ತ ಬಂದಿತು ತಂದೆಯ ಮಾತಿನಂತೆ ನಡೆಯಲು ಸಾಧ್ಯವಾಗದೆಂದು ತೋರತೊಡಗಿತು. ತಕ್ಕಮಟ್ಟಿನ ಸಂಯಮ ಸಂಪಾದನೆ ಮಾಡಿದ್ದ ಅವನ ಹೃದಯಸಂಪುಟದಲ್ಲಿ ಆ ಒಲವಿನ ರತ್ನ ಹೊರಕ್ಕೆ ಪ್ರಭೆಯನ್ನು ಬೀರದೆ ಒಳಗೇ ಬೆಳಗುತ್ತ ಅವನ ಒಳಬದುಕನ್ನು ನಲವಿನಿಂದ ತುಂಬಿತ್ತು.

೬೯

ಕೃಷ್ಣಪ್ಪನವರು ತನ್ನ ತಮ್ಮನ ಕಾಗದದ ಬಲದ ಮೇಲೆ ಅವನ ಉಳಿಕೆ-ಪಳಿಕೆಯ ಆಸ್ತಿಯನ್ನು ಧೈರ್ಯದಿಂದ ಮುಂದೆ ಬಂದ ಹಾಸನದ ಸಾಹುಕಾರನೊಬ್ಬನಿಗೆ ರಿಯಾಯಿತಿ ದರದಲ್ಲಿ ಮಾರಿ, ಅದರ ಬೆಲೆ ಒಟ್ಟು ಎರಡುಸಾವಿರ ರೂಪಾಯಿಗಳನ್ನು ಸುಂದರನಿಗೆ ಕೊಟ್ಟುಬಿಟ್ಟರು. ಎಷ್ಟು ಹೇಳಿದರೂ ಬೆಂಗಳೂರಿಗೆ ಬರಲು ಒಪ್ಪದಿದ್ದ ಸುಂದರನಿಗೆ ರೈತರೆಲ್ಲರ ಮುಖಾಬಿಲೆ ಮಾಡಿಸಿದರು; ಶಾನುಭೋಗಿಕೆಯ ಶನಿಕಾಟ ತನಗೆ ಬೇಡವೇ ಬೇಡವೆಂದು ಸುಂದರ ನುಡಿಯಲು, ನಂಬಿಕಸ್ತರಾಗಿದ್ದ ರಾಮಣ್ಣ ನೆಂಬವರಿಗೆ ಅದನ್ನು ವಹಿಸಿಕೊಟ್ಟರು. ಸೂರಿಯ ಪರೀಕ್ಷೆ ಮುಗಿದ ಕೂಡಲೆ ಕಣ್ಣೀರು ಹಾಕುತ್ತ ಸೋಲಿಯೊಂದಿಗೆ ತಮ್ಮ ಪ್ರೀತಿಯ ಊರನ್ನು, ಹುಟ್ಟೂರನ್ನು, ಹುಟ್ಟಿ ಬೆಳೆದ ಹಳೆಯ ಮನೆಯನ್ನು ಬಿಟ್ಟರು; ನಂಜುಂಡ ಶಾಸ್ತ್ರಿಗಳಿಗೆ, ಮೈಲಾರಯ್ಯನವರಿಗೆ, ಇನ್ನೂ ಕೆಲವರು ಆಪ್ತರಿಗೆ 'ಹೋಗಿ ಬರುತ್ತೇನೆ' ಎಂದು ಲೌಕಿಕರೀತಿಯಲ್ಲಿ ಹೇಳಿದರು; ಆದರೆ, ಅವರು ಬಾಯಿಬಿಟ್ಟು ಹೇಳದಿದ್ದರೂ ಅವರ ಕಟ್ಟಿದ ಕೊರಳು, ಮಿಡಿದ ಕಂಬನಿ, ಅವರ ಅಂತರಾಳದ ಆಶಯವನ್ನು ಬಿಂಬಿಸುತ್ತಿದ್ದುವು. 'ನೀವು ನೆರೆಯವರು ನಂಜುಂಡಶಾಸ್ತ್ರಿಗಳೆ. ನನಗಿಂತ ಹಿರಿಯರು. ನನ್ನನ್ನು ತಮ್ಮ ಎಂದು ತಿಳಿದು, ಸುಂದರನನ್ನು ಮಗ ಎಂದು ಭಾವಿಸ್ಸಿ

ನನ್ನ ಅಪರಾಧ ಏನಿದ್ದರೂ ಕ್ಷಮಿಸಿ, ಅವನ ಅಪರಾಧ ಏನಿದ್ದರೂ ಮನ್ನಿಸಿ, ಅವನನ್ನು ನಡಸಿಕೊಂಡು ಹೋಗಬೇಕು. ಅವನಿಗೆ ಬುದ್ಧಿವಾದ ಹೇಳಬೇಕು. ಕೇಳಿದನೇ, ಸಂತೋಷ; ಕೇಳಲಿಲ್ಲ, ಅವನ ಪಾಡಿಗೆ ಅವನು ಇದ್ದುಕೊಳ್ಳಲಿ. ನಿಮ್ಮ ಹರಕೆ ಮಾತ್ರ ಅವನಿಗೆ ರಕ್ಷೆಯಾಗಿರಲಿ," ಎಂದು ಅವರಿಗೆ ನಮಸ್ಕಾರ ಮಾಡಿದರು. ತಮ್ಮ ಕಾಲು ತೇವವಾದದ್ದು ನಂಜುಂಡಶಾಸ್ತ್ರಿಗಳ ಅರಿವಿಗೆ ಬಂದು, ಅವರ ಕಣ್ಣೂ ಒದ್ದೆಯಾಯಿತು. ಕೃಷ್ಣಪ್ಪನವರು ಎದ್ದು, "ನೀವೂ ಅಷ್ಟೆ ಮೈಲಾರಯ್ಯ, ಕಾವೇರಮ್ಮ?" ಎಂದು ಅವರ ಕಡೆ ತಿರುಗಿದರು. ಮೈಲಾರಯ್ಯನವರು, "ಸುಂದರ ನಮಗೆ ಹೊರಗೆ? ನಮ್ಮ ಮನೆಯಲ್ಲಿ ಇರುವುದಾದರೆ ಇರಲಿ. ಸಂತೋಷ" ಎಂದರು. "ನನ್ನ ಸೊಸೆ ಎಲ್ಲಿ?" ಎಂದು ತಿರಿಗಿದರು. ಕಮಲೆ ಮಗು ಎತ್ತಿಕೊಂಡು ತಲೆ ಬಗ್ಗಿಸಿ ನಿಂತಿದ್ದಳು. ಮಗುವನ್ನು ತಾಯಿಯ ಕೈಗೆ ಕೊಟ್ಟು ಬಂದು, ಕೃಷ್ಣಪ್ಪನವರ ಕಾಲಿಗೆ ಎರಗಿದಳು. "ದೀರ್ಘ ಸುಮಂಗಲೀ ಭವ" ಎಂದು ಅವರು ಬಾಯಿತುಂಬ ಹರಸಿದರು, ಕಣ್ಣೀರು ಸುರಿಸಿದರು; ಕಂಬನಿಗಳು ಮುತ್ತಿನ ಅಕ್ಷತೆಯಂತೆ ಅವಳ ತಲೆಯ ಮೇಲೆ ಬಿದ್ದುವು. ಅವಳೂ ಬಿಕ್ಕಿ ಬಿಕ್ಕಿ ಅಳುತ್ತ ಇದ್ದಳು. "ಅಪ್ಪಾ, ಬಸ್ಸಿಗೆ ಹೊತ್ತಾಯಿತು" ಎಂದು ಸೂರಿ ನಡುನಡುವೆ ಎಚ್ಚರಿಸುತ್ತಿದ್ದ. ಕೃಷ್ಣಪ್ಪನವರು ಅದೇನೋ ನೆನಪಾದಂತಾಗಿ, "ಕಾಳೇಗೌಡ, ಗಾಡಿ ಕಟ್ಟು. ಇನ್ನು ಆ ಗಾಡಿಯ ಮೇಲೆ ಕುಳಿತುಕೊಳ್ಳುವುದು ಯಾವಾಗಲೋ! ನಿಮ್ಮ ಮನೆಯ ತಾವಕ್ಕೇ ಬರುತೇನೆ. ನಿಮ್ಮ ಮನೆಯವರನ್ನೂ ನೋಡಿದ ಹಾಗಾಗುತ್ತೆ. ಈ ಹಾಸಿಗೆ ಮೂಟೆ ತೆಗೆದುಕೊಂಡು ಹೊರಡು, ನಾನು ಬಂದೆ" ಎಂದರು. ಕಾಳೇಗೌಡ ದುಪ್ಪಟಿಯಿಂದ ಕಂಬನಿಯೊರಸಿಕೊಂಡು, ಮೂಟೆ ಹೊತ್ತು ಹೋದ. ಎಲ್ಲರನ್ನೂ ಇನ್ನೊಮ್ಮೆ ಬೀಳ್ಕೊಂಡು ಕೃಷ್ಣಪ್ಪನವರು ಕಾಳೇಗೌಡನ ಮನೆಯ ಹಾದಿ ಹಿಡಿದರು ಸುಂದರ ಅಳಲನ್ನೆಲ್ಲ ಅದುಮಿಕೊಂಡು ತಂದೆಯನ್ನು ಹಿಂಬಾಲಿಸಿದ. ಕೃಷ್ಣಪ್ಪನವರು ಇದ್ದಕ್ಕಿದ್ದ ಹಾಗೆ ಅಡ್ಡದಾರಿ ಹಿಡಿದರು. "ಇದೇನಪ್ಪಾ, ಅದು ಹೊಳೆಯ ದಾರಿ!" ಎಂದು ಸೂರಿ ಎಚ್ಚರಿಸಿದ. "ನನಗೆ ಗೊತ್ತು, ಸುಮ್ಮನೆ ಬಾ" ಎಂದವರು ಮುಂದೆ ನಡೆದರು. ಕೃಷ್ಣಪ್ಪನವರು ಮುರುಕು ಮಂಟಪಕ್ಕೆ ಹೋದರು.

ಅವರು ಚೆನ್ನಿಯನ್ನು ಬೈರಾಗಿಗೆ ಒಪ್ಪಿಸಿದಂದಿನಿಂದ ಹೊಳೆಯ ಕಡೆ ಹೋದರೂ, ಬೇರೆಯಡೆ ಸ್ನಾನ ಮಾಡಿ ಬರುತ್ತಿದ್ದರೇ ಹೊರತು ಮಂಟಪದ ಬಳಿಗೆ ಹೋಗುತ್ತಿರಲಿಲ್ಲ. ಈಗ ಮೊದಲ ಸಲ ಸಾಧನೆಯನ್ನು ಕಂಡು ಬೆರಗಾದರು. ಅವಳ ಹತ್ತಿರ ಹೋಗಿ "ಊರಿಗೆ ಹೋಗಿ ಬರುತ್ತೇನೆ ಚೆನ್ನಿ. ಮರೆತೆಯೋ ಹೇಗೆ?" ಎಂದು ಕೇಳಿದರು. ಹೊಸ ಹೆಸರು ಅವರಿಗೆ ಗೊತ್ತಿಲ್ಲ. "ಮರೆತವರುಂಟೆ? ನೀವೇ ನಮ್ಮ ತಂದೆ" ಎಂದಳು ಸಾಧನೆ. ಅವಳ ತಿಳಿವಳಿಕೆಯ ಮಾತು ಕೇಳಿ ಇಮ್ಮಡಿ ಬೆರಗಾದರು, ಹಿಗ್ಗಿದರು; ಹಿಗ್ಗಿನೊಡನೆ ಹಿಂದೆಯೇ ಕುಗ್ಗೂ ಕೊರಗೂ ಹತ್ತಿ ಬಂದವು. ಕಣ್ಣೀರು ಕಾವೇರಿಯಾಗಿ ಹರಿಯಿತು. ತಡೆಯಲಾಗದೆ ಚೆನ್ನಿಯನ್ನು ತಬ್ಬಿಕೊಂಡು ಅತ್ತರು.

ಈ ಸಂಸಾರದ ದೃಶ್ಯವನ್ನು ಸಮಾಧಾನಚಿತ್ತದಿಂದ ನೋಡುತ್ತ ನಿರ್ವಿಕಾರನೆಂಬಂತೆ ಕುಳಿತಿದ್ದ ಸಂನ್ಯಾಸಿ ತಟ್ಟನೆ ಎದ್ದು ಬಂದ. ಕೃಷ್ಣಪ್ಪನವರಿಗೆ ದೀರ್ಘದಂಡ ಪ್ರಣಾಮ ಮಾಡಿದ. ಕೃಷ್ಣಪ್ಪನವರು "ಇದೇನಿದು!" ಎಂದು ಕೇಳಿದರು. "ನೀವು ಹಿರಿಯರು, ಸಂಸ್ಕಾರಿಗಳು, ಕರ್ಮಯೋಗಿಗಳು" ಎಂದು ಬೈರಾಗಿ ಗಂಭೀರವಾಣಿಯಿಂದ ನುಡಿದನು. "ಸಂನ್ಯಾಸಿಗಳು ಎಲ್ಲರಿಗಿಂತ ದೊಡ್ಡವರು. ಈ ಮಗು ಆಗಲೇ ನಿಮ್ಮದಾಯಿತು. ಈಗಲಂತೂ ನಿಮ್ಮದೆ. ಅವಳ ಭಾರ ನಿಮಗೆ ಸುಂದರನಿಗೆ ಸೇರಿದ್ದು. ನಾನು ಹೋಗಿಬರುತ್ತೇನೆ" ಎಂದರು ಕೃಷ್ಣಪ್ಪನವರು. "ಹಿರಿಯರಿಗೆ ನಮಸ್ಕಾರ ಮಾಡು ತಾಯಿ" ಎಂದು ಸಾಧನೆಗೆ ಬೈರಾಗಿ ಸೂಚಿಸಿದ. ಸಾಧನೆ ಕೃಷ್ಣಪ್ಪನವರ ಕಾಲಿಗೆ ಎರಗಿದಳು. "ಹೇಗಿದ್ದವಳು ಹೇಗಾಗಿದ್ದಾಳೆ!" ಎಂದು ಕೃಷ್ಣಪ್ಪನವರು ಮನಸ್ಸಲ್ಲೇ ಅಚ್ಚರಿಗೊಂಡರು; ಆಶೀರ್ವಾದ ಮಾಡಿದರು. ಎಲ್ಲರೂ ಹಿಂದಿರುಗಿದರು.

ಕೃಷ್ಣಪ್ಪನವರು ಹೊರಡುವ ಸಮಾಚಾರವನ್ನು ಸುಂದರ ಮೊದಲೇ ಸಾಧನೆಗೂ ಬೈರಾಗಿಗೂ ತಿಳಿಸಿದ್ದ; ಆದರೆ ಅವರ ಬರವನ್ನು ಬೈರಾಗಿ ನಿರೀಕ್ಷಿಸಿರಲಿಲ್ಲ.

## ೭೦

ತಾನು ಒಂಟಿ ಎಂಬ ಭಾವನೆ ಸುಂದರನಿಗೆ ಬಹುಕಾಲದ ಹಿಂದೆಯೇ

ಬಂದಿತ್ತು. ಈಗ ಸುಂದರ ನಿಜವಾಗಿಯೂ ಒಬ್ಬೊಂಟಿಗನಾದ. ತಾನೇ ಅಡಿಗೆ ಮಾಡಿಕೊಂಡು ಮನೆಯಲ್ಲಿಯೇ ಇರುತ್ತಿದ್ದ. ಬೆಳಗ್ಗೆ ಹೊಳೆಗೆ ಸ್ನಾನಕ್ಕೆ ಬಟ್ಟೆ ಒಗೆಯುವುದಕ್ಕೆ ಹೋಗುತ್ತಿದ್ದ; ಆಗ ಬೈರಾಗಿಯನ್ನು ಸಾಧನೆಯನ್ನು ನೋಡಿಕೊಂಡು ಬರುತ್ತ ಇದ್ದ. ಮಧ್ಯಾಹ್ನ ಊಟವಾದ ಮೇಲೆ ವಿಶ್ರಾಂತಿ, ಸ್ವಲ್ಪ ವ್ಯಾಸಂಗ; ಸಂಜೆ ಮತ್ತೆ ಹೊಳೆಯ ಕಡೆಗೆ; ಅಲ್ಲಿ ಸಾಧನೆಗೆ ತನ್ನ 'ಶಿಕ್ಷಣ': ಕ್ರಮಕ್ರಮವಾಗಿ ಅವಳಿಗೆ ಭೂಗೋಳ, ಚರಿತ್ರೆ, ವಿಜ್ಞಾನ ಇವುಗಳ ವಿಷಯಗಳನ್ನು ತನಗೆ ತಿಳಿದ ಮಟ್ಟಿಗೆ ಕನ್ನಡ ದಲ್ಲಿ ವಿವರಿಸಿ ಹೇಳಿ, ಅವಳ ಜ್ಞಾನಪ್ರಪಂಚವನ್ನು ವಿಸ್ತಾರಪಡಿಸುವ ಪ್ರಯತ್ನದಿಂದ ಕಾಲ ಕಳೆದಂತೆ, ತಾನು ಒಂಟಿ ಎಂಬ ಭಾವನೆ ಅವನ ಮನಸ್ಸಿನಿಂದ ಮರೆಯಾಗುತ್ತ ಬಂದಿತು.

ಆ ವರ್ಷ, ಕೊಳಲೂರಿನಲ್ಲಿ ಹೈಸ್ಕೂಲೊಂದು ಪ್ರಾರಂಭವಾಯಿತು. ಮೂರು ನಾಲ್ಕು ಮಂದಿ ಹೈಸ್ಕೂಲಿನ ಅಧ್ಯಾಪಕರಾಗಿ ಬಂದರು. ಸುಂದರ ಕ್ರಮೇಣ ಅವರ ಪರಿಚಯ ಮಾಡಿಕೊಂಡನು. ಅವನಿಗೆ ಕಾಲ ಕಳೆಯು ವುದು ಅಷ್ಟೇನೂ ಕಷ್ಟವಾಗಿ ಕಾಣಲಿಲ್ಲ.

ಸುಂದರ ಈ ಕಾಲದಲ್ಲಿ ಒಂದು ಕೆಲಸ ಮಾಡಿದ: ಕಾಳೇಗೌಡನಿಂದ ತನ್ನ ಮನೆಯ ಇತರ ಇಬ್ಬರು ಮೂವರು ರೈತರು ಒಕ್ಕಲಿಗರು ಎಂಬುದನ್ನು ತಿಳಿದುಕೊಂಡ. ಹೊಲ ಗದ್ದೆಯ ಕೆಲಸಕ್ಕೆ ಇಬ್ಬರೂ ಮೂವರು ಹೊಲೆ ಯರೂ ಬರುತ್ತಿದ್ದರು. ಅವರ ಪರಿಚಯ ಮಾಡಿಕೊಂಡು, ಅವರೊಂದಿಗೆ ಕೊಪ್ಪಲ ಸಮೀಪದಲ್ಲಿ ಇದ್ದ ಹೊಲೆಯರ ಮೂಲಿಗೆ ಭೇಟಿ ಕೊಟ್ಟ. ಅವರ ವಾಸಸ್ಥಳವನ್ನು ನೋಡಿದಾಗ, ತಾನು ಹಿಂದೆ ನೋಡಿದ್ದ ಕೆಂಚನಹಳ್ಳಿ ಸುಂದರ ನಗರವಾಗಿ ತೋರಿತವನಿಗೆ. ಹೊಲಗೇರಿಯಲ್ಲಿ ಹೆಚ್ಚೆಂದರೆ ಹತ್ತೆಂಟು ಸಂಸಾರಗಳಿದ್ದವು; ಮುದುಕರು ತದಕರು ಸೇರಿ ಎಲ್ಲ ಐವತ್ತು ಅರವತ್ತು ಮಂದಿ. ಯಾವ ಸಂಸಾರಕ್ಕೂ ಒಂದು ತುಂಡು ನೆಲ ಕೂಡ ಇಲ್ಲ. ವರ್ಷಕ್ಕೆ ಆರು ತಿಂಗಳು ಮೈಮುರಿಯ ದುಡಿದು ಬೆವರು ಸುರಿಸಿದರೆ ಅರೆಹೊಟ್ಟೆಗಾಗುವ ಕೂಲಿ ಕುಂಬಳಿ ಸಿಕ್ಕುತ್ತಿತ್ತು. ಅವರು ತಮ್ಮ ಮಕ್ಕಳು ಯಾರನ್ನೂ ಶಾಲೆಗೆ ಕಳಿಸಿ ಓದಿಸುವ ಯೋಚನೆಯನ್ನು ಹಚ್ಚಿಸಿಕೊಂಡಿರಲಿಲ್ಲ. ಊರಿನ ಆಸ್ಪತ್ರೆ, ಶಾಲೆ, ದೇವಾಲಯ ಎಲ್ಲ ಇತರರಿಗೆ ಮಾತ್ರ. ಅದರ ಉಪಯೋಗ ಇವರಿಗೆ

ಇಲ್ಲ. ಇವರು ತೆರಿಗೆದಾರರಲ್ಲ. ಭೂಮಿ ಇದ್ದರಲ್ಲವೆ ತೆರಿಗೆ ? ಇತರರಿಗಾಗಿ ತಮ್ಮ ಜೀವ ತೆರುತ್ತಿದ್ದರು. ಇತರರ ನೇಗಿಲು ಎತ್ತು ಹೊಡಿ ಉಳುಮೆ; ಇತರರ ಭೂಮಿಯಲ್ಲಿ ಬಿತ್ತನೆ; ಬೆಳೆದ ಬೆಳೆಯ ಕುಯಲು, ಕಟಾವು, ಧಾನ್ಯ ಶೇಖರಣೆ—ಎಲ್ಲ ಇವರ ದುಡಿತ; ರೈತರು ಎನ್ನಿಸಿಕೊಂಡು, ಇತರರ ಹೊಲಗದ್ದೆಗಳನ್ನು ವಾರಕ್ಕೋ ಗುತ್ತಿಗೆಗೋ ಮಾಡಿಕೊಂಡು, ತಾವು ತಮ್ಮ ಭಾಗದ ಫಸಲೆಲ್ಲವನ್ನೂ ಒಡೆಯರಿಂದ ವಸೂಲು ಮಾಡಿಕೊಂಡು ಈ ಹೊಲೆ ಮಕ್ಕಳ ಬಾಯಿಗೆ ನಾಲ್ಕು ಕಾಳು ಹಾಕಿದರೆ ಉಂಟು, ಇಲ್ಲದೆ ಹೋದರೆ ಇಲ್ಲ. ಸಂಪಾದನೆ ಹೀಗೆ. ಇನ್ನು ವೈಮುಚ್ಚಲು ಅರಿವೆ ಎಲ್ಲಿ ಬರಬೇಕು ಅವರಿಗೆ ? ರೈತರೂ ದಣಿಗಳು ಕೊಟ್ಟ ಹಳೆಯ ಬಟ್ಟೆಯ ತುಂಡುಗಳೇ ಚಳಿ ಮಳೆಗಾಳಿಯ ಹೊಡೆತಕ್ಕೆ ರಕ್ಷಣೆ. ಊರಿನಲ್ಲಿ ಅಷ್ಟು ಮಲೇರಿಯಾ ಹಾವಳಿ ಇಲ್ಲದಿದ್ದರೂ ಇವರಿದ್ದ ಜಾಗ ಮಲೇರಿಯದ ತವರು. ಜಡ್ಡು ಜಾಪತ್ರೆ ಆದರೆ ಮಾರಿದೇವತೆಗೆ ಹರಕೆ; ಸಾಲವಾದರೂ ಮಾಡಿ ಕುರಿ ಕೋಳಿಗಳ ಬಲಿ. ಇಷ್ಟೆಲ್ಲಾ ಕಿತ್ತುತಿನ್ನುವ ಬಡತನ ಇದ್ದರೂ ಕುಡಿತದ ಕಟ್ಟೆಯಲ್ಲಿ ಹಾಜರು. ಸರಕಾರದ ಬೊಕ್ಕಸಕ್ಕೆ ರಕ್ತದ ಕಾಣಿಕೆ; ಮಕ್ಕಳ ಬಾಯಿಗೆ ಮಣ್ಣು. ಇದನ್ನೆಲ್ಲ ಕಣ್ಣಾರೆ ಕಂಡು ಸುಂದರನ ಕರುಳು ಕಿತ್ತು ಬರುವಂತಾಯಿತು.

ಸುಂದರ ಕಾಳೇಗೌಡನಿಗೆ ಹೇಳಿದ: "ಕಾಳೇಗೌಡ, ಈ ವರ್ಷ ಮುಗಿದ ಮೇಲೆ ಇತರ ರೈತರನ್ನೆಲ್ಲ ತಪ್ಪಿಸಿ ಹೊಲಗದ್ದೆ ಎಲ್ಲ ನೀನೇ ವಹಿಸಿಕೊಳ್ಳಬೇಕು."

"ನನ್ನೊಬ್ಬನಿಂದ ಉಳುಮೆ ಬಿತ್ತನೆ ಬೆಳೆ ಎಲ್ಲ ಸಾಧ್ಯವೇ ಸುಂದರಪ್ಪ ?"

"ಹೊಲೆಯರೆಲ್ಲ ಅಲ್ಲಿಗೆ ಇಲ್ಲಿಗೆ ಕೂಲಿಗೆ ಹೋಗ್ತಾರೆ. ಸಾಧ್ಯ ವಾದಷ್ಟು ಜನರನ್ನು ನಮ್ಮ ಕಡೆಗೆ ಕೂಲಿಗೆ ಕರೆದುಕೊಂಡು ಅವರಿಗೆ ಕೈತುಂಬ ಕೂಲಿ ಕೊಡು. ನಮಗೆ ಆಗುವ ನಷ್ಟ ಅಷ್ಟರಲ್ಲಿ ಇದೆ."

"ಆಗಲಿ, ನೋಡೋಣ" ಎಂದ ಕಾಳೇಗೌಡ,

ಕೆಲವು ಕಾಲ ಕಳೆದ ಮೇಲೆ, ಕಾಳೇಗೌಡ ಖಂಡಿತವಾಗಿ ಹೇಳಿಬಿಟ್ಟ: "ಇದು ನನ್ನಿಂದ ಆಗೋ ಕೆಲಸ ಅಲ್ಲ ಸುಂದರಪ್ಪ. ರೈತರೆಲ್ಲ,

'ನಮ್ಮನ್ನ ಮಾತಾಡಿಸಿದರೆ ನಿನ್ನ ತಲೇ ಓಡೀತೀವಿ' ಅಂತಾರೆ. ಏನಿದ್ದರೂ ಅವರ ಕೂಡ ಮಾತಾಡಿ, ನೀವೇ ಆ ಕೆಲ್ಸ ಮಾಡಬೇಕು."

ಸುಂದರ ಯೋಜನೆ ಮಾಡತೊಡಗಿದ. ಆತುರಪಟ್ಟು ಪ್ರಯೋಜನವಿಲ್ಲ, ನಿಧಾನವಾಗಿ ಆಗಲಿ ಎಂದು ಸಮಾಧಾನಗೊಂಡ.

೭೧

ಕೃಷ್ಣಪ್ಪನವರು ಬೆಂಗಳೂರಿಗೆ ಹೋದ ತಿಂಗಳೆರಡರಲ್ಲಿ ಕಮಲೆಯ ಮಗು ನಂಜುಂಡನ ವರ್ಷದ ಹುಟ್ಟುಹಬ್ಬ ನಡೆಯಿತು. ಸುಂದರನೂ ಮೈಲಾರಯ್ಯನವರ ಮನೆಗೆ ಊಟಕ್ಕೆ ಹೋಗಿದ್ದ; ಮಗುವಿಗೆ ಒಂದು ಬೆಳ್ಳಿಯ ಬಟ್ಟಲ ಉಡುಗೊರೆ ಕೊಟ್ಟ. ಮೈಲಾರಯ್ಯನವರಿಗಂತೂ ಸುಂದರ ಯಾವಾಗಲೂ ಬೇಕಾದವನು; ಅವನನ್ನು ಕಂಡರೆ ತುಂಬ ಪ್ರೇಮ ಆದರೆ ಅವರು ಅದನ್ನು ಅಷ್ಟಾಗಿ ಪ್ರಕಾಶಪಡಿಸುತ್ತಿರಲಿಲ್ಲ, ಅಷ್ಟೆ. ಕಾವೇರಮ್ಮನವರು ಹಾಗಲ್ಲ. ಸುಂದರನಿಗೆ ಕಮಲೆಯನ್ನು ಕೊಡಬೇಕೆಂದಾಗ ಅವನಲ್ಲಿ ತುಂಬ ಪ್ರೇಮ, ಅವನಿಗೆ ಷೋಡಶೋಪಚಾರ ಮಾಡುತ್ತಿದ್ದರು. ಕ್ಷುದ್ರ ಕಾರಣದಿಂದ ಅವನು ಬೇಡ ಎನ್ನಿಸಿದಾಗ, ಅವನನ್ನು ತಿರಸ್ಕಾರದಿಂದ ಕಾಣತೊಡಗಿದರು. ಅವನಿಗೆ ತಮ್ಮ ಮಗಳನ್ನು ಕೊಡುವುದಿಲ್ಲ ಎಂದು ನಿಶ್ಚಯಿಸಿ ತಮ್ಮ ಹಟ ಸಾಧಿಸಿಕೊಂಡರು. ಕಮಲೆಯ ಮದುವೆಯೂ ಆಯಿತು; ವಿಶ್ವನಾಥ ಅಳಿಯನಾದ. ಸುಂದರ ಅಳಿಯನಾಗಿದ್ದಿದ್ದರೆ ತಮ್ಮ ಮನೆಯಲ್ಲಿ ಯಾವ ನಲಿವಿನ ಹೊಂಬೆಳಕು ಹರಡಿ ಸದಾ ನೆಲಸಬೇಕಾಗಿತ್ತೋ ಅದು ವಿಶ್ವನಾಥನಿಂದ ಬಂದು ನೆಲಸಲಿಲ್ಲ ಎಂಬುದು ಅವರಿಗೆ ಕ್ರಮಕ್ರಮವಾಗಿ ವೇದ್ಯವಾಗತೊಡಗಿತು. ಕಮಲೆಯ ಮುಖದಲ್ಲಿ ಕಳೆಯೇ ಇಲ್ಲ; ಅದೇನೋ ನುಂಗಿಕೊಂಡ ಅಳಲು ಅವಳ ಮುಖದ ಕಾಂತಿಯನ್ನು ಕುಗ್ಗಿಸಿದೆ. ಏನು ಎಂಬುದನ್ನು ಹೇಳಳು. ಸುಂದರ ಆಗೊಮ್ಮೆ ಈಗೊಮ್ಮೆ ಬರತೊಡಗಿದ್ದ. ಅವನು ಎಂದಿನಂತೆಯೇ ದೃಢಕಾಯನಾಗಿದ್ದಾನೆ; ಸುಂದರನಾಗಿದ್ದಾನೆ; ಅವನ ನಡೆನುಡಿಯಿಂದ ತಾವು ಅವನಿಗೆ ಮಾಡಿದ ತಿರಸ್ಕಾರವನ್ನು ಅವನು ಮರೆತಿರುವಂತೆಯೂ ಕಾಣುತ್ತಾನೆ. ವಿಶ್ವನಾಥ ಇದ್ದಾಗ ಮಾತನಾಡ, ಕಥೆಯಾಡ; ಕತ್ತಲೆ-ಕೋಣೆಯಲ್ಲಿ

ಸುಮ್ಮನೆ ಕಮಲೆಯನ್ನು ಕೂಡಿಸಿಕೊಂಡು ಅದೇನೋ ಸಿಡುಕು ಮಾತು. ಕಮಲೆ ಹೊರಕ್ಕೆ ಬಂದರೆ ಅವಳ ಮುಖದಲ್ಲಿ ಕೋಪಮಿಶ್ರವಾದ ದುಃಖ. ಸುಂದರನಿಗೂ ವಿಶ್ವನಾಥನಿಗೂ ಹೋಲಿಕೆಯೇ ಇಲ್ಲವೆನಿಸಿತು ಅವರಿಗೆ. ವಿಶ್ವನಾಥ ಬಿ. ಎ. ಪ್ಯಾಸುಮಾಡಿದಾನೆ, ದಿಟ; ಕೆಲಸದಲ್ಲಿದಾನೆ, ನಿಜ. ಸುಂದರನಿಗೆ ಕಮಲೆಯನ್ನು ಕೊಟ್ಟು ಮದುವೆಮಾಡಿದ್ದರೆ ಬಹುಶಃ ಅವನೂ ಬಿ. ಎ. ಮಾಡುತ್ತಿದ್ದ, ಕೆಲಸಕ್ಕೆ ಸೇರುತ್ತಿದ್ದ; ಊರು ಬಿಟ್ಟು ಎಲ್ಲಿಗೋ ಹೋಗುತ್ತಿರಲಿಲ್ಲ. ಆಗ ತಮ್ಮ ಮಗಳ ಜೀವನದಲ್ಲಿ ಹಿಗ್ಗಿನ ಮೊಗ್ಗು ಅರಳುವುದನ್ನು ತಾವು ನೋಡಬಹುದಾಗಿತ್ತು; ಈಗ ಆ ಮೊಗ್ಗು ಅರಳದೆಯೇ ಬಾಡುತ್ತಿದೆ. ಇದು ಹೀಗೆ ಆಗಬೇಕಾಗಿತ್ತು, ಆಯಿತು, ದೈವಸಂಕಲ್ಪ ಎಂದು ಭಾವಿಸದೆ ಗತ್ಯಂತರವಿಲ್ಲ ಎಂಬ ಸಮಾಧಾನಬುದ್ಧಿ ಸುಂದರನಲ್ಲಿ ಎಂದೋ ಮೂಡಿತ್ತು. ಆದರೆ ಕಾವೇರಮ್ಮನವರಿಗೆ ಮಾತ್ರ ಸುಂದರ ಕಮಲೆಯರಿಬ್ಬರಿಗೂ ತಾವೇನೋ ಅನ್ಯಾಯಮಾಡಿದಂತೆ ಕುದ್ದು ಕೊಳ್ಳುವರು. ಇದರಿಂದಾಗಿ, ಸುಂದರನ ಬಗ್ಗೆ ಅವರಲ್ಲಿ ಮತ್ತೆ ಅಕ್ಕರೆ; ಮಗುವಿನ ವರ್ಷದ ಹುಟ್ಟಿದ ದಿನ ಅವನು ಊಟಕ್ಕೆ ಬಂದದ್ದಲ್ಲದೆ, ಕೃಷ್ಣಪ್ಪ ನವರು ಇದ್ದರೆ ಹೇಗೋ ಹಾಗೆ ಹಿರಿಯತನ ವಹಿಸಿ, ಹತ್ತು ರೂಪಾಯಿನ ಬೆಳ್ಳಿಯ ಬಟ್ಟಲು ಓದಿಸಿದ್ದು ಕಂಡು ತುಂಬ ಹಿಗ್ಗು. ಆ ಸಂಜೆ, "ನೀನೇ ಅಡಿಗೆ ಮಾಡಿಕೊಂಡು ಊಟಮಾಡುವುದು ನನ್ನ ಮನಸ್ಸಿಗೆ ಸರಿಯಾಗಿಲ್ಲ ವಪ್ಪ. ನಮ್ಮ ಮನೆಯಲ್ಲಿಯೇ ಇದ್ದು ಬಿಡಬಾರದೆ? ನಿನಗೆ ಸಂಕೋಚ ವಾದರೆ, ನಿನ್ನ ಪಾಲಿನ ಬತ್ತ ತಂದು ನಮಗೆ ಕೊಡು. ನೀನು ಕಷ್ಟ ಪಡುವುದು ನೋಡಲಾರೆನಪ್ಪ" ಎಂದು ಬಾಯಿತುಂಬ ಉಪಚಾರ ಹೇಳಿ ದರು. ಹೆಂಡತಿಯ ಮನಸ್ಸು ಈಗ ಹೀಗೆ ತಿರುಗಿದ್ದನ್ನು ಕಂಡು, ಸ್ವಾತಂತ್ರ್ಯ ವಹಿಸಿ, ಮೈಲಾರಯ್ಯನವರು ಹತ್ತರಷ್ಟು ಉಪಚಾರ ಹೇಳಿ ದರು. "ಹಾಗೆ ಮಾಡು ಸುಂದರ" ಎಂದು. ತುಂಬೊಲವಿನಿಂದ ಕಮ ಲೆಯೂ ದನಿ ಕೂಡಿಸಿದ್ದಳು. ಈಗ, ಅದೇನೋ, ಅವಳು ಸುಂದರನೆಂದರೆ ತುಂಬ ಸಲಿಗೆ ವಹಿಸಿ ಮಾತಾಡುತ್ತಿದ್ದಳು. ಆದರೆ ಸುಂದರ ತನ್ನ ದೃಢ ನಿರ್ಧಾರವನ್ನು ಬದಲಾಯಿಸಿರಲಿಲ್ಲ.

ವಿಶ್ವನಾಥ ವರ್ಷದ ಹುಟ್ಟಿದ ದಿನಕ್ಕೂ ಬಂದಿರಲಿಲ್ಲ. ಕಾವೇರಮ್ಮನವ

ರೇನೋ ಮೊಮ್ಮಗುವಿನ ಹುಟ್ಟಿದ ದಿನ ಬೆಂಗಳೂರಿನಲ್ಲಿ ಆಗುತ್ತೆ, ಅಲ್ಲಿಗೆ ಹೋಗಿಬರುವುದೆಂದು ತುಂಬ ಸಡಗರಪಡುತ್ತಿದ್ದರು. ವಿಶ್ವನಾಥ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗದೆ ಇದ್ದದ್ದು ಹಾಗಿರಲಿ, ಮಗುವಿನ ಹುಟ್ಟಿದ ದಿನಕ್ಕೂ ಬಂದಿರಲಿಲ್ಲ. ಇದು ಅವರ ಮನಸ್ಸಿಗೆ ತುಂಬ ಕೊರಗುಂಟುಮಾಡಿತ್ತು.

ಹುಟ್ಟಿದ ಹಬ್ಬ ನಡೆದು ಎರಡು ತಿಂಗಳಾಗಿತ್ತು. ಒಂದು ದಿನ ಸುಂದರ ಮನೆಯಲ್ಲಿ ಮಧ್ಯಾಹ್ನ ಊಟವಾದ ಮೇಲೆ ಹಜಾರದಲ್ಲಿ ಚಾಪೆಯ ಮೇಲೆ ವಿಶ್ರಾಂತಿ ತೆಗೆದುಕೊಳ್ಳುತ್ತ ಮಲಗಿದ್ದ. ಬರಿಯ ಬಾಗಿಲು ಹಾಕಿತ್ತು. ಎಚ್ಚರವಾಗಿಯೇ ಇದ್ದ. ಹೊರಗಡೆಯಿಂದ ಮೆಲ್ಲನೆ ಸ್ವಲ್ಪ ಬಾಗಿಲು ತಳ್ಳಿ, "ಸುಂದರಾ" ಎಂದು ಹೆಣ್ಣುದನಿ ಕೂಗಿದ ಹಾಗಾಯಿತು.

"ಯಾರು?" ಎಂದು ಎದ್ದು ಕುಳಿತ ಸುಂದರ.

"ನಾನು, ಸುಂದರ" ಎಂದು ಕಮಲೆ ಒಳಕ್ಕೆ ಬಂದಳು. ಸುಂದರನಿಗೆ ದಿಗಿಲಾಯಿತು, ದಿಗ್ಭ್ರಮೆಯಾಯಿತು.

"ಒಬ್ಬಳೇ ಹೀಗೇಕೆ ಬಂದೆ, ಕಮಲಾ?"

"ಹಗಲು ಹೊತ್ತು, ಹೆದರಿಕೆಯೇನು?"

"ಅದು ಸರಿ. ಆದರೂ........"

"ನನಗೂ ಗೊತ್ತು, ಸುಂದರ. ಇಲ್ಲಿಗೆ ಒಬ್ಬಳೇ ಬರುವುದು ಸರಿಯಲ್ಲ. ಆದರೂ ಬರದೆ ಯತ್ನವಿರಲಿಲ್ಲ. ಬರಬೇಕಾಯಿತು, ಬಂದೆ."

"ಏನು ಸಮಾಚಾರ?"

"ಒಂದು ಉಪಕಾರ ಆಗಬೇಕು. 'ಮಾಡಿಕೊಡುತ್ತೇನೆ' ಎಂದರೆ ಹೇಳುತ್ತೇನೆ."

"ಏನಾದರೂ ಆಗಲಿ, ಹೇಳು, ಮಾಡಿಕೊಡುತ್ತೇನೆ"— ಎಂದ ಸುಂದರ, ಹಿಂದೆ ಮುಂದೆ ನೋಡದೆ.

ಕಮಲೆ ಅವನ ಕೈಗೆ ಒಂದು ಕಾಗದ ಕೊಟ್ಟಳು: ವಿಶ್ವನಾಥ ಬರೆದದ್ದು. ಅದರಲ್ಲಿ, ಅವನು "ನಮ್ಮ ತಂದೆಗೆ ಬರೆದು ಏನೂ ಪ್ರಯೋಜನವಿಲ್ಲ. ಇಲ್ಲಿ ನಾನು ಮತ್ತೆ ಸಂಸಾರ ಹೂಡಬೇಕಾದರೆ ಕೆಲವು ಚಿಲ್ಲರೆ

ಸಾಲಗಳನ್ನಾದರೂ ತೀರಿಸಿಕೊಳ್ಳಬೇಕು. ನಿಮ್ಮ ತಂದೆಯನ್ನು ಕೇಳಿ ನನಗೆ ಕೂಡಲೆ ಇನ್ನೂರು ರೂಪಾಯಿ ಮನಿಯಾರ್ಡರು ಮಾಡುವ ಹಾಗೆ ಹೇಳು. ಇಲ್ಲದೆ ಹೋದರೆ ನಾನು ಸದ್ಯದಲ್ಲಿ ನಿನ್ನನ್ನು ಕರೆದುಕೊಂಡು ಹೋಗುವ ಹಾಗಿಲ್ಲ" ಎಂದು ನೋಟೀಸು ಕೊಟ್ಟಿದ್ದ. ಸುಂದರ ಪತ್ರ ಓದಿಕೊಂಡ. ವಿಶ್ವನಾಥನ ಸಾಲಕ್ಕೆ ಕಾರಣ ಏನು ಎಂಬುದು ಸುಂದರನಿಗೂ ಗೊತ್ತು, ಕಮಲೆಗೂ ಗೊತ್ತು. 'ನಿಜವಾದ ಕಾರಣ ಇವನಿಗೆ ಹೇಗೆ ಗೊತ್ತಾಗಬೇಕು, ಗೊತ್ತಿಲ್ಲ' ಎಂದು ಕಮಲೆಯ ಎಣಿಕೆ; 'ಏನೂ ಅರಿಯದ ಹೆಣ್ಣು ಕಮಲೆಗೆ ಏನೂ ಗೊತ್ತಿಲ್ಲ' ಎಂದು ಸುಂದರನ ಊಹೆ. ಇಬ್ಬರ ಮನಸ್ಸೂ ವ್ಯಥೆಗೊಂಡಿದೆ. ವಿಷಯ ಹೊರಕ್ಕೆ ಹಾಕಲು ಇಬ್ಬರಿಗೂ ಇಷ್ಟವಿಲ್ಲ. "ಆಗಲಿ, ಕಮಲಾ, ನೀನು ಯೋಚನೆ ಮಾಡಬೇಡ, ಹೋಗು" ಎಂದ ಸುಂದರ. "ನೀನು ಕಳಿಸಿದ್ದೀಯ ಅಂತ ಅವನಿಗೆ ತಿಳಿಯಕೂಡದು. ಯಾರಿಗೂ ತಿಳಿಯಕೂಡದು. ಇದು ಸಾಲವಲ್ಲ, ಸುಂದರಾ" ಎಂದು ಕಮಲೆ ಸೆರಗಿನ ತುದಿಯಿಂದ ಕಣ್ಣೀರೊರಸಿಕೊಂಡಳು. "ಇದು ಸಾಲವೇ, ಕಮಲಾ. ನಾನು ನಿನಗೆ ಹೊತ್ತ ಸಾಲ. ನೀನೇನೂ ಯೋಚನೆ ಮಾಡಬೇಡ, ಹೋಗು" ಎಂದು ಬಾಗಿಲ ವರೆಗೆ ಅವಳ ಜೊತೆ ಹೋದ. ಅವನ ಹೃದಯದಲ್ಲಿ ಒಲವು ಉಕ್ಕಿ ಉಕ್ಕಿ ಬರುತ್ತಿತ್ತು. ಹಿಂದಿನ ರೀತಿಯ ಒಲವಲ್ಲ, ಕಮಲೆ ತನ್ನ ನೆರವು ಕೋರುತ್ತಿರುವ ಅಸಹಾಯಳಾದ ತಂಗಿ ಎಂಬ ಒಲವು. ಅವಳ ತಲೆಯ ಮೇಲೆ ಕೈಯಿಟ್ಟು, ಕುರುಳು ನೇವರಿಸಿ ಅವಳನ್ನು ಬೀಳ್ಕೊಂಡ.

ಕಮಲೆ ಹೊರಕ್ಕೆ ಹೊರಟಾಗ ಸೀತಮ್ಮನವರು ಜಗಲಿಯ ಮೇಲೆ ನಿಂತಿದ್ದರು. "ಇದೇನೇ ಕಮಲಾ, ಎಲ್ಲಿಗೆ ಬಂದಿದ್ದೆಯೇ?" ಎಂದು ಕೇಳಿದರು. ಕಮಲೆ ಉತ್ತರ ಕೊಡದೆ ಮನೆಗೆ ಹೊರಟುಹೋಗಿದ್ದಳು. ಅವಳು ಹೋಗುವ ಹೊತ್ತಿಗೆ ಮನೆಯಲ್ಲಿ ಮಗು ಅಳುತ್ತಿತ್ತು. ಕಾವೇರಮ್ಮ ಎಚ್ಚರಗೊಂಡು ಮಗುವನ್ನು ಸಂತೈಸುತ್ತಿದ್ದರು. "ಹೀಗೆ ಮಗುವನ್ನು ಬಿಟ್ಟು ಎಲ್ಲಿಗೆ ಹೋಗಿದ್ದೆಯಮ್ಮಾ? ಒಂದೇ ಸಮನೆ ಅಳುತ್ತಿದೆ. ಹಿತ್ತಿಲಕಡೆ ಹೋಗಿದ್ದೆಯೇನೋ ಅಂತ ಹುಡುಕಿ ಹುಡುಕಿ ಬಿಟ್ಟೆ. ಅದೆಲ್ಲಿಗೆ ಹಾಳಾಗಿ ಹೋಗಿದ್ದೆ?" ಎಂದು ತುಸು ಕೋಪದಿಂದಲೇ ನುಡಿ

ದರು. "ಮುಂದಿನ ಬೀದಿಗೆ ಹೋಗಿದ್ದೆ" ಎಂದು ಹೇಳಿ ಕಮಲೆ ತಾಯಿಂದ ಮಗುವನ್ನು ಕರೆದು ಎತ್ತಿಕೊಂಡಳು. ಅತ್ತೆಯ ಮನೆಗೆ ಹೋಗಿದ್ದಿರಬೇಕು ಎಂದು ಕಾವೇರಮ್ಮ ಊಹಿಸಿ ಸುಮ್ಮನಾದರು.

ಮಾರನೆಯ ದಿನವೇ ಸುಂದರ ವಿಶ್ವನಾಥನಿಗೆ ಇನ್ನೂರು ರೂಪಾಯಿಯನ್ನು ಇನ್ಷೂರೆನ್ಸ್ ಮೂಲಕ ಕಳಿಸಿಕೊಟ್ಟ.

ಕಮಲೆ ಅದೇತಕ್ಕೋ ಒಬ್ಬಳೇ ಹಾಡಹಗಲಿನಲ್ಲಿಯೇ ಸುಂದರ ಮೂರ್ತಿಯ ಮನೆಗೆ ಬಂದಿದ್ದಳು ಎಂಬುದಾಗಿ ನಂಜುಂಡಶಾಸ್ತ್ರಿಗಳ ಮನೆಯಲ್ಲಿ ಮಾತಾಡಿಕೊಳ್ಳತೊಡಗಿದರು.

ದಿನಗಳ ಮೇಲೆ ದಿನಗಳು ಉರುಳಿದವು. ಸುಂದರನ ನಿತ್ಯಜೀವನ ಕ್ರಮದಲ್ಲಿ ಏನೂ ಮಾರ್ಪಾಟಿಲ್ಲ. ಹಾಗೆಂದು ಜೀವನದಲ್ಲಿ ಅವನಿಗೆ ಬೇಸರವೂ ಇಲ್ಲ. ಕಮಲೆಗೆ ತಾನು ಉಪಕಾರಿಯಾದೆ ಎಂಬ ಹಿಗ್ಗು ಒಂದು ಕಡೆ; ಸಾಧನೆ ದಿನದಿನಕ್ಕೆ ಬುದ್ಧಿವಂತಳಾಗುತ್ತ ತನಗೆ ಈಡಾಗುತ್ತಿದಾಳೆ ಎಂಬ ಹರ್ಷ ಒಂದು ಕಡೆ; ಈ ಊರ ಹರಿಜನರ ಉದ್ಧಾರಕ್ಕೆ ಏನಾದರೂ ಮಾಡಬೇಕೆಂಬ ಸಂಕಲ್ಪ ಸಾಧನೆಯ ಬಗ್ಗೆ ಯೋಜನೆಗಳ ಗಾಳಿಗೋಪುರ ಕಟ್ಟುವುದು ಮತ್ತೊಂದು ಕಡೆ. ಕಾಲ ವ್ಯರ್ಥವಾಗುತ್ತ ಇದೆಯೆಂಬ ಅರಿವು ಬಾಧಿಸುತ್ತಿದ್ದರೂ ಹೊತ್ತು ಉರುಳುರುಳಿ ಹೋಗುವುದು ಅವನ ಗಮನಕ್ಕೇ ಬರುತ್ತಿರಲಿಲ್ಲ.

ಎರಡು ತಿಂಗಳಾಯಿತು. ಮೂರು ತಿಂಗಳಾಯಿತು. ವಿಶ್ವನಾಥನೂ ಬರಲಿಲ್ಲ, ಅವನಿಂದ ಕಾಗದವೂ ಇಲ್ಲ. ಇದ್ದಕ್ಕಿದ್ದಂತೆಯೇ ಅವನಿಂದ ಕಮಲೆಗೆ ಮತ್ತೊಂದು ಪತ್ರ. ಅದೇ ಕಥೆ, ಅದೇ ಕೋರಿಕೆ. ಈ ಸಲ ಮುನ್ನೂರು ರೂಪಾಯಿಗೆ. ಮಾವನವರಿಂದ ಕಮಲೆ ವಸೂಲು ಮಾಡಿ ಕಳಿಸುತ್ತಾಳೆ ಎಂಬ ಧೈರ್ಯ ಅವನಿಗೆ ಬಂದಿದ್ದಿತು. ಕಮಲೆ ಮತ್ತೆ ಸುಂದರನನ್ನೇ ಆಶ್ರಯಿಸಿದಳು. ಈ ಸಲವೇನೋ ಸುಂದರ ಕಮಲೆಗೆ ಎಚ್ಚರಿಕೆ ಕೊಟ್ಟ: "ನೀನು ಹೀಗೆ ಬರುವುದು ಸರಿಯಲ್ಲ. ನಾನು ನಿನಗೆ ಸಹಾಯ ಮಾಡಲಾರೆ ಎಂದಲ್ಲ, ಆದರೂ, ಈ ಗುಪ್ತಸಹಾಯವೂ ಸರಿಯಲ್ಲ ಎಂದು ತೋರುತ್ತದೆ. ವಿಷಯವನ್ನೆಲ್ಲ ನಿಮ್ಮ ತಂದೆಗೆ ತಿಳಿಸುವುದು ಒಳ್ಳೆಯದು ಎಂದು ಕಾಣುತ್ತದೆ." "ಇದೊಂದು ಸಲ, ಸುಂದರ. ಹೊರಕ್ಕೆ ಹುಳುಕು

ಕಾಣದೆ ಗಂಭೀರವಾಗಿರಲಿ ಅಂತ ನನ್ನ ಉದ್ದೇಶ, ಅಷ್ಟೆ. ಮುಚ್ಚುಮರೆ ಯೇನು, ಎಲ್ಲ ತಾನಾಗಿ ಬಯಲಾಗುತ್ತೆ" ಎಂದು ಕಮಲೆ ದುಃಖ ನುಂಗಿ ಕೊಂಡು ಉತ್ತರ ಕೊಟ್ಟಳು. ಸುಂದರ ಒಪ್ಪಿಕೊಂಡು, 'ಸಮಯ ಬಂದಾಗ ನಿಮ್ಮ ತಂದೆಗೆ ತಿಳಿಸಬೇಕು' ಎಂದು ಕಮಲೆಯಿಂದ ಮಾತು ತೆಗೆದುಕೊಂಡು, ಮಾರನೆಯ ದಿನ ಮತ್ತೆ ಮುನ್ನೂರು ರೂಪಾಯಿಗಳನ್ನು ವಿಶ್ವನಾಥನಿಗೆ ಇನ್ಷೂರೆನ್ಸ್ ಮೂಲಕ ಕಳಿಸಿಕೊಟ್ಟನು.

ಕಮಲೆಯ ದುರದೃಷ್ಟಕ್ಕೆ ಈ ಸಲವೂ ಅವಳು ಸುಂದರನ ಮನೆ ಯಿಂದ ಹೊರಬರುವುದು ಅತ್ತೆಯುವರ ಮನೆಯುವರ ಗಮನಕ್ಕೆ ಬಂದಿತು. ಸುಂದರನಿಗೂ ಕಮಲೆಗೂ ಏನೋ ಗುಪ್ತವ್ಯವಹಾರ ನಡೆಯುತ್ತ ಇದೆ ಎಂದು ತೀರ್ಮಾನ ಮಾಡಿಬಿಟ್ಟಿದ್ದರು.

ಕಾವೇರಮ್ಮನವರು ತಮ್ಮ ಮನೆಗೆ ಬಂದಿದ್ದಾಗ ಅವರೊಂದಿಗೆ ಸೀತಮ್ಮನವರು, "ಏನೋ ಅಮ್ಮಾ, ನಿಮ್ಮ ಮಗಳು ಮೂರು ನಾಲ್ಕು ದಿನ ಸುಂದರನ ಮನೆಗೆ ಬಂದಿದ್ದಳು. ಅವನು ಮನೆಯಲ್ಲಿ ಒಬ್ಬನೇ ಎಂದು ಊರಿಗೇ ಗೊತ್ತು. ಅವಳು ಬಂದು ಹೋದದ್ದನ್ನು ನಾನೇ ಕಣ್ಣಾರೆ ಕಂಡೆ. ಇನ್ನೂ ಯಾರು ಯಾರು ಕಂಡರೋ ಯಾರಿಗೆ ಗೊತ್ತು? ಸಲಿಗೆಯಿಂದ ಒಟ್ಟಿಗೆ ಬೆಳೆದವರು; ಸಾಲದ್ದಕ್ಕೆ ನೀವು ಬೇರೆ ಗಂಡ ಹೆಂಡತಿ ಎಂತ ಗೊತ್ತುಮಾಡಿಕೊಂಡಿದ್ದಿರಿ. ಈಗ ಅವರವರ ಸಂಬಂಧ ಹೇಗೋ ಏನೋ ದೇವರೇ ಬಲ್ಲ" ಎಂದು ರಾಗ ಎಳೆದರು. ಕಾವೇರಮ್ಮನವರು, "ನಾನು ವಿಚಾರಿಸುತ್ತೇನೆ. ಸದ್ಯ ನಿಮ್ಮ ಪುಣ್ಯಕ್ಕೆ ಗಂಡಸರ ಕಿವಿಯುವರೆಗೆ ವಿಷಯ ಹಾಕಬೇಡಿ" ಎಂದು ಕಾಲಿಗೆ ಬಿದ್ದು ಹೇಳಿ ಹೋದರು. ಕಮಲೆಯನ್ನು 'ಇದು ದಿಟವೇನೇ?' ಎಂದು ಕೇಳಿದರು. 'ಹೋಗಿದ್ದುದುಂಟು' ಎಂದು ಒಪ್ಪಿಕೊಂಡಳು. 'ಯಾಕೆ?' ಎಂದು ಪ್ರಶ್ನಿಸಿದರು. ಕಮಲೆ ಮೌನ ವಾಗಿದ್ದಳು. ಮತ್ತೆ ಸುಂದರನ ಬಗ್ಗೆ ಅನುಮಾನ, ಅಸಮಾಧಾನ, ತಿರ ಸ್ಕಾರ ಎಲ್ಲ ಮೊದಲಾಯಿತು. 'ಆ ಕಡೆ ಸುಳಿಯಕೂಡದು, ಅತ್ತೆಯ ಮನೆಗೂ ಹೋಗಕೂಡದು. ಗಂಡ ಬಂದು ಕರೆದುಕೊಂಡು ಹೋಗುವ ವರೆಗೂ ಮನೆಯಲ್ಲಿ ಬಿದ್ದಿರಬೇಕು. ಒಳ್ಳೆ ಹೊಟ್ಟೆ ಉರಿಸುವ ಹೆಣ್ಣು ಹಡೆದದ್ದಾಯಿತಲ್ಲ' ಎಂದು ಕಾವೇರಮ್ಮ ಉರಿದು ಬಿದ್ದು ಮಗಳಿಗೆ ಅಂಕೆ

ಯಿಕ್ಕಿದರು. ಕಮಲೆ ನಿತ್ಯವೂ ಕತ್ತಲೆ ಕೋಣೆಯಲ್ಲಿ ಕುಳಿತು ಮೌನದಿಂದ ಕಂಬನಿಗರೆಯುತ್ತ, ಹೇಳಿಕೊಳ್ಳಲೂ ಆರದೆ ಸುಮ್ಮನಿರಲೂ ಆರದೆ, ತನ್ನ ಮುದ್ದು ಮಗುವಿನ ಲಾಲನೆಪಾಲನೆಯಲ್ಲಿ ದುಃಖವನ್ನು ಮರೆಯಲು ಪ್ರಯತ್ನಪಡುತ್ತಿದ್ದಳು. ಸುಂದರನಿಗೆ ಇದೊಂದೂ ಗೊತ್ತಿಲ್ಲ; ಆದರೆ ಆಗೊಮ್ಮೆ ಈಗೊಮ್ಮೆ ಸುಂದರ ಸೋದರಮಾವನ ಮನೆಗೆ ಹೋದರೆ ಮತ್ತೆ ತನ್ನ ಅತ್ತೆ ಬಿಗಿಯಿಂದ ವರ್ತಿಸುತ್ತಿದ್ದುದು ಗಮನಕ್ಕೆ ಬಾರದೆ ಹೋಗಲಿಲ್ಲ.

ಎರಡು ಮೂರು ತಿಂಗಳಾದ ಮೇಲೆ ವಿಶ್ವನಾಥ ಊರಿಗೆ ಬಂದ; ಅವನ ಮುಖ ನೋಡುವುದಕ್ಕೇ ಆಗುತ್ತಿರಲಿಲ್ಲ. ಅವನು ಚಿಲ್ಲರೆ ಪಲ್ಲರೆ ಸಾಲಗಳನ್ನೇನೋ ತೀರಿಸಿಕೊಂಡಿದ್ದ. ಆದರೆ ಗಂಟಾಗಿ ಇನ್ನೂ ಐನೂರು ಸಾಲ ಉಳಿದಿತ್ತು. ಕಮಲೆ ತನ್ನ ತಂದೆಯನ್ನು ಕೇಳಿ ಐನೂರು ಕಳಿಸುವ ಏರ್ಪಾಡು ಮಾಡಿದ್ದಾಳೆ; ಅವಳ ಮಾತು ನಡೆಯುತ್ತದೆ, ಇನ್ನೂ ಐನೂರು ಹಿರಿದುಕೊಂಡು ಕಮಲೆಯನ್ನೂ ಮಗುವನ್ನೂ ಕರೆದುಕೊಂಡು ಹೋಗಿ ಹಿಂದಿನ ಬಾಳು ಅಳಿಸಿ ಹೊಸ ಬಾಳು ಬಾಳುವುದೆಂದು ಆಶಿಸಿ ಇಲ್ಲಿಗೆ ಬಂದಿದ್ದ. ಎಂದೂ ನೇರವಾಗಿ ಮೊದಲು ಮಾವನ ಮನೆಗೆ ಹೋಗುತ್ತ ಇದ್ದವನು, ಈ ಸಲ ತಂದೆಯ ಮನೆಗೆ ಮೊದಲು ಬಂದು ಅಲ್ಲಿಯೇ ತಂಗಿದ. ಬಂದ ಕೂಡಲೆ ತಾಯಿ ಮಗನ ಹೀನ ಮನಸ್ಸಿಗೆ ಸಂಶಯದ ಹುಳಿ ಹಿಂಡಿದರು. ವಿಶ್ವನಾಥ ಮಾವನ ಮನೆಗೆ ಹುಲಿರಾಯನ ಹಾಗೆ ಹೊಕ್ಕ.

ಆಗ ಬೇಸಗೆಯ ರಜ. ವೈಲಾರಯ್ಯನವರು ಸದಾ ಮನೆಯಲ್ಲಿಯೇ ಇರುತ್ತಿದ್ದರು. ವಿಶ್ವನಾಥ ಕಮಲೆಯನ್ನು ಕರೆದು, ಅತ್ತೆ ಮಾವನನ್ನೂ ಕರೆದು, ದೊಡ್ಡ ಪಂಚಾಯಿತಿ ಮಾಡಿಬಿಟ್ಟ.

"ಕಮಲೆ, ನೀನು ಸುಂದರನ ಮನೆಗೆ ಹೋದದ್ದು ಉಂಟೆ ಇಲ್ಲವೆ, ಬೊಗಳು."

"ಹೌದು, ಹೋಗಿದ್ದೆ."

"ಯಾಕೆ?"

"ಹಣ ಕೇಳುವುದಕ್ಕೆ."

"ಹಣ ನಿನಗೆ ಯಾಕೆ ಬೇಕಾಗಿತ್ತು?"

" ನೀವು ನನಗೆ ಬರೆದಿರಲಿಲ್ಲವೆ? ನಿಮಗಾಗಿ ಬೇಡಲು ಹೋದೆ. ನಮ್ಮ ತಂದೆಯನ್ನು ಕೇಳಲು ಇಷ್ಟವಾಗಲಿಲ್ಲ."

" ಸುಂದರ ಸುಮ್ಮಸುಮ್ಮನೆ ಹಣ ಕೊಡಲು ಅವನು ಮುಟ್ಠಾಳನೆ? ಮೊದಲೇ ನನ್ನ ಕಂಡರೆ ಅವನಿಗೆ ಆಗುವುದಿಲ್ಲ. ನನಗೇನೋ ತಾಪತ್ರಯ ಇತ್ತು. ನಿಮ್ಮ ತಂದೆಗೆ ನೇರವಾಗಿ ಬರೆಯಲು ಸಂಕೋಚವಾಯಿತು. ನಿನಗೆ ಬರೆದರೆ ನೀನು ಹೀಗೆ ಹಣ ಸಂಪಾದಿಸಲು ಹೊರಟೆಯೋ? ನೀನು ನನ್ನ ಮನೆಗೆ ಬರಬೇಕಾಗಿದ್ದಿಲ್ಲ, ಸುಂದರನ ಮನೆಗೇ ಹೋಗು" ಎಂದು ಸಿಡಿದು ನುಡಿದು, ಸರ್ರನೆ ಎದ್ದು ಮನೆಗೆ ಹಿಂದಿರುಗಿದ.

ಮೈಲಾರಯ್ಯನವರಿಗೆ ಸಿಡಿಲು ಬಡಿದಂತಾಯಿತು. ಅವರಿಗೆ ಸಮಾಚಾರ ಏನೂ ತಿಳಿಯದು. ಮಗಳನ್ನು ಎಷ್ಟು ಒಲವಿನ ಒತ್ತಾಯದಿಂದ ಕೇಳಿದರೂ ಮೂಕ ರೋದನವೇ ಉತ್ತರವಾಯಿತು. ಅವರು ಸುಂದರನನ್ನು ಬಂದು ವಿಚಾರಿಸಿದರು. ವಿಶ್ವನಾಥನ ಮಾನ ಕಾಪಾಡುವುದಕ್ಕಾಗಿ ಅವನು ಪ್ರಯತ್ನ ಪಟ್ಟಿದ್ದ; ಈಗ ತನ್ನ ಮಾನವನ್ನು ಅದಕ್ಕಿಂತ ಹೆಚ್ಚಾಗಿ ಕಮಲೆಯ ಮಾನ ವನ್ನು ಕಾಪಾಡುವುದಕ್ಕಾಗಿ ಅವನು ನಿಜವನ್ನು ನುಡಿಯಬೇಕಾಯಿತು. ಲಕ್ಷ್ಮೀಪತಿ ತನಗೆ ತಿಳಿಸಿದ್ದನ್ನೂ, ಈಗ ಕಮಲೆ ತನ್ನಲ್ಲಿಗೆ ಬಂದಿದ್ದ ಉದ್ದೇಶ ವನ್ನೂ, ತಾನು ಹಣ ಕಳಿಸಿದ್ದನ್ನೂ ಮೈಲಾರಯ್ಯನವರಿಗೆ ವಿವರಿಸಿ ಹೇಳಿದ. ಸುಂದರನ ಮಾತನ್ನು ಅವರು ಸಂಪೂರ್ಣವಾಗಿ ನಂಬಿದರು. ತನ್ನ ಹೆಂಡತಿ ಯಲ್ಲಿಯೂ ನಂಬಿಕೆ ಹುಟ್ಟಿಸಿದರು. ನಂಜುಂಡಶಾಸ್ತ್ರಿಗಳ ಸಮ್ಮುಖದಲ್ಲಿ ಮೈಲಾರಯ್ಯನವರು ಪ್ರತಿ ಪಂಚಾಯಿತಿ ಮಾಡಿದರು. ನಂಜುಂಡಶಾಸ್ತ್ರಿಗಳು ತಾವು ಹಿಂದೆ ಅರಿಯದೆ ಇದ್ದ ಈ ಪಂಚಾಯಿತಿಯನ್ನೆಲ್ಲ ಕೇಳಿ ಬೆಪ್ಪು ಬೆರಗಾ ದರು. ವಿಶ್ವನಾಥ ತನ್ನ ಮನೆಯಲ್ಲಿ ತನ್ನ ಮಾನ ಕಾಪಾಡಿಕೊಳ್ಳುವುದ ಕ್ಕಾಗಿ "ಮೈಲಾರಯ್ಯನವರು ಹೇಳುವುದೆಲ್ಲ ಶುದ್ಧ ಸುಳ್ಳು. ಬೆಂಗಳೂರಿನ ಸಂಸಾರ ಎಂದರೆ ಅಲ್ಲಿ ವಾಸಮಾಡಿದವರಿಗೇ ಗೊತ್ತು. ತಾನು ಹಣ ಕೇಳಿದ್ದೇನೋ ದಿಟ. ಆದರೆ ಅದು ಬಂದ ರೀತಿ ಕೆಟ್ಟದ್ದು. ತನ್ನ ಮಾವ ಮಗಳ ಕೆಟ್ಟ ನಡತೆಯನ್ನು ಮುಚ್ಚಿಕೊಂಡು ಮಾತಾಡುತ್ತ ಇದ್ದಾರೆ. ನಾನು ಇನ್ನು ಆ ಕುಲಗೆಟ್ಟ ಹೆಣ್ಣಿನೊಂದಿಗೆ ಸಂಸಾರ ಮಾಡಲಾರೆ" ಎಂದು, ಅದೇ ರಾತ್ರಿ ಬೆಂಗಳೂರಿಗೆ ಹಿಂದಿರುಗಿಯೇ ಬಿಟ್ಟ. ಹೆಂಡತಿಯ

ನಡತೆಯಲ್ಲಿ ನಿಜವಾಗಿ ಈಗ ಅವನಲ್ಲಿ ಸಂಶಯ ಉಳಿದಿರಲಿಲ್ಲ. ತನ್ನ ಮಾನವನ್ನು ಭದ್ರಪಡಿಸಿಕೊಂಡು, ಸಾಧ್ಯವಾದರೆ ಇದೇ ನೆಪ ಮಾಡಿಕೊಂಡು ಮಾವನಿಂದ ಐನೂರು ರೂಪಾಯಿ ಹಿರಿದು ಆಮೇಲೆ ಬೇಕಾದರೆ ಕಮಲೆಯನ್ನು ಕರಸಿಕೊಳ್ಳುವುದು ಎಂಬುದು ಅವನ ವಿಪರೀತ ಬುದ್ಧಿ. ಆದರೆ ಅದು ಸುಂದರನ ಮತ್ತು ಕಮಲೆಯ ಬಾಳಿನಲ್ಲಿ ದುಃಖಕ್ಕೆ ಕಾರಣವಾದೀತು ಎಂದು ವಿಚಾರಮಾಡುವಷ್ಟು ಋಜುವಾಗಿರಲಿಲ್ಲ ಅವನ ಮನಸ್ಸು.

ನಂಜುಂಡಶಾಸ್ತ್ರಿಗಳು "ಏನೋ ಎಂತೋ ದೇವರೇ ಬಲ್ಲ. ಅವನ ಚಿತ್ತ ಇದ್ದ ಹಾಗೆ ಆಗಲಿ" ಎಂದು ತೆಪ್ಪಗಾದರು. ಪಾರ್ವತಮ್ಮ ಸೀತಮ್ಮನವರು ಮಾತ್ರ ಮಗನ ಅಭಿಪ್ರಾಯವೇ ಸರಿಯಾದದ್ದು ಎಂದು ತೀರ್ಮಾನಿಸಿ, ಆಗಲೇ ಮಗನಿಗೆ ದ್ವಿತೀಯ ವಿವಾಹದ ಏರ್ಪಾಡಿನ ಆಲೋಚನೆಯನ್ನು ಕೈಗೊಂಡಿದ್ದರು. ವಿಶ್ವನಾಥ ಹೆಂಡತಿಯನ್ನು ಬಿಟ್ಟು ಬಿಟ್ಟ, ಸುಂದರ ಕಮಲೆಯರಲ್ಲಿ ಅನೀತಿಯ ಸಂಬಂಧ ಬೆಳೆದಿತ್ತಂತೆ ಎಂದು ಊರಿನಲ್ಲಿ ಗುಸುಗುಸು ಪಿಸಪಿಸ ಪ್ರಾರಂಭವಾಯಿತು. ಹೆಡ್ಮಾಸ್ಟರ ಮೂಲಕ ಅದು ಸುಂದರನ ಕಿವಿಯನ್ನೂ ಮುಟ್ಟಿತು. ಸುಂದರ ಬಹಳ ವ್ಯಥೆಗೊಂಡ.

## ೭೨

ಸುಂದರ ಈಗ ಬಹಳ ದಿನದಿಂದ ಒಂದು ಆಲೋಚನೆ ಮಾಡುತ್ತ ಇದ್ದ: ಹೊಲೆಗೇರಿಗೆ ಸಮೀಪದಲ್ಲಿ ಒಂದು ಮಂದಿರವನ್ನು ಕಟ್ಟಿಸಿ ಅಲ್ಲೊಂದು ಸೇವಾಶ್ರಮವನ್ನು ಸ್ಥಾಪಿಸಬೇಕೆಂದು. ಈಗ ಅವನ ಈ ಆಲೋಚನೆ ಕಾರ್ಯರೂಪಕ್ಕೆ ಬರಲು ಊರಿನಲ್ಲಿ ತನ್ನ ಬಗ್ಗೆ ಹೊಸದಾಗಿ ಉಂಟಾಗಿದ್ದ ವಿರುದ್ಧ ಪರಿಸ್ಥಿತಿ ಸಹಾಯಕವಾಯಿತು. ಮೇಲೆ ಹೇಳಿದ ಘಟನೆಗಳನ್ನು ಬೈರಾಗಿಗೆ ವಿವರಿಸಿ ಹೇಳಿದ; ಇನ್ನು ಆ ನೆರೆಯಲ್ಲಿ ತನಗೆ ಇಷ್ಟವಿಲ್ಲವೆಂದು ಸ್ಪಷ್ಟಪಡಿಸಿದ; ತನ್ನ ಚಿಕ್ಕಪ್ಪನಿಂದ ತನಗೆಂದು ಬಂದ ೧,೫೦೦ ರೂಪಾಯಿಗಳಿರುವುದಾಗಿಯೂ ಆ ಹಣದಿಂದ ತಾನು ಆಲೋಚಿಸಿರುವ ಆ ಮಂದಿರವನ್ನು ಕಟ್ಟಿಸುವುದಾಗಿಯೂ ತಿಳಿಸಿದ. ಸಾಧನೆಯೂ ಬೈರಾಗಿಯೂ ತನ್ನ ಈ ಸೇವಾಕಾರ್ಯದಲ್ಲಿ ನೆರವಾಗಬೇಕೆಂದು ಕೋರಿದ.

"ಸುಂದರಾ, ನೀನು ಹೇಳುವುದೆಲ್ಲ ಸರಿ. ಹಾಗೆ ಮಾಡಬಹುದು. ಆದರೆ ನನ್ನಿಂದ ಯಾವ ಸಹಾಯವನ್ನೂ ನಿರೀಕ್ಷಿಸಬೇಡ. ನನಗೆ ವಯಸ್ಸಾಯಿತು. ದೇಹಶಕ್ತಿಯೂ ಕುಗ್ಗುತ್ತಿದೆ. ಸಾಧ್ಯವಾದಷ್ಟು ಬೇಗ ನಾನು ಸಂಸಾರದ ತೊಡಕಿನಿಂದ ತಪ್ಪಿಸಿಕೊಂಡು ಈ ದೇಹವನ್ನು ಭಗವಂತನ ಧ್ಯಾನದಲ್ಲಿ ಕ್ಷಯಿಸೋಣ ಎಂದು ಆಶೆ. ನಿನ್ನ ಕಾರ್ಯಗಳೆಲ್ಲ ಯಶಸ್ವಿಯಾಗಲಿ. ನಾನು ಹೆಚ್ಚು ಹೇಳಲಾರೆ."

"ನೀವು ಈ ಸಂಸಾರದ ಗೊಂದಲದಲ್ಲಿ ಯಾವ ರೀತಿಯಲ್ಲಿಯೂ ಸಿಲುಕಬೇಕಾಗಿಲ್ಲ. ನಿಮ್ಮ ಪಾಡಿಗೆ ನೀವು ದೇವತಾಧ್ಯಾನದಲ್ಲಿದ್ದುಕೊಂಡು ನಮ್ಮಿಂದ ಕಾರ್ಯ ಮಾಡಿಸಿ. ನೀವು ಆಶ್ರಮದ ಗುರುವಾಗಿರಿ. ನಾನು, ಸಾಧನೆ ಶಿಷ್ಯರಾಗಿ ಕೆಲಸ ಮಾಡುತ್ತೇವೆ."

"ಹಾಗಾದರೆ ಸಾಧನೆ ನಿನ್ನ ಜೊತೆ ಇರಬೇಕೆಂದು ನಿನ್ನ ಆಶೆಯೋ ?"

"ಹೌದು. ಒಂದು ರೀತಿಯಲ್ಲಿ ಅವಳ ಸಂರಕ್ಷಣೆಯ ಭಾರವೂ ನನ್ನದು. ನಾನು ಅವಳನ್ನು ಸಂರಕ್ಷಿಸಿದಂತೆಯೂ ಆಗುತ್ತದೆ, ನನ್ನ ಕಾರ್ಯದಲ್ಲಿ ಅವಳು ಸಹಕರಿಸಿದಂತೆಯೂ ಆಗುತ್ತದೆ."

"ಅವಳ ಸಂರಕ್ಷಣೆಯ ಭಾರ ಈಗ ಸಂಪೂರ್ಣವಾಗಿ ನನ್ನದು. ನಿಮ್ಮ ತಂದೆ ಅವಳನ್ನು ನನಗೆ ಒಪ್ಪಿಸಿದರು. ನಿನಗೆ ಒಪ್ಪಿಸುವ ಕಾಲ ಬಂದಾಗ, ಹಾಗೆ ಮಾಡಿ ಸಂತೋಷಗೊಳ್ಳುತ್ತೇನೆ. ನಾನು ಬಯಸುತ್ತಿರುವುದೂ ಅದೇ."

ಸುಂದರನ ಮನೋಮಂದಿರದಲ್ಲಿ ಅದಾವುದೋ ದೂರದ ಆಶೆ ಮಿನುಗಿ ಬೆಳಗಿತು. ಮನಸ್ಸು ಬೆಳಗಿ ನಲಿಯಿತು, ಹೃದಯ ಹಿಗ್ಗಿತು.

## ೭೩

ಯಾವುದೂ ಮುಚ್ಚುಮರೆಯಿರಕೂಡದೆಂದು ತನ್ನ ಸಂಕಲ್ಪವನ್ನೆಲ್ಲ ತಂದೆಯವರಿಗೆ ವಿವರವಾಗಿ ಬರೆದು ತಿಳಿಸಿದ: ವಿಶ್ವನಾಥನಿಗೆ ಹಣಕೊಟ್ಟ ಸಂಗತಿಯನ್ನು ಸೂಕ್ಷ್ಮವಾಗಿ ಅರುಹಿದ; ತಾನು ಕಟ್ಟಬೇಕೆಂದಿದ್ದ ಮಂದಿರವನ್ನು ಸಂಪೂರ್ಣವಾಗಿ ತನ್ನ ಚಿಕ್ಕಪ್ಪನವರಿಂದ ತನಗೆ ಬಂದಿದ್ದ ಹಣದಲ್ಲಿ ಕಟ್ಟಿಸುವುದಾಗಿಯೂ ತಿಳಿಸಿದ್ದ. ಕೃಷ್ಣಪ್ಪನವರು, "ಯಾವುದರಲ್ಲಿಯೂ

ದುಡುಕಬೇಡ, ದೇವರು ಒಳ್ಳೆಯದು ಮಾಡಲಿ'' ಎಂದು ಆಶೀರ್ವಾದ ಮಾಡಿ ಉತ್ತರ ಬರೆದಿದ್ದರು.

ಕಟ್ಟಡದ ಕೆಲಸ ಪ್ರಾರಂಭವಾಯಿತು; ತನ್ನ ಕನಸು ನನಸಾಗುತ್ತಿರುವುದಕ್ಕಾಗಿ ಸುಂದರ ಹರ್ಷಿಸಿದ. ಕಟ್ಟಡದ ಸ್ಥಳ ಜಮೀನಿನಲ್ಲಿಯೇ ಒಂದು ಎತ್ತರದ ಸ್ಥಳದ ಹೊಲದ ಜಾಗ. ಅದನ್ನು ಕಟ್ಟುವುದಕ್ಕೆ ಹರಿಜನರನ್ನೇ ಹೆಚ್ಚಾಗಿ ಕೂಲಿಗಳನ್ನಾಗಿ ನೇಮಿಸುವಂತೆ ಏರ್ಪಾಡು ಮಾಡಿ, ಅವರಿಗೆ ಕೈತುಂಬ ಕೂಲಿ ಕೊಡುವಂತೆ ಹೇಳಿದ್ದ.

ಸುಂದರ ಬೈರಾಗಿಯೊಡನೆ ಮುರುಕು ಮಂಟಪವಲ್ಲಿ ವಾಸಮಾಡುವುದು ಸಾಧ್ಯವಾಗಿರಲಿಲ್ಲ; ಆದ್ದರಿಂದ ಎಂದಿನಂತೆ ತನ್ನ ಮನೆಯಲ್ಲಿಯೇ ಇರುತ್ತಿದ್ದ. ಹಿಂದಿನ ಅನಿಷ್ಟ ಪ್ರಕರಣದ ಕಹಿ ನೆನಪಿನ ಕಾರಣದಿಂದ ಮೈಲಾರಯ್ಯನವರ ಮನೆಗೆ ಈಗ ಹೋಗುವುದನ್ನೆ ಬಿಟ್ಟುಬಿಟ್ಟಿದ್ದ.

ಈ ನಡುವೆ ವಿಶ್ವನಾಥನಿಂದ ಮೈಲಾರಯ್ಯನವರಿಗೆ ಒಂದು ಕಾಗದ ಬಂದಿತ್ತು. ತನಗೆ ಐನೂರು ರೂಪಾಯಿ ತುರ್ತಾಗಿ ಬೇಕಾಗಿದೆಯೆಂದೂ ಕಳಿಸಿಕೊಟ್ಟರೆ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗಲು ಸಾಧ್ಯವಾದರೂ ಆಗಬಹುದೆಂದೂ ವಿಶ್ವನಾಥ ಕೇಳಿದ್ದ. ಮೈಲಾರಯ್ಯನವರು ಹಾಸನದ ವಿದ್ಯಾಧಿಕಾರಿಗಳನ್ನು ಸುಪ್ರಸನ್ನರಾಗಿ ಮಾಡಿಕೊಂಡು ಬಹು ವರ್ಷ ತಮ್ಮ ಊರಿನಲ್ಲಿಯೇ ನೆಲಸಿದ್ದರು. ವರ್ಗ ಅನಿವಾರ್ಯವಾದಾಗ, ಹತ್ತಿರ ಹಳ್ಳಿಗಳಿಗೆ ವರ್ಗಮಾಡಿಸಿಕೊಂಡು, ಅಲ್ಲಿ ಇಲ್ಲಿ ಎರಡು ಕಡೆಯೂ ಇರುತ್ತ ಕಾಲ ಹಾಕುತ್ತಿದ್ದರು. ಈಗ ಮಕ್ಕಳು ಹೈಸ್ಕೂಲು ಹತ್ತುವುದರಲ್ಲಿದ್ದರು; ಊರಿಗೇನೋ ಹೊಸದಾಗಿ ಹೈಸ್ಕೂಲು ಬಂದಿದ್ದಿತು. ಅಳಿಯ-ದೇವರನ್ನು ತೃಪ್ತಿಪಡಿಸಿದರೆ ಮಗಳಿಗೆ ಸುಖಪ್ರಾಪ್ತಿಯಾಗುವುದೇನೋ ಎಂದು ಆಶಿಸಿ, ಅವರು ತಮ್ಮ ಮನೆಯನ್ನು ಮಾರಿ ಹಾಸನಕ್ಕೆ ವರ್ಗಮಾಡಿಸಿಕೊಳ್ಳಬೇಕೆಂಬ ಪ್ರಯತ್ನದಲ್ಲಿದ್ದರು.

ಸುಂದರ ಈಗ ತಮ್ಮ ಮನೆಯ ಜಮೀನಿನ ಒಬ್ಬಿಬ್ಬರು ರೈತರನ್ನು ಬಿಡಿಸಿ, ಅವರ ಹಿಡುವಳಿಯಲ್ಲಿದ್ದ ಹೊಲಗದ್ದೆಯನ್ನು ಕಾಳೇಗೌಡನ ವಶಕ್ಕೆ ಒಪ್ಪಿಸಿ, ಅದನ್ನು ಹರಿಜನರಿಂದಲೇ ಸಾಗುವಳಿ ಮಾಡಿಸುವಂತೆ ಏರ್ಪಾಡು ಮಾಡಿದ್ದ.

೭೪

ಸುಂದರ ಕಟ್ಟಿಸಿದ ಮಂದಿರದ ನಿರ್ಮಾಣಕಾರ್ಯ ಮುಗಿಯಿತು. ಅದರ ಪ್ರವೇಶೋತ್ಸವವನ್ನು ಏರ್ಪಡಿಸಿ, ಉತ್ಸವಕ್ಕೆ ದಯಮಾಡಿಸ ಬೇಕೆಂದು ತಂದೆಯವರಿಗೂ ರಾಮಸ್ವಾಮಯ್ಯನಿಗೂ ಕಾಗದ ಹಾಕಿದ್ದ. ಕೃಷ್ಣಪ್ಪನವರು ಅಸ್ವಸ್ಥತೆಯಿಂದ ಬರಲು ಸಾಧ್ಯವಾಗದೆಂದು ಬರೆದರು. ಮುಖ್ಯವಾಗಿ, ಊರಿಗೆ ಹಿಂದಿರುಗಿ ಬರಲು ಅವರಿಗೆ ಇಷ್ಟವಿರಲಿಲ್ಲ. ಊರಿನಲ್ಲಿ, ಮಿಡ್ಲ್ ಸ್ಕೂಲ್ ಹೆಡ್ಮಾಸ್ಟರು, ಹೈಸ್ಕೂಲ್ ಹೆಡ್ಮಾಸ್ಟರು, ಡಾಕ್ಟರು, ಅಧ್ಯಾಪಕರುಗಳು, ಕೆಲವರು ವಿದ್ಯಾರ್ಥಿಗಳು, ಹಾಸನದ ಕೆಲವರು ಅಧಿಕಾರಿಗಳು ಇವರಿಗೆಲ್ಲ ಆಹ್ವಾನವನ್ನು ಕಳಿಸಿದ್ದ. ಲಕ್ಷ್ಮೀಪತಿಗೂ ಕುಲಕರ್ಣಿಗೂ ಆಹ್ವಾನ ಹೋಗಿತ್ತು.

ಪ್ರವೇಶೋತ್ಸವ ಹೆಚ್ಚು ಆಡಂಬರವಿಲ್ಲದೆ ನಡೆಯಿತು. ಅಂದು ಹರಿಜನರಿಗೆ ಮಾತ್ರ ಭೋಜನದ ಏರ್ಪಾಟಾಗಿತ್ತು. ಸಂಜೆ ಆಹ್ವಾನಿತರೆಲ್ಲ ಬಂದು ತಾಂಬೂಲ ಸ್ವೀಕರಿಸಿ ಸುಂದರನ ಸೇವಾಕಾರ್ಯದಲ್ಲಿ ಯಶಸ್ಸನ್ನು ಕೋರಿ ಹಿಂದಿರುಗಿದರು. ಬೆಂಗಳೂರಿನಿಂದ ಲಕ್ಷ್ಮೀಪತಿ ಬರಬಹುದೆಂದು ಸುಂದರ ನಿರೀಕ್ಷಿಸಿದ್ದ. ಆದರೆ ಅವನು ಬಂದಿರಲಿಲ್ಲ. ಗೆಳೆಯರಿಬ್ಬರಿಂದಲೂ ಶುಭ ಹಾರೈಕೆಯ ಪತ್ರಗಳು ಬಂದಿದ್ದುವು.

ಈಗ ಬೈರಾಗಿ, ಸಾಧನೆ ಇಬ್ಬರೂ ಬಹುಕಾಲದಿಂದ ವಾಸವಾಗಿದ್ದ ಮುರುಕು ಮಂಟಪವನ್ನು ಬಿಟ್ಟು, ಸುಂದರನೊಡನೆ ಮಂದಿರದಲ್ಲಿ ವಾಸವಾಗಿರಲು ಬಂದರು. ಬೈರಾಗಿಯೂ ಅಲ್ಲಿ ನೆಲಸತೊಡಗಿದ್ದರಿಂದ ಮಂದಿರ ಆಶ್ರಮವೆಂದು ಪ್ರಸಿದ್ಧವಾಯಿತು.

ತನ್ನ ಊರಿನ ಹರಿಜನರಿಗೆ ಮೊದಲು ಹೊಟ್ಟೆಗೆ ಬಟ್ಟೆಗೆ ಒದಗಿಸ ಬೇಕೆಂದು ಸುಂದರನ ಮೊದಲ ಪ್ರಯತ್ನ. ಆದಕ್ಕಾಗಿ ಆಶ್ರಮಕ್ಕೆ ಕೆಲವು ಚರಕಗಳನ್ನು ತರಿಸಿ ಇಟ್ಟ. ಹೊಲ ಗದ್ದೆಯ ಕೆಲಸದ ನಡುವೆ ಬಿಡುವಾದಾಗ ಹರಿಜನರು ಬಂದು ನೂಲುವಂತೆ ಏರ್ಪಾಡು ಮಾಡಿದ. ಒಬ್ಬೊಬ್ಬರು ನೂತ ನೂಲನ್ನೂ ಬೇರೆ ಬೇರೆಯಾಗಿ ಶೇಖರಿಸುವ ಏರ್ಪಾಡಾಗಿತ್ತು. ಅವರು ನೂತ ನೂಲಿನಿಂದ ಅವರಿಗೆ ಬಟ್ಟೆ ಒದಗಿಸಬೇಕೆಂದು ಸುಂದರನ ಉದ್ದೇಶ. ಕಾಲಾನಂತರದಲ್ಲಿ ಕೆಲವು ಗೃಹ ಕೈಗಾರಿಕೆಗಳ ಶಿಕ್ಷಣಕ್ಕೂ ಏರ್ಪಡಿಸಿ, ಹರಿಜನರು

ತಯಾರಿಸಿದ ಸಿದ್ಧವಸ್ತುಗಳ ಮಾರಾಟಕ್ಕೆ ಏರ್ಪಾಡುಮಾಡಿ, ಆ ಮೂಲಕ ಹರಿಜನರನ್ನು ಸ್ವಾವಲಂಬಿಗಳನ್ನಾಗಿ ಮಾಡಬೇಕೆಂದು ಅವನು ಸಂಕಲ್ಪಿಸಿದ್ದ. ಸಂಜೆಯ ವೇಳೆ ಭಜನೆ, ಪದಗಳ ಹಾಡಿಕೆ, ಹರಿಕಥೆ, ಇವುಗಳನ್ನು ಏರ್ಪಡಿಸಿ ಕುಡಿತದ ಹೊತ್ತಿನಲ್ಲಿ ಅವರಿಗೆ ಮನರಂಜನೆಯ ಕಾಲಕ್ಷೇಪಮಾಡಿಸಿ, ‘ ಪಿಕೆಟಿಂಗ್ '' ಮೊದಲಾದ ಹೆಚ್ಚಿನ ಪ್ರಚಾರಕಾರ್ಯವಿಲ್ಲದಯೇ ಪಾನನಿರೋಧ ಮಾಡಬೇಕೆಂಬುದು ಅವನ ಕನಸು. ದೇವಾಲಯದ ಪ್ರವೇಶದ ವಿಚಾರಕ್ಕೆ ತಾನು ಕೈಹಾಕುವುದಿಲ್ಲವೆಂದೇ ಅವನು ನಿಶ್ಚಯಿಸಿದ್ದ. ಆಶ್ರಮದಲ್ಲಿಯೇ ರಾಮದೇವರ ಪಟವನ್ನಿಟ್ಟು ರಾಮಭಜನೆಯ ಮೂಲಕ ಅವರಲ್ಲಿ ಸಾತ್ವಿಕ ದೈವಭಕ್ತಿಯನ್ನು ಉತ್ಪನ್ನಮಾಡಬೇಕೆಂದು ಅವನ ಬಯಕೆ. ಹರಿಜನರು ಹೆಚ್ಚುಹೆಚ್ಚಾಗಿ ಕುರಿ ಕೋಳಿ ಹಸುಗಳನ್ನು ಸಾಕಿ, ಅವನ್ನು ಕೊಲ್ಲದೆ, ಅವುಗಳಿಂದ ಪ್ರಯೋಜನವನ್ನು ಮಾತ್ರ ಹೊಂದುವ ಹಾಗೆ ಮಾಡಿ, ಅವರಲ್ಲಿ ಭೂತದಯೆಯನ್ನೂ ಮೊಳೆಯಿಸಬೇಕೆಂದು ಅವನ ನಂಬಿಕೆ. ಹೀಗೆ ತನ್ನದೇ ಒಂದು ಕಾರ್ಯಯೋಜನೆಯನ್ನು ಹಾಕಿಕೊಂಡಿದ್ದ. ಕ್ರಮಕ್ರಮವಾಗಿ ಕಾರ್ಯರೂಪಕ್ಕೆ ತರಬೇಕೆಂದು ಸಂಕಲ್ಪಿಸಿದ್ದ. ಈ ಎಲ್ಲ ಕಾರ್ಯಗಳಲ್ಲಿ ಊರಿನ ತರುಣ ವಿದ್ಯಾರ್ಥಿಗಳಿಂದಲೂ ಅಧ್ಯಾಪಕ ವರ್ಗದಿಂದಲೂ ಹೆಚ್ಚಿನ ಸಹಾಯವನ್ನೂ ನಿರೀಕ್ಷಿಸಿಕೊಂಡಿದ್ದ. ಇದಕ್ಕೆಲ್ಲ ಹಣ ಬೇಕೆಂಬುದು ಅವನಿಗೆ ಗೊತ್ತು ; ಕಾರ್ಯಾರಂಭವಾದರೆ ಹಣ ಕೊಡುವ ಮಹನೀಯರು ಬಂದೇ ಬರುತ್ತಾರೆಂದು ಅವನು ನಂಬಿದ್ದ.

ವೆಚ್ಚವಿಲ್ಲದ ಕಾರ್ಯಕ್ರಮವೆಂದರೆ ಸಂಜೆಯ ಪ್ರಾರ್ಥನಾ ಕೂಟಗಳು, ಭಜನೆಗಳು. ಈ ಕಾರ್ಯ ಮೊದಲ ದಿನದಿಂದಲೇ ಪ್ರಾರಂಭವಾಯಿತೆನ್ನಬೇಕು. ಕೆಲವರು – ಐದಾರುಮಂದಿ ಮಾತ್ರ – ಶ್ರದ್ಧೆಯಿಂದ ಬರುತ್ತಿದ್ದರು ; ಉಳಿದವರು ಬರುತ್ತ ಇರಲಿಲ್ಲ. ನೂಲುವುದಕ್ಕೂ ಹಾಗೆಯೇ, ಕೆಲವರು ಮಾತ್ರ ಬರುತ್ತಿದ್ದರು. ಆದರೆ, ಸುಂದರ ನಿರಾಶೆಗೊಳ್ಳಲಿಲ್ಲ. ಅವನಿಗೆ ಅಪಾರ ತಾಳ್ಮೆಯಿದ್ದಿತು.

ಆಶ್ರಮದಲ್ಲಿ ಸಾಧನೆಯದೇ ಅಡಿಗೆ. ಉಳಿದ ಕಾಲಗಳಲ್ಲಿ ಅವಳ ಶಿಕ್ಷಣವೇ ನಡೆಯುತ್ತಿದ್ದಿತು. ಈಗ ಆವಳು ಚೆನ್ನಾಗಿ ನೂಲುವುದನ್ನು ಕಲಿತಿದ್ದಳು. ಸುಂದರನೂ ಬಿಡುವಾದಾಗಲೆಲ್ಲ ನೂಲುತ್ತ ಇದ್ದ.

ಅನೇಕ ವೇಳೆ ನಾವು ಪ್ರಾರಂಭಿಸುವ ಸತ್ಕಾರ್ಯಗಳಿಂದ ನಾವು ನಿರೀಕ್ಷಿಸಿದ ಫಲ ಕೂಡಲೆ ದೊರೆಯದೆ, ಆದರಿಂದ ನಿರೀಕ್ಷಿಸದ ಇನ್ನೊಂದು ಫಲ ಕೈಗೂಡಬಹುದು. ಈ ಸಂದರ್ಭದಲ್ಲಿಯೂ ಹಾಗೆಯೇ ಆಯಿತು.

ಹೈಸ್ಕೂಲಿನ ವಿದ್ಯಾರ್ಥಿಗಳು ಒಬ್ಬಿಬ್ಬರು ಆಶ್ರಮಕ್ಕೆ ಬಂದು ಹೋಗಲು ಮೊದಲಿಟ್ಟರು. ಅವರು ನಿತ್ಯ ಕ್ರಮವಾಗಿ ಬರತೊಡಗಿದ ಮೇಲೆ ಅವರನ್ನನುಸರಿಸಿ ಇತರ ಕೆಲವರು ವಿದ್ಯಾರ್ಥಿಗಳೂ ಅಲ್ಲಿಗೆ ಹೋಗಲು ಪ್ರಾರಂಭಿಸಿದರು. ಹೀಗೆ, ಕೆಲವು ಕಾಲದಲ್ಲಿ ವಿದ್ಯಾರ್ಥಿಗಳ ತಂಡವೊಂದು ನಿತ್ಯವೂ ಸಂಜೆಯ ವೇಳೆ ಆಶ್ರಮದಲ್ಲಿ ಕಲೆತು ಅಲ್ಲಿನ ನಿರಾಡಂಬರವಾದ ಕಾರ್ಯಕ್ರಮಗಳಲ್ಲಿ ಭಾಗ ವಹಿಸಲು ತೊಡಗಿತು. ಅವರು ಅಲ್ಲಿ ನೂಲುವುದನ್ನು ಕಲಿಯತೊಡಗಿದರು; ಕೆಲ ಕೆಲವರು ಚರಕಗಳನ್ನು ಕೊಂಡು ತರಿಸಿದರು. ಕೊಳಲೂರಿನಲ್ಲಿ ಖಾದಿಯ ಹೆಸರೇ ಇರಲಿಲ್ಲ. ಆಶ್ರಮದ ಪ್ರಭಾವದಿಂದ ಊರಿನಲ್ಲಿ ಖಾದಿಧಾರಿಗಳು ಹುಟ್ಟಿಕೊಂಡು, ಖಾದಿಯ ಪ್ರಚಾರಕ್ಕೂ ಮೊದಲಾಯಿತು. ಅಧ್ಯಾಪಕರು ಒಬ್ಬರಿಬ್ಬರು ತಾವು ಸ್ವಂತಕ್ಕೆಂದು ತರಿಸಿಕೊಳ್ಳುತ್ತಿದ್ದ ಇಂಗ್ಲಿಷ್ ಮತ್ತು ಕನ್ನಡ ವೃತ್ತಪತ್ರಿಕೆಗಳನ್ನು ತಾವು ಓದಿಯಾದ ಮೇಲೆ ಆಶ್ರಮಕ್ಕೆ ಕಳಿಸಿಕೊಡ ತೊಡಗಿದರು. ಸುಂದರ ತನ್ನ ಪುಸ್ತಕ ಸಂಗ್ರಹವನ್ನೆಲ್ಲ ಆಶ್ರಮದಲ್ಲಿ ಒಂದು ಕಡೆ ಇರಿಸಿದ. ಕ್ರಮವಾಗಿ, ಆಶ್ರಮದಲ್ಲಿ ಒಂದು ಬಹಳ ಸಣ್ಣ ವಾಚನಾಲಯವೂ ಪುಸ್ತಕಭಂಡಾರವೂ ಬೆಳೆಯತೊಡಗಿತು ಆಶ್ರಮಕ್ಕೆ ಬರುತ್ತಿದ್ದ ವಿದ್ಯಾರ್ಥಿಗಳೊಂದಿಗೆ ಸುಂದರ ರಾಜಕೀಯ ವಿಚಾರಗಳನ್ನೂ ಹರಿಜನರ ಉದ್ಧಾರದ ವಿಚಾರಗಳನ್ನೂ ಚರ್ಚಿಸತೊಡಗಿದ. ವಿದ್ಯಾರ್ಥಿಗಳು ಆ ವಿಚಾರಗಳಲ್ಲಿ ತುಂಬ ಆಸಕ್ತಿ ಶ್ರದ್ಧೆ ತೋರಿಸುತ್ತ ಬಂದರು. ರಾಜಕೀಯದ ಸುಳಿವೇ ಇಲ್ಲದಿದ್ದ ಕೊಳಲೂರಿನಲ್ಲಿ ರಾಜಕೀಯದ ಗಾಳಿಯೂ ಬೀಸತೊಡಗಿತು. ಸುಂದರ ಕಾಳೇಗೌಡನ ನೆರವಿನಿಂದ ಆಶ್ರಮದ ಸುತ್ತಲೂ ಕೈತೋಟ ಬೆಳೆಸುವ ಏರ್ಪಾಡನ್ನು ಕೈಗೊಂಡಿದ್ದ; ಹೊಲ ತೋಟದ ಕೆಲಸದಲ್ಲಿ ದುಡಿದು ಆಯಾಸಗೊಂಡಿರುತ್ತಿದ್ದ ಕಾಳೇಗೌಡನಿಂದಾಗಲಿ ಆಶ್ರಮಕ್ಕೆ ಬರುತ್ತಿದ್ದ ಕೆಲವರು ಹರಿಜನರಿಂದಾಗಲಿ ಮತ್ತೆ ಹೆಚ್ಚಿನ ಕೆಲಸ ತೆಗೆಯಲು ಅವನಿಗೆ ಇಷ್ಟವಿರಲಿಲ್ಲ; ಕೂಲಿ ಕೊಟ್ಟು ಕೆಲಸ ಮಾಡಿಸಲು ಹಣವಿಲ್ಲ.

ಹೆಸರಿಗೆ ಕೈತೋಟ ಸಾಗಿದ್ದಿತೇ ಹೊರತು ಹೆಚ್ಚು ಗಿಡಗಳನ್ನು ಬೆಳಸಲು ಸಾಧ್ಯವಾಗಿರಲಿಲ್ಲ. ಕಾಳೇಗೌಡ ಶ್ರಮವಹಿಸಿ ಹಾಕಿದ್ದ ಬಾಳೆಬೇಲಿ ಮಾತ್ರ ಸೊಂಪಾಗಿ ಬೆಳೆಯುತ್ತಿತ್ತು. ವಿದ್ಯಾರ್ಥಿಗಳು ಸ್ವಯಂ ಪ್ರೇರಣೆಯಿಂದ ಕೈತೋಟದ ಕೆಲಸದಲ್ಲಿ ಭಾಗವಹಿಸತೊಡಗಿದರು. ಒಂದೆರಡು ವರ್ಷಗಳಲ್ಲಿಯಾದರೂ ತೋಟ ಸೊಂಪಾಗಿ ಬೆಳೆದು ಆಶ್ರಮಕ್ಕೆ ಕಳೆ ಕೊಡುವುದೆಂಬ ಆಶೆ ಸುಂದರನ ಮನಸ್ಸಿನಲ್ಲಿ ಅಂಕುರಿಸತೊಡಗಿತು.

೭೫

ಹೀಗೆ ಒಂದು ವರ್ಷ ಕಳೆಯಿತು. ಈ ನಡುವೆಯಲ್ಲಿ ಕೃಷ್ಣಪ್ಪನವರಿಗೆ ಖಾಯಿಲೆ ಎಂದು ವರ್ತಮಾನ ಬಂದು, ಸುಂದರ ಒಂದು ಸಲ ಬೆಂಗಳೂರಿಗೆ ಹೋದ. ಕೃಷ್ಣಪ್ಪನವರು ಬಹು ದೀನ ಸ್ವರದಿಂದ, "ಶಾಮಿಗೂ ಬಿ.ಎಸ್‌ಸಿ. ಆಯಿತು. ಲಾ ಪರೀಕ್ಷೆಗೆ ಓದಬೇಕು ಅಂತ ಅವನ ಮನಸ್ಸು. ನಾನು ಇಷ್ಟೇ ಸಾಕು, ಕೆಲಸಕ್ಕೆ ಸೇರಿಕೋ ಎಂದು ಹೇಳಿದೆ. ಅವನಿಗೆ ಇಷ್ಟವಿಲ್ಲ, ಮುಂದಕ್ಕೆ ಓದಬೇಕು ಅಂತ ಆಸೆ. ನೀನೇನೋ ಬತ್ತ ಹಣ ಎಲ್ಲ ಕಳಿಸಿ ಕೊಡುವ ಏರ್ಪಾಡು ಮಾಡಿದ್ದೀಯೆ. ಆದರೆ, ಅದು ಇಲ್ಲಿ ನಮ್ಮ ಜೀವನಕ್ಕೆ ಸಾಲುತ್ತದೆಯೆ ಹೊರತು ಅವನನ್ನು ಬೊಂಬಾಯಿಗೋ ಮದ್ರಾಸಿಗೋ ಕಳಿಸುವುದಕ್ಕೆ ಸಾಲದು. ಲಾ ಓದಿಸುವಂಥ ಮಾವ ಬಂದರೆ ಮದುವೆ ಮಾಡಿ ಬಿಡುವುದು ಎಂದು ಗಂಗಮ್ಮಾ ಹೇಳುತ್ತಿದಾಳೆ. ಯಾವುದಕ್ಕೂ, ನಿನ್ನ ಮದುವೆಯಾಗದೆ ಮುಂದುವರಿಯುವ ಹಾಗಿಲ್ಲ. ಶಾಮಿಗೆ ಒಂದು ಹೆಣ್ಣು ಬಂದಿತ್ತು. ವಯಸ್ಸು ಹೆಚ್ಚು, ನಿನಗೆ ಸರಿಹೋಗುತ್ತೆ ಎಂದಳು ಗಂಗಮ್ಮಾ. ಹೆಣ್ಣು ಚೆನ್ನಾಗಿದೆ. ಎಸ್. ಎಸ್. ಎಲ್. ಸಿ. ವರೆಗೆ ಓದಿವಾಳೆ. ನೋಡಪ್ಪ, ಯೋಚನೆ ಮಾಡು."

ಸುಂದರ ಯೋಚನೆ ಮಾಡಿದ: "ಹೆಣ್ಣು ಚೆನ್ನಾಗಿದೆ. ಎಸ್. ಎಸ್. ಎಲ್. ಸಿ. ವರೆಗೆ ಓದಿದಾಳೆ; ವಿದ್ಯಾವತಿಯೆ. ಈ ಹೆಣ್ಣಿಗೆ ಹೋಲಿಸಿದರೆ ಸಾಧನೆ ನಿರಕ್ಷರಕುಕ್ಷಿ; ರೂಪಿನಲ್ಲೂ ಸಾಧನೆಗಿಂತ ಚೆನ್ನಾಗಿಯೇ ಇರಬೇಕು, ತನ್ನ ಅಕ್ಕನ ಮೆಚ್ಚಿಕೆ ಪಡೆದ ಮೇಲೆ. ಪ್ರೇಮದ ಮಾತು ಹೋಗಲಿ, ತಾನು ಕೈಕೊಂಡಿರುವ ಕಾರ್ಯದಲ್ಲಿ ಭಾಗಿಯಾಗುವಳೋ, ಸಹಧರ್ಮಿಣಿಯಾಗು

ವಳೋ ? ಅದು ಹೇಳಬರುವಂತಿಲ್ಲ. ತನಗೆ ತೃಪ್ತಿಯಾಗುವ ಮಟ್ಟಿಗೆ ಸಾಧನೆ ಈಗ ನಿಜವಾಗಿ ತನ್ನ 'ಸಹಧರ್ಮಿಣಿ'ಯಾಗಿದ್ದಾಳೆ. ತನ್ನ ಒಲವು ಅವಳಿಗೆ ರಕ್ಷೆಯಾಗಿದೆ; ಬಾಯಿಬಿಟ್ಟು ಹೇಳದಿದ್ದರೂ ಅವಳ ಒಲವು—ಅವಳ ಒಂದೊಂದು ನೋಟದಲ್ಲಿ, ಒಂದೊಂದು ನಗೆಯಲ್ಲಿ, ಯಾವ ಕಾರ್ಯದಲ್ಲಿಯೋ ಆಗಲಿ ತನ್ನ ಜೊತೆಗಿದ್ದು ಅದರಲ್ಲಿ ಆಸಕ್ತಿ ತೋರಿಸು ವುದರಲ್ಲಿ ಬಹುಶಃ ಅವಳ ಅರಿವಿಗೇ ಬಾರದಂತೆ ವ್ಯಕ್ತವಾಗುತ್ತಿರುವ ತುಂಬು ಒಲವು—ತನಗೆ ಸ್ಫೂರ್ತಿಯಾಗಿದೆ, ಜೀವನದಲ್ಲಿ ಉತ್ಸಾಹವನ್ನು ತುಂಬುತ್ತ ಇದೆ. ಕಮಲೆಯೊಂದಿಗೂ ಕೂಡ ಬಹುಶಃ ಕಾಣಲಾಗದಿದ್ದ ನಿಜವಾದ ದಿವ್ಯಪ್ರೇಮ, ಅನ್ಯಾದೃಶವಾದ ತನಿಯಾದ ತಿಳಿಯೊಲವು, ಸಾಧನೆಯಲ್ಲಿ ಇಂದು ಸಿದ್ಧಿಸುತ್ತಿದೆ; ತನ್ನ ಜೀವನದ ನಿಜವಾದ ಸಂಗಾತಿ ಅವಳು. ಅಗ್ನಿಸಾಕ್ಷಿಯಾಗಿಯೋ, ದೇವರ ಸಾಕ್ಷಿಯಾಗಿಯೋ ಕಡೆಗೆ ಆತ್ಮ ಸಾಕ್ಷಿಯಾಗಿಯೋ ನಾಲ್ಕು ಜನರ ಎದುರಿನಲ್ಲಿ 'ಇವಳು ನನ್ನ ಧರ್ಮಪತ್ನಿ' ಎಂದು ಹೇಳುವ 'ಶಾಸ್ತ್ರ' ಒಂದು ಉಳಿದಿದೆ: ಕೇಳಿದರೆ ಒಲ್ಲೆ ಎನ್ನ ಲಾರಳು. ಇನ್ನು ಕಾಣದ ಹೆಣ್ಣನ್ನು ಕೈಹಿಡಿದು ಅವಳ ತನ್ನ ಇಬ್ಬರ ಬಾಳುವೆಯನ್ನೂ ಬರಿಗೈಯುವುದು ಸಲ್ಲದು.

"ಒಂದು ಮಾತು ಹೇಳುವುದಕ್ಕೆ ಇಷ್ಟು ಯೋಚನೆಯೇ ? ಕಡೆಗೆ ನಿನ್ನ ಅಭಿಪ್ರಾಯ ಏನು ?"

"ಈ ಹೆಣ್ಣನ್ನು ಮದುವೆಯಾಗಲು ಸಾಧ್ಯವಿಲ್ಲ ಅಪ್ಪ."

"ಇದಲ್ಲವಿದ್ದರೆ ಇನ್ನೊಂದು. ಅಂತೂ ನಿನ್ನ ಮದುವೆಯೊಂದಾದರೆ ಶಾಮಿಯ ಮದುವೆಯ ಆಲೋಚನೆ ಮಾಡಬಹುದು."

"ಇನ್ನು ಸ್ವಲ್ಪ ದಿನದಲ್ಲಿಯೇ ನಾನು ನಿನಗೆ ಬರೆದು ತಿಳಿಸುತ್ತೇನಪ್ಪ. ಈಗ ನಾನಿನ್ನೂ ನಿರ್ಧಾರಕ್ಕೆ ಬಂದಿಲ್ಲ."

ಸಾಧನೆಯನ್ನೇ ಮದುವೆಯಾಗುವುದಾಗಿ ನಿರ್ಧಾರಮಾಡಿ, ತಂದೆಗೆ ಬರೆದು ತಿಳಿಸಿಬಿಡುತ್ತೇನೆ ಎಂದು ಅವನ ಒಳ ಉದ್ದೇಶ; ಮುಖತಃ ಆ ವಿಷಯ ಎತ್ತಲು ಅದೇನೋ ಅಂಜಿಕೆ. ಪರವಾಯಿಲ್ಲ, ಮಗ ಮದುವೆ ಮಾಡಿಕೊಳ್ಳುತ್ತೇನೆ ಎನ್ನುವ ಮಟ್ಟಿಗೆ ತಮ್ಮ ಕಡೆಗೆ ಒಲೆದಿದ್ದಾನೆ ಎಂದು ಕೃಷ್ಣಪ್ಪನವರ ಸಮಾಧಾನ.

೭೬

ಮೈಲಾರಯ್ಯನವರು ತಮ್ಮ ಮನೆ ಮಾರಿ, ಅಳಿಯದೇವರಿಗೆ ಐನೂರು ಕಾಣಿಕೆ ಒಪ್ಪಿಸಿ, ತಾವೇ ಸ್ವತಃ ಮಗಳನ್ನು ಕರೆದುಕೊಂಡು ಹೋಗಿ ವಿಶ್ವನಾಥನ ಮನೆಯಲ್ಲಿ – ಅಲ್ಲ ಕೋಣೆಯಲ್ಲಿ – ಬಿಟ್ಟು, ಒಂದು ಸಣ್ಣ ಮನೆಯನ್ನೂ ಬಾಡಿಗೆಗೆ ಗೊತ್ತುಮಾಡಿ ಹಿಂದಿರುಗಿದ್ದರು. ಊರಿನವರೆಲ್ಲಾ ಸಿಕ್ಕಾಬಿಟ್ಟೆ ಆಡಿಕೊಳ್ಳುತ್ತ ಇದ್ದರೂ ಸುಂದರನ ನಡತೆಯ ಬಗ್ಗೆ ಅವರಿಗೆ ಏನೂ ಸಂದೇಹ ಉಳಿಯಲಿಲ್ಲ. ಅವರೂ ಆಶ್ರಮಕ್ಕೆ ಬಂದಿರಲಿಲ್ಲ; ಸುಂದರನೂ ಅವರ ಮನೆಗೆ ಹೋಗಿರಲಿಲ್ಲ. ಮೈಲಾರಯ್ಯನವರು ಹಾಸನಕ್ಕೆ ವರ್ಗಮಾಡಿಸಿಕೊಂಡು ಅಲ್ಲಿಗೆ ಹೋಗುವ ಮುನ್ನ ತಾವಾಗಿಯೇ ಒಂದು ದಿನ ಆಶ್ರಮಕ್ಕೆ ಬಂದು, ಸುಂದರನೊಡನೆ ಬಹು ವಿಶ್ವಾಸದಿಂದ ಮಾತು ಕತೆಯಾಡಿ, ನಡೆದ ಸಂಗತಿಯನ್ನೆಲ್ಲ ಅವನಿಗೆ ಅರುಹಿ, ಹಿಂದಿರುಗಿದ್ದರು. ಸುಂದರ ಸೋದರಮಾವನನ್ನು ಬೀಳ್ಕೊಳ್ಳಲು ಅವರೊಂದಿಗೆ ಸ್ವಲ್ಪ ದೂರ ನಡೆದು ಹೋದಾಗ ಅವರೆಂದಿದ್ದರು :

“ ಸುಂದರಾ, ಎಷ್ಟರಿಗೆ ಹೇಳಿದರೆ ಹೊಗಳಿಕೆಯಾಗುತ್ತೆ. ಬೆಂಗಳೂರಿನಲ್ಲಿ ಕಮಲೆ ಮತ್ತೆ ಎಲ್ಲವನ್ನೂ ಮನಸ್ಸು ಬಿಚ್ಚಿಹೇಳಿದಳು. ನೀನು ತುಂಬ ಉಪಕಾರಮಾಡಿದ್ದೀಯಪ್ಪ. ನೀನು ಕೈಯೆತ್ತಿ ಕೊಟ್ಟಿರುವ ಹಣವನ್ನ ಯಾವಾಗಲಾದರೂ ತೀರಿಸುತ್ತೇನೆ. ತೀರಿಸಲಿಲ್ಲ, ನಮ್ಮನ್ನ ದೂರ ಮಾಡ ಬೇಡ. ಊರೆಲ್ಲ ಸಾವಿರ ಆಡಿಕೊಳ್ಳಲಿ, ನೀನು ಮಾತ್ರ ಮನಸ್ಸಿಗೆ ಹಚ್ಚಿ ಕೊಳ್ಳಬೇಡ. ಜನಕ್ಕೆ ಜುಟ್ಟು ಜನಿವಾರ ಕಾಣುತ್ತದೆಯೇ ಹೊರತು ಮನಸ್ಸಿನ ಪರಿಶುದ್ಧತೆ ಕಾಣುವುದಿಲ್ಲ. ನೀನು ಮಾಡಬೇಕೆಂದು ತೊಡಗಿರುವ ಕಾರ್ಯ ಯಾರಿಗೂ ಬೇಡದ್ದು. ‘ ಹೊಲೆಯರನ್ನು ಉದ್ಧಾರ ಮಾಡುವುದಕ್ಕೆ ಹೊರಟಿದ್ದಾನೋ ಇವನು, ಹೊಲೆಗೇರಿಯಲ್ಲೇ ಇದ್ದುಕೊಳ್ಳಲಿ. ನಮ್ಮ ತಂಟೆಗೆ ಬರದಿದ್ದರೆ ’ ಕೋಟಿಯ ಜನ ಹೇಳಿಕೊಳ್ಳುತ್ತಾ ಇದ್ದಾರೆ. ಊರಿನವರ ವಿರೋಧ ಖಂಡಿತ ಕಟ್ಟಿಕೊಳ್ಳಬೇಡ. ಗಲಭೆ ಗದ್ದಲಗಳಿಗೆ ಅವಕಾಶ ವಿಲ್ಲದಂತೆ ನಿನ್ನ ಇಷ್ಟ ಬಂದದ್ದನ್ನು ಮಾಡಿಕೋ. ಹೊಲೆಯರ ಹುಡುಗಿಯನ್ನು ಕಟ್ಟಿಕೊಂಡಿದ್ದಾನೆ ಎಂದು ಬೇರೆ ಆಡಿಕೊಳ್ಳುತಾ ಇದಾರೆ. ಆದ್ದರಿಂದ, ಬೇಗ ಮದುವೆ ಮಾಡಿಕೊಂಡುಬಿಡುವುದು ಒಳ್ಳೆಯದು. ”

ಸುಂದರ, ತಾನು ಯಾವುದರಲ್ಲಿಯೂ ದುಡುಕುವುದಿಲ್ಲವೆಂದು ಸೋದರಮಾವನಿಗೆ ಸಮಾಧಾನ ಹೇಳಿ, ಸದ್ಯದಲ್ಲಿಯೇ ಮದುವೆಮಾಡಿ ಕೊಳ್ಳುವ ಆಲೋಚನೆ ತನ್ನ ಮನಸ್ಸಿನಲ್ಲಿಯೂ ಇದೆಯೆಂದು ತಿಳಿಸಿದ. ಮೈಲಾರಯ್ಯನವರು ಸಮಾಧಾನಗೊಂಡು ಸುಂದರನನ್ನು ಬೀಳ್ಕೊಂಡರು.

ಮೈಲಾರಯ್ಯನವರು ಸುಂದರನ ಮಾತಿನ ಅರ್ಥವನ್ನು ಅರ್ಧಮಟ್ಟಿಗೆ ಗ್ರಹಿಸಿದ್ದರು. "ಸುಂದರ ಚೆನ್ನಿಯನ್ನೆ ಮದುವೆಮಾಡಿಕೊಳ್ಳುವ ಹಾಗೆ ಕಾಣುತ್ತೆ. ವಿಶ್ವನಾಥ, ನನ್ನ ಅಳಿಯ ಎನ್ನಿಸಿಕೊಂಡವನು, ನನ್ನ ಮಗಳನ್ನು ಮದುವೆಯಾಗಿ ಅವಳ ಹೊಟ್ಟೆ ಉರಿಸಿ, ನಮ್ಮ ಹೊಟ್ಟೆ ಉರಿಸಿ, ಉತ್ತಮ ಎನಿಸಿಕೊಂಡಿರುವುದೇನು? ಸುಂದರ ಈ ಹೊಲೆಯರ ಹುಡುಗಿಯನ್ನು ಮದುವೆಯಾಗಿ ಕೀಳಾಗುವುದೇನು? ಅವನು ಒಳ್ಳೆಯವನಾಗಿರುವುದೇನು, ಇವನು ಕೆಟ್ಟಿರುವುದೇನು? ಜಾತಿ ಕುಲ ಎಲ್ಲ ಕಟ್ಟಿದ ಬಣ್ಣ; ಮುಖ್ಯ ನಡೆವಳಿ ಚೆನ್ನಾಗಿರಬೇಕು" ಎಂದು ಮೈಲಾರಯ್ಯನವರು ತಮ್ಮ ಮನಸ್ಸಿನಲ್ಲಿಯೇ ಎಂದುಕೊಂಡು, ಸ್ವಂತ ಅನುಭವದಿಂದ ಒಂದು ಉದಾರ ನೀತಿಯನ್ನು ಮನವರಿಕೆ ಮಾಡಿಕೊಂಡರು.

## ೭೭

ವಿಶ್ವನಾಥ ಈಗ ಕೋಣೆ ಬಿಟ್ಟು ಮೈಲಾರಯ್ಯನವರು ಗೊತ್ತು ಮಾಡಿದ್ದ ಮನೆಗೆ ಹೋಗಿದ್ದ. ಮೈಲಾರಯ್ಯನವರು ಹಿಂದಿರುಗಿದ ತರುಣದಲ್ಲಿಯೇ ಗಂಡ ಹೆಂಡಿರಿಗೆ ಈ ರೀತಿ ಮಾತುಕತೆ ನಡೆಯಿತು:

"ಅಲ್ಲ, ಎಲ್ಲಾ ಬಿಟ್ಟು ಆಗ ನೀನು ಸುಂದರನನ್ನ ಯಾಕೆ ಹಣ ಕೇಳುವುದಕ್ಕೆ ಹೋದೆ?"

"ನಮ್ಮ ತಂದೆಯ ಬಳಿ ಹಣ ಇರಲಿಲ್ಲ ಎಂದು ನನಗೆ ಗೊತ್ತಿತ್ತು. ಅಲ್ಲದೆ, ಕೇಳಿದ್ದರೆ 'ಯಾಕೆ ಅಷ್ಟು ಹಣ?' ಎಂದು ಕೇಳುತ್ತಿದ್ದರು? ನಿಜ ಹೇಳಿದರೆ ನಿಮ್ಮ ಮಾನವೂ ಹೋಗುತ್ತೆ, ನನ್ನ ಮಾನವೂ ಹೋಗುತ್ತೆ ಅಂತ ಕೇಳಲಿಲ್ಲ."

"ಹಾಗಾದರೆ ಸುಂದರ ನಿನಗೆ ಹಣ ಕೊಟ್ಟೇ ಕೊಡುತ್ತಾನೆ ಎಂಬ ಖಾತರಿ ಹೇಗೆ ಬಂತು?"

" ನನ್ನ ಕಂಡರೆ ಆವನಿಗೆ ಎಂದಿನಿಂದಲೂ ವಿಶ್ವಾಸ. ನಾನು ಕೇಳಿದರೆ ಇಲ್ಲ ಎನ್ನುವುದಿಲ್ಲ ಎಂದು ಗೊತ್ತು."

" ಓಹೋ, ನಿನ್ನ ಕಂಡರೆ ವಿಶ್ವಾಸವೋ ? ತುಂಬ ವಿಶ್ವಾಸ ಅಲ್ಲವೆ? ''

'' ಹೌದು. ನಾನು ಹೊರಗಿನವಳಲ್ಲ. ಅವನ ಸೋದರಮಾವನ ಮಗಳು. ನಾನು ಚೆನ್ನಾಗಿ ಬದುಕಲಿ ಎಂದು ಹಣ ಕೊಟ್ಟ. ''

'' ಹಣ ಕೊಟ್ಟದ್ದಕ್ಕೆ ಪ್ರತಿಯಾಗಿ ನೀನು ಅವನ ಬಳಿಯೇ ಇದ್ದು ಬಿಟ್ಟಿದ್ದರೆ ಚೆನ್ನಾಗಿ ಬದುಕಬಹುದಾಗಿತ್ತು, ಸುಖವಾಗಿರಬಹುದಾಗಿತ್ತು."

'' ಹಾಗೆ ಮಾಡುವುದಾಗಿದ್ದರೆ ಹಣ ಏಕೆ ಕೇಳಬೇಕಾಗಿತ್ತು ? ನಿಮ್ಮ ತಾಪತ್ರಯ ತೀರಲಿ, ನಿಮ್ಮ ಬಳಿಗೆ ಬರೋಣ ಎಂದು ಹಾಗೆ ಮಾಡಿದೆ."

'' ನನ್ನ ಮೇಲೆ ನಿನಗೆ ತುಂಬ ವಿಶ್ವಾಸ ಅಲ್ಲವೆ ? ''

ಕಮಲೆ ಮೌನವಾಗಿದ್ದಳು.

'' ಅದೇಕೆ ಅಂಜಿಕೆ, ಇಲ್ಲ ಎಂದು ಬಾಯಿಬಿಟ್ಟು ಹೇಳಿಬಿಡು. ''

'' ಇಲ್ಲ ಎಂದು ಬಾಯಿ ಬಿಟ್ಟು ಹೇಳಿದರೆ ಸುಲಭವಾಗಿ ನಂಬುತ್ತೀರಿ. ಇದೆ ಎಂದು ಮನಸಾರೆ ಹೇಳಿದರೂ ನಂಬುವುದು ಕಷ್ಟ. ''

'' ಇದೆ ಎಂದು ಹೇಳಿದರೆ ಆಯಿತೆ ? ಹಾಗೆ ನಡೆದುಕೊಳ್ಳಬೇಕು. "

'' ಹೇಗೆ ? ''

''ನಾನು ಹಿಂದೆ ಹೇಳುತ್ತಿದ್ದ ಹಾಗೆ. ಪಟ್ಟಣದ ಹುಡುಗಿಯರ ಹಾಗೆ."

'' ಈಗ ನಾನು ಹುಡುಗಿಯಲ್ಲ. "

'' ನನಗೂ ಗೊತ್ತು. "

'' ನನಗೂ ಗೊತ್ತು. ಹುಡುಗಿಯಲ್ಲ. ಹಳ್ಳಿಯ ಪೆದ್ದು. "

'' ನಾನು ದಿಳ್ಳಿಯವಳಾದರೆ ನಿಮಗೆ ಬರುವ ಅರವತ್ತು ರೂಪಾಯಿ ಸಂಬಳ ಯಾವ ಮೂಲೆಗೆ ? "

'' ಈಗ ಎಂಬತ್ತಾಗಿದೆ ಕಣೇ, ಎಂಬತ್ತು. ''

'' ಸಂತೋಷ. ಹಾಗಾದರೆ ಸುಂದರನ ಸಾಲ ತೀರಿಸುವ ಆಲೋಚನೆ ಮಾಡಿ. "

" ಹಾಗಾದರೆ ಸುಂದರ ಕೊಟ್ಟದ್ದು ಸಾಲವೇನು ? "

'' ಅವನು ಹಾಗೆ ತಿಳಿದುಕೊಂಡಿಲ್ಲ ; ನಾನು ಹಾಗೆ ಭಾವಿಸಿದ್ದೇನೆ.''

" ನನ್ನ ಸಾಲವೇ ಇನ್ನೂ ಪೂರ್ತಿ ತೀರಿಲ್ಲ, ಇನ್ನು ನಿನ್ನ ಸಾಲ ಹೇಗೆ ತೀರಿಸಲೀ ? " ಎಂದು ನಕ್ಕ ವಿಶ್ವನಾಥ.

" ಓಹೋ, ನನ್ನ ಸಾಲ ಎಂದು ನಿಮ್ಮ ಭಾವನೆಯೇ ? ಹಾಗೇ ಆಗಲಿ ತೆಗೆದುಕೊಳ್ಳಿ ಇದನ್ನ, ನಮ್ಮ ತಂದೆ ಕೊಟ್ಟ ಚಿನ್ನದ ಸರ. ಇದನ್ನ ಮಾರಿ ಸುಂದರನ ಸಾಲ ತೀರಿಸಿ." ಎಂದು ಸರವನ್ನು ತೆಗೆದು ಪತಿಯ ಮುಂದೆ ಹಾಕಿದಳು.

" ನೋಡಿದೆಯಾ, ವಿಶ್ವಾಸವನ್ನ ಹೀಗೆ ತೋರಿಸಬೇಕು. ಬಾಯಲ್ಲಿ ಹೇಳಿದರೆ ಗಂಡಸರಿಗೆ ಹಿಡಿಯುವುದಿಲ್ಲ" ಎಂದು ಭಂಡತನದಿಂದ ಸುಂದರ ಸರವನ್ನು ತೆಗೆದುಕೊಂಡು ಮನೆ ಬಿಟ್ಟು ಹೊರಟು ಹೋದ.

ವಿಶ್ವನಾಥ ಎರಡು ಮೂರು ದಿನ ಆ ಸರವನ್ನು ಬಳಿಯಲ್ಲಿಯೇ ಇಟ್ಟುಕೊಂಡಿದ್ದ. ಸುಂದರನಿಗೆ ಹಣ ಹಿಂದಿರುಗಿಸುವುದಂತೂ ಅವನ ತಲೆಗೆ ಹೊಗಲೇ ಇಲ್ಲ. ತನಗೆ ಇನ್ನೂ ಒಲಿದು ಬರದೆ ಇದ್ದ ದೇವಿಯ ಕೊರಳಿಗೆ ಅದನ್ನು ಹಾಕುವುದೆ, ಇಲ್ಲವೆ ಅದನ್ನು ಮಾರಿ ತನ್ನ ಇನ್ನೂ ಉಳಿದಿದ್ದ ತಾಪತ್ರಯಗಳನ್ನು ಬಗೆಹರಿಸಿಕೊಳ್ಳುವುದೆ ಎಂಬ ಇಬ್ಬಗೆಯಲ್ಲಿ ಸಿಲುಕಿದ್ದ. ಕಮಲೆಯ ಅದೃಷ್ಟ ಅವನನ್ನು ಎರಡನೆಯ ಆಲೋಚನೆಯ ಕಡೆಗೆ ಸೆಳೆಯಿತು. ಅವನ ತಾಪತ್ರಯ ಎಲ್ಲ ತೀರಿತು. ಆದರೆ ಕಮಲೆಗೆ ಮಾತ್ರ ಅವನು ಏನನ್ನೂ ತಿಳಿಸಲಿಲ್ಲ.

ಈಗ ಮನೆಯಲ್ಲಿ ಒಂದು ಮಗು ಎಂದು ಇದ್ದುದ್ದರಿಂದ ವಿಶ್ವನಾಥ ಮೊದಲಿನಂತೆ ಇರಲು ಸಾಧ್ಯವಾಗಲಿಲ್ಲ. ನಂಜುಂಡ ಕ್ರಮ ಕ್ರಮವಾಗಿ ವಿಶ್ವನಾಥನ ಗಮನ, ಒಲವುಗಳನ್ನು ಸೆಳೆಯುತೊಡಗಿತ್ತು. ಆ ಮಗುವಿನ ಮೂಲಕ ಮಗುವಿನ ತಾಯಿಯೂ ಅವನ ಆದರಕ್ಕೆ ಪಾತ್ರವಾಗುತ್ತ ಬಂದಳು. ಕಮಲೆಯ ಕತ್ತಲೆಯ ಬಾಳಿನಲ್ಲಿ ಬೆಳಗಿನ ಬೆಳ್ಳಿ ಮೂಡಿತು.

ಕಮಲೆಯ ತಾಳ್ಮೆ, ಜಾಣ್ಮೆ, ಸರಳತನ, ತ್ಯಾಗ ಇವುಗಳ ಪರಿಣಾಮ ವಾಗಿ ವಿಶ್ವನಾಥನ ವಕ್ರಗತಿ ಬರಬರುತ್ತ ನೇರವಾಗಿ ತಿರುಗಿತು. ಇದನ್ನು ಕಮಲೆ ಅರಿಯಳು. ತನ್ನ ಸುಖಕ್ಕೆ ಸುಂದರನ ಔದಾರ್ಯ ಕಾರಣ ಎಂದು ಅವಳು ನಂಬಿದ್ದಳು. ಅಂಥ ಸುಂದರನೊಂದಿಗೆ ಬಾಳ್ವೆ ಮಾಡುವ ಭಾಗ್ಯ ವನ್ನು ಇವಳು ಕೇಳಿಕೊಂಡು ಬಂದಿರಲಿಲ್ಲ. ತನ್ನ ಪಾಲಿಗೆ ಬಂದದ್ದನ್ನೆ

ಭಾಗ್ಯ ಎಂದು ತಿಳಿದಿದ್ದಳು. ವಿಶ್ವನಾಥ ಕಾಲಿನಿಂದ ಒದೆದು ನೂಕಿದರೂ ಅವನ ಪಾದವೇ ಗತಿಯೆಂದು ನಂಬಿರುವುದೆಂಬ ದೃಢ ನಿರ್ಧಾರಕ್ಕೆ ಅವಳು ಬಂದಿದ್ದಳು. ಆದರೆ ಆ ಪ್ರಸಂಗ ಒದಗಲಿಲ್ಲ.

ಕಮಲೆ ಈಗ ಸುಖವಾಗಿರಬಹುದು ಎಂದು ಸುಂದರನ ಹೃದಯದಲ್ಲಿಯೂ ಆಶಾಭಾವನೆ ಮೂಡಿತ್ತು.

೭೮

ಹೆಣ್ಣಿನ ಮೋಹದಿಂದ ಸಂಪೂರ್ಣವಾಗಿ ತಪ್ಪಿಸಿಕೊಂಡಿರುವ ಗಂಡಸರು ವಿರಳ. ಗಂಡು ಹೆಣ್ಣನ್ನು ಬಯಸುವುದೂ ಹೆಣ್ಣು ಗಂಡನ್ನು ಬಯಸುವುದೂ ಪ್ರಕೃತಿಧರ್ಮ, ಸೃಷ್ಟಿನಿಯಮ. ಸಂನ್ಯಾಸಿಯಾದವನು ಹೆಣ್ಣಿನ ಮೋಹವನ್ನು ಗೆದ್ದಿರಬಹುದು, ಅಷ್ಟೆ: ಅದಕ್ಕೆ ಅವನೂ ಒಂದು ಸಲ ಸಿಲುಕಿದವನೆ. ಸಮಾಜದ ಹಿತಚಿಂತನೆಯಿಂದ ಈ ಮೋಹ ಒಂದು ಕ್ಷೇಮಮಾರ್ಗದಲ್ಲಿ ಹರಿಯುವಂತೆ ಮದುವೆಯೆಂಬ ವ್ಯವಸ್ಥೆ ಏರ್ಪಾಡಾಗಿರ ತಕ್ಕದ್ದು. ಮದುವೆಯಾಗುವ ಮುನ್ನ ಹತ್ತು ಹೆಣ್ಣಿನ ಕಡೆ ತರುಣನ ಕಣ್ಣು ಹಾಯುತ್ತಿರುತ್ತದೆ: ದುಂಬಿ ಹತ್ತಾರು ಹೂಗಳ ಮೇಲೆ ಎರಗುವಂತೆ. ಸುಂದರನೂ ಕೂಡ ಈ ಮೋಹದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹೆಣ್ಣಿನ ಮೋಹ ಕಮಲೆಯ ರೂಪದಲ್ಲಿ ಅವನ ಹೃದಯವನ್ನು ಕೆಲವು ಕಾಲ ಸೆಳೆದಿತ್ತು. ಶಾಂತಕುಮಾರಿಯ ರೂಪದಲ್ಲಿ ಮತ್ತೆ ಹೃದಯದಲ್ಲಿ ಸುಳಿಯಿತು. ಈಗ ಸಾಧನೆಯ ಆಕೃತಿಯಲ್ಲಿ ಆಕರ್ಷಿಸತೊಡಗಿತು. ಕಬ್ಬಿಣದ ತುಂಡಿನ ಬಳಿ ಎರಡು ಸೂಜಿಗಲ್ಲುಗಳಿದ್ದರೆ, ಅವೆರಡರಲ್ಲಿ ಹೆಚ್ಚು ಪ್ರಬಲವಾದುದರ ಕಡೆಗೆ ಕಬ್ಬಿಣ ಸೆಳೆತಗೊಳ್ಳುವಂತೆ — ಕಮಲೆ ಚೆನ್ನಿಯರಿಬ್ಬರ ಸಾಹಚರ್ಯದಲ್ಲಿ, ಸನ್ನಿವೇಶಪ್ರಾಬಲ್ಯದಿಂದ ಕಮಲೆ ಸುಂದರನ ಹೃದಯವನ್ನು ಸೆಳೆದಿದ್ದಳು. ಕಮಲೆ ತಪ್ಪಿ ಹೋದ ಮೇಲೆ ಚೆನ್ನಿ – ಈಗ ಸಾಧನೆ – ಆ ಸ್ಥಾನವನ್ನು ಆಕ್ರಮಿಸಿದಳು. ಸುಂದರನ ಜೀವನದಲ್ಲಿ ಶಾಂತಕುಮಾರಿ ಮಿಂಚಿನಂತೆ ಬೆಳಗಿ ಮಾಯವಾದಳು: ಕತ್ತಲೆಯಲ್ಲಿದ್ದ ಸುಂದರನಿಗೆ ಚೆನ್ನಿಯ ಇರವನ್ನು ಬೆಳಗಿ ತೋರಿಸಿದಳು.

ಸುಂದರನ ಸೇವಾಕಾರ್ಯ ಅಷ್ಟೇನೂ ಹುರುಪಿನಿಂದ ಮುಂದ

ಹರಿಯಲಿಲ್ಲ; ಇದಕ್ಕೆ ಕಾರಣಗಳು ಹಲವಾರು : ಜನ ಧನ ಸಹಾಯವಿಲ್ಲದ್ದು ಒಂದು ; ಯಾರ ಉದ್ಧಾರಕ್ಕಾಗಿ ಅವನು ಹೆಣಗಬೇಕೆಂದಿದ್ದನೋ ಅವರೇ ತಮ್ಮ ಕೀಳುಸ್ಥಿತಿಯಲ್ಲಿಯೇ ಸ್ವಸಂತುಷ್ಟಿಯನ್ನು ಹೊಂದಿ ಮೇಲೇಳ ಬೇಕೆಂಬ ಜಾಗ್ರತಿಯನ್ನೇ ತೋರದಿದ್ದುದು ಮತ್ತೊಂದು; ಸದ್ಯದ ಸ್ಥಿತಿಯಲ್ಲಿ, ಇವೆರಡಕ್ಕಿಂತ ಪ್ರಬಲವಾದ ಕಾರಣ — ಸುಂದರನ ಮನಸ್ಸಿನಲ್ಲಿ, ಹೃದಯದಲ್ಲಿ, ಆತ್ಮದಲ್ಲಿ, ಸಾಧನೆಯನ್ನು ಮದುವೆಯಾಗಬೇಕೆಂಬ, ಮದುವೆಯಾಗಿ ಅವಳೊಂದಿಗೆ ಹೆಗಲು ಹೆಗಲು ಕೂಡಿಸಿ ಸೇವೆ ಮಾಡಬೇಕೆಂಬ, ಪ್ರಬಲವಾದ ಆಕಾಂಕ್ಷೆ. ಪುರುಷನ ವಿಸ್ತಾರವಾದ ಕಾರ್ಯಕ್ಷೇತ್ರಗಳಲ್ಲೆಲ್ಲ ಹೆಣ್ಣು ಅವನೊಂದಿಗೆ ಜೊತೆಗಿರುವುದಿಲ್ಲ, ಇರಬೇಕಾಗಿಲ್ಲ. ಸುಂದರನೇ ಕಮಲೆಯನ್ನು ಮದುವೆಯಾಗಿದ್ದಿದ್ದರೆ, ಅವಳು ಬಹುಶಃ ಗೃಹಿಣಿಯಾಗಿದ್ದುಕೊಂಡು ಸುಂದರನ ಗೃಹಜೀವನವನ್ನು ಬೆಳಗಿ ಹೊರಗಿನ ಕೆಲಸಗಳಿಗೆ ಉತ್ಸಾಹವನ್ನು ತುಂಬುತ್ತಿದ್ದಳು; ಬಹುಶಃ ಸುಂದರನೇ ಅವಳನ್ನು 'ಹೊಲಗೇರಿಗೆ ಬಾ, ಸೇವೆ ಮಾಡೋಣ' ಎಂದು ಕರೆಯುತ್ತಿರಲಿಲ್ಲ. ಸುಂದರ ಒಂದೊಂದು ಸಲ ಮನಸ್ಸಿನಲ್ಲಿ — 'ಕಮಲೆ ತಪ್ಪಿದ್ದು ಒಂದು ದೃಷ್ಟಿಯಲ್ಲಿ ಒಳ್ಳೆಯದೇ ಆಯಿತು. ಅವಳು ನನ್ನ ಈ ಸೇವಾ ಕಾರ್ಯಗಳಿಗೆ ಅಡ್ಡಿಯೇ ಆಗುತ್ತಿದ್ದಳೇನೊ. ಸಾಧನೆಯನ್ನು ಮದುವೆಯಾದರೆ ಪ್ರೇಮಜೀವನದಲ್ಲಿ ಮಾತ್ರವಲ್ಲದೆ ಸೇವಾಜೀವನದಲ್ಲಿಯೂ ನನ್ನ ಜೊತೆಯವಳಾಗಿರುತ್ತಾಳೆ" ಎಂದು ಸಮಾಧಾನಗೊಂಡಿದ್ದನು. ಎರಡು ಜೀವನದಿಗಳು ಸೇರಿ ಒಂದು ಮಹಾನದಿಯಾಗಿ ಹರಿಯುವ ಆ ಪೂರ್ಣ ಪ್ರೇಮಪ್ರವಾಹದ ಚಿತ್ರವನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳುತ್ತಿದ್ದನು:

"ಈ ಆಶ್ರಮಕ್ಕೆ ಸಾಧನ ಸೇವಾಶ್ರಮ ಎಂದೇ ಹೆಸರಿಡುತ್ತೇನೆ. ಈ ಕೆಲಸಕ್ಕೆ ಪ್ರೇರಣೆ ಅವಳು, ಈಗಲೂ ಮುಂದೆಯೂ ಅವಳೇ ಈ ಕೆಲಸದಲ್ಲಿ ನನಗೆ ಜೊತೆ. ಇವಳು ಮಾದನ ಮಗಳು ಎಂದು ಅವರಿಗೆಲ್ಲ ಸ್ಪಷ್ಟವಾಗಿ ಗೊತ್ತಾದರೆ, ಇವಳ ಮಾತಿನಲ್ಲಿ ಅವರಿಗೆ ಅಕ್ಕರೆ ಶ್ರದ್ಧೆ ಹುಟ್ಟುತ್ತದೆ. ಕುಡಿಯಬೇಡಿ, ಮನೆ ಕೇರಿ ಚೊಕ್ಕಟವಾಗಿಟ್ಟುಕೊಳ್ಳಿ ಎಂದು ನಾನು ಹೇಳಿದರೆ ಕೇಳುವುದಿಲ್ಲ; ಅವಳು ಮೆಲುಮಾತಿನಲ್ಲಿ ಹೇಳಿದರೂ ಸಾಕು, ಅವಳ ಮಾತಿಗೆ ಅವರು ಮನಸ್ಸು ಕೊಡಬಹುದು : ನಮ್ಮವಳೇ ನಮಗೆ

ಕೇಳುತ್ತಿದ್ದಾಳೆ ಎಂದು, ನಮ್ಮವಳು ಎಷ್ಟು ಬುದ್ಧಿವಂತೆ ಎಂದು, ನಮ್ಮವಳು ಒಬ್ಬ ಹಾರುವನನ್ನು ಮದುವೆಯಾಗಿದ್ದಾಳೆ ಎಂದು. ಬೆಳಗ್ಗೆಯೆಲ್ಲಾ ನಿತ್ಯ ಅವಳನ್ನು ಹೊಲೆಗೇರಿಗೆ ಕರೆದುಕೊಂಡು ಹೋಗಬೇಕಾಗುತ್ತದೆ. ಸಂಜೆಯ ಪ್ರಾರ್ಥನೆಯಲ್ಲಿ ಇನ್ನುಮೇಲೆ ಅವಳನ್ನೆ ಮುಂದಾಳಾಗಿ ಬಿಡಬೇಕು. ಈಗ ಎಲ್ಲರೂ ಕಳ್ಳ ತಪ್ಪಿಸಿಕೊಳ್ಳುತ್ತಿದ್ದಾರೆ; ಇವಳಿದ್ದರೆ ಅವರೂ ಬರಬಹುದು. ಹರಿಜನ ಹೆಂಗಸರಿಗೆ ನೂಲುವುದನ್ನು ಹೇಳಿಕೊಡುವ ಕೆಲಸವನ್ನು ಸಾಧನೆಗೆ ಸಹಿಸಬೇಕು. ಸಣ್ಣ ಮಕ್ಕಳಿಗೆಲ್ಲ ಅವಳೇ ಅಕ್ಷರಾಭ್ಯಾಸ ಮಾಡಿಸುವ ವ್ಯವಸ್ಥೆ ಮಾಡಬೇಕು. ಇಷ್ಟೆಲ್ಲ ಆಗಬೇಕಾದರೆ, ಅಡಿಗೆಯ ಕೆಲಸವನ್ನು ಅವಳಿಗೆ ತಪ್ಪಿಸಬೇಕು ತಪ್ಪಿಸಲಾಗದಿದ್ದರೆ ನಾನಾದರೂ ಅವಳ ಜೊತೆಗೆ ಸಹಾಯಕ್ಕೆ ಹೋಗಬೇಕು. ಹೊಳೆಯಿಂದ ನೀರು ಹೊರುವುದನ್ನು ತಪ್ಪಿಸ ಬೇಕು. ಒಟ್ಟಿನಲ್ಲಿ ಈ ಆಶ್ರಮದ ಪ್ರೇರಕಶಕ್ತಿ ಅವಳಾಗಬೇಕು. ನಾನು ಸ್ವಲ್ಪ ಬಿಡುವು ಮಾಡಿಕೊಂಡು ಊರಿನ ಜನರ ಮನಸ್ಸನ್ನು ತಿದ್ದುವ ಕಾರ್ಯದಲ್ಲೂ ಜನಧನಸಂಗ್ರಹ ಕಾರ್ಯದಲ್ಲೂ ಹೆಚ್ಚಿನ ಕಾಲವನ್ನು ವಿನಿಯೋಗಮಾಡಬೇಕು."

ಇದು ಅವನ ಕಲ್ಪನೆ. ಒಳ್ಳೆಯ ಕಲ್ಪನೆ. ತಾನು ಏನೇ ಮಾಡಲಿ, ಅವಳೊಂದಿಗೆ ನಲಿಯುತ್ತ ಮಾಡಬೇಕೆಂದು ಅವನ ಎಣಿಕೆ. ಇದರಲ್ಲಿ ಸ್ವಾರ್ಥ—ತನ್ನ ನಲಿವು—ಬೆರೆತಿದೆಯೆಂದು ಅವನು ಅರಿಯನು, ಸ್ವಾರ್ಥವೇ ಆದರೂ ಹೇಯವಾದದ್ದೇನಲ್ಲ.

ಈಗ ಸುಂದರ ಮಾಡುತ್ತಿದ್ದಷ್ಟು ಸಾಸಿವೆಯ ಪ್ರಮಾಣದ ಸೇವೆ ಯನ್ನು ಅವನೊಬ್ಬನೇ ಮಾಡುತ್ತಿದ್ದ. ಅಡಿಗೆಯ ಕೆಲಸ, ಹೊಳೆ ಅಥವಾ ಕುಂಟೆಯಿಂದ ನೀರು ತರುವುದು—ಇಷ್ಟೇ ಸಾಧನೆ ಮಾಡುತ್ತಿದ್ದ ಕೆಲಸ. ಅವಳ ಮೇಲೆ ಬೈರಾಗಿಯದೇ ಸಂಪೂರ್ಣ ಅಧಿಕಾರ; ಅಧಿಕಾರ ಮಾತ್ರವಲ್ಲ, ಕಾವಲು ಕೂಡ. ತಾನು ಅವಳೊಂದಿಗೆ ಸಲಿಗೆಯಿಂದ ವರ್ತಿಸುವುದಕ್ಕೆ ಕೂಡ ಈ ಬೈರಾಗಿಯ ದೆಸೆಯಿಂದ ಸಾಧ್ಯವಾಗಿಲ್ಲ ಹಾಗೆಂದು, ಬೈರಾಗಿ ಯನ್ನು ಈ ಸ್ಥಳ ಬಿಟ್ಟು ಹೋಗು ಎಂದು ಹೇಳಲೂ ಮನಸ್ಸು ಬಾರದು. ಚೆನ್ನಿಯ ಪರಿವರ್ತನೆಯಲ್ಲಿ ಅವನ ಪಾಲೂ ಇದೆ; ಬಹುಕಾಲ, ಈಗಲೂ ಅವಳ ಪಾಲಕ ಗುರುವಾಗಿದ್ದಾನೆ. ಅಲ್ಲದೆ, ಸಾಧನೆಗೂ ಅವನಲ್ಲಿ ತನ್ನಲ್ಲಿ ಎಂತೋ

ಅಂತೆ, ವಿಶ್ವಾಸ ಮೂಡಿದೆ. ತಾನು ಅವಳನ್ನು ಬಿಟ್ಟುಕೊಟ್ಟರೆ ಅವನೊಂದಿಗೆ ಹೋಗುವುದಕ್ಕೂ ಸಿದ್ಧವಾಗಿದ್ದಾಳೆ. ಹೀಗಿರುವಾಗ, ಅವಳನ್ನು ಮದುವೆ ಯಾಗುವುದೊಂದೇ ಉಪಾಯ: ಅವಳೊಂದಿಗೆ ತನ್ನ ಸುಖಸಾಧನ ಮಾರ್ಗ; ಆ ಸುಖಸಾಧನೆಯ ಮೂಲಕ ಹೆಚ್ಚಿನ ದಕ್ಷತೆಯಿಂದ ಸೇವಾಕಾರ್ಯ ಪ್ರವೃತ್ತನಾಗುವ ಮಾರ್ಗ. ಹಾಗೆ ನೆನೆದೊಡನೆ, ಅವನಿಗೆ ಗಾಂಧಿ—ಕಸ್ತೂರಿಬಾ ಅವರ ನೆನಪಾಯಿತು. ಸ್ವಾರ್ಥಸುಖವನ್ನೂ ಸೇವೆಯ ಕಡೆಗೆ ಒಯ್ಯುವ ಕನಸು ಕಾಣತೊಡಗಿದನವನು.

ಆದ್ದರಿಂದ, ಸಾಧನೆಯನ್ನು ಮದುವೆಯಾಗಬೇಕು, ಬೇಗನೆ ಮದುವೆ ಯಾಗಬೇಕು. ತಾನು ಮದುವೆಯಾಗುವ ವಿಚಾರವನ್ನು ಬೇಗನೆ ನಿರ್ಧರಿಸಿ ಕಾಗದ ಬರೆಯುವುದಾಗಿ ತನ್ನ ತಂದೆಗೆ ಮಾತುಕೊಟ್ಟಿರುವುದಾಗಿದೆ. ಈ ವಿಚಾರವನ್ನು ಇನ್ನು ತನ್ನ ಮನಸ್ಸಿನಲ್ಲಿಯೇ ಹುದುಗಿಸಿಟ್ಟುಕೊಂಡು ಪ್ರಯೋಜನವಿಲ್ಲ. ಮೊದಲು, ಅದನ್ನು ಸಾಧನೆಗೆ ತಿಳಿಸಬೇಕು. ಬಳಿಕ, ಬೈರಾಗಿಗೆ ತಿಳಿಸಿ ಅವನ ಹರಕೆ ಪಡೆದರಾಯಿತು. ಮದುವೆ ಶಾಸ್ತ್ರ ಸಮ್ಮತ ವಾಗದಿದ್ದರೆ ಬೇಡ; ಶಾಸನ ಸಮ್ಮತವಾಗುವಂತೆ ಕಾರ್ಯ ಯಾವುದನ್ನಾದರೂ ಮಾಡಿದರಾಯಿತು. ಮದುವೆಯ ದಿನ ರೈತರು ಹರಿಜನರಿಗೆಲ್ಲ ಹಬ್ಬದೂಟ; ಸಂಜೆ ಕೆಲವರು ವಿದ್ಯಾರ್ಥಿಗಳು, ಅಧ್ಯಾಪಕರು — ಇವರಿಗೆ ಉಪಹಾರ. ಆಮೇಲೆ, ಸಾಧನೆಯೊಂದಿಗೆ ದೇವರ ದರ್ಶನ, ಅಂದರೆ ದೇವಾಲಯ ಪ್ರವೇಶ — ಬೇಡ, ಆ ಕಾರ್ಯಕ್ರಮ ಈಗ ಬೇಡ; ವಿರೋಧಕ್ಕೆ ಕಾರಣವಾಗಬಹುದು.

ಹೀಗೆ ನಿರ್ಧಾರ ಮಾಡಿದ ಮೇಲೆ ಬಹುಕಾಲ ಅದನ್ನು ಸಾಧನೆಗೆ ಮಾತಿನಲ್ಲಿ ತಿಳಿಯಪಡಿಸಲಿಲ್ಲ; ಅದು ಅವನ ನಡೆವಳಿಯಲ್ಲಿ ಕ್ರಮಕ್ರಮವಾಗಿ ವ್ಯಕ್ತಗೊಳ್ಳತೊಡಗಿತು. ಒಳಗೆ ಪ್ರಣಯಭಾವ ಆವಿಷ್ಕಾರಗೊಳ್ಳುತ್ತಿದ್ದರೂ ಈ ಮೊದಲು ಎಂದಿನಂತೆಯೇ ಅವಳೊಡನೆ ಸೋದರಭಾವದ ಸಲಿಗೆಯಿಂದ ವರ್ತಿಸುತ್ತಿದ್ದವನು ಪ್ರಣಯಭಾವದ ಸಲಿಗೆಯಿಂದ ವರ್ತಿಸತೊಡಗಿದನು.

## ೭೯

ಸುಂದರ ಕೈತೋಟದ ಬೆಳೆಯುತ್ತಿದ್ದ ಕೆಲವು ಸಸಿಗಿಡಗಳಿಗೆ ಪಾತಿ

ಕಟ್ಟುತ್ತ ಇದ್ದ. ಸಾಧನೆ ಕೊಡದಿಂದ ಇವನು ಪಾತಿಕಟ್ಟಿದ ಗಿಡಗಳಿಗೆ ನೀರೆರೆಯುತ್ತಿದ್ದಳು.

"ಸಾಧನಾ, ಈ ಗುಲಾಬಿ ಕಂಟಿ ನೋಡಿದೆಯಾ ?"

"ಏನಾಗಿದೆ? ಚೆಂದಾಗಿ ಚಿಗುರುತ್ತಾ ಐತಲ್ಲ – ಅಲ್ಲ – ಅದೆಯಲ್ಲ."

ಸುಂದರ ನಕ್ಕ; ತನ್ನ ನಾಲಗೆಯ ತಪ್ಪನ್ನು ಅರಿತು ಅವಳೂ ಮುಗುಳು ನಗೆ ನಕ್ಕಳು; ಅದರಲ್ಲಿ ಲಜ್ಜೆಯೂ ಬೆರೆತಿತ್ತು.

"ಚೆನ್ನಾಗಿ ಚಿಗುರುತ್ತಾ ಇದೆ, ಸರಿಯೆ. ಆದರ ಕೆಂಪು ಕುಡಿ ಸ್ವಲ್ಪ ಕರಿಕಾಗಿದೆ, ಅಲ್ಲವೆ ?"

ಸಾಧನೆ ಬಗ್ಗಿ ನೋಡಿದಳು; "ಹೌದು" ಎಂದಳು.

"ಯಾಕೆ, ಗೊತ್ತೆ ?"

"ನಿನ್ನೆ ಬಿಸಿಲು ವಸಿ – ತುಸ – ಜೋರಾಗಿತ್ತು."

"ಬಿಸಿಲೂ ಜೋರಾಗಿತ್ತು. ಅದಲ್ಲ, ಕಾರಣ. ನಿನ್ನೆ ನೀರೇ ಹಾಕಿಲ್ಲ."

"ಹೌದು. ನಿನ್ನೆ ಗಿಡಕ್ಕೆ ನೀರು ಹಾಕೋದು ಮರೆತು ಹೋಯಿತು. ಅಲ್ಲದೆ, ನಿನ್ನೆ ಹೊತ್ತಾರೆ – ಬೆಳಗ್ಗೆ— ನಾನೇ ಹಾಕುತೇನೆ ಅಂತ ನೀನು ಹೇಳಿದ್ದೆಯಲ್ಲ ಸುಂದರಪ್ಪ ?"

"ಇನ್ನು ಮೇಲೆ ಸುಂದರಪ್ಪ ಎನ್ನಬೇಡ, ಸುಂದರ ಎನ್ನು, ಅಷ್ಟೇ ಸಾಕು."

"ಹಂಗೇ ಆಗಲಿ."

"ಹಾಗೇ ಆಗಲಿ."

"ಹಾಗೇ ಆಗಲಿ."

"ಸರಿ. ಹೋದ ತಿಂಗಳು ಇನ್ನೆರಡು ಚರಕ ತರೋದಕ್ಕೆ ಹಾಸನಕ್ಕೆ ಹೋಗಿದ್ದಾಗ ತಂದದ್ದು ಈ ಸಸಿ. ಒಳ್ಳೇ ಕಸೀ ಗಿಡ. ಇದರ ಹೂ ಬಹು ಚೆನ್ನಾಗಿ ಬಿಡುತ್ತಂತೆ. ಯಾವುದಕ್ಕೆ ನೀರು ತಪ್ಪಿಸಿದರೂ ಇದಕ್ಕೆ ತಪ್ಪಿಸಕೂಡದು. ಒಂದು ಗೊತ್ತು ಪಾಡು ಇಲ್ಲದೆ ಇರುವುದರಿಂದ ಹೀಗಾಗುತ್ತೆ. ಆದ್ದರಿಂದ, ನೀನು ಹೊಳೆಯಿಂದ ನೀರು ತರುವುದಷ್ಟೆ ಸಾಕು. ಗಿಡಗಳಿಗೆಲ್ಲ ನಾನೇ ನೀರು ಹಾಕುತ್ತೇನೆ. ಇಲ್ಲ, ಕಾಳೇಗೌಡನ ಮಗನಿಗೆ ಆ ಕೆಲಸ ಹೇಳುತ್ತೇನೆ."

ನೀರು ಹಾಕುವ ಕೆಲಸವನ್ನು ಸಾಧನೆಗೆ ತಪ್ಪಿಸಬೇಕೆಂಬುದು ಸುಂದರನ ಉದ್ದೇಶ. ಅವಳು 'ಹಾಗೇ ಆಗಲಿ' ಎಂದು ಒಪ್ಪಿಕೊಂಡಳು.

"ನೀನು ಹುಡುಗಿಯಾಗಿದ್ದಾಗ, ತೋಟದಲ್ಲಿ ಬೆಳೆದ ಹೂಗಳನ್ನು ನಿನಗೆ ಮುಡಿಸಬೇಕೂ ಅಂತ ನಾನು ಬರುತ್ತಿದ್ದೆ, ನನ್ನ ತಂದೆ ಬಯ್ಯುತ್ತ ಇದ್ದರು. ಜ್ಞಾಪಕ ಇದೆಯೇ ಸಾಧನ?"

"ಇದೆ."

"ಈ ಗಿಡದಲ್ಲಿ ಒಳ್ಳೊಳ್ಳೆ ಹೂ ಬಿಟ್ಟರೆ ಅವು ನಿನಗೆ. ಗೊತ್ತೋ? ಗುಲಾಬಿ ಹೂ ಮುಡಿಯುವುದೂ ಒಂದು ವಿದ್ಯೆ. ನಾನೇ ಮುಡಿಸಿ ನಿನಗೆ ಕಲಿಸಬೇಕೂ ಅಂತ ಕಾಣುತ್ತೆ."

ಅದೇ ತಾನೇ ಆಯೆಡೆಗೆ ಬರುತ್ತಿದ್ದ ಬೈರಾಗಿಗೆ ಸುಂದರನಾಡಿದ ಕಡೆಯ ಮಾತುಗಳು ಕೇಳಿಸಿದವು. ಅವನೆಂದ:

"ಬಿಟ್ಟ ಒಳ್ಳೆಯ ಹೂಗಳನ್ನೆಲ್ಲ ಮೊದಲು ಶ್ರೀ ರಾಮಚಂದ್ರನಿಗೆ ಅರ್ಪಣೆ ಮಾಡಬೇಕು ಸಾಧನಾ. ದೇವರ ಪ್ರಸಾದವನ್ನು ಬೇಕಾದರೆ ನೀನು ಮುಡಿಯಬಹುದು."

* * * *

ಆಶ್ರಮದ ಹಜಾರದಲ್ಲಿ ಸಾಧನೆ ಚರಕಾದಿಂದ ನೂಲು ತೆಗೆಯುತ್ತ ಕುಳಿತಿದ್ದಳು. ಹತ್ತಾರು ಚಿಲ್ಲರೆ ಪಲ್ಲರೆ ಕೆಲಸಗಳ ನಡುವೆ ಸುಂದರನಿಗೆ ಹೆಚ್ಚು ನೂಲಲು ಬಿಡುವಾಗುತ್ತಿರಲಿಲ್ಲ. ಯಾವಾಗಲಾದರೂ ಒಮ್ಮೆ ಬೇಸರವಾದಾಗ ಹತ್ತು ನಿಮಿಷ ನೂಲುತ್ತಿದ್ದನು. ಇಂದು ಅದೇನು ತೋರಿತೋ ಏನೋ, ಸುಂದರ ತನ್ನ ಚರಕವನ್ನೂ ಅವಳ ಮುಂದಿಟ್ಟು ಕೊಂಡು ನೂಲಲು ಕುಳಿತನು. ಸುಂದರ ಕುಳಿತನಷ್ಟೆ: ಎರಡು ಕೈಗಳೂ ತಟಸ್ಥವಾಗಿದ್ದುವು. ಸಾಧನೆ ಮಾತ್ರ ಏಕಾಗ್ರಚಿತ್ತದಿಂದ ನೂಲು ತೆಗೆಯುತ್ತಿದ್ದಳು. ನೂಲು ಹಿಡಿದ ಅವಳ ಬಲಗೈ ಮೇಲಕ್ಕೆ ಏರಿ ಕೆಳಕ್ಕೆ ಇಳಿದಂತೆ ನೂಲಿನೊಂದಿಗೆಯೇ ಅವಳ ಕಣ್ಣನೋಟ, ಹುಬ್ಬು, ಏರಿ ಇಳಿಯುತ್ತಿದ್ದುವು; ಎದೆ ಮೇಲಕ್ಕೂ ಕೆಳಕ್ಕೂ ಆಡುತ್ತಿತ್ತು. ಸುಂದರ ಸಾಧನೆಯ ಸೌಂದರ್ಯದ ಪರಿಭಾವನೆಯಲ್ಲಿ ಶಿಲಾಪ್ರತಿಮೆಯಂತಾಗಿದ್ದನು.

“ನಿನ್ನ ಜೊತೆ ಕುಳಿತು ನೂಲು ತೆಗೆಯುವುದಕ್ಕೆ ಆಗುವುದಿಲ್ಲ, ಸಾಧನಾ.”

“ಅದೇಕೆ. ನಾನು ಬೇಗ ಬೇಗ ತೆಗೆಯುತ್ತೇನೆಂಬೊ ? ”

“ಹಟ ಕಟ್ಟಿದರೆ ನಿನಗಿಂತ ಬೇಗ ಹೆಚ್ಚು ನೂಲು ತೆಗೆಯಬಲ್ಲೆ. ಅದಲ್ಲ. ನಿನ್ನ ಕೈಗಿಂತ ಹೆಚ್ಚಾಗಿ ನಿನ್ನ ಕಣ್ಣು ನೂಲು ತೆಗೆಯುವ ಹಾಗೆ ಕಾಣುತ್ತೆ. ನಿನ್ನ ಆ ಕಣ್ಣೋಟದ ನೂಲು ನನ್ನ ಕೈಯನ್ನು ಕಟ್ಟಿಹಾಕಿ ಬಿಡುತ್ತದೆ; ಕೈಯನ್ನೇನು, ನನ್ನ ಮನಸ್ಸನ್ನೂ ಕಟ್ಟಿಹಾಕಿಬಿಡುತ್ತದೆ. ಅದು ಪ್ರೇಮತಂತು, ಸಾಧನಾ.”

ಸಾಧನೆಗೆ ಸುಂದರನ ಈ ಮಾತುಗಳ ಆಂತರ್ಯ ನಿಜವಾಗಿಯೂ ಅರ್ಥವಾಗಿರಲಿಲ್ಲ.

“ಅದೇನೋ ನೀನು ಹೇಳುವುದು ನನಗೆ ಅರ್ಥ ಆಗುವುದಿಲ್ಲ, ಸುಂದರ.”

ಕೋಣೆಯಲ್ಲಿ ಮಲಗಿದ್ದು ಆಗ ತಾನೇ ಎಚ್ಚರಗೊಂಡಿದ್ದ ಬೈರಾಗಿಗೆ ಸುಂದರನ ಮಾತುಗಳು ಕೇಳಿ ಅವು ಅರ್ಥವಾಗಿದ್ದುವು.

* * * *

ಒಂದು ದಿನ ಸಾಧನೆ ಹೊಳೆಗೆ ನೀರು ತರಲು ಹೋಗಿದ್ದಳು. ಆಶ್ರಮದಿಂದ ಹೊಳೆ ಎರಡು ಮೂರು ಫರ್ಲಾಂಗುಗಳಷ್ಟು ದೂರ. ಅವಳು ಹೊರಟ ಹತ್ತು ಹದಿನೈದು ನಿಮಿಷಗಳಾದಮೇಲೆ ಅವಳ ಹಿಂದೆಯೆ ಸುಂದರನು ಹೊರಟ. ಅವನು ಹೊರಟದ್ದು ಬಟ್ಟೆ ಒಗೆಯುವುದಕ್ಕಾಗಿ; ಅವಳನ್ನು ಹಿಂಬಾಲಿಸಬೇಕೆಂಬ ಉದ್ದೇಶದಿಂದ ಏನೂ ಅಲ್ಲ. ಇವನು ಹೊಳೆಯ ದಡ ಮುಟ್ಟುವ ಹೊತ್ತಿಗೆ ಅವಳು ಕೊಡವನ್ನು ಬೆಳಗಿ ತೊಳೆಯುತ್ತಿದ್ದಳು. ಹಾಗೆ ತೊಳೆಯುವಾಗ ಅದು ಕೈ ತಪ್ಪಿ ನೀರಿನಲ್ಲಿ ಬೀಳಲಾಗಿ ಪ್ರವಾಹದೊಂದಿಗೆ ವೇಗವಾಗಿ ತೇಲಿ ಹೋಗುತ್ತಿತ್ತು. ಕೈ ತಪ್ಪಿ ತೇಲಿಹೋದ ಕೂಡಲೆ ಅದನ್ನು ಹಿಡಿಯಬೇಕೆಂದು ಸಾಧನೆ ಸ್ವಲ್ಪ ಮುಂದುವರಿದು ಕೈ ಚಾಚಿದಳು. ಅದು ಕೈಗೆ ಸಿಕ್ಕಲಿಲ್ಲ. ಈ ಹೊತ್ತಿಗೆ ಸರಿಯಾಗಿ ಸುಂದರ ಬಂದು ಅವಳ ಸಾಹಸವನ್ನು ವಿನೋದದಿಂದಲೇ ನೋಡುತ್ತ ನಿಂತಿದ್ದ. ಗೊಳ್ಳನೆ ನಕ್ಕ. ಕೊಡವನ್ನು ಹುಡುಕಿ

ಹಿಡಿಯಲು ಸಾಧನೆ ಇನ್ನೂ ಸ್ವಲ್ಪ ಮುಂದುವರಿಯುತ್ತಿದ್ದಳು. ಬೆಚ್ಚಿ, ಮಗುಚಿಕೊಂಡಳು. ಹಾಗೆ ಮಗುಚಿಕೊಳ್ಳುವಾಗ, ಭಯೋದ್ವೇಗದಿಂದ 'ಸುಂದರಾ! ಸುಂದರಾ! ಹೋದೆ, ಹೋದೆ' ಎಂದು ಗಟ್ಟಿಯಾಗಿ ಕಿರಿಚಿಕೊಂಡಳು. ಸುಂದರ ಗಾಬರಿಗೊಳ್ಳದಿದ್ದರೂ ತಟ್ಟನೆ ಹೊಳೆಗೆ ನುಗ್ಗಿ ಹೋಗಿ ಮುಳುಗಿ ಬಿದ್ದ ಸಾಧನೆಯನ್ನು ಎರಡೂ ಕೈಗಳಿಂದ ಎತ್ತಿಕೊಂಡು ಬಂದು, ತನ್ನ ತೊಡೆಯ ಮೇಲೆ ಮುಖವಡಿಯಾಗುವಂತೆ ಅವಳ ತಲೆಯಿಟ್ಟುಕೊಂಡು ದಡದ ಮೇಲೆ ಕುಳಿತನು. ಸಾಧನೆಗೆ ಸ್ವಲ್ಪ ಉಸಿರು ಕಟ್ಟಿದಂತಾಗಿತ್ತು, ಸ್ವಲ್ಪ ನೀರನ್ನೂ ಕುಡಿದಿದ್ದಳು. ಎಚ್ಚರವಾದ ಮೇಲೆ ಹೊರಳಿ, ಕಣ್ಣು ಬಿಟ್ಟಳು. ಎದ್ದು ಕುಳಿತು ಕೊಳ್ಳಲು ಪ್ರಯತ್ನ ಪಟ್ಟಳು. ಬೇಡ ಬೇಡ, ಹಾಗೆಯೇ ಮಲಗಿರು, ಆಮೇಲೆ ಏಳುವಿಯಂತೆ" ಎಂದ ಸುಂದರ. ಅವಳ ತೊಯ್ದ ಮುಖವನ್ನು ತಾನು ತಂದಿದ್ದ ಚೌಕದಿಂದ ಒರಸಿದ; ತೊಯ್ದು ಕೆದರಿ ಹಣೆಯ ಮೇಲೆ ಕವಿದಿದ್ದ ಮುಂಗುರುಳನ್ನು ಸರಿಮಾಡಿದ. ಬೆರಳಿಂದ ಮೆಲ್ಲನೆ ಹುಬ್ಬುಗಳನ್ನು ತೊಡೆದ. ಮೊದಲೇ ಹೊಯ್ದಾಡುತ್ತ ಇದ್ದ ಸಾಧನೆಯ ಎದೆ ಇನ್ನೂ ಹೊಯ್ದಾಡಲು ಮೊದಲುಮಾಡಿತು. ಇಬ್ಬರ ಹೃದಯಗಳೂ ಸಮತಾನದಲ್ಲಿ ಮಿಡಿಯುತ್ತಿವೆಂಬುದರಲ್ಲಿ ಸಂದೇಹವಿರಲಿಲ್ಲ. ಇಬ್ಬರೂ ಮೌನವಾಗಿಯೇ ಇದ್ದರು.

ಸುಂದರ ಕಡೆಯ ನಿರ್ಧಾರಮಾಡಿ ಕೇಳಿದ:

"ಸಾಧನಾ, ನೀನು ನನ್ನ ಪ್ರೀತಿಸುತ್ತೀಯೋ ಇಲ್ಲವೊ?"

ಸಾಧನೆ ಮೌನವಾಗಿದ್ದಳು.

"ನನ್ನ ಮಾತು ನಿನಗೆ ಅರ್ಥವಾಗಲಿಲ್ಲವೆ?"

"ಅರ್ಥವಾಯಿತು."

"ಹಾಗಾದರೆ ಹೇಳು, ಹೇಳು."

"ನೀನು ನನ್ನ ಪ್ರೀತಿಸಿದರೆ ನಾನು ನಿನ್ನ ಪ್ರೀತಿಸದೆ ಇರುವುದು ಹೇಗೆ?"

ಸುಂದರನಿಗೆ ಸಮಾಧಾನವಾಯಿತು, ಅತ್ಯಂತ ಸಂತೋಷವಾಯಿತು. ಸಂತೋಷದ ಭರದಲ್ಲಿ ತಲೆ ಬಾಗಿತು; ಬಾಗಿತೆನ್ನುವಷ್ಟರಲ್ಲಿ....

"ಸುಂದರಾ!" ಎಂದು ಹಿಂದೆಯೇ ನಿಂತಿದ್ದ ಬೈರಾಗಿಯ ಗಂಭೀರ

ವಾಣಿ ಮೊಳಗಿತು. ಸಾಧನೆಯ ಕೂಗನ್ನು ಕೇಳಿ ಧಾವಿಸಿಬಂದಿದ್ದನವನು.

ಸಾಧನೆ ತಟ್ಟನೆ ಎದ್ದುನಿಂತಳು; ಅವಳ ಮುಖ ಕೆಂಪೇರಿತ್ತು; ನೆಲವನ್ನು ದಿಟ್ಟಿಸಿ ನೋಡುತ್ತ ನಿಂತಿದ್ದಳು. ಸುಂದರನೂ ಎದ್ದು ನಿಂತು, ತಲೆತಗ್ಗಿಸಿ ನಿಂತಿದ್ದನು.

"ಏನೂ ಆಗಲಿಲ್ಲ ತಾನೆ ?"— ಬೈರಾಗಿ ಕೇಳಿದನು.

"ಏನೂ ಇಲ್ಲ" ಎಂದು ಸುಂದರ ನಡೆದದ್ದನ್ನು ಎರಡು ಮಾತಿನಲ್ಲಿ ವಿವರಿಸಿದನು.

"ಹಾಗಾದರೆ ಇನ್ನು ನಡೆಯಿರಿ, ಹೊರಡೋಣ" ಎಂದು ಬೈರಾಗಿ ಆಜ್ಞೆಮಾಡುವವನಂತೆ ನುಡಿದನು.

"ಕೊಡ ?" ಎಂದು ನೆನೆದಳು ಸಾಧನೆ.

ಪ್ರೇಮಪ್ರಪೂರ್ಣವಾದ ಹೃದಯಕುಂಭ ತೊಡೆಯ ಮೇಲಿರಲಾಗಿ, ತೇಲಿಹೋದ ಬರಿಯ ಕೊಡವನ್ನು ಸುಂದರ ಮರೆತೇಬಿಟ್ಟಿದ್ದ.

"ನೀವು ಹೊರಡಿ, ನಾನು ಕೊಡ ಸಿಕ್ಕಿದರೆ ಹುಡುಕಿ ತರುತ್ತೇನೆ" ಎಂದು ಸುಂದರ ಹೊಳೆಯ ದಡದಲ್ಲಿ ವೇಗವೇಗವಾಗಿ ನಡೆದುಹೋದ.

ಕಡೆಗೂ ಸುಂದರನಿಗೆ ಕೊಡ ದೊರೆಯಲಿಲ್ಲ.

## ೮೦

ಸಂಜೆ ಪ್ರಾರ್ಥನೆಯಾಗಿ ಆಶ್ರಮಕ್ಕೆ ಬಂದಿದ್ದ ಕೆಲವರು ತೆರಳಿದ ಮೇಲೆ, ರಾಮದೇವರ ಪಟದ ಮುಂದೆ ಬೈರಾಗಿ ಸುಂದರ ಇಬ್ಬರೇ ಕುಳಿತಿದ್ದರು. ಸುಂದರ ಮೇಲಕ್ಕೆದ್ದಾಗ, "ಕುಳಿತುಕೋ, ಸ್ವಲ್ಪ ಮಾತಾಡುವುದಿದೆ" ಎಂದು ಬೈರಾಗಿ ಹೇಳಿದನು. ಸುಂದರ ಕುಳಿತ.

"ಸುಂದರಾ"

"ಏನು ?"

"ಕೆಲವು ಪ್ರಶ್ನೆಗಳನ್ನು ಸ್ಪಷ್ಟವಾಗಿ ನಿನ್ನನ್ನು ಇಂದೇ ಕೇಳಬೇಕೆಂದು ನಿಶ್ಚಯಮಾಡಿಕೊಂಡಿದ್ದೇನೆ. ಭಗವತ್ಸಾಕ್ಷಿಯಾಗಿ ನೀನು ಮನಬಿಚ್ಚಿ ಯಥಾರ್ಥವನ್ನು ಹೇಳುವೆಯಾ ?"

"ನಿಮಗೆ ಹೇಳಬಹುದಾದದ್ದಾದರೆ ಹೇಳುತ್ತೇನೆ. ನಾನು ಹೇಳಿದ್ದು

ಸುಳ್ಳಾಗಿರದು. ಅಷ್ಟು ಭರವಸೆ ಕೊಡಬಲ್ಲೆ.''

'' ಎಲ್ಲವೂ ನನ್ನ ಗಮನಕ್ಕೆ, ಅರಿವಿಗೆ, ಬಂದಿದೆ. ನಿನ್ನ ಬಾಯಿಂದ ಕೇಳಬೇಕೆಂಬ ಆಶೆ. ಅಷ್ಟೆ.''

'' ಹಾಗಿದ್ದಮೇಲೆ ಕೇಳಿ ತಿಳಿದುಕೊಳ್ಳಬೇಕಾದ ಆವಶ್ಯಕತೆ ಏನು? ಯಾವ ವಿಷಯ ನಿಮ್ಮ ಗಮನಕ್ಕೆ ಬಂದಿದೆಯೆಂದು ಅಪ್ಪಣೆ ಕೊಡುತ್ತಿರುವಿರೋ ಆ ವಿಷಯದಲ್ಲಿ ನಿಮ್ಮ ಅಭಿಪ್ರಾಯಭೇದವಿದ್ದರೆ ತಿಳಿಸಿ, ನಿಮ್ಮ ಅಭಿಪ್ರಾಯದಂತೆ ನಡೆದುಕೊಳ್ಳಲು ಪ್ರಯತ್ನಪಡುತ್ತೇನೆ.''

'' ಪ್ರತ್ಯಕ್ಷಪ್ರಮಾಣ ಕೂಡ ಅನೇಕ ವೇಳೆ ಮೋಸಕಾರಿ. ಈಗ ನಾನು ಸಂನ್ಯಾಸಿಯ ಹಾಗೆ ಕಾಣುತ್ತೇನೆ. ಸಂನ್ಯಾಸಿಯ ಯೋಗ್ಯತೆಯೆಲ್ಲವೂ ನನಗೆ ಸಿದ್ಧಿಸಿದೆಯೆಂದು ಹೇಳಲು ಸಾಧ್ಯವೋ? ನಿನ್ನ ಅಥವಾ ಯಾರದೇ ಹೊರಗಿನ ನಡವಳಿಯಿಂದ ಒಳಗಿನ ಪ್ರವೃತ್ತಿಯನ್ನು ಗ್ರಹಿಸುವುದು ಅಸಾಧ್ಯ ಮಾತ್ರವಲ್ಲ, ಅನ್ಯಾಯ. ಹೃದಯವನ್ನು ಒಳಹೊಕ್ಕು ಅದರ ಸೂಕ್ಷ್ಮಗತಿಯನ್ನು ಅರಿಯಬಲ್ಲ ಜ್ಞಾನದೃಷ್ಟಿ ನನಗೆ ಇದ್ದಿದ್ದರೆ ನಿನ್ನನ್ನು ಕೇಳದೆಯೇ ನನ್ನ ಅಭಿಪ್ರಾಯವನ್ನು ಹೇಳಿಬಿಡುತ್ತಿದ್ದೆ. ಆ ಜ್ಞಾನದೃಷ್ಟಿ ನನಗಿಲ್ಲ; ಸೂಕ್ಷ್ಮದೃಷ್ಟಿಯೇನೋ ಉಂಟು. ನನ್ನ ಊಹೆಯನ್ನು ನಿನ್ನ ಹೇಳಿಕೆಯಿಂದ ಸಮರ್ಥನೆಮಾಡಿಕೊಳ್ಳಬೇಕೆಂಬ ಅಭಿಲಾಷೆಯಿಂದ ಹೀಗೆ ಕೇಳಬೇಕೆಂದಿದ್ದೇನೆ. ನಿನಗೆ ಅಸಮಾಧಾನವಾಗದಿದ್ದರೆ....''

'' ಇಲ್ಲ; ಏನು ಬೇಕಾದರೂ ಅಗತ್ಯವಾಗಿ ಕೇಳಬಹುದು.''

'' ಸಾಧನೆಯನ್ನು ನೀನು ಪ್ರೀತಿಸುತ್ತಿರುವೆಯಲ್ಲವೆ?''

ಸುಂದರ ಮೌನವಾಗಿದ್ದ.

'' ಉಂಟು ಎಂದು ತಿಳಿಯಲೋ?''

'' ಹಾಗೆ ತಿಳಿಯಬಹುದು.''

'' ಅದರಲ್ಲಿ ವಿಶೇಷವೇನಾದರೂ ಇದೆಯೋ?''

'' ವಿಶೇಷವೇನೂ ಇದ್ದಂತೆ ನನಗೆ ಕಾಣದು.''

'' ಏನೂ ಇಲ್ಲವೆ, ಯೋಚನೆ ಮಾಡಿ ಹೇಳು? ನಿನ್ನನ್ನು ನೀನು ಪರೀಕ್ಷಿಸಿಕೊಂಡು ಹೇಳು.''

'' ಇಲ್ಲ. ಏನೂ ಇಲ್ಲ''

"ಅವಳನ್ನು ಎಂದಿನಿಂದಲೂ ಒಂದೇ ಸಮನಾಗಿ ಪ್ರೀತಿಸುತ್ತಿರುವೆಯೋ?"

"ಎಂದಿಗಿಂತ ಇಂದು ಹೆಚ್ಚಾಗಿ ಪ್ರೀತಿಸುತ್ತೇನೆ."

"ನಾನು ಕೇಳಿದ 'ವಿಶೇಷ' ಅದೆಯೆ: ಆ 'ಹೆಣ್ಣಿಗೆ.' ನೀನು ಎಂದಿನಿಂದಲೂ ಅವಳನ್ನು ಪ್ರೀತಿಸುತ್ತಿದ್ದೀಯೆ. ನಾನದನ್ನು ಚೆನ್ನಾಗಿ ಬಲ್ಲೆ. ಅವಳನ್ನು ಕಾಪಾಡಿರುವುದು ನಿನ್ನ ಪ್ರೀತಿ; ಇಂದು ಬೆಳಗ್ಗೆ ಅವಳನ್ನು ಕಾಪಾಡಿದ್ದೂ ಅದೇ ಪ್ರೀತಿ. ಅದನ್ನು ನಾನು ಚೆನ್ನಾಗಿ ಬಲ್ಲೆ. ನೀನು ಕಮಲೆಯನ್ನು ಮದುವೆಯಾಗಬೇಕೆಂದಿದ್ದಾಗ ಚೆನ್ನಿಯನ್ನು ಯಾವ ರೀತಿಯಲ್ಲಿ ಪ್ರೀತಿಸುತ್ತಿದ್ದೆಯೋ ಅದೇ ರೀತಿಯಲ್ಲಿ ಸಾಧನೆಯನ್ನು ಪ್ರೀತಿಸುತ್ತಿರುವೆಯೊ?

ಬಡ ಪೆಟ್ಟಿಗೆ ಗಾಳಕ್ಕೆ ಸಿಲುಕದ ಮೀನು ತಟ್ಟನೆ ಸಿಲುಕುವಂತೆ, ಈ ಪ್ರಶ್ನೆಗೆ ಸುಂದರನ ಸ್ಪಷ್ಟವಾದ ಉತ್ತರ ಸಿಲುಕಿ ಹೊರಬಂದಿತು.

"ಅಲ್ಲ. ಅವಳನ್ನು ಮದುವೆಯಾಗಬೇಕೆಂಬ ಉದ್ದೇಶವಿದೆ ಇಂದು."

"ನನ್ನ ಸಂದೇಹ ಪರಿಹಾರವಾಯಿತು ನನ್ನ ಊಹೆ ಸರಿಯಾಯಿತು."

"ಇದರಲ್ಲಿ ಮುಚ್ಚುಮರೆಯೇನಿಲ್ಲ. ನಿಮಗೂ ನನ್ನ ತಂದೆಗೂ ಕಾಲಕ್ರಮದಲ್ಲಿ, ಬಹುಶಃ ನಾಳೆನಾಡಿದ್ದರಲ್ಲಿಯೇ, ತಿಳಿಸಿ ನಿಮ್ಮ ಆಶೀರ್ವಾದವನ್ನು ಪಡೆಯಬೇಕೆಂದು ಸಂಕಲ್ಪಿಸಿದ್ದೆ."

"ನಿನ್ನ ಸಂಕಲ್ಪ ಒಳ್ಳೆಯದು. ನಾಳೆ ನಾಡಿದ್ದು ಆಗುವುದು ಇಂದೇ ಆಯಿತು. ನಿನ್ನ ಮನಸ್ಸು ಸರಿಯಾದ ಮಾರ್ಗದಲ್ಲಿಯೇ ಪ್ರವರ್ತಿಸುವುದೆಂದು ನನಗೆ ಖಚಿತವಾಗಿದೆ. ಆದರೂ...."

ಸಂತೋಷಗೊಳ್ಳುತ್ತಿದ್ದ ಸುಂದರನ ಮನಸ್ಸು ಸಂದೇಹದಲ್ಲಿ ಸಿಲುಕಿತು.

"ಆದರೂ, ಅಜ್ಞಾನದಿಂದ ಅತಿಚಾರವಾಗಬಹುದು."

"ನಾನು ಸಾಧಕಬಾಧಕಗಳೆಲ್ಲವನ್ನೂ ಚೆನ್ನಾಗಿ ಪರ್ಯಾಲೋಚಿಸಿ ನನ್ನ ಈ ನಿರ್ಧಾರಕ್ಕೆ ಬಂದಿದ್ದೇನೆ. ಬ್ರಾಹ್ಮಣನಾದ ನಾನು ಅವಳನ್ನು ಮದುವೆಯಾಗುವುದು ಶಾಸ್ತ್ರವಿಹಿತವೇ ಅಲ್ಲವೇ ಎಂಬ ವಿಚಾರದಲ್ಲಿ ನಾನು ಅಜ್ಞಾನಿಯಾಗಿರಬಹುದು. ಆದರೂ, ಅಸ್ಪೃಶ್ಯ ಕನ್ಯೆಯನ್ನು ಮದುವೆಯಾಗುವುದು

ಅತಿಚಾರವೆಂದು ನಾನು ಹೇಳಲಾರೆ."

" ಈ ಅಜ್ಞಾನವನ್ನು ಕುರಿತು ನಾನು ಹೇಳುತ್ತಿಲ್ಲ. ವಿಧಿವಿಲಾಸದ ಅಜ್ಞಾನ. ಅದನ್ನು ನೀನು ಅರಿಯೆ."

"ವಿಧಿಯಲ್ಲಿ ನನಗೆ ನಂಬಿಕೆಯಿಲ್ಲ."

"ನೀನು ನಂಬಿದರೂ ನಂಬದಿದ್ದರೂ ವಿಧಿ ತನ್ನ ಪ್ರಭಾವವನ್ನು ತೋರದೆ ಹೋಗುವುದಿಲ್ಲ. ವಿಧಿ ಮೇಲೆರಗಿದಾಗ ಅರಿತೋ ಅರಿಯದೆಯೋ ತಲೆ ಕೊಟ್ಟರೆ ಮಣ್ಣಿನ ಬೊಂಬೆ, ಎದುರಿಸಿ ನಿಂತರೆ ಉಕ್ಕಿನ ಮನುಷ್ಯ. ವಿಧಿ ಈಗಾಗಲೇ ನಿನ್ನನ್ನು ವಂಚಿಸಿದೆ; ನೀನು ಎದೆಗೊಟ್ಟು ನಿಂತಿರುವೆ. ಮತ್ತೆ ವಂಚಿಸಲೆಳಸಿದೆ; ಮತ್ತೆ ಎದೆಗೊಟ್ಟು ನಿಲ್ಲಬೇಕು."

"ಕಮಲೆ ನನ್ನ ಕೈತಪ್ಪಿದಂತೆ ಸಾಧನೆಯೂ ನನ್ನ ಕೈತಪ್ಪಬಹುದೆಂದು ನಿಮ್ಮ ಅಭಿಪ್ರಾಯವೇನು? ಅವಳನ್ನು ಇನ್ನು ಯಾರಾದರೂ...."

"ಬೇರೆ ಯಾರೂ ಅವಳನ್ನು ಮದುವೆಯಾಗಬೇಕೆಂದು ಬಂದಿಲ್ಲ."

"ಹಾಗಿದ್ದಮೇಲೆ ಭಯವೇನು?"

"ಬೇರೆ ಯಾರು ಬೇಕಾದರೂ ಅವಳನ್ನು ಮದುವೆಯಾಗಬಹುದು. ನೀನು ಮಾತ್ರ ಅವಳನ್ನು ಮದುವೆಯಾಗಕೂಡದು."

ಸುಂದರ ನಿಬ್ಬೆರಗಾದ!

" ಈ ಮೊದಲು ನೀನು ಅವಳನ್ನು ತಂಗಿಯೆಂದು ಭಾವಿಸುತ್ತಿದ್ದೆಯಲ್ಲವೆ?"

" ಹೌದು."

"ಇನ್ನು ಮೇಲೆಯೂ ಹಾಗೆಯೇ ಭಾವಿಸತಕ್ಕದ್ದು; ಮಾತ್ರವಲ್ಲ, ಹಾಗೆಂದೇ ತಿಳಿಯತಕ್ಕದ್ದು."

"ಅದು ಸಾಧ್ಯವಿಲ್ಲ. ನನ್ನ ಭಾವನೆ ಈಗ ಬೇರೆಯಾಗಿದೆ."

"ಸುಂದರಾ, ಸಾಧಿಸಿದರೆ ಎಲ್ಲವೂ ಸಾಧ್ಯ. ಸಾಧನೆಯನ್ನು ತಂಗಿ ಎಂದು ತಿಳಿಯತೊಡಗುವುದೂ ಒಂದು ಸಾಧನೆ. ಇಂದಿನಿಂದ ಹಾಗೆ ಮತ್ತೆ ತಿಳಿಯತೊಡಗಬೇಕು. ಹಿಂದೆ ಇವಳನ್ನು ನೀನು ತಂಗಿ ಎಂದು ತಿಳಿಯುತ್ತಿರಲಿಲ್ಲವೆ? ಮಾರ್ಪಟ್ಟ ಭಾವನೆಯನ್ನು ಮತ್ತೆ ಹಿಂದಿನ ಎರಕಕ್ಕೆ ಹೊಯ್ಯಬೇಕು. 'ಯದ್ಭಾವಂ ತದ್ಭವತಿ' ತಂಗಿ ಎಂದು ತಿಳಿದರೆ ತಂಗಿ,

ಹೆಂಡತಿ ಎಂದರೆ ಹೆಂಡತಿ. ಇದು ನಿನ್ನ ಅನುಭವಕ್ಕೇ ಬಂದಿದೆಯಲ್ಲವೆ ? ”

“ ನನ್ನ ಇಂದಿನ ಅನುಭವದ ಸುಖ ಸ್ಥಿರವಾಗಲಿ ಎಂದು ನನ್ನ ಬಯಕೆ — ನಿಮ್ಮ ಆಶೀರ್ವಾದವಿದ್ದರೆ.’’

“ ಇಲ್ಲ. ನನ್ನ ಆಶೀರ್ವಾದವಿಲ್ಲ.’’

“ ಹಾಗಾದರೆ ಈ ಆಶ್ರಮದಲ್ಲಿ ನೀವಿರಬಹುದು. ನಾನು ಸಾಧನೆಯೂ ಹೊರಡುತ್ತೇವೆ.’’ — ಎಂದು ಸುಂದರ ಮೇಲಕ್ಕೆದ್ದ.

‘‘ ಸುಂದರಾ, ಒಂದು ವೇಳೆ ಅವಳು ನಿನ್ನ ತಂಗಿಯೇ ಆಗಿದ್ದ ಪಕ್ಷದಲ್ಲಿ ಹಾಗೆ ತಿಳಿದೂ ಅವಳನ್ನು ಮದುವೆಯಾಗುವೆಯಾ ? ’’

‘‘ ಎಂದರೆ ಒಡಹುಟ್ಟಿದವಳೆಂದೇ ! ”

‘‘ ಹೆಚ್ಚುಕಡಮೆ — ಹಾಗೆಯೇ.”

‘‘ ಹಾಗಲ್ಲವೆಂದು ನಾನು ಬಲ್ಲೆ.’’

‘‘ ಹಾಗೆಂದು ನಾನು ಹೇಳುತ್ತೇನೆ.’’

“ ನೀವು ಹೇಗೆ ಬಲ್ಲಿರಿ ? ’’

“ ಈ ವಿಷಯ ನನಗಿಂತಲೂ ಹೆಚ್ಚಾಗಿ ಬೇರೆ ಯಾರೂ ಅರಿಯರು. ”

‘‘ ಚೆನ್ನಿ — ಮಾದನ ಮಗಳು — ಸಾದನೆ — ನನ್ನ ತಂಗಿ ! ನನಗೆ ಅರ್ಥವಾಗುವುದಿಲ್ಲ ! ”

‘‘ ಮಾದನ ಮಗಳಲ್ಲ — ನಿನ್ನ ಚಿಕ್ಕಪ್ಪನ ಮಗಳು.’’

“ ನನ್ನ ಚಿಕ್ಕಪ್ಪ — ಸೂರಪ್ಪನ ಮಗಳೆ ? ’’

‘‘ ಹೌದು. ಸೂರಪ್ಪನ ಮಗಳು. ಆಮೇಲೆ ಮಾದನ ಮಗಳು. ’’

‘‘ ಇದು ನಿಜ ? ’’

‘‘ ಶ್ರೀರಾಮನ ಸಾಕ್ಷಿಯಾಗಿ ನಿಜ.”

ಸುಂದರ ಮೌನವಾಗಿ ಕುಳಿತ.

೮೧

‘‘ ನಿನ್ನ ಚಿಕ್ಕಪ್ಪ ಸೂರ್ಯನಾರಾಯಣನನ್ನು ಕಂಡರೆ ನಿನ್ನ ತಂದೆಗೆ ತುಂಬ ವಿಶ್ವಾಸ. ನಿನ್ನ ಅಜ್ಜ ಸತ್ತಮೇಲೆ ಅವನ ಮದುವೆಯನ್ನು ಮಾಡಿದವರೂ ನಿನ್ನ ತಂದೆಯೆ. ಅವನ ಹೆಂಡತಿ ಬಹು ಚೆಲುವೆ. ಮನೆಗೆ

ಬಂದ ವರ್ಷದಲ್ಲಿ ಬಸುರಿಯಾದಳು. ಆಗ ಊರಿನಲ್ಲಿ ಪ್ಲೇಗು ಕಾಲಿಕ್ಕಿತು. ಎಲ್ಲರೂ ಊರು ಬಿಟ್ಟು ಊರ ಹೊರಗೆ 'ಷೆಡ್ಡು'ಗಳನ್ನು ಹಾಕಿ ಅಲ್ಲಿ ವಾಸಮಾಡತೊಡಗಿದರು. ನಿನ್ನ ತಂದೆ ಊರ ಹೊರಗೆ ಷೆಡ್ಡು ಹಾಕದೆ ತೋಟದ ಒಂದು ಮೂಲೆಯಲ್ಲಿ, ಗಿಡಮರಗಳು ಹೆಚ್ಚಾಗಿಲ್ಲದೆ ಬಿಟ್ಟಾಗಿದ್ದ ಒಂದು ಕಡೆ ದೊಡ್ಡ ಗುಡಿಸಿಲು ಹಾಕಿಸಿ ಸಂಸಾರವೆಲ್ಲ ಅಲ್ಲಿಯೇ ವಾಸ ಮಾಡತೊಡಗಿತು. ಪ್ಲೇಗು ಅಲ್ಲಿಗೂ ಬೆಂಬತ್ತಿ, ಬಸುರಿಯಾಗಿದ್ದ ನಿನ್ನ ಚಿಕ್ಕಮ್ಮನಿಗೆ ತಗುಲಿತು. ಎಲ್ಲರಿಗೂ ಸೋಂಕು ತಗಲೀತೆಂದು ಹೆದರಿ, ನಿನ್ನ ತಂದೆ ಕೊಪ್ಪಲಿನಲ್ಲಿ ಕಾಳೇಗೌಡನ ಗುಡಿಸಿಲ ಪಕ್ಕದಲ್ಲಿ ಗುಡಿಸಿಲು ಹಾಕಿಸಿದರು. ತೋಟದಲ್ಲಿ ನಿನ್ನ ಚಿಕ್ಕಪ್ಪ ಅವನ ಹೆಂಡತಿ ಇಬ್ಬರೇ ಉಳಿದರು. ನಿನ್ನ ತಂದೆಯೂ ಒಂದೆರಡು ದಿನ ಜೊತೆಗಿದ್ದರು. ಆದರೆ ನಿನ್ನ ಚಿಕ್ಕಪ್ಪನಿಗೆ ಅದು ಸರಿಬೀಳಲಿಲ್ಲ. 'ಸತ್ತರೆ ನನ್ನ ಹೆಂಡತಿಯ ಜೊತೆ ನಾನೊಬ್ಬನೇ ಸಾಯುತ್ತೇನೆ. ನೀವು ಮಕ್ಕಳೊಂದಿಗರೆ. ನೀವು ಇಲ್ಲಿರಬೇಡಿ' ಎಂದು ಬಲಾತ್ಕಾರಮಾಡಿ ನಿನ್ನ ತಂದೆಯನ್ನು ಅಲ್ಲಿ ಉಳಿದುಕೊಳ್ಳಲು ಅವಕಾಶಕೊಡಲಿಲ್ಲ. ಆದರೆ, ಎರಡು ಹೊತ್ತೂ ಅವರೇ ಸೂರಪ್ಪನಿಗೆ ಊಟ, ಅವನ ಹೆಂಡತಿಗೆ ಗಂಜಿ ಹಾಲು ಕಾಫಿ ಇವನ್ನು ತಂದು ಕೊಡುತ್ತಿದ್ದರು.

"ಗಂಡಸೇ ಆದರೂ ಹೆಂಡತಿಯ ಉಪಚಾರ ಮಾಡುವುದು ಕಷ್ಟ. ರೋಗಿಯ ಉಪಚಾರಕ್ಕೆ ಹೆಣ್ಣು ದಿಕ್ಕಿಲ್ಲವೆಂದು ಕಾಳೇಗೌಡನಿಗೆ ಗೊತ್ತಾಗಿ, ಗಂಡ ಸತ್ತು ಮನೆಯಲ್ಲಿಯೇ ಇದ್ದ ತನ್ನ ಅತ್ತಿಗೆ ಓಬವ್ವನನ್ನು ತೋಟದ ಗುಡಿಸಿಲಿಗೆ ಸಹಾಯಕ್ಕೆ ಕಳಿಸಬೇಕೆಂದು ನಿನ್ನ ತಂದೆಯೊಡನೆ ಆಲೋಚಿಸಿದ. ಆದರೆ ಕೇಳಲು ಮನಸ್ಸು ಬಾರದು. ಅತ್ತಿಗೆಯೆಂದರೆ ಅವನಿಗೆ ತುಂಬ ಭಕ್ತಿ, ಗೌರವ, ಅಕ್ಕರೆ. ಆ ಅತ್ತಿಗೆಗೂ ಆ ಮನೆಯಲ್ಲಿ ಸುಖವಿರಲಿಲ್ಲ. ಓರೆಗಿತ್ತಿಯ ಸಂಶಯ, ನಿಂದೆ, ನಿಷ್ಠುರ ವರ್ತನೆಗಳಿಗೆ ಗುರಿಯಾಗಿದ್ದಳು. ಧಣಿಗಳ ಮನೆ ಹೆಂಡಿರ ಸೇವೆ; ಸೇವೆಯಲ್ಲಿಯಾದರೂ ತನ್ನ ಪರಾಧೀನದ ಬಾಳು ಮುಗಿಯಲಿ, ಸಾವು ಬಂದರೆ ಬರಲಿ ಎಂದು ಯೋಚಿಸಿರಬೇಕು ಅವಳು. ಸಂದರ್ಭವನ್ನು ತಿಳಿದು, ತೋಟದ ಗುಡಿಸಿಲಿಗೆ ತಾನಾಗಿ ಬಂದು, ರೋಗಿಯ ಸೇವೆ ಉಪಚಾರಗಳಿಗೆ ನಿಂತಳು.

" ಸೂರಪ್ಪನಿಗೆ ಓಬವ್ವನಲ್ಲಿ ಕೃತಜ್ಞತಾಭಾವ ಮೂಡಿತು. ಒಂದು ಹೆಣ್ಣಿನ ಸೇವೆಯಲ್ಲಿ, ಒಂದು ಗಂಡು ಒಂದು ಹೆಣ್ಣಿನ ಮನಸ್ಸು ಅದು ಹೇಗೋ ಒಂದುಗೂಡಿತು. ತನ್ನ ಹೆಂಡತಿಗೆ ಓಬವ್ವ ನಿಸ್ವಾರ್ಥಳಾಗಿ ಮಾಡುತ್ತ ಇದ್ದ ಸೇವೆಯನ್ನು ಸೂರಪ್ಪ ತುಂಬ ಮೆಚ್ಚಿಕೊಂಡ. ತನ್ನ ಅತ್ತಿಗೆಯೇ ಆದರೂ ಹೀಗೆ ಮಾಡುತ್ತಿರಲಿಲ್ಲವೇನೋ ಎಂದುಕೊಂಡ. ಸೂರಪ್ಪನ ಹೆಂಡತಿಯ ಸೇವೆಯಲ್ಲಿ, ಅವನೂ ಓಬವ್ವನೂ ಒಬ್ಬರನ್ನೊಬ್ಬರು ಮಾತಾಡಿಸುತ್ತ ಸೋಕಿಕೊಳ್ಳುತ್ತ ಇರುವುದು ಅನಿವಾರ್ಯವಾಯಿತು. ಓಬವ್ವ ಸೂರಪ್ಪನಿಗೆ ಆಗಾಗ್ಗೆ ಮರುಕದಿಂದ ಸಮಾಧಾನ ಹೇಳುವುಳು. ರೋಗಿಗೆ ಧೈರ್ಯ ಹೇಳುವುಳು. ಇಬ್ಬರ ಸೇವೆಯೂ ವ್ಯರ್ಥವಾಗುವ ಕಾಲ ಬಂತು. ಸೂರಪ್ಪನ ಹೆಂಡತಿ ತೀರಿಹೋದಳು.

" ಸೂರಪ್ಪನ ಹೆಂಡತಿ ತೀರಿಹೋದ ಮೇಲೆ, ಅವನೇನೋ ಕೊಪ್ಪಲ ಗುಡಿಸಿಲಿಗೆ ಹಿಂದಿರುಗಿ ಹೋದ. ಓಬವ್ವ ಕಾಳೆಗೌಡನ ಗುಡಿಸಿಲಿಗೆ ಹಿಂದಿರುಗಲು ಒಪ್ಪಲಿಲ್ಲ. ತೋಟದಲ್ಲಿ ಅಜ್ಞಾತವಾಸ ಮಾಡತೊಡಗಿದಳು. ಕಾಳೇಗೌಡ ತನ್ನ ಹೆಂಡತಿಗೆ ಕಾಣದಂತೆ ಓಬವ್ವನಿಗೆ ಊಟ ಉಪಚಾರಕ್ಕೆ ಏರ್ಪಾಡು ಮಾಡುವುದು ಕಷ್ಟಕ್ಕೆ ಬಂತು. ಹೆಂಡತಿ ಎಂದರೆ ಹೆದರಿಕೆ ಕೂಡಿದ ಪ್ರೇಮ, ಅತ್ತಿಗೆ ಎಂದರೆ ಅಕ್ಕರೆ. ಕಾಳೇಗೌಡನ ಮನಸ್ಸೆ ಅಂಥಾದ್ದು ; ಬಹು ಮೃದು. ತನ್ನ ಇಕ್ಕಟ್ಟಿನ ಸ್ಥಿತಿಯನ್ನು ಸೂರಪ್ಪನಿಗೆ ತಿಳಿಸಿದ. ಸೂರಪ್ಪ 'ನಾನು ಇದಕ್ಕೆ ಏರ್ಪಾಡು ಮಾಡುತ್ತೇನೆ. ನೀನು ಯೋಚನೆ ಮಾಡಬೇಡ' ಎಂದು ಹೇಳಿ, ಓಬವ್ವ ತೋಟದಲ್ಲಿಯೇ ನೆಮ್ಮದಿಯಿಂದ ಇರಲು ಏರ್ಪಾಡು ಮಾಡಿದ. ಸೂರಪ್ಪ ಓಬವ್ವನಿಗೆ ಮಾಡುತ್ತಿದ್ದ ಸಹಾಯ ನಿನ್ನ ತಂದೆಯ ಗಮನಕ್ಕೆ ಬಾರದೆ ಇರಲಿಲ್ಲ ; ಅವರದೂ ಪರೋಪಕಾರ ಬುದ್ಧಿ ; ಸುಮ್ಮನಿದ್ದರು.

" ಹೆಂಡತಿ ಹೋದ ಕೆಲವು ಕಾಲ ಸೂರಪ್ಪ ಬಹು ಮಂಕಾಗಿದ್ದ. ಅವನ ಹೆಂಡತಿ ಒಳ್ಳೆ ಚೆಲುವೆ. ಹೊರ ರೂಪೇ ಪ್ರೇಮಕ್ಕೆ ಅನೇಕ ವೇಳೆ ಮೊದಲ ಆಸರೆ. ಅವನ ಪ್ರೇಮ ಹೆಂಡತಿಯಲ್ಲಿ ದೃಢಗೊಳ್ಳುವ ಮೊದಲೇ ಅವಳು ತೀರಿ ಹೋದಳು. ಆ ಚೆಲುವಿನ ಎಡೆಯಲ್ಲಿ ಅದಕ್ಕಿಂತ ಹೆಚ್ಚಿನ ಚೆಲುವು ಓಬವ್ವೆಯಲ್ಲಿ ಅವನಿಗೆ ಕಾಣಲು ಮೊದಲಾದಾಗ, ಅವನ ಮನಸ್ಸೂ ಅತ್ತ

ಹರಿಯುತೊಡಗಿತು. ಸೂರಪ್ಪ ಓಬವ್ವನ ಗುಡಿಸಿಲಿಗೆ ಹೋಗಿ ಬರುವುದು ಹೆಚ್ಚಾಯಿತು. ಓಬವ್ವನಿಗೂ ಸೂರಪ್ಪನಲ್ಲಿ ಕೃತಜ್ಞತಾಭಾವ ಮೂಡಿತ್ತು; ತನ್ನನ್ನು ಓರಗಿತ್ತಿಯ ಕ್ರೂರ ದೃಷ್ಟಿಯಿಂದ ಪಾರುಮಾಡಿದ್ದನಲ್ಲಾ ಎಂದು. ಇವನು ಹೆಂಡತಿ ಇಲ್ಲದವನು; ಅವಳು ಗಂಡ ಇಲ್ಲದವಳು. ವಿಧಿ ಒಡ್ಡಿದ ಮೋಹಜಾಲಕ್ಕೆ ಇಬ್ಬರೂ ಮುಂದುಗಾಣದೆ ಬಿದ್ದರು.

"ಸೂರಪ್ಪ ಓಬವ್ವೆಯರ ಸಂಬಂಧ ತೋಟದ ಆಳುಗಳ ಗಮನಕ್ಕೆ ಬಂತು; ಅವರಿಂದ ಊರಿಗೂ ಹರಡಿತು. ಕೆಲವರು ಒಕ್ಕಲುಮಕ್ಕಳು ಕಾಳೇಗೌಡನನ್ನು 'ಅತ್ತಿಗೆಯನ್ನು ಅಟ್ಟಿದವ' ಎಂದು ದೂರಲು ಮೊದಲು ಮಾಡಿದರು. ಒಬ್ಬಿಬ್ಬರು ನಿನ್ನ ತಂದೆಗೂ ಹೇಳಿದರು; 'ನಿಮ್ಮ ತಮ್ಮನಿಗೆ ಬುದ್ಧಿ ಹೇಳಿ' ಎಂದರು. 'ಹೀಗೆ ವಿಚಾರ' ಎಂದು ನಿನ್ನ ತಂದೆ ತಮ್ಮನಿಗೆ ಹೇಳಿದರು 'ಊರಿನವರ ಆಡಿಕೆಯ ಮಾತು ಕೇಳಿ ನಮ್ಮ ಆಶ್ರಯ ಬೇಡಿದ, ಮನೆ ತಪ್ಪಿದ ದಿಕ್ಕಿಲ್ಲದ ಹೆಂಗಸನ್ನು ಅಟ್ಟಿಬಿಡುವುದಕ್ಕಾಗುತ್ತೆಯೆ? ಸಾವಿರ ಜನ ಸಾವಿರ ಹೇಳಿಕೊಳ್ಳಲಿ, ಅದು ಸಾಧ್ಯವಿಲ್ಲ. ನಮ್ಮ ಮನಸ್ಸು ಪರಿಶುದ್ಧವಾಗಿದ್ದರೆ ಸರಿ' ಎಂದು ಸೂರಪ್ಪ ಅಣ್ಣನಿಗೆ ಸಮಾಧಾನ ಹೇಳಿದ. ಅಣ್ಣ ಸುಮ್ಮನಾದರು. ಸೂರಪ್ಪನಿಗೂ ಕೆಟ್ಟ ಧೈರ್ಯ ಬಂತು. ಬಹು ಮಟ್ಟಿಗೆ ತೋಟದ ಗುಡಿಸಿಲಿನಲ್ಲಿಯೇ ವಾಸಮಾಡಲು ಮೊದಲು ಮಾಡಿಬಿಟ್ಟ. ತಲೆಯೆತ್ತಿಕೊಂಡೇ ಊರಿನಲ್ಲಿ ತಿರುಗಾಡಲು ಮೊದಲುಮಾಡಿದ. ಈ ಭಂಡತನ ಕಂಡು ಆಗದವರು ಕೆಲವರು ಸೂರಪ್ಪನ ವಿಚಾರದಲ್ಲಿ ಕಥೆ ಕಟ್ಟತೊಡಗಿದರು; ಸೂರಪ್ಪ ಜೂಜಾಡುತ್ತಾನೆ, ಕುಡಿಯಲು ಷುರು ಮಾಡಿದ್ದಾನೆ, ಹಾಸನದಲ್ಲಿ ಒಬ್ಬಳನ್ನು ಇಟ್ಟುಕೊಂಡಿದ್ದಾನೆ, ಪೇಟೆಯಲ್ಲಿ ಒಬ್ಬಳು ತುರುಕರವಳನ್ನು ಇಟ್ಟುಕೊಂಡಿದ್ದಾನೆ — ಹೀಗೆಲ್ಲ ಆಡಿಕೊಳ್ಳಲು ಮೊದಲುಮಾಡಿದರು.

"ಈ ಮಧ್ಯೆ ಓಬವ್ವ ಬಸುರಿಯಾದಳು. ಈಗಲೀಗ ಸೂರಪ್ಪನಿಗೂ ಓಬವ್ವನಿಗೂ ನಿಜವಾಗಿ ಕಷ್ಟಕ್ಕಿಟ್ಟುಕೊಂಡಿತು. 'ನಾನು ಹೊಳೆಗೆ ಬಿದ್ದು ಸಾಯುತ್ತೇನೆ' ಎಂದು ಹೇಳತೊಡಗಿದಳು ಓಬವ್ವ. 'ನನಗಾಗಿ ಬಸುರು ಹೊತ್ತಿದೀಯೆ. ನನಗಾಗಿ ಬದುಕಿರಬೇಕು' ಎಂದು ಸೂರಪ್ಪ ಓಬವ್ವನನ್ನು ಒಲಿಸಿ ಒಪ್ಪಿಸಿದ. ಈ ಸಂಕಟದಿಂದ ಪಾರಾಗಲು, ಸೂರಪ್ಪ ಒಂದು

ಉಪಾಯ ಹೂಡಿದ. ಒಂದು ಸಂಜೆ ಒಂದು ದೊಡ್ಡ ಕಲ್ಲನ್ನು ಎತ್ತಿ ತಂದು ಮಾದನ ಗುಡಿಸಲ ಪಕ್ಕದ ಕೊಳದಲ್ಲಿ ಎತ್ತಿ ಹಾಕಿದ 'ಧುಡಂ' ಎಂಬ ಸದ್ದನ್ನು ಕೇಳಿ ಮಾದ ಗಾಬರಿಯಾಗಿ ಎದ್ದು ಬಂದ. ಸುತ್ತ ಸುಳಿದು ನೋಡಿದ. ಓಬವ್ವನ ಗುಡಿಸಿಲಿಗೆ ಹೋಗಿ ನೋಡಿದ. ಓಬವ್ವ ಅಲ್ಲಿ ಇರಲಿಲ್ಲ. ಓಬವ್ವನೇ ಕೊಳಕ್ಕೆ ಬಿದ್ದಳು ಎಂದು ನಿಶ್ಚಯಿಸಿ, ಕೃಷ್ಣಪ್ಪನವರ ಮನೆಗೆ ಸುದ್ದಿ ಮುಟ್ಟಿಸಲು ಹೋದ. ಸೂರಪ್ಪ ಓಬವ್ವನನ್ನು ಮರೆಯಲ್ಲಿ ನಿಲ್ಲಿಸಿದ್ದು, ಈಗ ಅವಳನ್ನು ಮತ್ತೆ ಗುಡಿಸಿಲಿಗೆ ಕಳಿಸಿದ. ತಾನು ಬೇಗನೆ ಮಾದನಿಗಿಂತ ಮುಂಚಿತವಾಗಿ ಮನೆಗೆ ಹೋಗಿ ಬಾಗಿಲಿನಲ್ಲಿ ನಿಂತ. ಮಾದ ಬಂದು ಸುದ್ದಿ ಹೇಳಿದ ಕೂಡಲೆ ಅವನ ಜೊತೆ ಮತ್ತೆ ತೋಟಕ್ಕೆ ಬಂದ. ಮಾದ ಸೂರಪ್ಪನನ್ನು ಕೊಳದ ಬಳಿಗೆ ಕರೆದುಕೊಂಡು, ತಾನು ಕೇಳಿದ ಸದ್ದು, ಗುಡಿಸಿಲಿಗೆ ಹೋಗಿ ನೋಡಿದಾಗ, ಅಲ್ಲಿ ಓಬವ್ವ ಇಲ್ಲದೆ ಹೋದದ್ದು ತಿಳಿಸಿದ. ಸೂರಪ್ಪ ಮಾದನನ್ನು ಕರೆದುಕೊಂಡು ಗುಡಿಸಿಲ ಬಳಿಗೆ ಹೋದ. ಆಗ ಮಸುಗತ್ತಲೆ. ಗುಡಿಸಿಲ ಬಳಿ ಓಬವ್ವ ನಿಂತಿದ್ದಳು. ಮಾದನ ಮಂಜುಗಣ್ಣಿಗೆ ಅವಳ ಆಕೃತಿ ತುಂಬ ಅಸ್ಪಷ್ಟವಾಗಿ ಕಾಣುತ್ತಿತ್ತು. "ಲೋ, ಮಾದ! ಅಲ್ಲಿ ನೋಡು. ಓಬವ್ವನ ಪಿಶಾಚ ಇರಬೇಕು. ನಡಿ ನಡಿ, ಗುಡಿಸಿಲು ಸೇರಿಕೋ" ಎಂದು ಕೂಗಿಕೊಂಡ. ಬಡ ಮಾದ, "ಹೌದು ನನ್ನೊಡೆಯಾ! ಆಗಲೇ ಪಿಶಾಚಿಯಾಗಿಬಿಟ್ಟಿದಾಳೆ!" ಎಂದು ತನ್ನ ಗುಡಿಸಿಲೆಡೆಗೆ ಧಾವಿಸಿದ. ಅವನು ತನ್ನ ಗುಡಿಸಿಲು ಬಿಟ್ಟು ಮೂರು ನಾಲ್ಕು ದಿನ ಹೊರಕ್ಕೇ ಬರಲಿಲ್ಲ.

"ಮೂರು ದಿನ ಕಳೆದರೂ ಹೆಣ ತೇಲಿ ಬರಲಿಲ್ಲ. ಓಬವ್ವ ಎಲ್ಲೋ ಕೊರಳಿಗೆ ಕಲ್ಲು ಗುಂಡು ಕಟ್ಟಿಕೊಂಡು ಕೊಳದಲ್ಲಿ ಮುಳುಗಿದ್ದಾಳೆ. ಮಾರಿಗೆ ಹರಕೆ ಮಾಡಿಕೋ, ಅವಳ ಪಿಶಾಚ ನಿನ್ನನ್ನು ಏನೂ ಮಾಡುವುದಿಲ್ಲ' ಎಂದು ಸೂರಪ್ಪ ಮಾದನಿಗೆ ಅಭಯ ನೀಡಿದ. ಮಾದ ಕೋಳಿ ಜೊತೆ ಒಪ್ಪಿಸುವುದಾಗಿ ಮಾರಮ್ಮನಿಗೆ ಹರಕೆ ಹೊತ್ತ.

"ಓಬವ್ವ ಕೃಷ್ಣಪ್ಪನವರ ಕೊಳಕ್ಕೆ ಕಲ್ಲು ಕಟ್ಟಿಕೊಂಡು ಬಿದ್ದು ಸತ್ತಳು, ಪಿಶಾಚಿಯಾಗಿದ್ದಾಳೆ ಎಂಬ ಸುದ್ದಿ ಮಾದನಿಂದ ತೋಟದ ಆಳುಗಳಿಗೆ, ಆಳುಗಳಿಂದ ರೈತರಿಗೆ, ರೈತರಿಂದ ಊರಿನವರಿಗೆ ಹರಡಿತು.

ತೋಟದ ಆಳುಗಳು ಕೂಡ ಅತ್ತ ಸುಳಿಯಲು ಹೆದರತೊಡಗಿದರು; ಸಂಜೆಗೆ ಮುಂಚೆಯೇ ಕೆಲಸ ತೀರಿಸಿಕೊಂಡು ಹೊರಟುಬಿಡುತ್ತಿದ್ದರು. ಪಿಶಾಚವನ್ನು ನಂಬದ ಇಬ್ಬರು ಮೂವರು ಎದೆಗಾರಿಕೆಯವರು ತೋಟಕ್ಕೆ ಬಂದು ಪರೀಕ್ಷೆ ಮಾಡತೊಡಗಿ, ಬದುಕಿದ್ದ ಓಬವ್ವನ ಸುಳಿದಾಟ ಕಂಡು ಬೆದರಿ ಓಡಿ ಹೋಗಿ, ಪಿಶಾಚವನ್ನು ತಾವು ಕಣ್ಣಾರೆ ಕಂಡುದಾಗಿ ಸಾರ ತೊಡಗಿದರು. ಕೃಷ್ಣಪ್ಪನವರೂ ಈ ಕಥೆ ನಂಬಿದರು; ತೋಟದ ಕಡೆ ಸುಳಿಯುವುದನ್ನು ಬಿಟ್ಟರು; ತಮ್ಮನನ್ನು ಕುರಿತ ಆಡಿಕೆ ನಿಲ್ಲುವುದೆಂದು ಸಮಾಧಾನಗೊಂಡರು.

"ಸೂರಪ್ಪ ಎರಡಕ್ಕೆ ಮೂರಕ್ಕೆ ಮಾದನ ಕೈಗೆ ನಾಲ್ಕಾಣೆ ಎಂಟಾಣೆ ಹಾಕುತ್ತ ಬಂದ. ಬೆಳಗ್ಗೆ ಸಂಜೆ ಎನ್ನದೆ ಅವನ ಕುಡಿತ ಹೆಚ್ಚಾಗಿ, ತೋಟ ದಲ್ಲಿ ಏನು ನಡೆಯುತ್ತ ಇದೆ ಎಂಬ ಪ್ರಜ್ಞೆಯೇ ಇಲ್ಲದೆ, 'ಓಬವ್ವನ ಪಿಶಾಚ ನನ್ನನ್ನು ಏನೂ ಮಾಡುವುದಿಲ್ಲ' ಎಂಬ ನೆಮ್ಮದಿಯ ನಿರ್ಧಾರಕ್ಕೆ ಬಂದ. ಸೂರಪ್ಪ ಹಿಂದಿನಿಂದ ಓಬವ್ವನ ಗುಡಿಸಿಲಿಗೆ ಬಂದು ಅವಳ ಸಹವಾಸದಲ್ಲಿ ಸ್ವರ್ಗಸುಖವನ್ನು ಕಾಣುತ್ತಿದ್ದ.

"ಓಬವ್ವ ಹೆಣ್ಣು ಮಗು ಹಡೆದಳು. ಅವಳಿಗೂ ಸೂರಪ್ಪನಿಗೂ ದಿಕ್ಕು ಕಾಣದಾಯಿತು. ಮಗುವಿನೊಂದಿಗೆ ಹೊಳೆಗೆ ಬೀಳುವುದಾಗಿ ಓಬವ್ವ ದುಃಖದಿಂದ ಹೇಳತೊಡಗಿದಳು. ಆದದ್ದಾಗಲಿ. ಈ ಮಗು ನಿನ್ನದು ಎಷ್ಟೋ ಅಷ್ಟೇ ನನ್ನದೂ ಹೌದು. ಅದರ ಸಂರಕ್ಷಣೆ ನನ್ನ ಭಾರ. ನಾವು ಮಾಡಿದ ತಪ್ಪಿಗೆ ಹಸುಳೆ ಹೊಣೆಯಲ್ಲ ಅದರ ಜೀವ ತೆಗೆದೀಯೆ, ಜೋಕೆ!' ಎಂದು ಸೂರಪ್ಪ ಹೇಳಲು ಅವಳು ಸುಮ್ಮನಾದಳು.

"ಮಗುವಿನ ಅಳುವಿನ ಶಬ್ದ ತೋಟದ ಆಳುಗಳಲ್ಲಿ ಸಂದೇಹ ಹುಟ್ಟಿಸಿತು. 'ಪಿಶಾಚ ಮಗು ಸಾಕುತ್ತದೆಯೇ?' ಎಂದು ಆಶ್ಚರ್ಯ ಗೊಂಡರು. ಸೂರಪ್ಪ ತೋಟದವರಿಗೆ ಹಲವಾರು ಸುಳ್ಳು ಪಿಶಾಚದ ಕಥೆಗಳನ್ನು ಹೇಳಿ, ಪಿಶಾಚ ಮಗು ಸಾಕುವುದು ದಿಟ ಎಂಬ ನಂಬಿಕೆ ಹುಟ್ಟಿಸಿದನು.

"ಒಂದು ದಿನ ನಡುರಾತ್ರಿಯಲ್ಲಿ ಓಬ್ಬವ್ವ ತಿಂಗಳ ಮಗುವನ್ನು ಮಾದನ ಗುಡಿಸಿಲಿನಲ್ಲಿ ಮಲಗಿಸಿ ಕಣ್ಮರೆಯಾದಳು. ಬಹುಶಃ ಅವಳು

ಹೊಳೆಯ ಪಾಲಾದಳೆಂದೇ ಕಾಣುತ್ತೆ. ಸೂರಪ್ಪ ಹಾಗೆಯೇ ತೀರ್ಮಾನಿಸಿ ಕೊಂಡು, ಹೆಂಡತಿ ಹೋದದ್ದಕ್ಕಿಂತ ಹೆಚ್ಚಾಗಿ ಓಬವ್ವನಿಗಾಗಿ ದುಃಖಿಸಿದ.

"ಬೆಳಗ್ಗೆ ಎದ್ದ ಕೂಡಲೆ ಮಾದ ತನ್ನ ಗುಡಿಸಿಲಿನಲ್ಲಿ ಹರಕು ಚಿಂದಿಯ ಮೇಲೆ ಒಂದು ಮಗು ಮಲಗಿದ್ದುದನ್ನ ಕಂಡು ಆಶ್ಚರ್ಯಪಟ್ಟ, ದಿಗಿಲುಪಟ್ಟ. ಅವನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಆ ಮಗು ಓಬವ್ವನ ಪಿಶಾಚ ತಂದು ಬಿಟ್ಟು ಹೋಗಿರಬಹುದು ಎಂದು ಅವನ ಭಯ, ಸಂದೇಹ. ಅದನ್ನು ಮುಟ್ಟಲು ಹೆದರಿಕೆ. ಹೇಗಾದರೂ ಆಗಲೆಂದು ಮಧ್ಯಾಹ್ನದ ಮೇಲೆ ಮನೆಗೆ ಹೋಗಿ ಸೂರಪ್ಪನಿಗೆ ಹೇಳಿದ. ಸೂರಪ್ಪ ಅವನೊಂದಿಗೆ ತೋಟಕ್ಕೆ ಬಂದು ಮಗುವನ್ನು ನೋಡಿದ. ಓಬವ್ವನ ಮಗು, ತನ್ನ ಮಗು. ಓಬವ್ವ ಗುಡಿಸಿಲಿನಲ್ಲಿ ಇರಲಿಲ್ಲ. ಅವಳು ತಾನು ಹೇಳುತ್ತಿದ್ದಂತೆ ಹೊಳೆಯ ಪಾಲಾದಳೆಂದು ಊಹಿಸಿದ.

"ಸೂರಪ್ಪ ಪೇಚಾಟಕ್ಕೆ ಸಿಕ್ಕಿದ. ತನ್ನ ಮಗು. ಮನೆಗೆ ಕರೆದು ಕೊಂಡು ಹೋಗುವುದಕ್ಕಿಲ್ಲ. ಯೋಚನೆ ಮಾಡಿ, ಪಿಶಾಚ ಮಗುವನ್ನು ತಂದು ಬಿಡುವುದು ಎಲ್ಲಿಯೂ ನಡೆದಿಲ್ಲವೆಂದು ಮಾದನಿಗೆ ನಂಬಿಕೆ ಬರುವಂತೆ ಹೇಳಿ, ಅದನ್ನು ಅವನೇ ಸಾಕಬೇಕೆಂದು ಕಟ್ಟುಮಾಡಿದ. ಯಾರಾದರೂ ಕೇಳಿದರೆ, ನಿನ್ನ ಸೋದರಮಾವನ ಹೆಂಡತಿ ಹಡೆದು ಸತ್ತಿದ್ದಳು ಅಂತ ಹೇಳುತ್ತಾ ಇದ್ದೆಯಲ್ಲ ನನ್ನ ಕೂಡ, 'ಅವಳ ಮಗು, ಈಗ ಹಡೆದು ತಿಂಗಳಾಗಿತ್ತು, ನನಗೆ ಕೊಟ್ಟರು' ಅಂತ ಹೇಳು ಎಂದು ಹೇಳಿಕೊಟ್ಟ. ಈ ಸಂಗತಿಯನ್ನು ಕೇಳಿದವರಿಗೆಲ್ಲ ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿ ಹೇಳುತ್ತ ಬಂದ. ನಿನ್ನ ತಂದೆಗೂ ಇದೊಂದೂ ಮೊದಲು ತಿಳಿಯದು.

"ಸೂರಪ್ಪನೇ ತೋಟಕ್ಕೆ ಮೂರು ಹೊತ್ತೂ ಬಂದು ಮಗುವಿಗೆ ಹಾಲು ಕುಡಿಸಿ ಹೋಗುತ್ತಿದ್ದ. ಮಗುವಿಗೆ ಒಂದು ವರ್ಷವಾಗುತ್ತ ಬಂತು. ಮಗು ನೋಡುವುದಕ್ಕೆ ಬಹು ಮುದ್ದಾಗಿತ್ತು, ಚೆನ್ನಾಗಿತ್ತು. ಇದನ್ನ ಚೆನ್ನಿ ಎಂದು ಕರೆಯಬೇಕೆಂದು ಮಾದನಿಗೆ ಹೇಳಿದ. ಹೆಂಡತಿ ತೀರಿ, ಓಬವ್ವೆಯೂ ತೀರಿ, ತನ್ನ ಮಗುವನ್ನು ತಾನು ಸಾಕುವುದಕ್ಕಿಲ್ಲದೆ, ಜೀವನ ದಲ್ಲಿ ತುಂಬ ಜುಗುಪ್ಸೆಗೊಂಡ. ಖಿನ್ನವಾದ ಮನಸ್ಸು ಊರಿನ ಜೂಜಿನ ಕಟ್ಟೆಗೆ ಎಳೆಯಿತು. ಆರು ತಿಂಗಳಲ್ಲಿ ಸಾವಿರಾರು ರೂಪಾಯಿ ಸಾಲ

ನಾಯಿತು. ಸೂರಪ್ಪನಿಗೆ ಇದ್ದಕ್ಕಿದ್ದ ಹಾಗೆ ಆ ಬಗೆಯ ಜೀವನದಲ್ಲಿಯೂ ತಿರಸ್ಕಾರ ಹುಟ್ಟಿತು. ಒಂದು ದಿನ ಅಣ್ಣನ ಪಾದಸನ್ನಿಧಿಯಲ್ಲಿ ತನ್ನ ದುರ್ನಡತೆಯನ್ನೆಲ್ಲ ಒಪ್ಪಿಕೊಂಡು, ಅವರ ಕ್ಷಮಾಯಾಚನೆ ಮಾಡಿ, ಸಾಲ ತೀರಿಸುವುದಕ್ಕೂ, ತಾನು ಹಾಸನಕ್ಕೆ ಮೈಸೂರಿಗೋ ಹೋಗಿ ಏನಾದರೂ ವ್ಯಾಪಾರ ಮಾಡಬೇಕೆಂದಿರುವುದರಿಂದ ಅದಕ್ಕೂ ಹಣ ಬೇಕಾಗಿದೆಯೆಂದು ಕೇಳಿದ. 'ನಿನ್ನ ಪಾಲಿನ ಆಸ್ತಿ ನೀನು ತೆಗೆದುಕೋ. ಏನಾದರೂ ಮಾಡಿಕೊ. ನೀನು ಎಲ್ಲಿಯಾದರೂ ಸುಖವಾಗಿ ಬದುಕಿದರೆ ಸಂತೋಷ' ಎಂದು ನಿನ್ನ ತಂದೆ ಒಪ್ಪಿದರು. ತನ್ನ ಪಾಲಿನ ಆಸ್ತಿ ಎಲ್ಲವೂ ತನಗೆ ಬೇಡವೆಂದು ಸ್ವಲ್ಪ ಬಂಡವಾಳವಾದರೆ ಸಾಕೆಂದೂ ಹೇಳಿ, ಇಬ್ಬರೂ ಕೂಡಿ ಸ್ವಲ್ಪ ಹೊಲ ಗದ್ದೆ ಮಾರಿದರು. ಸೂರಪ್ಪ ಸಾಲವನ್ನೆಲ್ಲ ತೀರಿಸಿಕೊಂಡು, ಕೈಯಲ್ಲಿ ನಗದು ಸಾವಿರ ರೂಪಾಯಿ ತೆಗೆದುಕೊಂಡು ಹಾಸನಕ್ಕೆಂದು ಹೊರಟು, ನೇರವಾಗಿ ಬೊಂಬಾಯಿಗೆ ಹೋದ. ಅಲ್ಲಿ ಕುದುರೆ ಜೂಜಿನ ಗೀಳು ಹಿಡಿಯಿತು. ಒಂದೇ ಜೂಜಿನಲ್ಲಿ ಕೈಲಿದ್ದ ಹಣವೆಲ್ಲ ಬರಿದಾಯಿತು. ಒಬ್ಬ ಮಾರವಾಡಿಯ ಹತ್ತಿರ ಕೆಲಸಕ್ಕೆ ಸೇರಿಕೊಂಡು ಕೆಲವು ಕಾಲ ಬೊಂಬಾಯಿಯಲ್ಲಿಯೇ ಇದ್ದ. ಜೂಜಿನ ಗೀಳು ಬಿಟ್ಟಿರಲಿಲ್ಲ. ಒಂದು ಸಲ ಆಕಸ್ಮಾತ್ ಕಳೆದುಕೊಂಡದ್ದಕ್ಕೆ ಹತ್ತರಷ್ಟು ಹಣ ಬಂದಿತು. ಇದ್ದಕ್ಕಿದ್ದ ಹಾಗೆ ಅವನಿಗೆ ತನ್ನ ಹೆಣ್ಣುಮಗುವಿನ ನೆನಪಾಯಿತು. ಆ ಹಣ ಆ ಮಗುವಿಗೆ ಎಂದು ನಿಶ್ಚಯ ಮಾಡಿ, ಅದನ್ನು ಸೇವಿಂಗ್ಸ್ ಬ್ಯಾಂಕಿಗೆ ಹಾಕಿದ. ಎರಡು ಮೂರು ವರ್ಷ ಮೈಮುರಿಯ ದುಡಿದು, ಕಷ್ಟಜೀವನ ಮಾಡಿ, ಸಂಪಾದನೆಯಲ್ಲಿಯೂ ಹಣ ಉಳಿಸಿ, ಇದ್ದಕ್ಕಿದ್ದ ಹಾಗೆಯೇ ಕೆಲಸ ಬಿಟ್ಟು ದೇಶಸಂಚಾರ ಹೊರಟ. ಕೆಲವು ಕಾಲವಾದ ಮೇಲೆ ಕೈಲಿದ್ದ ಹಣ ಬರಿದಾಯಿತು. ಬ್ಯಾಂಕಿನ ಹಣ ಮುಟ್ಟಲು ಇಷ್ಟಪಡದೆ, ವೈರಾಗಿಯ ವೇಷ ಧರಿಸಿ, ಭಿಕ್ಷಾವೃತ್ತಿಯಿಂದ ದೇಶಸಂಚಾರ ಮಾಡತೊಡಗಿದ. ಆ ವೇಷದಲ್ಲಿ, ತನ್ನಂತೆಯೇ ವೇಷ ಧರಿಸಿದ ಸಂನ್ಯಾಸಿಗಳು, ನಿಜವಾದ ಸಂನ್ಯಾಸಿಗಳು, ಎಲ್ಲರ ಸಹವಾಸವೂ ಲಭಿಸಿತು. ಆ ಕಾಲದಲ್ಲಿ ಅವನು ಗುಜರಾತಿ, ಮರಾಠಿ, ಹಿಂದಿ, ಸಂಸ್ಕೃತ ಹಲವಾರು ಭಾಷೆಗಳನ್ನು ಕಲಿತ. ಸಮಗ್ರ ಭಾರತದ ಸ್ಥಿತಿಯನ್ನು ಕಣ್ಣಾರೆ ನೋಡಿದ. ನಿಜವಾದ ಧರ್ಮದ ಸ್ವರೂಪ ಸಾಧು

ಸಂತರ ಸಹವಾಸದಿಂದ ಲಭಿಸಿತು. ದೇಶಸಂಚಾರದಿಂದ ಲೋಕಾನುಭವ ವಾಯಿತು. ಎಲ್ಲವನ್ನೂ ತೊರೆದು ಸಂನ್ಯಾಸಿಯಾದ. ಆದರೆ, ಮಗಳ ನೆನಪನ್ನು ತೊರೆಯಲಾಗಲಿಲ್ಲ. ಬೊಂಬಾಯಿಗೆ ಹೋಗಿ ಹಣವನ್ನು ಹಿಂದಕ್ಕೆ ಪಡೆದು, ತನ್ನ ಊರಿಗೆ ಹಿಂದಿರುಗಿದ. ಬೆಳೆದ ಹುಡುಗಿಯನ್ನು ಕಂಡ. ತಾನು ಊಹಿಸಿದ್ದಕ್ಕಿಂತ ಚೆನ್ನಾಗಿ ಬೆಳೆದಿದ್ದಳು. ನೋಡಿಕೊಂಡು ಹಿಂತಿರುಗಿದ.

"ಮುಂದಿನ ಕಥೆ—ಅನಾವಶ್ಯಕ."

ಸುಂದರ ಕುತೂಹಲದಿಂದ ಕಥೆಯನ್ನು ಕೇಳುತ್ತ ಇದ್ದ. ಮೌನ ವಾಗಿದ್ದ.

ಬೈರಾಗಿ ಕೇಳಿದ: "ಈಗಲಾದರೂ ಸಾಧನೆ ನಿನ್ನ ತಂಗಿ ಎಂಬುದನ್ನು ಒಪ್ಪುತ್ತೀಯೋ?"

ಸುಂದರ ಪ್ರತಿಯಾಗಿ ಕೇಳಿದ: ಹಾಗಾದರೇ ನನ್ನ ಚಿಕ್ಕಪ್ಪ........ ಸೂರಪ್ಪ........ಅವರು........"

"ನಿನ್ನ ಸಂದೇಹ ನನಗೆ ಅರ್ಥವಾಯಿತು. ನಿನ್ನ ಚಿಕ್ಕಪ್ಪ ಸತ್ತು ಹೋದ. ಅವನಿಗೆ ಪುನರ್ಜನ್ಮವಾಗಿದೆ. ಸಾಧನೆ ಆ ಸೂರಪ್ಪನ ಮಗಳು. ಸೂರಪ್ಪನೇ ಬೇರೆ, ನಿನ್ನ ಎದುರಿಗೆ ಕುಳಿತಿರುವ ಈ ಘಟವೇ ಬೇರೆ."

"ನನ್ನ ತಂದೆ ಈ ವಿಷಯವೊಂದನ್ನೂ ನನಗೆ ತಿಳಿಸಲಿಲ್ಲವಲ್ಲ, ಅದೇಕೆ?"

"ಸೂರಪ್ಪನಿಗೆ ಅವರು ಭಾಷೆ ಕೊಟ್ಟಿದ್ದರು. ಊರಿನಲ್ಲಿ ತನ್ನ ಹೆಸರು ಇನ್ನೂ ಕೆಡದೆ ಇರಲಿ, ತಮ್ಮ ಮನೆತನಕ್ಕೆ ಅಪವಾದ ಬರದೆ ಇರಲಿ ಎಂದು ಸೂರಪ್ಪ ಅಣ್ಣನಿಂದ ಭಾಷೆ ತೆಗೆದುಕೊಂಡಿದ್ದ. ಅವರು ಕೊಟ್ಟ ಭಾಷೆಗೆ ತಪ್ಪಿಲ್ಲ. ಕೈ ಹಿಡಿದ ಹೆಂಡತಿಗಾಗಲಿ ಮಗನಿಗಾಗಲಿ ಅದನ್ನು ಹೇಳದೆ, ತಮ್ಮನ ಮಗಳು ಚೆನ್ನಿಗೆ ಏನನ್ನೂ ಮಾಡಲಾಗದೆ, ಬಹು ಯಾತನೆ ಪಟ್ಟಿದ್ದಾರೆ. ಈಗ ನೀನು ನಿಮ್ಮ ತಂದೆಯಂತೆ ನನಗೊಂದು ಭಾಷೆ ಕೊಡುತ್ತೀಯೋ?"

"ಏನು?"

"ಸಾಧನೆಯನ್ನು ತಂಗಿಯಂತಲ್ಲದೆ ಅನ್ಯಥಾ ಭಾವಿಸುವುದಿಲ್ಲವೆಂದು."

"ನೀವು ಹೇಳಿರುವುದೆಲ್ಲ ನಿಜ ಎಂದು ನಂಬಲೆ?"

" ಇನ್ನು ನೀನು ನಿಮ್ಮ ತಂದೆಯನ್ನು ಕೇಳಲು ಅಡ್ಡಿಯಿಲ್ಲ. ನಂ ಯಾದರೆ ಸಾಕು, ನೀನು ನನಗೆ ಭಾಷೆ ಕೊಟ್ಟಂತೆ."

ಸಾಧನೆ ಅಡಿಗೆಯಾಗಿದೆಯೆಂದು ಆಗಲೇ ಒಂದು ಸಲ ಬಾಗಿಲ ನಿಂತು ಕೂಗಿ ಹೇಳಿದ್ದಳು. ಸುಂದರ ಊಟಕ್ಕೆ ಎದ್ದು ಹೋದ.

೮೨

ಬೈರಾಗಿಯು ಕಥೆ ಕೇಳಿ ಸುಂದರನಲ್ಲಿ ನಿಶ್ಚಯಜ್ಞಾನ ಮೂಡುವ ಬದಲು ಸಂದೇಹ ಮೂಡಿತು. ಬೈರಾಗಿಯ ಕಥೆಯನ್ನು ನಿಜ ಎಂದು ನಂಬು ವುದು ಹೇಗೆ? ತಂಗಿ ಎಂದು ನಂಬಿ, ಸಾಧನೆಯನ್ನು ತೊರೆದರೆ, ಅವಳನ್ನು ಅವನೇ ಸಂಗಡ ಕರೆದುಕೊಂಡು ಹೊರಟು ಹೋದರೋ ? ಈ ಬಿಳಿಯ ಬಟ್ಟೆಯ ಬೈರಾಗಿಯನ್ನು ನಿಜವಾದ ಬೈರಾಗಿ ಎಂದು ತಾನೇ ನಂಬುವುದು ಹೇಗೆ? ಅವನ ಕಥೆಯಿಂದ ಇವನೇ ಸೂರಪ್ಪ, ತನ್ನ ಚಿಕ್ಕಪ್ಪ ಎಂಬ ಸಂಗತಿ ಹೊರಪಡುವ ಹಾಗಿದೆ. ಆ ಭಾವನೆ ತನ್ನಲ್ಲಿ ಮೂಡಲಿ, ಸಾಧನೆಯನ್ನು ಸುಲಭವಾಗಿ ಬಿಟ್ಟುಕೊಡಲಿ ಎಂಬ ಹಂಚಿಕೆಯಿಂದ ಬೈರಾಗಿ ಈ ಕಥೆಯನ್ನು ಕಟ್ಟಿ ತನಗೆ ಹೇಳಿರಬಹುದೇ? ತಾನು ಸತ್ಯಾಗ್ರಹದಿಂದ ಹಿಂದಿರುಗುವ ಮುನ್ನ ಸಾಧನೆ ಅವನ ವಶದಲ್ಲಿಯೇ ಇದ್ದಳು. ಹಾಗೆ ಸಾಧನೆಯನ್ನು ಒಯ್ಯಬೇಕೆಂಬುದು ಆತನ ಉದ್ದೇಶವಾಗಿದ್ದ ಪಕ್ಷದಲ್ಲಿ ಆಗ ಸುಲಭವಾಗಿ ಹಾಗೆ ಮಾಡಬಹುದಾಗಿದ್ದಿತಲ್ಲವೆ? ಇಲ್ಲಿಯ ವರೆಗೆ ಕಾದು, ತನಗೆ ಈ ಕಥೆ ಹೇಳಿ, ತಾನು ಸಾಧನೆಯನ್ನು ಮದುವೆಯಾಗಬೇಕೆಂದಾಗ ಅವಳು ತನ್ನ ತಂಗಿ ಎಂದು ತಿಳಿಸಬೇಕಾದ ಆವಶ್ಯಕತೆಯಾದರೂ ಏನು? ಅವನು ಹೇಳು ವುದು ನಿಜವಿರಬಹುದಲ್ಲವೆ?

ಸಾಧನೆಯನ್ನು ಮದುವೆಯಾದರೇ ಮದುವೆ; ಇಲ್ಲದೆ ಹೋದ ತನ್ನ ಮದುವೆಯ ವಿಚಾರ ಇನ್ನು ಈ ಜನ್ಮದಲ್ಲಿ ನಿಂತ ಹಾಗೆ. ಹಾಗೋ ಹೀಗೋ ಆ ವಿಚಾರ ಈಗ ಕೊನೆಯದಾಗಿ ನಿರ್ಧಾರವಾಗಬೇಕು. ಬೈರಾ ಹೇಳಿದ ಮೇರೆಗೆ ತನ್ನ ತಂದೆಗೆ ಈ ಸಂಗತಿ ತಿಳಿದಿದೆ. ತಂದೆಯನ್ನು ಕೇ ತಿಳಿಯಬಹುದೆಂದು ಬೈರಾಗಿ ಹೇಳುತ್ತಾನೆ. ತನ್ನ ತಂದೆಗೆ ಬರೆದು ತಿಳಿದು ಕೊಳ್ಳಬೇಕು. ಬರೆಯುವುದಕ್ಕಿಂತ ಹೋಗಿ ಮುಖತಃ ಮಾತಾಡಿ, ತನ್ನ

ನಿರ್ಧಾರವನ್ನು ತಿಳಿಸಿ ಬರುವುದೇ ಮೇಲು.

ಹೀಗೆ ಆಲೋಚಿಸಿ, ನಿಶ್ಚಯ ಮಾಡಿ, ಎರಡು ಮೂರು ದಿನ ಕಳೆದ ಮೇಲೆ ಸುಂದರ ಬೆಂಗಳೂರಿಗೆ ಪ್ರಯಾಣ ಮಾಡಿದ.

ಸುಂದರನ ಬರುವಿನಿಂದ ಭಾವ ಅಕ್ಕ ತಂದೆ ಎಲ್ಲರೂ ಹರ್ಷಗೊಂಡರು. ಸ್ವಾಭಾವಿಕವಾಗಿ, ಗಂಗಮ್ಮ ಸುಂದರನ ಮದುವೆಯ ಪ್ರಸ್ತಾಪವೆತ್ತಿದಳು. ಅದನ್ನು ನಿರ್ಧರಿಸುವುದಕ್ಕಾಗಿಯೇ ತಾನು ಇಲ್ಲಿಗೆ ಬಂದದ್ದು ಎಂದು ಸುಂದರ ತಿಳಿಸಿದ ಮೇಲೆ ಗಂಗಮ್ಮ ಮನಸ್ಸಿನಲ್ಲಿಯೇ ಹಿಗ್ಗಿದಳು.

ಸುಂದರ ತನ್ನ ತಂದೆಯನ್ನು ಏಕಾಂತವಾಗಿರುವಾಗ ಕಂಡು, ಅವರಿಗೆ ಬೈರಾಗಿ ಹೇಳಿದ ಕಥೆಯ ಸಂಗತಿಯನ್ನು ಸೂಕ್ಷ್ಮವಾಗಿ ಅರುಹಿದ. ಓಬವ್ವನ ಸಂಬಂಧ ಹೊರತಾಗಿ ಊರಿನಲ್ಲಿ ಹಾಸನದಲ್ಲಿ, ಇತರರ ಸಂಬಂಧವನ್ನೂ ಮಾಡಿ ಸೂರಪ್ಪ ಕೆಟ್ಟಿದ್ದನೆಂಬ ಕಥೆ ಕಟ್ಟುಕಥೆ ಎಂದು ಕೃಷ್ಣಪ್ಪನವರಿಗೆ ಈಗ ಖಚಿತವಾಯಿತು. ಕಥೆಯನ್ನು ಕೇಳಿ ಕೃಷ್ಣಪ್ಪನವರು —

"ಹೌದು ಸುಂದರ, ಚೆನ್ನಿ ನಿನ್ನ ಚಿಕ್ಕಪ್ಪನ ಮಗಳು. ನಿನ್ನ ತಂಗಿ. ಈ ಬೈರಾಗಿ ನಿನ್ನ ಚಿಕ್ಕಪ್ಪ, ಸೂರಪ್ಪ. ಅದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ."

"ಹಾಗಾದರೆ ಚೆನ್ನಿ ಮಾದನ ಮಗಳಲ್ಲ?"

"ಅಲ್ಲ."

"ಬೈರಾಗಿ ನನ್ನ ಚಿಕ್ಕಪ್ಪ ಎನ್ನುತೀರ?"

"ಹೌದು, ಅದರಲ್ಲಿಯೂ ಸಂದೇಹವಿಲ್ಲ."

"ಆತ ಊರಿನಲ್ಲಿಯೇ ಇದ್ದಾಗ, ನಿಮ್ಮನ್ನು ಕಂಡು ಮಾತಾಡುತ್ತ ಇದ್ದಾಗ, ತಮ್ಮ ಎಂಬ ಸಂದೇಹ ನಿಮಗೆ ಬರಲೇ ಇಲ್ಲವೆ?"

"ಮೊದಲು ಬರಲಿಲ್ಲ. ಅವನು ಮೊದಲ ಸಲ ನನ್ನನ್ನು ಕಂಡು ಮಾತಾಡಿಸಿದಾಗ, ವೇಷದಿಂದ ಏನೂ ತಿಳಿಯುವ ಹಾಗೆ ಇರಲಿಲ್ಲ. ಧ್ವನಿ ಮಾತ್ರ ಪರಿಚಯದ ಧ್ವನಿಯ ಹಾಗೆ ನೆನಪಾಯಿತು. ಆದರೂ ಅವನು ಸೂರಪ್ಪ ಎಂಬ ನೆನಪೂ ಬರಲಿಲ್ಲ. ಊರು ಬಿಡುವ ಮುನ್ನ ಚೆನ್ನಿಯನ್ನು ನೋಡಹೋಗಿದ್ದಾಗ ಆತ ನನ್ನ ಕಾಲಿಗೆ ಎರಗಿದ. ನನಗೆ ಆಶ್ಚರ್ಯವಾಯಿತು. ಆತ ಎದ್ದಾಗ ಅವನ ಮುಖ ದೃಷ್ಟಿಸಿ ನೋಡಿದೆ. ಹಣೆಯ ಮೇಲೆ ಗಾಯದ ಕಲೆ ಇದ್ದಿತು — ಸೂರಪ್ಪ ಒಂದು ಸಲ ಮಚ್ಚಿನಿಂದ

ಸೌದೆ ಕತ್ತರಿಸುತ್ತಿದ್ದಾಗ ಬಲವಾಗಿ ಮಚ್ಚಿನ ಪೆಟ್ಟು ಬಿದ್ದು ಆದ ಗಾಯದ ಕಲೆ. ಆಗ, 'ಬೈರಾಗಿಯೇ ಸೂರಪ್ಪನಿರಬಹುದೇ?' ಎಂಬ ಸಂದೇಹ ಉಂಟಾಯಿತು. ಕೇಳಿ ನಿಶ್ಚಯಮಾಡಿಕೊಳ್ಳುವ ಮನಸ್ಸಾಗಲಿಲ್ಲ. ಕೇಳಿ 'ಅಲ್ಲ' ಎಂದರೆ ನಾನು ಏನು ಮಾಡಬಹುದು? ಆದರೂ ಒಳ್ಳೆಯದು, ಆಗದಿದ್ದರೂ ಒಳ್ಳೆಯದು ಎಂದು ಸುಮ್ಮನೆ ಹೊರಟುಬಂದೆ. ಬೈರಾಗಿ ಹೇಳಿದ್ದೆಂದು ಈಗ ನೀನು ಹೇಳಿದ ಸಂಗತಿ ನನಗೆ ಸೂರಪ್ಪನಿಗಲ್ಲದೆ ಬೇರೆ ಯಾರಿಗೂ ತಿಳಿಯದು. ಬೈರಾಗಿ ನಿನ್ನ ಚಿಕ್ಕಪ್ಪ. ಅದರಲ್ಲಿ ಸ್ವಲ್ಪವೂ ಸಂದೇಹವಿಲ್ಲ."

ಇದನ್ನು ತಂದೆಯ ಬಾಯಿಂದ ಕೇಳಿ ಸುಂದರನಿಗೆ ಆಶ್ಚರ್ಯವೂ ಆಯಿತು, ಸಮಾಧಾನವೂ ಆಯಿತು, ಸಂತೋಷವೂ ಆಯಿತು; ಖೇದವೂ ಆಯಿತು.

"ಅಪ್ಪ, ನನ್ನ ಮದುವೆಯ ವಿಷಯ ನಿರ್ಧಾರ ಮಾಡಿದ್ದೇನೆ."

"ಏನಂತ?"

"ಎಂದಿಗೂ ಮದುವೆಯಾಗುವುದೇ ಇಲ್ಲ ಅಂತ."

"ಸರಿ, ಅವಳು ಹೇಳುತ್ತಿದ್ದ ಹಾಗೆಯೇ ಆಯಿತು: ಸುಂದರ ತನ್ನ ಚಿಕ್ಕಪ್ಪನ ದಾರಿ ಹಿಡಿದಿದಾನೆ ಅಂತ. ಅವನು ಮದುವೆಯಾಗಿ, ಕೆಟ್ಟು ಬೈರಾಗಿಯಾದ. ನೀನು ಹಾಗೆಯೇ ಬೈರಾಗಿಯಾಗುತ್ತೀಯೆ ಅಂತ ಕಾಣುತ್ತೆ. ಸರಿಯಪ್ಪ. ಕೇಳಿ, ಸಂತೋಷವಾಯಿತು."

ಸುಂದರ ಖಿನ್ನನಾಗಿದ್ದ, ಮೌನವಾಗಿದ್ದ.

ತಾನು ಮದುವೆಯಾಗುವುದಿಲ್ಲ ಎಂದು ತಿಳಿದು ಶಾಮಿಯ ಮದುವೆಗೆ ಏರ್ಪಾಡು ಮಾಡಬಹುದೆಂದು ಸುಂದರ ಸ್ಪಷ್ಟವಾಗಿ ತಿಳಿಸಿಬಿಟ್ಟ. ಇದರಿಂದ ಎಲ್ಲರೂ ಖೇದಗೊಂಡರು.

## ೮೩

ಸುಂದರ ಆಶ್ರಮಕ್ಕೆ ಹಿಂದಿರುಗಿದಾಗ, ಬೈರಾಗಿ ಬರೆದು ಕಾಳೇಗೌಡನ ಕೈಗೆ ಕೊಟ್ಟಿದ್ದ ಕಾಗದವೊಂದು ಸುಂದರನಿಗಾಗಿ ಕಾದಿತ್ತು. ಸುಂದರ ಒಳಕ್ಕೆ ಬಂದ ಕೂಡಲೆ, ಕಾಳೇಗೌಡ — "ಈ ಕಾಜಗ ನಿಮ್ಮ ಕೈಗೆ ಒಪ್ಪಿಸ ಬೇಕು ಅಂತ ಹೇಳಿ ಸ್ವಾಮಿಗಳು ಹೊರಟುಹೋದರು. ಎಲ್ಲಿಗೆ ಅಂತ

ಹೇಳಲಿಲ್ಲ. ಚೆನ್ನಮ್ಮನಿಗೆ ಏನಾರ ಹೇಳಿದಾರೋ ಏನೋ ನಾನು ಕಾಣೆ. ನೀವು ಬರೋಗಂಟ ಅವಳೊಂದಿಗೆ ಕಾವಲಿರಬೇಕು ಅಂತ ಅಷ್ಟು ಹೇಳಿದರು. ತಗೋಳಿ ಕಾಜಗ ''—ಎಂದು ಹೇಳಿ ಕಾಗದವನ್ನು ಸುಂದರನ ಕೈಗೆ ಕೊಟ್ಟ. ಸಾಧನೆಯೂ ಬಂದು ಸುಂದರನನ್ನು ಎದುರುಗೊಂಡಳು.

" ಬೈರಾಗಿ ನಿನಗೆ ಏನಾದರೂ ಹೇಳಿದರೆ ಸಾಧನಾ ? ''

" ಏನೂ ಇಲ್ಲ. 'ನಾನು ಎಲ್ಲಿಗೆ ಹೋಗುತ್ತೇನೆ ಯಾವಾಗ ಹಿಂದಿರುಗುತ್ತೇನೋ ಕಾಣೆ. ಸುಂದರನನ್ನ ನಿನ್ನ ಅಣ್ಣ ಅಂತ ತಿಳಿದು ಅವನು ಹೇಳಿದಂತೆ ನಡೆದುಕೊಂಡಿರಬೇಕು. ಅವನ ತಂದೆ ನಿನ್ನನ್ನ ನನ್ನ ವಶಕ್ಕೆ ನಂಬಿ ಒಪ್ಪಿಸಿದ್ದರು; ಈಗ ನಿನ್ನನ್ನು ಅವನ ವಶಕ್ಕೆ ಒಪ್ಪಿಸುತ್ತ ಇದೇನೆ.' ಎಂದು ಇಷ್ಟೇ ಹೇಳಿ ಹೊರಟುಹೋದರು. ಅವಳ ಮುಖ ಸಪ್ಪೆಯಾಗಿತ್ತು; ಬಹುದಿನದಿಂದ ಒಡನಿದ್ದ ಒಂದು ಪಾಲಕ ಜೀವ ತನ್ನನ್ನು ಅಗಲಿ ಹೋದ ವೇದನೆಯ ಸುಳಿವು ಮುಖದಲ್ಲಿ ಮೂಡಿತ್ತು.

ಸುಂದರ ಕವರನ್ನು ಒಡೆದು ಕಾಗದವನ್ನು ಓದಿಕೊಂಡ :

'' ಚಿ. ಸುಂದರಮೂರ್ತಿಗೆ ಆಶೀರ್ವಾದಗಳು.

'' ಈ ಕಾಗದ ನಿನ್ನ ಕೈಸೇರುವ ಹೊತ್ತಿಗೆ ನಾನು ಬಹುಶಃ ಬಹು ದೂರ ಹೋಗಿರುತ್ತೇನೆ. ಮತ್ತೆ ಹಿಂದಿರುಗಿ ಬರುತ್ತೇನೆಯೋ ಇಲ್ಲವೋ ಹೇಳಲಾರೆ. ನಾನು ನಿನಗೆ ತಿಳಿಸಬೇಕಾದ್ದೆಲ್ಲವನ್ನೂ ಮುಖತಃ ತಿಳಿಸಿದ್ದೇನೆ. ಇಲ್ಲಿ ತಿಳಿಸಬೇಕಾದ್ದು ಹೆಚ್ಚಿಗೆ ಏನೂ ಇಲ್ಲ. ಆಶೀರ್ವಾದಪೂರ್ವಕವಾಗಿ ನಾನು ಹೇಳಬಯಸುವುದು ಇಷ್ಟು:

ಹೆಣ್ಣಿನ ಮೋಹ ಬಹು ಪ್ರಬಲವಾದದ್ದು. ಅದರಿಂದ ತಪ್ಪಿಸಿಕೊಳ್ಳುವದು ಬಹು ಕಷ್ಟ. ನೀನು ಇದುವರೆಗೂ ನಿನ್ನ ಸ್ವಪ್ರಯತ್ನದಿಂದಲೂ ಸಂಸ್ಕಾರಪ್ರಭಾವದಿಂದಲೂ ಅದಕ್ಕೆ ಸಿಲುಕಿಯೋ ಸಿಲುಕದಂತಿರುವೆ. ಹೆಣ್ಣಿನ ವಿಚಾರದಲ್ಲಿ ನೀನು ದುಡುಕುವುದಿಲ್ಲವೆಂಬುದು ನನಗೆ ಮನದಟ್ಟಾಗಿದೆ. ನಿನಗೆ ಅರಿಯದಂತೆ ನೀನು ಸಂಯಮಶಾಲಿಯಾಗಿದ್ದೀಯೆ. ಆದ್ದರಿಂದಲೇ ಧೈರ್ಯವಾಗಿ ಸಾಧನೆಯನ್ನು ನಿನ್ನ ವಶದಲ್ಲಿ ಬಿಟ್ಟುಹೋಗುವ ಸ್ಥಿರಸಂಕಲ್ಪಮಾಡಿದ್ದೇನೆ. ನೀನು ಸಂಸಾರಿಯೋ ಆದರೂ ವಿರಾಗಿಯೋ ಆದರೂ, ಇದೇ ಸಂಯಮವನ್ನು ನೀನು ಪಾಲಿಸಿಕೊಂಡು ಹೋದರೆ ನಿನಗೆ ಇಹಪರಗಳಲ್ಲಿ

ಶುಭವಾಗುವುದು.

"ನೀನು ಚೆನ್ನಿಯನ್ನು ತಂಗಿಯಂತೆ ಕಾಣುತ್ತ ಇದ್ದೆ. ಕೆಲಕಾ ಮಾತ್ರ, ಈಚೀಚೆಗೆ, ಸಾಧನೆಯಲ್ಲಿ ನಿನ್ನ ದೃಷ್ಟಿ ಮಾರ್ಪಾಟಾಗಿತ್ತು. ನಿನ್ನ ತಂಗಿಯನ್ನು ಗುರುತಿಸಲು ಅದು ಸಾಧನವಾಯಿತೆಂದೇ ತಿಳಿಯತಕ್ಕದ್ದು ಆದರಿಂದ ಕೆಡುಕಾಗಲಿಲ್ಲ, ಒಳ್ಳಿತೇ ಆಯಿತು. ನಿನ್ನ ತಂಗಿಯೇ ಆ ಸಾಧನೆಯನ್ನು ಹಾಗೆಂದೇ ಭಾವಿಸಿ ಸಲಹುವುದು, ನಿನಗೆ ಈ ಪದವಿ ಕಷ್ಟ ವಾಗಲಾರದು.

"ಹೆಣ್ಣು ಕೇವಲ ಭೋಗ್ಯ ವಸ್ತುವಲ್ಲ, ಪೂಜ್ಯ ವಸ್ತು. ಹೆಣ್ಣಿ ಸಂಬಂಧ ಮಾಡಿಯೂ ಇಹ ಪರ ಸುಖವನ್ನು ಸಾಧಿಸಬಹುದು; ಸಾಧಿ ಬೇಕು. ಹಾಗೆ ಮಾಡುವ ಸಂಬಂಧ ಲೋಕರೂಢಿಗೆ, ವಿಶಾಲಲೋ ರೂಢಿಗೆ, ವಿರುದ್ಧವಾಗಿರಬಾರದು. ಪಾಶ್ಚಾತ್ಯ ದೇಶಗಳಲ್ಲಿ ಚಿಕ್ಕಪ್ಪ ಹೆಣ್ಣುಮಕ್ಕಳನ್ನು ಮದುವೆಯಾಗುವುದು ಸಂಪ್ರದಾಯವಾಗಿದೆ. ನಮ ದೇಶದಲ್ಲಿ ಆ ಸಂಪ್ರದಾಯವಿಲ್ಲ: ತಪ್ಪಿಯೂ ಆ ಸಂಪ್ರದಾಯ ಭಂ ವಾಗಿಲ್ಲ. ಈ ವಿಚಾರದಲ್ಲಿ ನನ್ನ ಕಟ್ಟಾಗಲಿ ಶಾಸ್ತ್ರಸಂಪ್ರದಾಯಗ ಕಟ್ಟಾಗಲಿ ನಿನಗೆ ತೊಡಕಾಗಬೇಕಾಗಿಲ್ಲ. ನಿನ್ನಲ್ಲಿ ನೀನು ಆಳವಾ ವಿಚಾರಮಾಡು: ನಿನ್ನ ಆತ್ಮದಲ್ಲಿ ಸಾಧನೆ ನಿನ್ನ ತಂಗಿಯೆಂದೇ ಮಿಡಿದ ಹಾಗೆಯೇ ಅವಳನ್ನು ಕಾಣು; ಬೇರೆಯ ವಿಧವಾಗಿ ಮಿಡಿದರೆ — ಹಾಗು ಆಗಲಿ: ಭಗವದಿಚ್ಛೆ; ಅಂದು ಅವಳು ನಿನ್ನ ಚಿಕ್ಕಪ್ಪನ ಮಗಳಲ್ಲ, ಮಾದ ಮಗಳು. ನೀನೇನೂ ನರಕಕ್ಕೆ ಹೋಗುವುದಿಲ್ಲ: ಕೇವಲ ಕಾಮವಲ್ಲ ಪ್ರೇಮವಾದರೆ ಅದೇ ನಿನ್ನನ್ನು ಉದ್ಧಾರಮಾಡುತ್ತದೆ. ಆದರೆ, ಮೊದಲ ನಿನ್ನ ಹೃದಯವನ್ನು ನೀನು ಪರೀಕ್ಷೆಮಾಡಿಕೊ.

"ಆದರೆ, ನನಗೆ ಗೊತ್ತು; ನೀನು ಸಾಧನೆಯನ್ನು ತಂಗಿಯೆಂದೆ ಕಾಣತಕ್ಕವನು.

"ಕೇವಲ ಹೆಣ್ಣಿನ ಮೋಹವೊಂದೇ ನಿನ್ನನ್ನು ಆ ಮೇಲೂ ಕಾ ತೊಡಗಿದರೆ, ನಿನ್ನ ಮನಸ್ಸು ಒಪ್ಪಿದ ಬೇರೆ ಹೆಣ್ಣೊಂದನ್ನು ಮದು ಯಾಗುವುದು ಒಳ್ಳೆಯದು.

"ಸಾಧನೆಯ ವಿಚಾರವೂ ಅಷ್ಟೆ: ಅವಳ ಇಷ್ಟಕ್ಕೆ ವಿರುದ್ಧವಾ

ದಿದ್ದರೆ, ಅವಳನ್ನು ಮದುವೆಯಾಗಲೊಪ್ಪುವ ಯಾರಿಗಾದರೂ ನೀನು ಅವ ಳನ್ನು ಮದುವೆಮಾಡಿಕೊಡಬಹುದು. ಆ ಸಂದರ್ಭದಲ್ಲಿಯೂ ಅವಳು ನಿನ್ನ ಚಿಕ್ಕಪ್ಪನ ಮಗಳಲ್ಲ — ಮಾದನ ಮಗಳು. ನಿನ್ನ ಮಟ್ಟಿಗೆ ಅವಳು ಚಿಕ್ಕಪ್ಪನ ಮಗಳು. ಲೋಕದ ದೃಷ್ಟಿಗೆ ಅವಳು ಮಾದನ ಮಗಳಾಗಿಯೇ ಉಳಿಯತಕ್ಕದ್ದು. ರೂಪಾಗಲಿ ಗುಣವಾಗಲಿ ಸಂಸ್ಕೃತಿಯಾಗಲಿ ಯಾವ ಒಂದು ಕುಲದ, ಜಾತಿಯ, ಸೊತ್ತಲ್ಲ. ಬ್ರಾಹ್ಮಣ ಹೊಲೆಯನಾಗಬಹುದು; ಹೊಲೆಯ ಬ್ರಾಹ್ಮಣನಾಗಬಹುದು. ಇಷ್ಟೇ ಅಲ್ಲದೆ, ಸ್ಪೃಶ್ಯ ಅಸ್ಪೃಶ್ಯ ಎನ್ನುವ ಈ ಭೇದ ಕೃತಕವಾದದ್ದು. ಮಹಾತ್ಮಾ ಗಾಂಧಿಯವರ ಮಾರ್ಗದರ್ಶನ ಸರಿಯಾದದ್ದು. ಅವರು ಮಾಡುತ್ತಿರುವುದು ವರ್ಣಸಂಕರವಲ್ಲ, ವರ್ಣಾಶ್ರಮಧರ್ಮದ ಪುನರುಜ್ಜೀವನ. ಅವರ ಮಾರ್ಗ ಅನುಸರಿಸಿದರೆ ನಮ್ಮ ದೇಶದ ಸನಾತನ ವರ್ಣಾಶ್ರಮಧರ್ಮ ಸನಾತನ ರೂಪದಲ್ಲಿ ಉಳಿಯುತ್ತದೆ; ಇಲ್ಲವಾದರೆ, ಅದು ನಿರ್ನಾಮವಾಗಿ, ಸಮಾಜ ಕ್ಷೋಭೆಯಾಗಿ, ನಮ್ಮ ದೇಶದ ಧರ್ಮಸಂಸ್ಕೃತಿಗಳೆಲ್ಲವೂ ಅಳಿದುಹೋಗುತ್ತವೆ. ನಾಸ್ತಿಕಧರ್ಮ ಹರಡುತ್ತದೆ. ಆದ್ದರಿಂದ, ನೀನು ಸಾಧನೆಯನ್ನು ಮಾದನ ಮಗಳೆಂದೇ ಎಣಿಸಿ, ಬ್ರಾಹ್ಮಣಯೋಗ್ಯಳನ್ನಾಗಿ ಮಾಡಿ, ನಾನು ಹೇಳಿದ್ದನ್ನು ಸಾಧಿಸು. ನೀನು ಕೈಕೊಂಡಿರುವ ಅಸ್ಪೃಶ್ಯರ ಉದ್ಧಾರ ಕಾರ್ಯಕ್ಕೆ ಸಾಧನೆಯ ಉದ್ಧಾರ ಸಂಕೇತವಾಗಿ ಪರಿಣಮಿಸಲಿ. ಅಖಂಡ ಬ್ರಹ್ಮಾನಂದವೊಂದು ಹೊರತಾಗಿ, ಉಳಿದ ಸಾಧನೆಸಿದ್ಧಿಗಳೆಲ್ಲವೂ ಸಾಂಕೇತಿಕವೇ. ಆದ್ದರಿಂದಲೇ, ಮತ್ತೆ ಹೇಳುತ್ತೇನೆ — **ಸಾಧನೆ ಮಾದನ ಮಗಳು,** ನಿನ್ನ ಚಿಕ್ಕಪ್ಪನ ಮಗಳಲ್ಲ: ನಿನ್ನ ಚಿಕ್ಕಪ್ಪನನ್ನು ಹಿಂದೆ ಮರೆತಿದ್ದಂತೆ ಈಗಲೂ ಸಂಪೂರ್ಣವಾಗಿ ಮರೆತುಬಿಡು; ಅವನ ನೆನಪು ನಿನಗೆ ಶ್ರೇಯಸ್ಕರವಲ್ಲ. ಸಾಧನೆಯನ್ನು — ಸಾಧ್ಯವಾದರೆ —. ನಿನ್ನ ತಂಗಿ ಎಂಬುದನ್ನು ಮಾತ್ರ ಮರೆಯಬೇಡ.

"ಈಗ ಸಾಧನೆಯ ಪಾಲನೆಪೋಷಣೆಗಳ ಸಂಪೂರ್ಣ ಭಾರ ನಿನ್ನ ಮೇಲೆ ಬಿದ್ದಿದೆ. ಸದ್ಯದ ಮಟ್ಟಿಗೆ ತೊಂದರೆ ಆಗದಿರಲಿ ಎಂದು, ಹಾಸನದ ಬ್ಯಾಂಕಿನಲ್ಲಿ ನಿನ್ನ ಹೆಸರಿನಲ್ಲಿ ಐದು ಸಾವಿರ, ಅವಳ ಹೆಸರಿನಲ್ಲಿ ಎರಡು ಸಾವಿರ ಇಟ್ಟಿದ್ದೇನೆ.

"ಈಗಲೀಗ ನಾನು ನಿಜವಾದ ವೈರಾಗ್ಯದ ಪಥ ಹಿಡಿದಿದ್ದೇನೆ. ಪ್ರಾಪಂಚಿಕವಾದ ಎಲ್ಲ ಹಂಗನ್ನೂ ಕಳೆದುಕೊಂಡಿದ್ದೇನೆ. ನಿನ್ನ ಮೂಲಕ ನನಗೆ ನಿಜವಾದ ಸಂನ್ಯಾಸದೀಕ್ಷೆ ನನಗೆ ಇಂದು ದೊರಕಿತು. ಭಗವಂತ ನನ್ನ ಮೇಲೆ ಕೃಪೆಮಾಡಿದಾನೆ. ಭಗವಂತನ ಕೃಪೆ ನಿನಗೆ ಅಪಾರವಾಗಿ ದೊರಕಲಿ.

ಇಂತೀ ಆಶೀರ್ವಾದ,

**ಸೂರಪ್ಪ.**"

ಕಾಗದವನ್ನು ಓದಿಕೊಂಡು, 'ಬೈರಾಗಿಗಳು ಹೊರಟು ಹೋದರು ಸಾಧನ. ಹಿಂತಿರುಗಿ ಬರುವುದಿಲ್ಲ.'' ಎಂದು ನಿಟ್ಟುಸಿರು ಬಿಡುತ್ತ ಹೇಳಿದ ಸುಂದರ. ಸಾಧನೆಯ ಕಣ್ಣು ತೇವಾವಾಗಿತ್ತು; ಸುಂದರನ ಮನಸ್ಸು ವಿಸ್ಮಯ ವಿಷಾದಪೂರ್ಣವಾಗಿತ್ತು.

೮೪

ದಿನಗಳ ಮೇಲೆ ದಿನಗಳು, ತಿಂಗಳ ಮೇಲೆ ತಿಂಗಳುಗಳು ಉರುಳಿ ಹೋದುವು. ಸುಂದರ ನವೋತ್ಸಾಹ ಪೂರಿತನಾಗಿ, ಸಾಧನೆಯೊಂದಿಗೆ ಸೇವಾ ಜೀವನದ ದೀಕ್ಷೆಯನ್ನು ಕೈಕೊಂಡು, ತನ್ನ ಊರಿನ ಹರಿಜನರ ಉದ್ಧಾರ ಕಾರ್ಯಕ್ಕೆ ಪ್ರಾರಂಭ ಮಾಡಬೇಕೆಂದು ನಿಶ್ಚಯಿಸಿದ. ಕಾಲ ಕಳೆದಂತೆ ಅವನ ಉತ್ಸಾಹ ತಗ್ಗದಿದ್ದರೂ ಅವನು ನಿರೀಕ್ಷೆ ಮಾಡಿದಷ್ಟು ಕೆಲಸದಲ್ಲಿ ನೂರರಲ್ಲಿ ಒಂದು ಪಾಲೂ ನಡೆದಂತೆ ಕಾಣಲಿಲ್ಲ.

ಕೆಲವು ವಿದ್ಯಾರ್ಥಿಗಳನ್ನು ಕೂಡಿಕೊಂಡು ಅವನು ಹರಿಜನ ಕೇರಿಯ ನಿರ್ಮಲೀಕರಣದ ಕಾರ್ಯವನ್ನು ಕೈಕೊಂಡ. ಹೊಸ ಉತ್ಸಾಹದಲ್ಲಿ ಆ ಕಾರ್ಯ ತಕ್ಕಮಟ್ಟಿಗೆ ನಡೆಯಿತು; ಹರಿಜನರ ಸಹಕಾರವೂ ದೊರೆಯಿತು. ಅವರ ಗುಡಿಸಿಲ ಬಾಗಿಲುಗಳ ತಿಪ್ಪೆ ಕಸಗಳನ್ನೆಲ್ಲ ತೆಗೆದು, ದೂರದಲ್ಲಿ ಒಂದು ತಿಪ್ಪೆ ಗುಂಡಿಯನ್ನು ಮಾಡಿಸಿ ಅಲ್ಲಿ ಗೊಬ್ಬರ ಸೇಖರಿಸುವ ಏರ್ಪಾಡು ಮಾಡಿದನು. ಈ ಕಾರ್ಯದಲ್ಲಿ ಸಹಕರಿಸುತ್ತ ಇದ್ದ ವಿದ್ಯಾರ್ಥಿಗಳ ತಾಯಿ ತಂದೆಗಳ ಗಮನಕ್ಕೆ ಈ ಸಂಗತಿ ತಿಳಿದುಬಂದು, ಅವರು ತಮ್ಮ ಮಕ್ಕಳನ್ನು ಗದರಿಸಿದರು: 'ಅನ್ನ ಹಾಕುವುದಿಲ್ಲ, ಮನೆ ಬಿಟ್ಟು ಓಡಿಸುತ್ತೇವೆ' ಎಂದು ಬೆದರಿಕೆ

ಹಾಕಿದರು. ‘ ಹರಿಜನರ ಕೇರಿಗೆ ಹೋಗುವ ಒಂದು ಕೆಲಸ ಬಿಟ್ಟು, ಆಶ್ರಮದಲ್ಲಿ ಏನು ಕೆಲಸ ಬೇಕಾದರೂ ಮಾಡುತ್ತೇವೆ’ ಎಂದು ವಿದ್ಯಾರ್ಥಿಗಳು ಹಿಂದೆ ಬಿದ್ದರು. ಕೆಲವರು ಇದೇ ನೆಪ ಮಾಡಿಕೊಂಡು ಆಶ್ರಮಕ್ಕೆ ಬರುವುದನ್ನೇ ಬಿಟ್ಟು ಬಿಟ್ಟರು. ಊರ ಕಸವನ್ನೆಲ್ಲಾ ಝಾಡಿಸುತ್ತ ಇದ್ದ ಝಾಡಮಾಲಿಗಳೇ ತಮ್ಮ ಕೇರಿಯ ಕಸ ಝಾಡಿಸಕೊಳ್ಳುತ್ತಿರಲಿಲ್ಲ. ಇತರ ಹರಿಜನರು ಪೊರಕೆ ಹಿಡಿಯುವ ಶ್ರದ್ಧೆ ವಹಿಸಲಿಲ್ಲ. ‘ ಇದು ಯಾವ ದೇವರಿಗೆ ಪ್ರೀತಿ, ಸುಂದರಪ್ಪ ? ಊರೆಲ್ಲಾ ಗುಡಿಸಬೇಕು ಅಂತ ಅಲ್ಲವೆ ಝಾಡಮಾಲಿಗಳಿಗೆ ಮುನ್ಸಿಪಾಲ್ಟಿ ಸಂಬಳ ಕೊಡೋದು ? ಅವರ ಕೇರಿ ಅವರು ಗುಡಿಸಿಕೊಳ್ಳದೆ ಹೋದರೆ ನಾವು ಹೋಗಿ ಗುಡಿಸೋಕಾಯ್ತದಾ ? ನೀನು ಹೇಳಿದರೂ ಅವರು ಕೇಳಪ್ಪೊಲ್ಲರು, ಸುಮ್ಮನಿರಪ್ಪ ” ಎಂದು ಕಾಳೇಗೌಡ ಸುಂದರನನ್ನು ಬೇಡಿಕೊಂಡ. ಸುಂದರನೂ ಸಾಧನೆಯೂ ಪೊರಕೆ ಹಿಡಿದು ನಿತ್ಯ ಅಲ್ಲಿಗೆ ಹೋಗಬೇಕು, ಇಲ್ಲವೆ ಸುಮ್ಮನಿರಬೇಕು— ಬೇರೆ ದಾರಿಯೇ ಇರಲಿಲ್ಲ.

ಸುಂದರ ತನ್ನ ಆಶ್ರಮದ ತೋಟದ, ತನ್ನ ಹೊಲಗದ್ದೆಗಳ ಕೆಲಸಕ್ಕೆ ಹಲವರು ಹರಿಜನರನ್ನೆ ನೇಮಿಸಿಕೊಂಡು ಅವರಿಗೆ ಮೊದಲು ಇತರರು ಕೊಡುತ್ತಿದ್ದುದಕ್ಕಿಂತ ಹೆಚ್ಚಿನ ಕೂಲಿ ಕೊಡತೊಡಗಿದ್ದ. ಇದರಿಂದ ಹೆಂಡದಂಗಡಿಯುವನ ಹಣದ ಡಬ್ಬಿ ಭರ್ತಿಯಾಗತೊಡಗಿತು ; ಹಾಸನದ ಸೇಂದಿ ಕಂಟ್ರಾಕ್ಟರ್ ಸಿಂಗಪ್ಪನ ಮುಖಕ್ಕೆ ಗೆಲವು ಕೂಡಿತು ; ಸಂಜೆಯ ಹೊತ್ತು ಆಶ್ರಮಕ್ಕೆ ಬರುತ್ತಿದ್ದ ಹರಿಜನರ ಸಂಖ್ಯೆ ಕಡಮೆಯಾಗುತ್ತ ಬಂದು, ಹೆಂಡದಂಗಡಿಯ ಮುಂದೆ ಹಾಜರಿ ಹೆಚ್ಚಾಯಿತು.

ಪ್ರಾರ್ಥನೆಯಾದ ಮೇಲೆ, ಕೆಲವು ಹರಿಜನರಿಗೆ ಓದುಬರಹ ಹೇಳಿಕೊಡಬೇಕೆಂದು ಸುಂದರನೂ ಸಾಧನೆಯೂ ಬಹಳ ಪ್ರಯತ್ನಪಟ್ಟರು. ‘ ನಮಗ್ಯಾಕೆ ಬುದ್ಧಿ, ಓದು ಬರಾವು ? ’ ಎಂದು ಅವರು ಕಳಚಿಕೊಂಡರು.

ಸುಂದರ ಕೆಲವು ಹುಂಜಗಳನ್ನೂ ಕೋಳಿಗಳನ್ನೂ ತರಿಸಿಕೊಟ್ಟು, ಅವನ್ನು ಕೆಲವರಿಗೆ ಹಂಚಿ, ಅವನ್ನು ಸಾಕಿ ಮರಿ ಮಾಡಿ ಹೆಚ್ಚಿಸಬೇಕೆಂದೂ, ಮೊಟ್ಟೆಗಳನ್ನು ಮಾರಾಟಮಾಡಲು ತನಗೆ ಕೊಡಬೇಕೆಂದೂ ಹೇಳಿದ್ದ. ಮೊಟ್ಟೆಯಿಡುವುದಕ್ಕೆ ಮೊದಲೆ ಕೋಳಿಗಳೆಲ್ಲ ಅವರ ಹೊಟ್ಟೆ ಸೇರಿದ್ದುವು.

ಸುಂದರ ತನ್ನ ಆಶ್ರಮದಲ್ಲಿ ಎರಡು ಹಸುಗಳನ್ನೂ ಒಂದು ಎಮ್ಮೆ ಯನ್ನೂ ಕಟ್ಟಿ, ತನಗೆ ಬೇಕಾದಷ್ಟು ಹಾಲನ್ನು ಮಾತ್ರ ಇಟ್ಟುಕೊಂಡು, ಉಳಿದದ್ದನ್ನು ಹರಿಜನರ ಹಸುಮಕ್ಕಳಿಗೆ ಬೆಳಗ್ಗೆ ಹಂಚುವ ಏರ್ಪಾಡು ಮಾಡಿದ್ದ. ಹರಿಜನ ಹೆಂಗಸರು ಮಕ್ಕಳನ್ನು ಎತ್ತಿಕೊಂಡು ತಪ್ಪದೆ ಹಾಲು ಪಡೆಯಲು ಬರುತ್ತಿದ್ದರು. ಈ ಕಾರ್ಯವೇನೋ ಯಶಸ್ವಿಯಾಯಿತು. ಆದರೆ, ಇದರಿಂದ ಸುಂದರನಿಗೆ ತಿಂಗಳಿಗೆ ಐವತ್ತು ಅರುವತ್ತು ರೂಪಾಯಿ ನಷ್ಟವಾಗುತ್ತ ಇತ್ತು. ಇದರಿಂದ ಕಾಳೇಗೌಡನಿಗೆ ವ್ಯಥೆ; ಸುಂದರ ಮಾತ್ರ 'ಈ ಮಕ್ಕಳಾದರೂ ಚೆನ್ನಾಗಿ ಬೆಳೆದು ಅವಾದರೂ ಮುಂದೆ ಉದ್ಧಾರ ವಾದಾವು' ಎಂಬ ಆಶಾಭಾವನೆ ಇಟ್ಟುಕೊಂಡಿದ್ದ.

ಹರಿಜನ ಮಕ್ಕಳನ್ನು ಊರಿನ ಶಾಲೆಗೆ ಸೇರಿಸಬೇಕೆಂದು ಸುಂದರ ಬಹಳ ಪ್ರಯತ್ನಪಟ್ಟ. ಕೆಲವು ಹರಿಜನರು ಮಕ್ಕಳನ್ನು ಕಳಿಸಲು ಒಪ್ಪ ಲಿಲ್ಲ: 'ಒಲೆಗೆ ಪುಳ್ಳೆ ತರಬೇಕು. ಎಸರಿಗೆ ಸೊಪ್ಪು ಕಿತ್ತು ತರಬೇಕು. ಗದ್ದೆ ಹೊಲದಲ್ಲಿ ನಳ್ಳಿ, ಇಲಿ ಹಿಡಿದು ತರಬೇಕು. ಗುಡಲು ಕಾಯಬೇಕು. ಶಾಲೆಗೆ ಹೋದರೆ, ಬರಿ ಮೈಯಲ್ಲಿ ಸೇರಿಸುವುದಿಲ್ಲ; ತೊಡಲು ಚಡ್ಡಿ ಇಲ್ಲ. ಜುಬ್ಬ ಇಲ್ಲ.' ಹೀಗೆ ಹಲವಾರು ಕಾರಣಗಳನ್ನು ಕೊಡತೊಡಗಿದರು. ಸುಂದರ ನಿರುತ್ಸಾಹವಾಗದೆ, ಸುಟಿಯಾಗಿ ಗೆಲವಾಗಿದ್ದ ಇಬ್ಬರು ಹುಡುಗ ರನ್ನು ಆಯ್ದು, ಅವರಿಗೆ ತಾನೇ ಬಟ್ಟೆ ಹೊಲಿಸಿ ಕೊಟ್ಟು, ಶಾಲೆಯ ಹೆಡ್ಮಾಸ್ಟರನ್ನು ಒಪ್ಪಿಸಿ ಶಾಲೆಗೆ ಸೇರಿಸಿದ ಇತರ ವಿದ್ಯಾರ್ಥಿಗಳ ತಂದೆ ತಾಯಿಗಳಿಂದ ದೂರು ಬಂದಿತು; ಅವರಿಂದ ಈ ಹುಡುಗರಿಗೆ ಹಿಂಸೆ ಕಾಟ ಗಳಿಗೂ ಮೊದಲಾಯಿತು; ಒಬ್ಬ ಹೆದರಿ ಹಿಂದೆ ನಿಂತ. ಇನ್ನೊಬ್ಬ ಸ್ವಲ್ಪ ಬೆಳೆದ ಹುಡುಗ, ಧೈರ್ಯವುಳ್ಳವನು, ನೋಡುವುದಕ್ಕೂ ಲಕ್ಷಣವಾಗಿದ್ದ. ಸುಂದರನ ಬಲವಂತದಿಂದ, ಒತ್ತಾಸೆಯಿಂದ, ಕೆಲ ದಿನಗಳಲ್ಲೇ ಅವನಿಗೆ ಓದಿನಲ್ಲಿ ತುಸ ಆಸಕ್ತಿಯೂ ಹುಟ್ಟಿತು. ಇವನೊಬ್ಬನು ಮಾತ್ರ ಬಿಡದೆ ಶಾಲೆಗೆ ಹೋಗತೊಡಗಿದ. "ಈ ಕೆಂಚಪ್ಪ ನಮ್ಮೂರಿನ ರಾಜಪ್ಪನಾ ದರೂ ಆಗಬಹುದು, ನೋಡೋಣ" ಎಂದು ಸುಂದರ ಸಂತೋಷಗೊಂಡ.

ಸುಂದರನ ಪರಿಶೀಲನೆ ವಿಚಾರಣೆಗಳಿಂದ ಊರಿನ ಹರಿಜನರು ಪ್ರತಿನಿತ್ಯ ಹಾಗಿರಲಿ, ವಾರಕ್ಕೊಮ್ಮೆಯಾದರೂ ಸ್ನಾನ ಮಾಡುತ್ತಿದ್ದಂತೆ

ಕಾಣಬರಲಿಲ್ಲ. ಅವನು ಅವರನ್ನು— 'ದೇವರು ಕೊಟ್ಟ ಹಾಗೆ ಹೊಳೆಯಿದೆ. ನೀವು ನಿತ್ಯ ಏಕೆ ಸ್ನಾನ ಮಾಡಬಾರದು?' — ಎಂದು ಪ್ರಶ್ನಿಸಿದ. ಮೂಡಲಗಿರಿ ಎಂಬ ಮುದುಕ ಸುಂದರನ ಪ್ರಶ್ನೆಗೆ ಹೀಗೆ ಉತ್ತರ ಕೊಟ್ಟ: "ಬುದ್ಧಿ, ನಾ ಚಿಕ್ಕವನಾಗಿದ್ದಾಗ ಈಜಾಡಬೇಕು ಅಂದರೆ ಬಲೆ ಕುಸಿ. ಹೊಳೇಲಿ ಒಂದಪ ಈಜುಬಿದ್ದೆ. ಅದನ್ನ ಹೊಲ ಮಾಡ್ತಾ ಇದ್ದ ರೈತಗಳು, ಹೊಲ ಮಾಡಸ್ತಾ ಇದ್ದ ನಮ್ಮ ದಣಿಗಳು ಕಂಡರು. 'ಲೋ, ಮೂಡಲಗಿರಿ, ಹೊಳೆ ನಿಮ್ಮ ಕಡೆಯಿಂದ ಊರ ಕಡೆಗೆ ಹರಿದು ಬರತದೆ. ನೀನು ಮುಳುಗಿದ ನೀರನ್ನು ಊರಿನ ಜನ ಹೇಗೋ ಬಳಸೋದು? ಇನ್ನೊಂದು ದಿನ ನೀನು ಹೊಳೆಗೆ ಬಂದರೆ ನಿನ್ನ ತಲೆ ಒಡೆದು ಹಾಕಿಬಿಡುತ್ತೇವೆ, ಹುಷಾರು!' ಎಂದು ಬೋದ್ನೆ ಮಾಡಿದರು. "ನಿಮ್ಮ ಹೊಳೆ ನೀರನ್ನು ನಾವು ಆದು ಹೆಂಗಾರ ಮುಟ್ಟೋಣ ಬುದ್ಧಿ?" ಸುಂದರನಿಗೆ ನಗು ಬಂದಿತು: ಹೊಳೆ ನೀರಿಗೆ ದೊಣೆನಾಯಕನ ಅಪ್ಪಣೆ! ಹರಿಜನರನ್ನೆಲ್ಲ ಹೊಳೆಯಲ್ಲಿ ಒಂದೇ ದಿನದಲ್ಲಿ ಅವರ ತಲೆ ಒಡೆಯಿಸಲು ಅವನಿಗೆ ಇಷ್ಟವಾಗಲಿಲ್ಲ. "ಕೆರೆ ಉಪಯೋಗಿಸಿಕೊಳ್ಳಿ?" ಎಂದ ಸುಂದರ. "ಹೊಳೆ ದೂರ ಅಂತ ಒಬ್ಬಿಬ್ಬರು ಹಾರವರು ಕೆರೆಗೂ ಬರ್ತಾರೆ. ಏಸೋ ಜನ ಒಕ್ಕಲಿಗರೂ ಬರ್ತಾರೆ. ನಾವು ಅಲ್ಲಿಗೆ ಹೊಗೋಕಾಯ್ತದಾ?" ಎಂದು ಮೂಡಲಗಿರಿಯ ಮುಗ್ಧ ಪ್ರಶ್ನೆ. 'ಹರಿಜನರ ಬಹಿರಂಗದ ಬಾಳ್ವೆ ಉದ್ಧಾರವಾಗಬೇಕಾದರೆ ಇತರರ ಅಂತರಂಗದ ಬಾಳ್ವೆ ಉದ್ಧಾರವಾಗಬೇಕು. ಈಗ ನಡೆಯಬೇಕಾಗಿರುವುದು ಹರಿಜನರ ಉದ್ಧಾರ ಮಾತ್ರವಲ್ಲ, ಇಡಿಯ ಹಿಂದೂ ಜನಾಂಗದ ಉದ್ಧಾರವಾಗಬೇಕಾಗಿದೆ. ಎಷ್ಟು ಅಧೋಗತಿಗೆ ಇಳಿದಿದ್ದೇವೆ ನಾವು!' ಎನ್ನಿಸತೊಡಗಿತು ಸುಂದರನಿಗೆ. ಊರಿನ ವಿದ್ಯಾರ್ಥಿಗಳೆಲ್ಲ ಪ್ರಗತಿಪರ ಭಾವನೆಗಳನ್ನು ಹೊಂದಬೇಕು, ಅವರೆಲ್ಲ ಕೂಡಿ ಈ ದಲಿತರ ಉದ್ಧಾರಕಾರ್ಯಕ್ಕೆ ಮುಂದೆ ಬರಬೇಕು, ಒಂದು ಸುಧಾರಕ ಸೈನ್ಯವೇ ನಿರ್ಮಾಣವಾಗಬೇಕು, ಅವರು ಊರ ಜನದ ಮನಸ್ಸನ್ನು ಮೊದಲು ತಿದ್ದಬೇಕು, ಅಲ್ಲಿಯ ವರೆಗೆ ಇವರ ಮೋಕ್ಷವಿಲ್ಲ. ತನ್ನೊಬ್ಬನಿಂದ ಏನೂ ನಡೆಯದು' ಎಂಬ ನಿರಾಶಾಭಾವನೆ ಅವನ ಮನಸ್ಸಿನಲ್ಲಿ ಮೂಡಿತು. 'ಆಗಲಿ ಆಗಲಿ. ಇಂತಹ ಕೆಲಸ ಆರಂಭ ಮಾಡುವವರ ಪಾಡೆಲ್ಲ ಇಷ್ಟೇ. ಯುಗಯುಗಗಳಿಂದ ಕೆಳಕ್ಕೆ ಬಿದ್ದಿರುವವರ ಉದ್ಧಾರ

ಕೆಲವು ತಿಂಗಳುಗಳಲ್ಲಿ ಆಗಬೇಕೆಂದು ಆಶಿಸುವ ನಾನು ಹೆಡ್ಡ. ಕೈಯಲ್ಲಿ ಬಾವುಟ ಎತ್ತಿ ಹಿಡಿದಿರುತ್ತೇನೆ; ಜೊತೆಗೆ ಜನ ಬರುವ ವರೆಗೂ ಹಿಡಿದೇ ಇರುತ್ತೇನೆ' ಎಂಬ ಪ್ರತ್ಯಾಶೆಯಿಂದ ಮೂಡಿದ ನಿರಾಶೆಯನ್ನು ನುಂಗಿ ಕೊಂಡನು. "ನಮ್ಮ ಗದ್ದೆಯ ಕುಂಟೆಯನ್ನು ಉಪಯೋಗಿಸಿಕೊಳ್ಳಿ?" ಎಂದು ಸೂಚಿಸಿದ ಸುಂದರ. "ಕಾಳೇಗೌಡನಾಗಲಿ ನಿಮ್ಮಯ್ಯ ಆಗಲಿ ನಮ್ಮನ್ನ ಅಡ್ಡಿಮಾಡಿಲ್ಲ. ಕುಡಿಯೋ ನೀರಿಗೆ ಅದನ್ನೇ ಬಳಸತೇವೆ. ಆದರ ನೀರು ಒಳ್ಳೆ ಎಳನೀರಿನ ಹಂಗೆ ಬಲು ಸೀ ಬುದ್ದಿ. ಅಲ್ಲಿ ಮೈತೊಳೆದರೆ ಬಟ್ಟೆ ಒಗೆದರೆ ನಾವು ಕುಡಿಯೋ ನೀರೇ ಕೆಟ್ಟುಹೊಗ್ತದೆ" ಎಂದ ಮೂಡಲಗಿರಿ. ಊರಿನ ಹರಿಜನರು ನಿತ್ಯ ಸ್ನಾನಮಾಡದೆ ಶುಭ್ರವಾದ ವಸ್ತ್ರ ಗಳನ್ನು ಧರಿಸದೆ ಇರಲು ಅವರ ಅಜ್ಞಾನಮಾತ್ರವಲ್ಲದೆ ಅನುಕೂಲವಿಲ್ಲ ದಿರುವುದೂ ಮುಖ್ಯ ಕಾರಣ ಎಂದು ಸ್ಪಷ್ಟವಾಯಿತು. ಅವನಿಗೆ ಇದ್ದಕ್ಕಿದ್ದ ಹಾಗೆ ಮೈಸೂರಿನ ಜೀವನದ ನೆನಪಾಯಿತು. ಅಲ್ಲಿಯೂ ಹೊಲೆಗೇರಿ ಪ್ರತ್ಯೇಕವೆ. ಆದರೂ, ಅಲ್ಲಿನ ಹೊಲೆಯರು ಎಷ್ಟೋ ಮಂದಿ ಅನುಕೂಲ ವಾಗಿದ್ದರು; ವೀಳೆಯದೆಲೆಯ ವ್ಯಾಪಾರದ ಹೊಲೆಯರೆಷ್ಟೋ ಮಂದಿ ಧನಿಕ ರಾಗಿಯೂ ಇದ್ದರು. ಶ್ರಾವಣ ಶನಿವಾರದ ದಿನಗಳಲ್ಲಿ ಹೊಲೆಯರ ಗುಂಪು ಗಳು ಶುಭ್ರವಸ್ತ್ರಧಾರಿಗಳಾಗಿ ಬೀದಿಬೀದಿಗಳಲ್ಲಿ, ಬ್ರಾಹ್ಮಣರ ಕೇರಿಗಳಲ್ಲಿ ಸಹ, 'ದಾಸಾನೆಂದೆನಿಸೋ ಎನ್ನ', 'ಕರುಣಾಕರ ನೀನೆಂಬುವದೇಕೋ ಭರವಶವಿಲ್ಲೆನಗೆ,' 'ಎಲ್ಲಿರುವೆ ತಂದೆ ಬಾರೋ' ಮೊದಲಾದ ಪದಗಳನ್ನು ಹೇಳಿಕೊಂಡು ಭಜನೆಯ ಸಂಚಾರ ಹೊರಡುತ್ತಿದ್ದುದನ್ನೂ, ಚಾಮುಂಡಿಯ ಬೆಟ್ಟದ ಜಾತ್ರೆಯಲ್ಲಿ ಸಾವಿರ ಸಂಖ್ಯೆಯಲ್ಲಿ ನೆರೆಯುತ್ತಿದ್ದುದನ್ನೂ ಸುಂದರ ಕಣ್ಣಾರೆ ಕಂಡಿದ್ದನು. ಮೇಲುಕೋಟೆಯಲ್ಲಂತೂ ರಥೋತ್ಸವದ ಮೂರು; ದಿನ ಹರಿಜನರಿಗೂ ಬ್ರಾಹ್ಮಣರಿಗೂ ವ್ಯತ್ಯಾಸವೇ ಇಲ್ಲ. ಆದರೆ, ಆಮೇಲೆ ಭೇದ! ಅಲ್ಲೇಕೆ ಹಾಗೆ, ಇಲ್ಲೇಕೆ ಹೀಗೆ? ಆಲೋಚನೆ ಮಾಡಿದ್ದರಲ್ಲಿ, ಅಲ್ಲಿನ ಹೊಲೆಯರೆನ್ನಿಸಿಕೊಂಡವರು ತಕ್ಕಮಟ್ಟಿಗೆ ಶುಚಿರ್ಭೂತರಾಗಿರುವರು; ಚೆನ್ನಾಗಿ ಒಟ್ಟೆ ಧರಿಸುವರು; ನಡೆನುಡಿಗಳಲ್ಲಿ ಮೇಲು ವರ್ಗಗಳವರನ್ನು ಅನುಕರಿಸುವರು. ಅವರ ಆರ್ಥಿಕ ಸ್ಥಿತಿ ತಕ್ಕಮಟ್ಟಿಗೆ ಮೇಲಾಗಿರುವುದರಿಂದ ಅವರು ಹಾಗೆ ಮಾಡಲು ಸಾಧ್ಯವಾಗಿದೆ. ಇಲ್ಲಿನವರಿಗೆ ಹೊಟ್ಟೆಗೇ ಇಲ್ಲ,

ಇನ್ನು ಬಟ್ಟೆಗೆ ಎಲ್ಲಿಂದ ತಂದಾರು? ನಿತ್ಯ ಸ್ನಾನ ಮಾಡತೊಡಗಿದರೆ ಮೈ ಒರಸಿಕೊಳ್ಳಲು ಆರಿವೆಯ ತುಂಡಿಗೂ ಗತಿಯಿಲ್ಲ. ಗಳಿಸುವ ಕೂಲಿ ಸಾಲದೆ, ಕೆಲವರು ಕೂಲಿಯ ಬದಲು ಕೊಡುವ ರಾಗಿ ಬತ್ತ ಸಾಲದೆ, ಅಂಬಲಿ ಗಂಜಿಯೇ ಅವರ ನಿತ್ಯಾಧಾರ; ಅದಕ್ಕಿಷ್ಟು ಉಪ್ಪಾದರಾಯಿತು. ಹಿಟ್ಟುಂಡ ದಿವಸ ಅಲ್ಲಿ ಇಲ್ಲಿ ಮಕ್ಕಳು ತಿರಿದು ತಂದ ಹೆಸರಿಲ್ಲದ ಹಲವು ಸೊಪ್ಪುಗಳ ಎಸರು. ಅನ್ನ ಕಾಣುವುದು ಎಂದೋ. ಹಾಲು ಮಜ್ಜಿಗೆಯ ಹೆಸರೂ ಕಾಣರು. ಇಷ್ಟಾಗಿ ಉಳುವವರು ಅವರು; ಅವರಿಗೆ ತುಂಡು ನೆಲ ಇಲ್ಲ. ಸ್ವಂತ ಹೊಲಗದ್ದೆ ಇಲ್ಲದೆ ಇತರರ ಜಮೀನನ್ನು ವಾರಕ್ಕೋ ಗುತ್ತಿಗೆಗೊ ಸಾಗುವಳಿಮಾಡುವ ರೈತರು ಎನ್ನಿಸಿಕೊಂಡ ಒಕ್ಕಲಿಗ ಜನಕ್ಕೆ ಕೂಡ ಉಳುವುದಕ್ಕೆ ಇವರು ಬೇಕು, ತಮ್ಮ ಪಾಲಿನ ಪವಸದಲ್ಲಿ ಇವರ ಕೂಲಿ ಮೂರು ಕಾಳು. ಇವರ ಸ್ಥಿತಿ ಉತ್ತಮಗೊಳ್ಳಬೇಕಾದರೆ ಇವರಿಗೆ ಜಮೀನಾಗ ಬೇಕು, ನನ್ನದು ಎಂದುಕೊಳ್ಳಲು ಮೂರುಗೇಣು ನೆಲ ಆಗಬೇಕು. ತನ್ನ ಜಮೀನನ್ನೇ ಕೊಡೋಣವೇ? ಯಾರು ಯಾರಿಗೆ? ಎಲ್ಲಿ ಸಾಕಾದೀತು? ಹುಚ್ಚು ಔದಾರ್ಯವಾದೀತು. ಬೇಕಾದಷ್ಟು ಬೀಳು-ಭೂಮಿಯಿದೆ. ಸರ್ಕಾರಕ್ಕೆ ಅರ್ಜಿ ಹಾಕಿ ಇವರಿಗೆ ಹಾಳುಬೀಳು ನೆಲವನ್ನಾದರೂ ಕೊಡಿಸಿ ಇವರಿಂದ ಸ್ವಂತ ಬೇಸಾಯ ಮಾಡಿಸಬೇಕು. ಆಗ ಇವರ ಆರ್ಥಿಕ ಪರಿಸ್ಥಿತಿ ಉತ್ತಮ ಗೊಂಡು ಇವರ ನಿಜವಾದ ಉದ್ಧಾರ ಆದೀತು—ಎಂದು ಹೊಸ ಯೋಜನೆ ಯೊಂದನ್ನು ತಲೆಗೆ ತಂದುಕೊಂಡ ಸುಂದರ.

೮೫

ಕೊಳಲೂರು ಗ್ರಾಮ (ಸಬ್ ತಾಲ್ಲೂಕು) ಯಾವ ತಾಲ್ಲೂಕಿಗೆ ಸೇರಿತ್ತೊ ಆ ತಾಲ್ಲೂಕಿಗೆ ರಾಜಪ್ಪ ಎಂಬವರು ಈಗ ಅಮಲ್ದಾರರಾಗಿ ಬಂದಿದ್ದಾರೆ ಎಂದು ತಮ್ಮ ಮನೆಯ ಶಾನುಭೋಗಿಕೆ ನೋಡಿಕೊಳ್ಳುತ್ತ ಇದ್ದ ರಾಮಣ್ಣನವರಿಂದ ಸುಂದರಮೂರ್ತಿಗೆ ತಿಳಿಯಬಂದಿತು. ತನ್ನ ಸಹಪಾಠಿ ರಾಜಪ್ಪನೇ ಇರಬೇಕೆಂದು ತೀರ್ಮಾನಿಸಿ ಸುಂದರ ತಾಲ್ಲೂಕಿಗೆ ಹೋಗಿ ಅಮಲ್ದಾರರನ್ನು ಭೇಟಿಮಾಡಿದ. ಮೂರು ನಾಲ್ಕು ವರ್ಷಗಳ ಕಾಲಾವಧಿಯಲ್ಲಿ ಬಹಳ ಮಾರ್ಪಾಟಾಗಿ ಒಬ್ಬರನ್ನೊಬ್ಬರು ಗುರುತು

ಹಿಡಿಯಲಾಗದಂತಾಗಿದ್ದರು. ರಾಚಪ್ಪನಿಗೆ ಈಗ ಕೈತುಂಬ ಸಂಬಳ ಬರುತ್ತಿದ್ದಿತು; ದೂರದ ಸಂಬಂಧದ ಹೆಣ್ಣು ತಂದು ಮದುವೆಯಾಗಿ, ಒಂದು ಮಗುವೂ ಆಗಿತ್ತು; ನೆಮ್ಮದಿಯ ಜೀವನದ ಪರಿಣಾಮವಾಗಿ ಮೈ ಕೈ ಮುಖ ತುಂಬಿಕೊಂಡಿದ್ದವು. ಶ್ಯಾಮಲವರ್ಣದ ಮುಖದಲ್ಲಿ ಒಂದು ಬಗೆಯ ವರ್ಚಸ್ಸು ಮೂಡಿತ್ತು. ಜರಿಯಪೇಟ, ಓಪನ್ ಕಾಲರ್ ಕೋಟು, ನೆಕ್‌ಟೈ, ಕಣ್ಣಿಗೆ ಕನ್ನಡಕ, ಕೈಗೆ ರಿಸ್ಟ್‌ವಾಚ್ — ಈ ವೇಷಭೂಷಣಗಳು ಒಂದು ಕಡೆ. ಸತ್ಯಾಗ್ರಹ, ಜೈಲುವಾಸ, ಕಮಲೆಯಿಂದ ಒದಗಿದ ಕೆಲ ಕಾಲದ ವ್ಯಥೆ, ಮಾತೃವಿಯೋಗ, ಸುತ್ತಾಟ ಅಲೆದಾಟ, ಆಶ್ರಮದಲ್ಲಿನ ದೇಹಶ್ರಮದ ಕೆಲಸಕಾರ್ಯಗಳು, ಮನಸ್ಸಿನಲ್ಲಿ ಆಶೆ ನಿರಾಶೆಗಳ ಹೊಯ್ದಾಟ, ತಾರುಣ್ಯಸಹಜಪ್ರವೃತ್ತಿಗಳನ್ನು ನಿರೋಧಿಸಲು ಕೈಕೊಂಡಿದ್ದ ಸಂಯಮಸಾಧನೆಯ ಪ್ರಯತ್ನ. — ಇವೇ ಮುಂತಾದ ಬಾಹ್ಯ ಆಂತರಿಕ ಕಾರಣಗಳಿಂದ ಸುಂದರಮೂರ್ತಿಯ ದೇಹವೂ ಆತ್ಮವೂ ದೃಢತರ ವಾಗಿದ್ದರೂ ಮೊದಲೇ ತೆಳ್ಳಗಿದ್ದ ದೇಹ ಇನ್ನಷ್ಟು ತೆಳ್ಳಗಾಗಿ ಬಡಕಲು ಎನ್ನುವ ಮಟ್ಟಿಗಾಗಿದ್ದನವನು; ಖಾದಿಯ ನೀಳಜುಬ್ಬ, ಲುಂಗಿ, ಹೆಗಲ ಮೇಲೆ ಒಂದು ಚೌಕ — ಇಷ್ಟೇ ಉಡುಪು; ಕ್ರಾಪು ಬಿಟ್ಟಿದ್ದರೂ ಕಾಲ ಕಾಲಕ್ಕೆ ಎಸಗಬೇಕಾದ ಕೇಶಸಂಸ್ಕಾರವಿಲ್ಲದೆ ಕ್ರಾಪು ಅಲಂಕಾರವಾಗುವ ಬದಲು ತಲೆಭಾರ ಎನ್ನುವಂತಾಗಿತ್ತು; ಮನಸ್ಸು ಬಂದಾಗ ಮುಖಕ್ಷೌರ. ಸುಂದರನನ್ನು ನೋಡಿದ ಯಾರಿಗಾದರೂ, 'ವೈದಿಕನಲ್ಲ, ಮದುವೆಯಾಗಿಲ್ಲ, ಯಾತಕ್ಕೆ ಈ ದೀಕ್ಷೆ?' ಎಂದು ಆಚ್ಚರಿಪಡುವಹಾಗಾಗಿತ್ತು. 'ಆ ಬೈರಾಗಿ ಇಲ್ಲಿ ಅನ್ನಿಸಬಾರದು ಅಂತ ನೀನು ಬೈರಾಗಿಯಾಗ್ತೀಯೋ ಹೆಂಗೆ?' ಎಂದು ಕಾಳೇಗೌಡ ಸುಂದರನನ್ನು ಹಾಸ್ಯಮಾಡಿದ್ದೂ ಉಂಟು. ಸುಂದರ ಮೂರ್ತಿಯನ್ನು ರಾಚಪ್ಪ ತಟ್ಟನೆ ಗುರುತಿಸಲಾಗದೆ ಹೋದದ್ದರಲ್ಲಿ ಆಶ್ಚರ್ಯವೇನಿಲ್ಲ. ರಾಚಪ್ಪನನ್ನು ಕಂಡಕೂಡಲೆ ಸುಂದರಮೂರ್ತಿ ಅಧಿಕಾರ ಸ್ಥಾನಕ್ಕೆ ಗೌರವತೋರಿಸಿ ಕೈಮುಗಿದು ನಮಸ್ಕಾರಮಾಡಿದ. 'ನೀವು ಯಾರು? ಏನಾಗಬೇಕಾಗಿತ್ತು?' ಎಂದು ರಾಚಪ್ಪ ಸಹಜವಾದ ಅಧಿಕಾರ ವಾಣಿಯಿಂದ ಪ್ರಶ್ನಿಸಿದ. 'ನಾನು ಸುಂದರಮೂರ್ತಿ, ಮರೆತುಹೋಯಿತೆ?' ಎಂದು ಸುಂದರ ಮುಗುಳುನಗೆ ನಕ್ಕ. 'ಓಹೋ, ಸುಂದರಮೂರ್ತಿಗಳೇ!

ಕ್ಷಮಿಸಬೇಕು, ಕ್ಷಮಿಸಬೇಕು. ಯಾರೋ ಅಂತ ತಿಳಿದಿದ್ದೆ. ದಯವಿಟ್ಟು ಕೊಡಬೇಕು.' ಎಂದು ರಾಚಪ್ಪ ಎದ್ದು ಬಂದು, ಸುಂದರನ ಕೈಕುಲುಕಿ, ಮೇಜಿನ ಎದುರಿನ ಕುರ್ಚಿಯ ಮೇಲೆ ಕುಳ್ಳಿರಿಸಿದ. ಪರಸ್ಪರ ಕ್ಷೇಮವಿಚಾರಣೆ ಮುಗಿದ ಮೇಲೆ, ರಾಚಪ್ಪ ಪ್ರಶ್ನಿಸಿದ :

"ನೀವು ನನ್ನನ್ನು ಹುಡುಕಿಕೊಂಡು ಬಂದಿರಲ್ಲಾ. ನನಗೆ ಬಹು ಸಂತೋಷವಾಯಿತು."

"ನೀವು ಯಾವಾಗಲೂ ನನ್ನನ್ನ ಹೊಗಳುವುದೇ ಆಯಿತು. ನಾನು ಬಂದಿರುವುದು ಸ್ವಾರ್ಥಕ್ಕಾಗಿ."

"ಸ್ವಾರ್ಥಸಾಧನೆಗೋಸ್ಕರ ಬಂದಿದ್ದರೆ ಮತ್ತೂ ಸಂತೋಷ. ಮಿತ್ರರಿಗೆ ಏನಾದರೂ ನಮ್ಮ ಕೈಲಾಗುವುದಿದ್ದರೆ ಮಾಡೋಣ. ಉಪಕಾರ ಮಾಡುವ ಅವಕಾಶ ಕಲ್ಪಿಸಿಕೊಡಿ."

"ಆ ಅವಕಾಶ ಕಲ್ಪಿಸೋಣ ಅಂತಲೇ ಬಂದೆ. ಕೊಳಲೂರಿನ ಗ್ರಾಮದಲ್ಲಿ ನನ್ನ ಸ್ವಂತ ಜಮೀನಿನಲ್ಲಿ ಹರಿಜನ ಸೇವಾಶ್ರಮ ಎಂದು ಒಂದು ಗುಡಿಸಿಲು ಹಾಕಿದ್ದೇನೆ. ಅದಕ್ಕೆ ತಾವು ಬಿಡುವು ಮಾಡಿಕೊಂಡು ಒಂದು ದಿನ ದಯಮಾಡಿಸಿ ನನ್ನ ಕಾರ್ಯಕ್ಕೆ ಸಹಾಯಮಾಡಬೇಕು."

"ಇದೇಯೋ ನಿಮ್ಮ ಸ್ವಾರ್ಥ! ಅಗತ್ಯವಾಗಿ ಬರುತ್ತೇನೆ. ಮುಂದಿನ ಭಾನುವಾರವೇ ಬರುತ್ತೇನೆ" ಎಂದು ರಾಚಪ್ಪ ಸಂತೋಷದಿಂದ ಒಪ್ಪಿಕೊಂಡ. "ನೀವು ಬಿ. ಎ. ಮಾಡದೆ ಸತ್ಯಾಗ್ರಹಕ್ಕೆ ಹೊರಟು ಹೋದಿರಂತೆ. ಈಗ ಸೇವೆ ಎಂತ ಬಾಳನ್ನು ಮುಡಿಪಾಗಿಟ್ಟಿದ್ದೀರಿ. ನಾನು ಈ ಗುಲಾಮಗಿರಿಗೆ ಮಾರಿಕೊಂಡಿದ್ದೇನೆ." ಎಂದು ಮುಂತಾಗಿ ರಾಚಪ್ಪ ಸುಂದರನನ್ನು ಹೊಗಳಲು ಮೊದಲುಮಾಡಿದ. ಸುಂದರಮೂರ್ತಿ ನಡುವೆ ನಿಲ್ಲಿಸಿ, "ಇದಿರಲಿ. ಕಚೇರಿಯ ನೌಕರರು ನಿಮ್ಮ ವಿಷಯದಲ್ಲಿ ಹೇಗೆ?" ಎಂದು ಕುತೂಹಲದಿಂದ ಪ್ರಶ್ನಿಸಿದ ಸುಂದರ. "ರಾಚಪ್ಪನನ್ನು ಕಂಡರೆ ವಿಶ್ವಾಸ ಇದೆಯೋ ಇಲ್ಲವೊ ನಾನು ಹೇಳಲಾರೆ; ಅಮಲ್ದಾರ ಅಂತ ಭಯ ಭಕ್ತಿ ತೋರಿಸುತ್ತಾರೆ. ನನಗೇನೋ ಭಯಕ್ಕಿಂತ ಹೆಚ್ಚಾಗಿ ವಿಶ್ವಾಸ ತೋರುವವರು ಬೇಕು. ಅಂಥವರು, ಅಂದರೆ ನಿಮ್ಮಂಥವರು, ಯಾರೂ ಕಾಣರು."

ರಾಜಪ್ಪ ಸತ್ಯಾಗ್ರಹದ ಚಳವಳಿಯ ಬಗ್ಗೆ ಕುತೂಹಲ ತೋರಿಸಿದ; ಸುಂದರ ಅದನ್ನೆಲ್ಲಾ ಸಂಗ್ರಹವಾಗಿ ಹೇಳಿ, "ನನಗೆ ಎಂದಿನಿಂದಲೂ ರಾಜಕೀಯದಲ್ಲಿ ಅಷ್ಟು ಶ್ರದ್ಧೆ ಇಲ್ಲ. ಹರಿಜನರ ಉದ್ಧಾರವಾಗದೆ ಸ್ವಾತಂತ್ರ್ಯ ಬಂದರೆ ತಾನೆ ಅದು ಏತಕ್ಕೆ, ಯಾರಿಗಾಗಿ? ಕೆಳಗಿರುವವರನ್ನು ಇನ್ನಷ್ಟು ಕೆಳಕ್ಕೆ ತುಳಿಯುವುದಕ್ಕಾಗಿ ಸ್ವಾತಂತ್ರ್ಯವೆ, ಅಧಿಕಾರವೇ? ಸ್ವಾತಂತ್ರ್ಯ ಬರುವುದಕ್ಕೆ ಮೊದಲೇ ಹರಿಜನರ ಉದ್ಧಾರವಾಗಬೇಕು. ಪ್ರಾಂತಗಳಲ್ಲಿ ಈಗ ಕಾಂಗ್ರೆಸ್ ಆಡಳಿತ ಪ್ರಾರಂಭವಾಗಿರುವುದರಿಂದ ಇನ್ನು ಮೇಲೆ ರಚನಾತ್ಮಕ ಕಾರ್ಯಗಳಿಗೆ ಹೆಚ್ಚು ಪ್ರಾಶಸ್ತ್ಯ ದೊರಕುವುದರಲ್ಲಿ ಸಂದೇಹವಿಲ್ಲ. ಮದರಾಸು ಪ್ರಾಂತದಲ್ಲಿ ಆಗಲೇ ಪಾನನಿರೋಧ ಯೋಜನೆ ಕೈಕೊಂಡಿದ್ದಾರೆ. ನೋಡಬೇಕು" ಎಂದು ಮುಗಿಸಿದ. "ಹರಿಜನರನ್ನು ದೂರ ಇಡುವುದರಲ್ಲಿ ಎಂದಿನಿಂದಲೂ ಬ್ರಾಹ್ಮಣರೇ ಮುಂದಾಳುಗಳು; ಅವರ ಉದ್ಧಾರ ಕಾರ್ಯಕ್ಕೂ ನಿಮ್ಮಂಥ ಬ್ರಾಹ್ಮಣರೇ ಮುಂದಾಳುಗಳಾಗಿ ಹೊರಟಿದ್ದೀರಿ. ಇದು ಶುಭಸೂಚನೆ." ಎಂದು ರಾಜಪ್ಪ ಮನಃಪೂರ್ವಕವಾದ ಅಭಿಪ್ರಾಯವನ್ನು ಹೇಳಿದ. "ಹೌದು, ಹೌದು. ಆದರೆ ನಿಮ್ಮ ಸಹಾಯವೂ ಬೇಕು. ಹಾಗಾದರೆ, ಭಾನುವಾರ ಖಂಡಿತ ಬರುತ್ತೀರಿ ತಾನೆ?" — "ಬರದೆ ಉಂಟೆ? ಖಂಡಿತ ಬರುತ್ತೇನೆ." ಏಕೆ ಎಂದು ರಾಜಪ್ಪನೂ ಕೇಳಲಿಲ್ಲ; ಸುಂದರನೂ ತನ್ನ ಮನಸ್ಸಿನ ಉದ್ದೇಶವನ್ನು ಕೂಡಲೇ ಬಯಲು ಮಾಡಲಿಲ್ಲ

ಮಾತುಕತೆ ಮುಗಿಯುವ ಹೊತ್ತಿಗೆ ಒಬ್ಬರು ಗುಮಾಸ್ತರು ಬಾಳೆಯ ಹಣ್ಣನ್ನೂ ಎರಡು ಲೋಟಗಳಲ್ಲಿ ಹಾಲನ್ನೂ ತಂದು ಮೇಜಿನ ಮೇಲೆ ಇಟ್ಟು ಹೋದರು. "ಹಣ್ಣು ಹಾಲನ್ನು ಕೆಂಚನಹಳ್ಳಿಯಿಂದ ತರಿಸಿದ ಹಾಗೆ ಕಾಣುತ್ತೆ" ಎಂದು ಸುಂದರ ನಕ್ಕ. ಫಲಾಹಾರ ಮುಗಿದ ಮೇಲೆ, ಸುಂದರ ರಾಜಪ್ಪನನ್ನು ಬೀಳ್ಕೊಂಡು ಹಿಂದಿರುಗಿದ.

೮೬

ರಾಜಪ್ಪ ಭಾನುವಾರ ಮಧ್ಯಾಹ್ನದ ಮೇಲೆ ೩-೪ ಗಂಟೆಯ ಹೊತ್ತಿಗೆ ಬರುವುದಾಗಿ ಸುಂದರನಿಗೆ ಕಾಗದ ಬರೆದಿದ್ದ. ಸುಂದರ ಅವನಿಗಾಗಿ ಒಂದು

ಸತ್ಕಾರಕೂಟವನ್ನು ಏರ್ಪಡಿಸಿದ್ದ ಆಶ್ರಮಕ್ಕೆ ನಿತ್ಯ ಬರುತ್ತಿದ್ದ ವಿದ್ಯಾರ್ಥಿಗಳು, ಮಿಡ್ಲ್‌ಸ್ಕೂಲ್ ಹೈಸ್ಕೂಲ್ ಉಪಾಧ್ಯಾಯರುಗಳು, ಊರಿನ ಎಲ್ಲ ಜಾತಿಗಳ ಪ್ರಮುಖರು ಕೆಲವರು — ಇವರನ್ನೆಲ್ಲ ಆಹ್ವಾನಿಸಿದ್ದನು. ಇದಕ್ಕಾಗಿ ಹಾಸನದಿಂದ ಆಹ್ವಾನ ಪತ್ರಿಕೆಗಳನ್ನು ಅಚ್ಚುಹಾಕಿಸಿ ತರಿಸಿದ್ದನು. ಕಾಫಿ, ಬೋಂಡ, ಬಾಳೆಯುಹಣ್ಣು, ಕಿತ್ತಿಳೆಹಣ್ಣು ಇವುಗಳ ಉಪಾಹಾರದ ಏರ್ಪಾಟುಮಾಡಿಸಿದ್ದನು. ಎಲ್ಲ ಕಾರ್ಯಗಳಿಗೂ ವಿದ್ಯಾರ್ಥಿಗಳ ನೆರವು ಇಲ್ಲದೆ ಹೋಗಿದ್ದಿದ್ದರೆ ಸುಂದರನಿಗೆ ಬಹು ಶ್ರಮವಾಗುತ್ತಿದ್ದಿತು. ಹರಿಜನರೆಲ್ಲರೂ ಎಂದಿನಂತೆ ಸಂಜೆ ಆಶ್ರಮಕ್ಕೆ ಬರಬೇಕೆಂದೂ ಅಮಲ್ದಾರರು ಬರುತ್ತಾರೆಂದೂ ಅವರಿಗೆಲ್ಲರಿಗೂ ಸುಂದರ ತಿಳಿಸಿದ್ದ.

ತಾಲ್ಲೂಕಿನಿಂದ ಕೊಳಲೂರಿಗೆ ೩-೩೦ ಕ್ಕೆ ಸರಿಯಾಗಿ ಒಂದು ಬಸ್ಸು ಬರುತ್ತಿತ್ತು. ಆ ಬಸ್ಸಿನಲ್ಲಿ ರಾಚಪ್ಪ ಊರಿಗೆ ಬಂದು, ೪ ಗಂಟೆಯ ಹೊತ್ತಿಗೆ ಆಶ್ರಮಕ್ಕೆ ಬಂದ. ವಿದ್ಯಾರ್ಥಿಗಳೆಲ್ಲರೂ ಕಾಫಿ ಬೋಂಡದ ತಯಾರಿ, ಮತ್ತಿತರ ಕಾರ್ಯಗಳ ನಿರ್ವಾಹದಲ್ಲಿ ನಿರತರಾಗಿದ್ದರು. ರಾಚಪ್ಪನ ಆಗಮನವನ್ನೆ ನಿರೀಕ್ಷಿಸುತ್ತ ಹೆದ್ದಾರಿಯಲ್ಲಿಯೇ ನಿಂತಿದ್ದ ಸುಂದರಮೂರ್ತಿ ಮಿತ್ರನಿಗೆ ಸ್ವಾಗತವನ್ನು ನೀಡಿ ಆಶ್ರಮಕ್ಕೆ ಕರೆದುಕೊಂಡು ಬಂದನು. ಆಹ್ವಾನಿತರೆಲ್ಲರೂ ೫ ಗಂಟೆಯ ಹೊತ್ತಿಗೆ ಬರಬೇಕಾಗಿತ್ತು; ಕಾಳೇಗೌಡ ಹೊರತಾಗಿ ಆಶ್ರಮದಲ್ಲಿ ಇನ್ನು ಯಾರೂ ಇರಲಿಲ್ಲ. ಮಿತ್ರರು ಒಟ್ಟಿಗೆ ಕುಳಿತು ಆಪ್ತವಾಗಿ ಸ್ವಲ್ಪ ಹೊತ್ತು ಮಾತಾಡುತ್ತ ಕುಳಿತರು.

“ಏನು, ಹೊಲದಲ್ಲಿ ಮನೆ ಕಟ್ಟಿಸಿಕೊಂಡಿರುವ ಹಾಗೆ ಕಾಣುತ್ತೆ. ಇದೇನು, ದೊಡ್ಡ ರಾಮದೇವರ ಪಟ?” ಎಂದು ಹಜಾರದ ಸುತ್ತ ಕಣ್ಣು ಹಾಕುತ್ತ ರಾಚಪ್ಪ ಕುತೂಹಲದಿಂದ ಪ್ರಶ್ನಿಸಿದ.

“ಇದು ನನ್ನ ಮನೆಯಲ್ಲ. ಇದೇ ಆಶ್ರಮ.”

“ಬೋರ್ಡ್ ಕಾಣಲಿಲ್ಲ. ಆಶ್ರಮ ಬೇರೆ ಎಲ್ಲೋ ಇರಬೇಕು ಅಂತ ಊಹಿಸಿದೆ.”

“ಬೋರ್ಡ್ ಹಾಕಿ ಸಲ್ಲದ ಪ್ರಸಿದ್ಧಿಗಾಗಿ ಪ್ರಯತ್ನಿಸಲು ನನಗೆ ಇಷ್ಟವಿಲ್ಲ. ಇದೋ ನೋಡಿ, ಈ ಆಹ್ವಾನ ಪತ್ರಿಕೆಯಲ್ಲಿಯೂ ‘ನನ್ನ ಮನೆಗೆ’ ಎಂದೇ ಅಚ್ಚುಹಾಕಿಸಿದೆ” ಎಂದು ಆಹ್ವಾನ ಪತ್ರಿಕೆಯ ಪ್ರತಿಯೊಂದನ್ನು

ರಾಚಪ್ಪನ ಕೈಗಿಟ್ಟ.

"ಇದೇನು! ಏನೇನೋ ಏರ್ಪಾಟು ಮಾಡಿರುವ ಹಾಗಿದೆಯಲ್ಲ?"

"ನನ್ನ ಕಾರ್ಯದಲ್ಲಿ ಊರಿನವರ ಸಹಕಾರ ಎಳ್ಳಷ್ಟೂ ಇಲ್ಲ. ಅವರನ್ನು ಕ್ರಮಕ್ರಮವಾಗಿ ಒಲಿಸಿಕೊಳ್ಳಲು ನೀವು ಬರುವುದನ್ನು ಒಂದು ನೆಪ ಮಾಡಿಕೊಂಡೆ, ಅಷ್ಟೆ."

"ಹಾಗಾದರೆ ಎಲ್ಲವನ್ನೂ ಒಬ್ಬಂಟಿಗರಾಗಿ ಮಾಡುತ್ತ ಇದ್ದೀರ? ಸಹಾಯಕ್ಕೆ ಯಾರೂ ಇಲ್ಲವೆ?"

"ಇದ್ದಾರೆ, ಒಬ್ಬಿಬ್ಬರು." ಎಂದು ಎದ್ದು ಒಳಕ್ಕೆ ಹೋಗಿ, ಪತ್ತೆ ಬಂದು ಕುಳಿತ.

ಸುಂದರಮೂರ್ತಿ ತಾನು ಮಾಡಬೇಕೆಂದಿರುವ ಕಾರ್ಯಗಳನ್ನೆಲ್ಲ ವಿವರವಾಗಿ ರಾಚಪ್ಪನಿಗೆ ತಿಳಿಸಿದ; ತಾನು ಮಾಡಲಾಗದೆ ಹೋಗಿದ್ದ ಕಾರ್ಯಗಳನ್ನೂ ಸ್ಪಷ್ಟಪಡಿಸಿದ; ಕಡೆಯಲ್ಲಿ –

"ನಿಮ್ಮಿಂದ ನಾನು ಬಯಸುವ ಉಪಕಾರ ಇದು. ನಮ್ಮ ಹೊಲಕ್ಕೆ ಒತ್ತಿನದೇ ಸರಕಾರಕ್ಕೆ ಸೇರಿದ ಭೂಮಿ. ಕಷ್ಟಪಟ್ಟರೆ ಅದನ್ನು ಸಾಗುವಳಿಗೆ ತರಬಹುದು. ಹತ್ತಿಪ್ಪತ್ತು ಹರಿಜನರ ಸಂಸಾರಗಳಿವೆ. ಒಂದೊಂದು ಸಂಸಾರಕ್ಕೂ ಕಡೆಯ ಪಕ್ಷ ಎರಡು ಎಕರೆಯಂತೆ ಸರ್ಕಾರದಿಂದ ನೀವು ಅವರಿಗೆ ಉಚಿತವಾಗಿ ಭೂಮಿ ಕೊಡಿಸಬೇಕು. ಅವರ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡ ಹೊರತು ಯಾವ ಉದ್ಧಾರಕಾರ್ಯವೂ ಪ್ರಯೋಜನವಾಗದು. ಶೂದ್ರರಿಗೆ ಏನೂ ಇಲ್ಲದಿದ್ದರೂ ಊರಿನೊಳಗೆ ನಾನಾ ರೀತಿಯ ಕೂಲಿಯ ಕೆಲಸಗಳಾದರೂ ಸಿಕ್ಕುತ್ತವೆ. ಇವರಿಗೆ ಏನೂ ಇಲ್ಲ. ನೀವು ದೊಡ್ಡ ಮನಸ್ಸು ಮಾಡಬೇಕು."

ರಾಚಪ್ಪ ಸ್ವಲ್ಪ ಹೊತ್ತು ಆಲೋಚನೆ ಮಾಡಿದ. ಸುಂದರನ ಕಾರ್ಯಾರಂಭ ಪ್ರಯತ್ನಗಳನ್ನು ನಿಜವಾಗಿಯೂ ಮೆಚ್ಚಿಕೊಂಡ. ತನ್ನ ಅಭಿಪ್ರಾಯವನ್ನು ನಿರ್ವಂಚನೆಯಿಂದ ತಿಳಿಸಿದ:

"ನನ್ನಿಂದ ಏನೂ ಸಾಧ್ಯವಿಲ್ಲ. ಜಿಲ್ಲಾಧಿಕಾರಿಗಳ ಶಿಫಾರಸಾಗಿ ಮಂತ್ರಿಗಳ ಮಂಜೂರಾತಿ ಆಗಬೇಕು. ಅರ್ಜಿ ಕೊಡಿಸಿ. ನನ್ನ ಶಿಫಾರಸಿನೊಂದಿಗೆ ಮೇಲಕ್ಕೆ ಕಳಿಸುತ್ತೇನೆ. ನಾನು ಇಷ್ಟು ಮಾಡಬಲ್ಲೆ."

" ನೀವು ಅಷ್ಟು ಮಾಡಿದರೆ ಸಾಕು. ಅವರಿಗೆ ಬರಹ ಬರುವುದಿಲ್ಲ. ಅವರ ಪರವಾಗಿ ನಾನು ಅರ್ಜಿ ಹಾಕಬೇಕು. ಆಗಬಹುದು ತಾನೆ ? "

" ಅದಕ್ಕೇನು, ಹಾಗೆಯೇ ಮಾಡಿ. ನನ್ನ ಕೈಲಾದದ್ದು ಮಾಡುತ್ತೇನೆ."

ಅಷ್ಟು ಹೊತ್ತಿಗೆ ಸಾಧನೆ ಎರಡು ಲೋಟಗಳಲ್ಲಿ ಆಗ ತಾನೆ ಸಿದ್ಧವಾಗಿದ್ದ ಎರಡು ಲೋಟ ಕಾಫಿ ತಂದು ಇಬ್ಬರಿಗೂ ಕೊಟ್ಟಳು. ರಾಚಪ್ಪನೂ ಅವಳನ್ನು ನೋಡಿದ. ಅವಳು ಹೊರಟು ಹೋದ ಮೇಲೆ ರಾಚಪ್ಪ ಹೇಳಿದ:

" ಗಂಡ ಹೆಂಡಿರು ಇಬ್ಬರೂ ಸೇವಾಕಾರ್ಯಕ್ಕೆ ನಿಂತುಬಿಟ್ಟಿದ್ದೀರಿ. ನನಗೆ ಬಹಳ ಸಂತೋಷವಾಯಿತು."

" ಅವಳು ನನ್ನ ಹೆಂಡತಿಯಲ್ಲ."

" ಕ್ಷಮಿಸಬೇಕು. ನಾನು ಹಾಗೆಂದು ತಿಳಿದುಕೊಂಡೆ."

" ನಾನು ನಿಮಗೆ ಹೇಳುತ್ತ ಇರಲಿಲ್ಲವೆ — ತಬ್ಬಲಿ ಹೆಣ್ಣುಮಗಳು ಒಬ್ಬಳಿದ್ದಾಳೆ, ನೀವು ಮದುವೆಯಾಗಬೇಕು ಅಂತ. ಅವಳೇ ಇವಳು. ಮಾದನ ಮಗಳು. ಚೆನ್ನಿ. ಈಗ — ಅವಳ ಹೆಸರು ಸಾಧನಾ."

" ಆ್ಞ ! " ಎಂದು ಬೆರಗಾದ ರಾಚಪ್ಪ. " ನನ್ನ ಕೂಡ ಹಾಸ್ಯ ಮಾಡುತ್ತ ಇದ್ದೀರೋ ಹೇಗೆ ? "

" ಮಾದ ತೀರಿಹೋದ. ಈಗ ಅವಳು ನನ್ನ ತಂಗಿ. ತಕ್ಕಮಟ್ಟಿಗೆ ಓದುಬರಹ ಕಲಿತಿದ್ದಾಳೆ. ಅಡಿಗೆಯ ಕೆಲಸ ಬರುತ್ತೆ. ನೀವು ನೋಡಿದ ಮಟ್ಟಿಗೆ ಇದ್ದಾಳೆ."

" ನೀವು ಹೇಳಿದ ಹುಡುಗಿ ಎಂದರೆ ನಾನು ನಂಬಲಾರೆ. ನಿಮ್ಮ ತಂಗಿಯೇ ಎಂದರೆ ಹೆಚ್ಚು ಒಪ್ಪುತ್ತೆ. "

" ಹಾಗೆಯೇ ಭಾವಿಸಿ ಅವಳನ್ನು ನೀವು........"

ರಾಚಪ್ಪ ಗೊಳ್ಳನೆ ನಕ್ಕ : " ನನಗೆ ಆಗಲೇ ಮದುವೆಯಾಗಿ ಒಂದು ಮಗು ಇದೆ ಸುಂದರಮೂರ್ತಿಗಳೆ ! "

" ನಾನು ಬಹಳ ಆಸೆ ಇಟ್ಟುಕೊಂಡಿದ್ದೆ. ನಿನ್ನೆ ರಾತ್ರಿಯೆಲ್ಲ ಅವಳ ಮದುವೆಯ ಕನಸನ್ನೆ ಕಾಣುತ್ತ ಇದ್ದೆ. ಹೋಗಲಿ. ದೈವಸಂಕಲ್ಪ ಕೂಡ ಬರಲಿಲ್ಲ " ಎಂದು ಸುಂದರಮೂರ್ತಿ ಖಿನ್ನನಾದ.

ರಾಚಪ್ಪ ಹೇಳಿದ: " ನೋಡಿ, ಇದೇ ದೈವಸಂಕಲ್ಪ ಎನ್ನುವುದು.

ನನಗೆ ಮದುವೆಯಾಗದಿದ್ದರೆ ಈಕೆಯನ್ನು ನಾನುಂ ಖಂಡಿತ ಮದುವೆ ಮಾಡಿಕೊಳ್ಳುತ್ತಿದ್ದೆ. ನಮ್ಮವರಿಗೇ ಇವಳನ್ನು ಕೊಡುವುದರಲ್ಲಿ ಹೆಚ್ಚುಗಾರಿಕೆಯೇನು ? ನಮ್ಮವರು ಇಂಥ ಹೆಣ್ಣನ್ನು ಕೈಹಿಡಿಯಲು ಯೋಗ್ಯರಲ್ಲ. ಈಕೆ ಅಪ್ಪಿತಪ್ಪಿ ನಮ್ಮ ಜಾತಿಯಲ್ಲಿ ಹುಟ್ಟಿರಬೇಕು. ನಿಮ್ಮಂತಹ ಮುಂದುವರಿದ ಬ್ರಾಹ್ಮಣ ವಿದ್ಯಾವಂತ ಯುವಕನಿಗೆ ಇವಳು ತಕ್ಕವಳು. ಹಾಗೆ ಅವಳನ್ನು ನೀವು ತಯಾರುಮಾಡಿದ್ದೀರಿ. ಹರಿಜನರ ಹುಡುಗಿಯನ್ನು ಬ್ರಾಹ್ಮಣನೊಬ್ಬ ಮದುವೆಯಾದನೆಂದರೆ ಸಮಾಜದಲ್ಲಿ ದೊಡ್ಡ ಕ್ರಾಂತಿಯಾಗುವುದು. ಇದೇ ದೈವಸಂಕಲ್ಪ ಎನ್ನುವ ಹಾಗೆ ನನಗೆ ತೋರುತ್ತೆ.''

ಒಬ್ಬೊಬ್ಬರಾಗಿ ಆಹ್ವಾನಿತರು ಆಶ್ರಮಕ್ಕೆ ಬರತೊಡಗಿದರು. ಸುಂದರ ಎದ್ದು ಬಂದವರನ್ನೆಲ್ಲ ಬರಮಾಡಿಕೊಂಡು ಅಮಲ್ದಾರರಿಗೆ ಪರಿಚಯಮಾಡಿ ಕೊಡುವ ಕೆಲಸಕ್ಕೆ ಮೊದಲುಮಾಡಿದ. ಕರೆದಿದ್ದವರಲ್ಲಿ ಬಹುಮಂದಿ ಬಂದರು. ಶಾಲೆಯ ಉಪಾಧ್ಯಾಯರುಗಳು ಕೆಲವರು, ಡಾಕ್ಟರು ಹೊರತಾಗಿ ಉಳಿದವರೆಲ್ಲ ಇತ್ತ ಕಡೆ ಎಂದೂ ತಲೆಹಾಕಿದವರಲ್ಲ. ಇಂದೂ ಅವರಿಗೆ ಬರಲು ಇಷ್ಟವಿರಲಿಲ್ಲ. ಅಮಲ್ದಾರರು ಅಸ್ಪೃಶ್ಯರೆಂದು ಎಲ್ಲರಿಗೂ ತಿಳಿದಿದ್ದರೂ, 'ಅಮಲ್ದಾರರು. ಬರದೆ ಅವರನ್ನು ಎದುರುಹಾಕಿಕೊಳ್ಳ ಬಾರದು. ಯಾವ ಕಾಲಕ್ಕೆ ಅವರಿಂದ ಏನು ಸಹಾಯ ಹೊಂದಬೇಕಾಗು ತ್ತದೆಯೋ' ಎಂಬ ಅಂಜಿಕೆ–ಆಶೆಗಳು ಬೆರತ ಸ್ವಾರ್ಥಬುದ್ಧಿಯಿಂದ ಬಂದಿದ್ದರವರು. ಕೆಲವರು ಹರಿಜನರೂ ಅರೆಬತ್ತಲೆಯಾಗಿಯೇ ಬಂದು ಹೊರಗೆ ನಿಂತಿದ್ದರು; ಸುಂದರ ಅವರನ್ನೆಲ್ಲ ಒಳಕ್ಕೆ ಬರಮಾಡಿದ; ಅವರೆಲ್ಲ ಬಂದು ಒಂದು ಮೂಲೆಯಲ್ಲಿ ಕುಳಿತರು. ಉಪಾಹಾರವಿತರಣೆಗೆ ಮೊದಲಾ ಯಿತು; ಅಸ್ಪೃಶ್ಯರೊಂದಿಗೆ ಕುಳಿತು ತಿನ್ನಬೇಕಲ್ಲಾ ಎಂದು ಕೆಲವರು ಅಸಹ್ಯಭಾವನೆಯಿಂದ ಉಪಾಹಾರ ಸ್ವೀಕರಿಸಿದರು ; 'ಇದೇ ತಾನೆ ತಿಂಡಿ ಆಯಿತು,' 'ನಾನು ಕಾಫಿ ತಿಂಡಿ ಹೊರಗೆಲ್ಲೂ ಮುಟ್ಟುವುದಿಲ್ಲ,' 'ನನಗೆ ತಲೆ ನೋವು,' 'ನನಗೆ ಹೊಟ್ಟೆ ನೋವು' ಎಂದು ಹೇಳಿ ಕೆಲವರು ಸುಳ್ಳು ನೆವಗಳನ್ನು ಹೇಳಿ ತಿನ್ನುವುದನ್ನು ತಪ್ಪಿಸಿಕೊಂಡರು.

ಉಪಾಹಾರ ಮುಗಿದ ಮೇಲೆ, ಸುಂದರಮೂರ್ತಿ ನೆರೆದಿದ್ದವರನ್ನು

ಕುರಿತು ನಾಲ್ಕು ಮಾತು ಹೇಳಬೇಕೆಂದು ಕೇಳಿ, ಒತ್ತಾಯಪಡಿಸಿ, ಅದಕ್ಕೆ ಪೂರ್ವಭಾವಿಯಾಗಿ ರಾಚಪ್ಪನನ್ನು ಸಭೆಗೆ ಪರಿಚಯ ಮಾಡಿಕೊಟ್ಟು, ಕಡೆಯಲ್ಲಿ ಹೀಗೆ ಹೇಳಿದ :

" ನೀವೆಲ್ಲ ಇಲ್ಲಿಗೆ ಬಂದಿರುವುದು ನನಗೆ ಬಹಳ ಸಂತೋಷ. ನಮ್ಮ ಊರಿನಿಂದ ರಾಚಪ್ಪನವರ ಹಾಗೆ ಒಬ್ಬರು ಮುಂದಕ್ಕೆ ಬಂದರೂ ಸಾಕು. ನಾನು ನಿಮ್ಮಲ್ಲಿ ಬೇಡಿಕೊಳ್ಳುವುದಿಷ್ಟೆ. ಊರಿನವರಿಗೆಲ್ಲರಿಗೂ ಸೇರಿದ ರಸ್ತೆ, ಬಾವಿ, ಕೆರೆಕಟ್ಟೆ, ಹೊಳೆ, ಶಾಲೆ, ಆಸ್ಪತ್ರೆ ಇವುಗಳಿಗೆ ಅಸ್ಪೃಶ್ಯರು ಬಂದರೆ ನೀವು ಅವರಿಗೆ ಹಿಂಸೆ ಮಾಡಬೇಡಿ. ನಮಗೆ ಸ್ವರಾಜ್ಯ ಬಂದ ಮೇಲೆ ಈ ಸಂದರ್ಭದಲ್ಲಿ ನಾವು ಕಾನೂನುಗಳನ್ನು ಮಾಡಬಹುದು. ಆದರೆ ಕಾನೂನುಗಳಿಂದ ಹರಿಜನರ ಉದ್ಧಾರ ಆಗುವುದಿಲ್ಲ. ಹಿಂದೂಗಳು ಎನ್ನಿಸಿ ಕೊಂಡ ನಮ್ಮ ವಿಶ್ವಾಸದ ಪ್ರೋತ್ಸಾಹ ಸಹಾಯಗಳಿಂದಲೇ ಅವರು ಮುಂದಕ್ಕೆ ಬರಬೇಕಾಗಿದೆ. ನೀವು ಅವರೊಂದಿಗೆ ಊಟಮಾಡಬೇಡಿ, ಅವರು ಕೊಟ್ಟ ತಿಂಡಿ ತಿನ್ನಬೇಡಿ. ನಾನು ಕೊಟ್ಟ ತಿಂಡಿಯನ್ನೇ ಇಲ್ಲಿ ಕೆಲವರು ತಿನ್ನಲಿಲ್ಲ. ಇದಕ್ಕೆ ನನ್ನ ಆಕ್ಷೇಪಣೆ ಇಲ್ಲ. ನಮ್ಮ ವಿಶ್ವಾಸದ ಶಿಕ್ಷಣ ಪ್ರೋತ್ಸಾಹ ದೊರೆತರೆ ಅಸ್ಪೃಶ್ಯರು ಹೇಗೆ ಆಗಬಹುದು ಎನ್ನುವು ದಕ್ಕೆ ಈ ರಾಚಪ್ಪನವರೊಬ್ಬರು ನಿದರ್ಶನ, ಮಾದನ ಮಗಳು ಚೆನ್ನಿ ಒಬ್ಬಳು ನಿದರ್ಶನ; ಇಲ್ಲೇ ಕುಳಿತಿದ್ದಾಳೆ, ನೋಡಿ. ನೀವು ನೋಡಿದರೇ ಪಾಪಸಂಘಟನೆಯಾಗುತ್ತೆ ಎಂದು ಅಲಕ್ಷಿಸುವ ವ್ಯಕ್ತಿಯೊಂದನ್ನು ಯಾರೋ ಬೈರಾಗಿಗಳು ಮೂರು ವರ್ಷ ಕಾಲದಲ್ಲಿ ನಯವಾದ ನಡೆನುಡಿ ಯುಳ್ಳ ಸುಸಂಸ್ಕೃತ ಕನ್ಯೆಯನ್ನಾಗಿ ಕಡೆದಿಟ್ಟು ಈಗ ನನ್ನ ಪಾಲನೆಗೆ ಬಿಟ್ಟು ಹೋಗಿದ್ದಾರೆ. ನೀವು ಔದಾರ್ಯ ತೋರಿಸಿ ಸಹಾಯಮಾಡಿದರೆ, ಅರೆ ಬತ್ತಲೆಯ ಅಜ್ಞಾನ ಮೂರ್ತಿಗಳಾಗಿ ನಿಮ್ಮೊಂದಿಗೆ ಇಂದು ಕುಳಿತಿರುವ ಈ ಮೂಕ ಜೀವಚ್ಛವಗಳು ನಾವೂ ಮನುಷ್ಯರು ಎಂದು ತಲೆಯೆತ್ತಿ ಓಡಾಡುವ ಮಟ್ಟಿಗೆ ಆಗುತ್ತೆ. ನೀವೆಲ್ಲ ಅಷ್ಟುಮಟ್ಟಿಗೆ ಸಹಾಯಮಾಡಬೇಕು " ಎಂದು ಪ್ರಾರ್ಥಿಸಿ ಕುಳಿತುಕೊಂಡ.

ರಾಚಪ್ಪ ಎದ್ದು ನಾಲ್ಕು ಮಾತು ಹೇಳಿದ : " ಸುಂದರಮೂರ್ತಿಗಳು ನನ್ನ ಸಹಪಾಠಿಗಳು. ಅವರು ವಿದ್ಯಾರ್ಥಿಗಳಾಗಿ ಏನೇನು ಹೇಳುತ್ತಿ

ದ್ದರೋ ಅದನ್ನೆಲ್ಲ ಕಾರ್ಯತಃ ಮಾಡಿ ತೋರಿಸುವ ಸಾಹಸಕಾರ್ಯಕ್ಕೆ ಕೈಹಾಕಿದ್ದಾರೆ. ಈ ಊರಿನ ಹರಿಜನರಿಗೆ ಸಾಗುವಳಿಗೆ ಬೀಳುಭೂಮಿ ಕೊಡಿಸಿಕೊಡಬೇಕೆಂದು ನನ್ನನ್ನು ಕೇಳಿಕೊಂಡಿದ್ದಾರೆ. ನನ್ನ ಕೈಲಾದದ್ದನ್ನು ಮಾಡುವುದಾಗಿ ಭರವಸೆಕೊಟ್ಟಿದ್ದೇನೆ. ಏನಿದ್ದರೇನು ? ನಿಮ್ಮ ವಿಶ್ವಾಸ, ಸಹಾಯ, ಸಹಾನುಭೂತಿ ಅವರಿಗೆ ಬೇಕು. ನೀವು ಅದನ್ನು ನೀಡಬೇಕು. ಸುಂದರಮೂರ್ತಿಗಳಿಗೆ ಅವರ ಘನವಾದ ಕಾರ್ಯದಲ್ಲಿ ನೀವೆಲ್ಲ ನೆರವಾಗಬೇಕು. ನಾನು ಹೆಚ್ಚಿಗೆ ಹೇಳಬೇಕಾದ್ದೇನೂ ಇಲ್ಲ" ಎಂದು ಕುಳಿತುಕೊಂಡ. ಸುಂದರಮೂರ್ತಿ ರಾಜಪ್ಪನಿಗೆ ವಂದನೆಯೊಡನೆ ಪುಷ್ಪ ಮಾಲಿಕೆಯನ್ನು ಸಮರ್ಪಿಸಿದ.

ಅಂದಿನ ಸಭೆಯೇನೋ ಯಶಸ್ವಿಯಾಯಿತು. ಸುಂದರ ನಿರೀಕ್ಷಿಸಿದ್ದಂತೆ ಅಡ್ಡ ಪ್ರಶ್ನೆಗಳು ಯಾರಿಂದಲೂ ಬರಲಿಲ್ಲ. ಎಲ್ಲರೂ ನಗೆಯನ್ನು ನಟಿಸುತ್ತ, ಪ್ರೋತ್ಸಾಹದ ಮಾತುಗಳನ್ನೆ ಆಡುತ್ತ ಹಿಂದಿರುಗಿದರು.

ಸಭೆಯಿಂದ ಫಲ ಮಾತ್ರ ಏನೂ ಆಗಲಿಲ್ಲ. ಊರಿನವರೆಲ್ಲಾ ಸಭೆಯ ವಿಷಯವನ್ನೆ ಮರೆತರು. ಸುಂದರನಲ್ಲಿ ಅಸೂಯೆಗೊಂಡ ಕೆಲವರು, "ಸುಂದರಮೂರ್ತಿ ಹರಿಜನರ ಹೆಸರು ಹೇಳಿಕೊಂಡು ತನ್ನ ಜಮೀನಿನ ಒತ್ತಿನ ಭೂಮಿಯನ್ನು ಸರಕಾರದಿಂದ ಹೊಡೆಯಬೇಕೆಂದು ಮಾಡಿಕೊಂಡಿರುವನೆಂದೂ ಅವನ ಪ್ರಾರ್ಥನೆಗೆ ಮನ್ನಣೆ ಕೊಡಕೂಡದೆಂದೂ" ಕೆಲವು ದಿನಗಳಲ್ಲೇ ಜಿಲ್ಲಾಧಿಕಾರಿಗಳಿಗೆ ಮೂಗರ್ಜಿ ಸಲ್ಲಿಸಿದರು. ಅಮಲ್ದಾರರ ಶಿಫಾರಸಾಗಿ ಬಂದಿದ್ದ ಸುಂದರಮೂರ್ತಿಯ ಬೇಡಿಕೆಯ ಅರ್ಜಿ ಜಿಲ್ಲಾಧಿಕಾರಿಗಳ ಕಡತಬಿಟ್ಟು ಮೇಲಕ್ಕೆ ಹೋಗಲೇ ಇಲ್ಲ. ಈ ಒಳಸಂಚು ಸುಂದರಮೂರ್ತಿಗೆ ತಿಳಿಯದು. "ನನ್ನ ಬೇಡಿಕೆಗೆ ಸುಮುಖವಾದ ಉತ್ತರ ಇಂದು ಬಂದೀತು ನಾಳೆ ಬಂದೀತು" ಎಂದು ಸುಂದರಮೂರ್ತಿ ಆಶಾಭಾವನೆಯಿಂದ ಕಾಯುತ್ತಲೇ ಇದ್ದ.

೮೭

ಸ್ವಾತಂತ್ರ್ಯಕ್ಕಾಗಿ ದೇಶವೂ ಕಾದಿತ್ತು ; ಕಾಯುತ್ತಲೇ ಇತ್ತು : ಸರ್ವತ್ಯಾಗದ ಕಟ್ಟಕಡೆಯ ಹೋರಾಟಕ್ಕಾಗಿ ಕಾದಿತ್ತು.

ಪ್ರಾಂತಗಳಲ್ಲಿ ಕಾಂಗ್ರೆಸ್ ಅಧಿಕಾರ ವಹಿಸಿಕೊಂಡು ಆಡಳಿತವನ್ನು ಯಶಸ್ವಿಯಾಗಿ ನಡಸುತ್ತಿತ್ತು. ಆದರೆ ಪ್ರಾಂತೀಯ ಸರ್ಕಾರಗಳು ಹರಿಜನರ ಉದ್ಧಾರಕ್ಕಾಗಿ ಏನೂ ವ್ಯಾಪಕವಾದ ಕಾರ್ಯವನ್ನು ಮಾಡಲಾಗಲಿಲ್ಲ. ಹರಿಜನರ ಸೇವಕ ಸಂಘವೂ ಅದರ ಶಾಖಾ ಸಂಘಗಳೂ ಭಾರತದ ಎಲ್ಲೆಡೆಯೂ ಸ್ಥಾಪಿತವಾಗಿ ತಮ್ಮ ಕೈಲಾದಷ್ಟುಗೆ ಸೇವೆ ಮಾಡುತ್ತಲೇ ಇದ್ದುವು; ಜನದ ಮನಸ್ಸು ಮಾರ್ಪಾಟಾಗದಿದ್ದರೂ ಸಮಸ್ಯೆಯತ್ತ ತಿರುಗಿತ್ತು. ಸುಂದರಮೂರ್ತಿಯು ತನ್ನ ಆಶ್ರಮದಲ್ಲಿ ಎಂದಿನಂತೆ ಒಬ್ಬೊಂಟಿಗನಾಗಿ ಕಾರ್ಯನಿರತನಾಗಿದ್ದ. ಆದರೆ ಎಲ್ಲೆಲ್ಲಿಯೂ ಹರಿಜನರ ಸ್ಥಿತಿ ಇದ್ದಂತೆಯೇ ಇದ್ದಿತು. ರಾಜಕೀಯ ಹಾಗೆ, ಸಮಾಜವ್ಯವಸ್ಥೆ ಹೀಗೆ.

ಈ ನಡುವೆ, ಎರಡನೆಯ ಮಹಾಯುದ್ಧವು ಇದ್ದಕ್ಕಿದ್ದಂತೆ ಆರಂಭವಾಗಿ ಜಗತ್ತಿನ ಮೇಲೆಲ್ಲಾ ತನ್ನ ಕಾರ್ಮೋಡವನ್ನು ಹರಡುತ್ತಿತ್ತು. ಈ ಯುದ್ಧದಿಂದ ಭಾರತಕ್ಕೆ ಅನುಕೂಲವಾಗಬಹುದೆಂದು ಭಾರತೀಯರು ಆಶಿಸತೊಡಗಿದರು. ಗಾಂಧಿಯವರು ಬ್ರಿಟಿಷರಿಗೇ ಜಯವನ್ನು ಕೋರಿದರು. "ಯುದ್ಧಕ್ಕೆ ನೆರವಾಗಿ" ಎಂದು ಬ್ರಿಟಿಷ್ ಸರ್ಕಾರ ಭಾರತದ ಜನತೆಯನ್ನು ಕೇಳತೊಡಗಿತು. "ಈ ಯುದ್ಧದಲ್ಲಿ ನಾವು ಸೋತರೆ ಫ್ಯಾಸಿಸಂ ಜಗತ್ತನ್ನೇ ಆಕ್ರಮಿಸಿ, ಜಗತ್ತಿನ ಜನಾಂಗಗಳೆಲ್ಲವೂ ಹಿಟ್ಲರ್ ಜರ್ಮನಿಯ ದಬ್ಬಾಳಿಕೆಗೆ ಒಳಗಾಗುವುವು. ಈ ಯುದ್ಧ ಜಗತ್ತಿನ ಸ್ವಾತಂತ್ರ್ಯಕ್ಕೆ" ಎಂದು ಬ್ರಿಟನ್ ಘೋಷಿಸಿತು. "ಹಾಗಾದರೆ ನಮಗೆ ಸ್ವಾತಂತ್ರ್ಯ ಕೊಡಿ. ಸ್ವತಂತ್ರ ಜನಾಂಗವೆನಿಸಿ ನಿಮಗೆ ಹೆಗಲು ಕೊಟ್ಟು ಸಮಾನಸ್ಕಂಧರಾಗಿ ಹೋರಾಡಿ ರಕ್ತ ಚೆಲ್ಲುತ್ತೇವೆ" ಎಂದು ಭಾರತದ ದೇಶನಾಯಕರು ಸಾರಿದರು! ಈ ಸ್ವಾತಂತ್ರ್ಯದ ಕೂಗು ಬ್ರಿಟಿಷ್ ಸರ್ಕಾರಕ್ಕೆ ಸಮಸ್ಯೆಯನ್ನೊಡ್ಡಿತು. ಸ್ವಾತಂತ್ರ್ಯದ ಕೂಗನ್ನು ಅಡಗಿಸುವುದೊಂದೇ ಅವರಿಗೆ ತೋರಿದ ಪರಿಹಾರ ಮಾರ್ಗ. ಬ್ರಿಟಿಷ್ ಸರ್ಕಾರದ ಸೂಚನೆಯಂತೆ ಇಂಡಿಯಾ ಸರ್ಕಾರ ದೇಶದ ಪ್ರಮುಖರನ್ನು ಒಬ್ಬೊಬ್ಬರನ್ನಾಗಿ ಸೆರೆಹಿಡಿಯತೊಡಗಿತು. ಜವಾಹರಲಾಲ್ ನೆಹರು ಅವರಿಗೆ ನಾಲ್ಕು ವರ್ಷಗಳ ಸೆರೆಮನೆಯ ಶಿಕ್ಷೆಯಾಯಿತು. ಫ್ಯಾಸಿಸ್ಟ್ ರಾಜ್ಯಗಳ ವಿರುದ್ಧ ಹೋರಾಡುತ್ತಿದ್ದ ಬ್ರಿಟನ್ ಫ್ಯಾಸಿಸಮ್ಮಿನ ಪ್ರಬಲಶತ್ರುವನ್ನು ಕಾರಾಗೃಹಕ್ಕೆ ತಳ್ಳಿತು! ಭಾರತದಲ್ಲಿ

ವಾಕ್‌ಸ್ವಾತಂತ್ರ್ಯ ಪತ್ರಿಕಾಸ್ವಾತಂತ್ರ್ಯ ಮುಂತಾದ ಅನೇಕ ಪ್ರಜಾಹಕ್ಕು ಬಾಧ್ಯತೆಗಳಿಗೆ ಕೊಡಲಿಪೆಟ್ಟು ಬಿದ್ದಿತು. ವಾಕ್‌ಸ್ವಾತಂತ್ರ್ಯಕ್ಕಾಗಿಯೇ ಅನೇಕರ ದಸ್ತಗಿರಿಗಳಾದುವು. ಹೊಸ ಚಳವಳಿಯಲ್ಲಿ ಗಾಂಧಿಯವರ ವೀರ ಅನುಯಾಯಿಯಾದ ವಿನೋಬಾ ಭಾವೆಯವರು ಮೊದಲನೆಯ ಸತ್ಯಾಗ್ರಹಿಯಾಗಿ ಸೆರೆಮನೆಗೆ ಹೋದರು. ಭಾರತದಲ್ಲಿ ಬ್ರಿಟಿಷ್ ದ್ವೇಷ ಕಾಳ್ಕಿಚ್ಚಿನಂತೆ ಹಬ್ಬತೊಡಗಿತು. ಬ್ರಿಟನ್ನಿನಲ್ಲೂ ಅಮೇರಿಕದಲ್ಲೂ ಭಾರತದ ಪಕ್ಷಪಾತಿಗಳು "ಭಾರತವನ್ನು ಸರಿಯಾಗಿ ನಡಸಿಕೊಳ್ಳಿ" ಎಂದು ಬ್ರಿಟಿಷ್ ಸರ್ಕಾರಕ್ಕೆ ಬುದ್ಧಿವಾದ ಹೇಳತೊಡಗಿದರು. ಈ ಮಧ್ಯೆ ಮಾಸ್ಕೋವಿನಲ್ಲಿ ಬ್ರಿಟಿಷ್ ರಾಯಭಾರಿಯಾಗಿದ್ದ ಸರ್ ಸ್ಟಾಫರ್ಡ್ ಕ್ರಿಪ್ಸ್ ರವರು ರಷ್ಯಾವನ್ನು ಮಿತ್ರ ರಾಷ್ಟ್ರಮಂಡಲಕ್ಕೆ ಒಲಿಸಿಕೊಳ್ಳುತ್ತಿದ್ದರು. ಜರ್ಮನಿ ಮೂರ್ಖತನದಿಂದ ರಷ್ಯಾದ ಮೇಲೆ ತಿರುಗಿ ಬಿದ್ದು, ಕ್ರಿಪ್ಸ್‌ರವರ ಸಂಧಾನ ತಾನಾಗಿ ಫಲಕಾರಿಯಾಯಿತು; ಪ್ರಬಲ ರಾಜಕಾರಣಿಯೆನಿಸಿ ಬ್ರಿಟನ್ನಿಗೆ ಅವರು ಹಿಂದಿರುಗಿದ್ದರು. ಚರ್ಚಿಲ್ಲರು ಭಾರತೀಯರ ಕಣ್ಣಿಗೆ ಮಣ್ಣೆರಚಲು ತಮಗೆ ಬೇಡದ ಕ್ರಿಪ್ಸ್‌ರನ್ನು ಸಂಧಾನಕ್ಕಾಗಿ ಭಾರತಕ್ಕೆ ಕಳುಹಿದರು. ನೆಹರೂ ಅವರ ಬಿಡುಗಡೆಯಾಯಿತು.

ಬ್ರಿಟನ್ನಿಗೆ ಭಾರತದಿಂದ ಹೆಚ್ಚಿನ ಸಹಾಯ ಸಹಕಾರಗಳು ಬೇಕಾಗಿದ್ದುವು. ಇತ್ತ ಜಪಾನ್ ಜರ್ಮನಿಯ ಕಡೆ ಸೇರಿಕೊಂಡು, ಅಮೆರಿಕಾದೊಂದಿಗೆ ಶಾಂತಿಯ ಮಾತಾಡುತ್ತಲೇ ಪರ್ಲ್‌ಹಾರ್ಬರ್ ಪ್ರಕರಣ ನಡಸಿ, ಮುಸುಕಿನಲ್ಲಿ ಇರಿದು, ಮಲಯಾ, ಬರ್ಮ, ಸಿಂಗಪೂರ್ ಇವನ್ನು ಕಬಳಿಸಿತ್ತು. ಭಾರತದ ಮೇಲೆ ಜಪಾನಿನ ಆಕ್ರಮಣದ ಹೆದರಿಕೆ ದಿನದಿನಕ್ಕೆ ಹೆಚ್ಚುತ್ತಿತ್ತು. ಕಾಂಗ್ರೆಸ್ಸಿನಿಂದ ಸಿಡಿದು ನಿಂತ ವೀರ ಸುಭಾಸಚಂದ್ರ ಬೋಸರು ಭಾರತದಿಂದ ಕಣ್ಮರೆಯಾಗಿ ಹೋಗಿ, ಜಪಾನಿನ ನೆರವು ಹೊಂದಿ, ಭಾರತದ ಬಿಡುಗಡೆಗಾಗಿ ಐ. ಎನ್. ಎ. ದಳ ಕಟ್ಟಿ, ದಂಡಯಾತ್ರೆ ಹೊರಟಿದ್ದರು. ಈ ವಿಷಮ ಪರಿಸ್ಥಿತಿಯಲ್ಲಿ ಕ್ರಿಪ್ಸ್ ಅವರ ಸಂಧಾನ ಮೊದಲಾಯಿತು.

ಸಂಧಾನದ ಬಿಕ್ಕಟ್ಟುಗಳೆಲ್ಲ ಬಗೆ ಹರಿದು, ಕ್ರಿಪ್ಸ್‌ರವರ ಸಂಧಾನ ಫಲಕಾರಿಯಾಗುವ ಸೂಚನೆಗಳೇ ಕಂಡುಬಂದುವು. ಯುದ್ಧದಲ್ಲಿ ಸಂಪೂರ್ಣ

ಸಹಕಾರವನ್ನು ಕೊಡುವ ಷರತ್ತಿನ ಮೇಲೆ ಮುಸ್ಲಿಂ ಲೀಗೂ ಕಾಂಗ್ರೆಸ್ಸೂ ಕೂಡಿ ರಾಷ್ಟ್ರೀಯ ಸರ್ಕಾರವನ್ನು ರಚಿಸುವ ಯೋಚನೆ ಏರ್ಪಟ್ಟಿತು. ಈ ಹೊತ್ತಿಗೆ ಚರ್ಚಿಲ್ ಉಸಿರು ಕೂಡಿಕೊಂಡಿದ್ದರೂ, ಯುದ್ಧರಂಗದಲ್ಲಿ ಅಮೇರಿಕಾ ಪ್ರಬಲವಾಗಿ, ರಷ್ಯದ ಪರಾಕ್ರಮ ಪ್ರದರ್ಶನವೂ ಉತ್ಸಾಹ ಕಾರಿಯಾಗಿ, ಯುದ್ಧದ ಗತಿ ಮಾರ್ಪಾಟಾಗುತ್ತಿತ್ತು. ಚರ್ಚಿಲ್ಲರು ಕ್ರಿಪ್ಸ್ ಅವರನ್ನು ಹಿಂದಕ್ಕೆ ಕರಸಿದರು. ಭಾರತದ ರಾಷ್ಟ್ರೀಯತೆಯನ್ನು ದಮನ ಮಾಡುವ ನಿಶ್ಚಯ ಮಾಡಿದರು.

ಈ ನಡುವೆ ರಷ್ಯ ಯುದ್ಧರಂಗವನ್ನು ಪ್ರವೇಶಿಸಿದ ಮೇಲೆ, ಭಾರತದಲ್ಲಿ ಸೆರೆಮನೆಯಲ್ಲಿದ್ದ ಕಮ್ಯೂನಿಸ್ಟ್ ಪಾರ್ಟಿಯ ಪ್ರಮುಖರ ಬಿಡುಗಡೆಯಾಯಿತು. ಹಿಂದೂ ಮಹಾಸಭೆಯವರು ಎಂದಿನಿಂದಲೂ ಬ್ರಿಟಿಷ್ ಸರಕಾರಕ್ಕೆ ಸಹಾಯದ ಮಾತಾಡುತ್ತಿದ್ದರು; ಹಿಂದೂಗಳು ಹೆಚ್ಚುಹೆಚ್ಚಾಗಿ ಸೈನ್ಯಕ್ಕೆ ಸೇರಬೇಕೆಂದು ಪ್ರಚಾರಮಾಡುತ್ತಿದ್ದರು. ಈಗ ಕಮ್ಯೂನಿಸ್ಟ್ ಪಾರ್ಟಿ ಹೊರಕ್ಕೆ ಬಂದು, "ಇದು ಜನತಾಯುದ್ಧ. ಈ ಯುದ್ಧಕ್ಕೆ ಭಾರತೀಯರು ಸಹಾಯಮಾಡಬೇಕು" ಎಂದು ಘೋಷಿಸತೊಡಗಿದರು. ಬ್ರಿಟಿಷರಿಗೆ ಇಷ್ಟು ಸಾಕಾಯಿತು. ಅವರು ಗಾಂಧಿಯವರನ್ನೂ ಕಾಂಗ್ರೆಸ್ಸನ್ನೂ ಉಸಿರೆತ್ತದಂತೆ ತುಳಿಯಲು ತೀರ್ಮಾನಮಾಡಿದರು.

೧೯೪೨ನೆಯ ಆಗಸ್ಟ್ ೮ರಲ್ಲಿ ಬೊಂಬಾಯಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಗಾಂಧಿಯವರ ನೇತೃತ್ವದಲ್ಲಿ 'Quit India' (ಭಾರತವನ್ನು ಬಿಟ್ಟು ಹೊರಡಿ) ಎಂಬ ಮಂತ್ರವನ್ನು ಉಚ್ಚರಿಸಿತು. ಮಂತ್ರ ನಾಡಿನಲ್ಲೆಲ್ಲ ಮೊಳಗಿತು. ದೇಶದ ಜನತೆಗೆ ಗಾಂಧಿಯವರು ಸ್ವಾತಂತ್ರ್ಯದ ಹೋರಾಟಕ್ಕೆ ಕರೆ ಕೊಟ್ಟು, "ಮಾಡಿರಿ ಇಲ್ಲವೆ ಮಡಿಯಿರಿ'' ಎಂದು ಆತ್ಮತ್ಯಾಗದ ಮಂತ್ರವನ್ನು ಉಪದೇಶಿಸಿದರು. ಜನ ಮಾರನೆಯ ದಿನ ಬೆಳಗ್ಗೆ ಎದ್ದು, ಇಂದು ಗಾಂಧಿಯವರು ಏನು ಹೇಳುವರೋ, ಸ್ವಾತಂತ್ರ್ಯದ ಹೋರಾಟ ಹೇಗೆ ಪ್ರಾರಂಭವಾಗತಕ್ಕದ್ದೋ ಎಂದು ಯೋಚಿಸುವ ಮುನ್ನ, ಕಣ್ಣು ಹೊಸಕಿಕೊಳ್ಳುತ್ತಿರುವಾಗಲೇ, ಗಾಂಧಿಯವರ ಮತ್ತು ವರ್ಕಿಂಗ್ ಕಮಿಟಿ ಸದಸ್ಯರ ದಸ್ತಗಿರಿಗಳಾದುವು. ದೇಶ 'ಅನಾಥ'ವಾಯಿತು; 'ಅನಾಯಕ'ವಾಯಿತು; ರೊಚ್ಚಿಗೆದ್ದಿತು. ನಾಡಿನ ತಂದೆ ಸೆರೆಮನೆಗೆ

ಹೋದರೆಂದು ನಾಡಮಕ್ಕಳ ನೆತ್ತರು ಕುದಿಯಿತು. ಜನ ದಂಗೆಯೆದ್ದರು; ವಿದ್ಯಾರ್ಥಿಗಳು ಶಾಲೆ-ಕಾಲೇಜುಗಳಿಗೆ ಬಹಿಷ್ಕಾರ ಹಾಕಿ ಯುದ್ಧಕ್ಕೆ ಧುಮುಕಿದರು; ಎಲ್ಲರೂ ತಮಗೆ ತಾವೇ ನಾಯಕರಾದರು. ದಿಕ್ಕುಗೆಟ್ಟ ಜನಕ್ಕೆ ಅಹಿಂಸೆಯ ಮಾರ್ಗದಲ್ಲಿ ಮುಂದುವರಿಯಲು ಮಾರ್ಗದರ್ಶನ ವಿಲ್ಲವಾಯಿತು; ಅಂಚೆಮನೆ ಪೋಲೀಸ್ ಸ್ಟೇಷನ್‌ಗಳಿಗೆ ಬೆಂಕಿಯಿಡತೊಡ ಗಿದರು; ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸತೊಡಗಿದರು; 'ಜನತಾಯುದ್ಧ' ವನ್ನು ಮಾಡುತ್ತಿದ್ದ ಬ್ರಿಟನ್ನು ಭಾರತದ ಜನತೆಯ ಮೇಲೆ ಯುದ್ಧಕ್ಕೆ ತೊಡಗಿ, ಸಾವಿರ ಸಾವಿರ ಸಂಖ್ಯೆಯಲ್ಲಿ ಜೀವಗಳನ್ನು ಬಲಿ ತೆಗೆದು ಕೊಂಡಿತು. ಗುಂಡಿನೇಟಿನ ಸುರಿಮಳೆಯ ಮುಂದೆ ಲಾಠಿ ಪ್ರಹಾರ ಸಪ್ಪೆ ಯೆನಿಸತೊಡಗಿತು. ದಸ್ತಗಿರಿಗಳಿಗೆ ಲೆಕ್ಕವೇ ಇಲ್ಲ. ಕೂತರೆ ದಸ್ತಗಿರಿ, ನಿಂತರೆ ದಸ್ತಗಿರಿ; ಗಾಂಧಿ ಟೋಪಿ ಇಟ್ಟರೆ ದಸ್ತಗಿರಿ, "ಗಾಂಧಿಕಿ ಜೈ" ಎಂದರೆ ದಸ್ತಗಿರಿ. ಭಾರತಕ್ಕೆ ಭಾರತವೇ ಸೆರೆಮನೆಯಾಯಿತು.

ಬ್ರಿಟಿಷ್ ಪ್ರಾಂತ ಸಂಸ್ಥಾನ ಎಂಬ ಭೇದವಿಲ್ಲದೆ ಈ ಚಳವಳಿ ಸರ್ವ ವ್ಯಾಪಕವಾಯಿತು. ಬೆಂಗಳೂರಿನಲ್ಲಿ ಅದರ ಉಗ್ರರೂಪವನ್ನು ಲಕ್ಷ್ಮೀಪತಿ ಕಣ್ಣಾರೆ ಕಂಡ; ಸ್ಕೂಲಿನಲ್ಲಿ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟ; ಸ್ವಾತಂತ್ರ್ಯಯುದ್ಧ ನಿರೀಕ್ಷಕನಾಗಿ, ಅದರ ಅಲ್ಲೋಲ ಕಲ್ಲೋಲ ತರಂಗ ಗಳ ನಿನಾದಕ್ಕೆ ಪಡಿನುಡಿಯುತ್ತಿದ್ದ ಹೃದಯದ ತುಳಿತವನ್ನು ಕವಿತೆಯಲ್ಲಿ ಪ್ರತಿಧ್ವನಿಸುತ್ತ, ಅವುಗಳನ್ನು ಪ್ರಕಟಿಸಲಾರದೆ ಕೊರಗುತ್ತ, ಮನೆಯಲ್ಲಿ ಕುಳಿತಿದ್ದ. "ನಾನು ಹೇಡಿ, ನಾನು ಹೇಡಿ" ಎಂದು ತನ್ನನ್ನು ತಾನು ನಿಂದಿಸಿಕೊಳ್ಳುತ್ತಿದ್ದ.

೮೮

ಊರು ಊರಿನಲ್ಲಿಯೂ ಚಳವಳಿ ಉಗ್ರಸ್ವರೂಪದಲ್ಲಿ ಹೀಗೆ ಪ್ರಜ್ವಲಿ ಸುತ್ತಿರುವಲ್ಲಿ, ಶ್ರೀಧರಮೂರ್ತಿ ಶಾಂತನಾಗಿ ತನ್ನ ಹೆಂಡತಿಯೊಂದಿಗೆ ಬೆಂಗಳೂರಿನ ರಾಜಮಾರ್ಗವೊಂದರಲ್ಲಿ ವಾಕಿಂಗ್ ಹೋಗುತ್ತಿದ್ದ. 'ಮುಂದೇನು ಮಾಡುವುದು?' ಎಂದು ತಲೆ ತಗ್ಗಿಸಿ ಅಗಾಧ ಚಿಂತೆಯಲ್ಲಿ ಮುಳುಗಿದ್ದ ಲಕ್ಷ್ಮೀಪತಿಗೆ ಬಹುಕಾಲದ ಹಿಂದಿನ ಗೆಳೆಯನಾದ, ಶ್ರೀಧರನ ಗುರುತೂ ಸಿಕ್ಕುವಂತಿರಲಿಲ್ಲ. ಆವನ ಸ್ನೇಹಿತರೆಲ್ಲ ಹೇಳುತ್ತ ಇದ್ದಂತೆ,

ಲಕ್ಷ್ಮೀಪತಿ ಹೈಸ್ಕೂಲಿನಲ್ಲಿ ಹೇಗೆ ಇದ್ದನೋ ಸಂಸಾರವೊಂದಿಗನಾದ ಮೇಲೆಯೂ ಹಾಗೆಯೇ ಇದ್ದ: ಅದೇ ಎತ್ತರ, ಅದೇ ಬಾಡಿದ ಮುಖ, ಪಾರ್ಪಾಟು ಹೊಂದದಿದ್ದ ಅದೇ ಮುಖಲಕ್ಷಣ, ಅದೇ ನಡಗೆ. ಶ್ರೀಧರ ಲಕ್ಷ್ಮೀಪತಿಯ ಗುರುತು ಹಿಡಿದು, ಹೆಸರು ಕರೆದು ಕೂಗಿದ. ಲಕ್ಷ್ಮೀಪತಿ ತಲೆಯೆತ್ತಿ ಎದುರಿಗೆ ಬರುತ್ತಿದ್ದ ವ್ಯಕ್ತಿಗಳನ್ನು ನೋಡಿದ. ಯುವತಿ ಯಂತೂ ತೀರ ಅಪರಿಚಿತೆ; ಯುವಕ — ಎಲ್ಲೋ ನೋಡಿದಂತಿದೆ: ನೆನಪಾಗದು. 'ಯಾರು?' ಎಂದು ಕೇಳಿಯೇ ಬಿಟ್ಟ.

"ಶ್ರೀಧರ ಕಣಯ್ಯ, ನಾನು ಶ್ರೀಧರಮೂರ್ತಿ! ಮರೆತು ಬಿಟ್ಟೆಯಾ?"

"ಶ್ರೀಧರ! ನೀನು ಈ ಹೊತ್ತಿಗೆ ಜೈಲಿನಲ್ಲಿರಬಹುದು ಎಂದು ನಿನ್ನೆ ರಾತ್ರಿ ತಾನೆ ಆಲೋಚಿಸುತ್ತ ಇದ್ದೆ. ಓಹೋ, ನನ್ನ ಹಾಗೆಯೇ ನೀನೂ ಸಂಸಾರದ ಜೈಲಿನಲ್ಲಿ ಸಿಲುಕಿದ್ದೀಯೆ! ಈ ವಿಷಯ ನನಗೆ ತಿಳಿಯದು."

"ತಿಳಿಯದು! ಸುಂದರಮೂರ್ತಿ ನಿನಗೆ ತಿಳಿಸಲಿಲ್ಲವೆ?"

"ಅವನು ನನಗೆ ಕಾಗದ ಬರೆದು ಯುಗವಾಯಿತು. ಹಿಂದೊಮ್ಮೆ ನನಗೆ ಆಶ್ರಮಕ್ಕೆ ಬರಬೇಕೆಂದು ಕಾಗದ ಬರೆದಿದ್ದ. ಊರುಬಿಟ್ಟು ಹೋಗುವುದೆಂದರೆ ನಮ್ಮಂಥವರಿಗೆ ಎಲ್ಲಯ್ಯ ಸಾಧ್ಯ?"

"ನಿನಗೆ ತಿಳಿಸಿರಬೇಕು ಅಂತ ನಾನು ಯೋಚಿಸಿದ್ದೆ. ಇವಳು ನನ್ನ ಹೆಂಡತಿ: ಸಾಧನಾ. ಸುಂದರಮೂರ್ತಿಯ ತಂಗಿ."

"ಸುಂದರಮೂರ್ತಿ ತನ್ನ ಒಬ್ಬಳೇ ತಂಗಿಯ ಮದುವೆ ಆಯಿತು, ನಮ್ಮ ತಂದೆಯ ಯೋಚನೆ ತೀರಿತು ಎಂತ ಅವನು ಇಲ್ಲಿ ಹಿಂದೆ ಒಮ್ಮೆ ಬಂದಿದ್ದಾಗ ನನಗೆ ತಿಳಿಸಿದ್ದಂತೆ ಜ್ಞಾಪಕ ಕಣೋ? ತಂಗಿಯ ಗಂಡ ನೀನು ಎಂದು ಆಗ ಹೇಳದೆ ಇರುತ್ತಿದ್ದನೆ? ಏನೋ ಬುರುಡೆ ಬಿಡುತ್ತಿರುವ ಹಾಗಿದೆಯಲ್ಲ?"

"ಅವನ ಇನ್ನೊಬ್ಬಳು ತಂಗಿ – ಸಾಕು ತಂಗಿ. ಅವನ ತೋಟದ ಆಳಾಗಿದ್ದ ಪಾಪನ ಮಗಳು." ಎಂದು ಹೇಳಿ ಸಾಧನೆಯ ಮುಖ ನೋಡಿದ. ಅವಳು ಮುಗುಳುನಗೆ ನಗುತ್ತಿದ್ದಳು.

"ಮಾದನ ಮಗಳು! ಹೌದು ಹೌದು, ಒಬ್ಬಳು ಹರಿಜನ ಹುಡುಗಿಯ ವಿಚಾರ ನನಗೆ ಹೇಳುತ್ತಿದ್ದ. ಈಗ ಅರ್ಥವಾಯಿತು. ನೀನು ರಾಜಕೀಯ ಬಿಟ್ಟು ಹರಿಜನ ಸಮಸ್ಯೆಯ ಪರಿಹಾರಕ್ಕೆ ಸೊಗಸಾದ ಪೀಠಿಕೆ ಹಾಕಿದೆ!" ಎಂದು ಇಷ್ಟುಹೊತ್ತಿಗೆ ಲಕ್ಷ್ಮೀಪತಿ ನಕ್ಕ

"ನಾನು ರಾಜಕೀಯ ಬಿಟ್ಟಿಲ್ಲ ಕಣಯ್ಯಾ. ಈಗ ನಾನು ಕಮ್ಯೂನಿಸ್ಟ್."

"ಓಹೋ, ಅದು ಕೂಡ ಈಗ ಅರ್ಥವಾಯಿತು! ನಿನ್ನ ಖಾದಿಯ ವೇಷ ಹೋಗಿ ಈ ಸೊಗಸಾದ ಮಿಲ್ಲುಬಟ್ಟೆಯ ಉಡುಪನ್ನು ಕಂಡು ನಾನು ಮೊದಲು ಬೆರಗಾಗಿದ್ದೆ. ಈಗ ಅರ್ಥವಾಯಿತು."

"ಮನೆಯ ಕಡೆ ಬಾರಯ್ಯಾ. ತುಂಬ ಮಾತಾಡಬೇಕು. ಬಹಳ ದಿನ ಆಯಿತು. ದಿನವೇನು, ಬಹಳ ವರ್ಷ ಆಗಿಹೋಯಿತು."

ಮಾಡಲು ಏನೂ ಕೆಲಸವಿಲ್ಲದೆ ಬೇಸರಗೊಂಡಿದ್ದ ಲಕ್ಷ್ಮೀಪತಿ ಶ್ರೀಧರನೊಂದಿಗೆ ಅವನ ಮನೆಗೆ ಹೋದ. ಅಲ್ಲಿಯೇ ಊಟವೂ ಆಯಿತು. ವಿಶ್ರಾಂತಿ ತೆಗೆದುಕೊಳ್ಳಲು ಇಬ್ಬರೂ ಚಾಪೆಯ ಮೇಲೆ ಮಲಗಿದರು. ಶ್ರೀಧರ ತನ್ನ ಕಥೆಯನ್ನು ಲಕ್ಷ್ಮೀಪತಿಗೆ ವಿವರಿಸಿ ಹೇಳಿದ; ಲಕ್ಷ್ಮೀಪತಿ ಕುತೂಹಲವಿಸ್ಮಯಗಳಾದ ಅವನ ಆತ್ಮವೃತ್ತವನ್ನು ಕೇಳುತ್ತ ಮಲಗಿದ್ದ.

೮೯

ಶ್ರೀಧರಮೂರ್ತಿ ಸಾಬರಮತಿಯಲ್ಲಿ ಆಶ್ರಮವಾಸಿಯಾಗಿದ್ದಾಗ, ಅಲ್ಲಿನ ಶಿಸ್ತಿನ ಜೀವನದಲ್ಲಿ ಚೆನ್ನಾಗಿ ತರಪೇತಾಗಿ, ಸ್ವಾತಂತ್ರ್ಯಯುದ್ಧದ ಕರೆ ಬಂದಾಗ ಮಹಾತ್ಮರನ್ನು ಅನುಸರಿಸಿ ತಾನೂ ಸತ್ಯಾಗ್ರಹದಲ್ಲಿ ಭಾಗವಹಿಸಿ, ಅವರೊಂದಿಗೆಯೇ ಹೋರಾಡಿದ ಪುಣ್ಯಕೀರ್ತಿಗಳನ್ನು ಗಳಿಸುತ್ತೇನೆಂಬ ಮಹಾಕಾಂಕ್ಷೆಯನ್ನು ಇಟ್ಟುಕೊಂಡಿದ್ದ. ಬಿಸಿನೆತ್ತರಿನ ಯುವಕನಿಗೆ ಅದು ಸಹಜವಾದದ್ದೆ. ನಿಜವಾದ ಸತ್ಯಾಗ್ರಹಿ ಕೀರ್ತಿಕಾಮಿಯಾಗಿರಕೂಡದು. ಆದರೆ ಶ್ರೀಧರನ ಹೃದಯದಲ್ಲಿ ಮಾತ್ರ ಅಂತಹ ಕೀರ್ತಿಕಾಮ ಹುದುಗಿತ್ತು. ಮಹಾತ್ಮರು ಉಪ್ಪಿನ ಸತ್ಯಾಗ್ರಹಕ್ಕೆ ಹಲವು ಆಶ್ರಮವಾಸಿಗಳೊಂದಿಗೆ ದಂಡಿಯಾತ್ರೆಗೆ ಹೊರಡುವ ಮುನ್ನ ತಾನು ಬಯಸುತ್ತ ಇದ್ದ ಅವಕಾಶ

ಲಭಿಸಿತೆಂದು ಹಿಗ್ಗಿದ. ಆದರೆ ಮಹಾತ್ಮರು ಹೆಚ್ಚು ಜನಗಳ ಹಳಬರಾಗಿದ್ದ ಸತ್ಯಾಗ್ರಹಿಗಳನ್ನು ಮಾತ್ರ ಆಯ್ದುಕೊಂಡಿದ್ದರು. ೧೯೩೩ ರ ಆಗಸ್ಟಿನಲ್ಲಿ ಮಹಾತ್ಮರು ಸಾಬರಮತಿಯ ಆಶ್ರಮವನ್ನು ಮುಚ್ಚಿ, ಅದನ್ನು ಹರಿಜನ ಸೇವಾಕಾರ್ಯಕ್ಕೆ ವಹಿಸಿದರಷ್ಟೆ. ಆ ಸಲದ ಸತ್ಯಾಗ್ರಹದಲ್ಲಿಯೂ ಮಹಾತ್ಮರ ಬಂಟನಾಗಿ ಹೋಗುವ ಸುಯೋಗ ಶ್ರೀಧರನ ಪಾಲಿಗೆ ಇಲ್ಲ ವಾಯಿತು. ಸುಂದರಮೂರ್ತಿ ಕೂಡ ಇಲ್ಲಿಗೆ ಕೇವಲ ಹೊಸಬನಾಗಿ ಬಂದಿದ್ದು, ತನ್ನ ಪಾಡಿಗೆ ತಾನು ಸತ್ಯಾಗ್ರಹ ಸಮರಕ್ಕೆ ಧುಮುಕಿದ್ದ. ಆಶ್ರಮದ ವ್ಯವಸ್ಥೆಗೆ ಒಳಪಟ್ಟು ತಾನು ಹಾಗೂ ಮಾಡುವುದಾಗಲಿಲ್ಲ; ಹೀಗೂ ತನಗೆ ಅವಕಾಶವಾಗಲಿಲ್ಲ; ತನ್ನ ಇಷ್ಟು ದಿನದ ಶಿಕ್ಷಣ ವ್ಯರ್ಥ ವಾಯಿತು ಎಂಬ ನಿರುತ್ಸಾಹ ಅವನಲ್ಲಿ ಮೂಡಿತು. ಆಶ್ರಮ ಮುಚ್ಚಿದ ಮೇಲೆ ಅವನು ಅಲ್ಲಿ ಉಳಿಯದೆ, ಅಹಮ್ಮದಾಬಾದ್ ನಗರದಲ್ಲಿ ನೆಲಸಿ, ಮುಂದೇನು ಮಾಡುವುದು ಎಂಬ ಭವಿಷ್ಯ ನಿರ್ಧಾರದಲ್ಲಿ ಕೆಲವು ಕಾಲವನ್ನು ಆಲಸ್ಯದಿಂದ ಕಳೆದ.

ಮೊದಲು, ಊರಿಗೆ ಹಿಂದಿರುಗುವ ಆಲೋಚನೆಯಾಯಿತು. ಊರಿಗೆ ಹಿಂದಿರುಗಿ ಏನು ಮಾಡಬೇಕು ? ತಾಯಿ ಮತ್ತು ಅಣ್ಣನ ಮಾತು ಕೇಳದೆ ತಾನು ಸತ್ಯಾಗ್ರಹಕ್ಕೆಂದು ಹೊರಟು ಬಂದದ್ದಾಯಿತು. ತಾಯಿ ಅಣ್ಣನ ಮನೆಯಲ್ಲಿಯೇ ಇದ್ದಾಳೆ. ತಾನು ಹಿಂದಿರುಗಿದರೆ ಅಣ್ಣನ ಮನೆಗೆ ಹೋಗ ಬೇಕು ಅಣ್ಣನಿಗಿಂತ ಹೆಚ್ಚಾಗಿ ಅತ್ತಿಗೆಯ ಹಂಗಿನಲ್ಲಿ ಬಿದ್ದಿರಬೇಕು. ಇದು ಮನಸ್ಸಿಗೆ ಒಪ್ಪಿಬರಲಿಲ್ಲ.

ಇನ್ನು ಉಳಿದದ್ದು ಸತ್ಯಾಗ್ರಹದಲ್ಲಿ ಭಾಗವಹಿಸುವುದು. ಯಾರ ನಾಯಕತ್ವವೂ ಬೇಕಿಲ್ಲದೆ, ಸಾವಿರ ಜನದಲ್ಲಿ ಒಬ್ಬನಾಗಿ, 'ಗಾಂಧಿ ಕಿ ಜೈ.' ಎಂದು ಘೋಷಿಸಿಯೋ, ಹೆಂಡದಂಗಡಿಯನ್ನು ಪಿಕೆಟ್ ಮಾಡುವವರ ಗುಂಪಿ ನಲ್ಲಿ ಸೇರಿಯೋ, ಹೇಗಾದರೂ ಬಹು ಸುಲಭವಾಗಿ ಸೆರೆಮನೆ ಸೇರಬಹು ದಾಗಿತ್ತು. ಇದಕ್ಕಾಗಿಯೇ ತಾನು ಎರಡು ಮೂರು ವರ್ಷ ಆಶ್ರಮವಾಸಿ ಯಾಗಿದ್ದುದು ?

ಹೊಟ್ಟೆಯ ಚುರುಕು ಹೆಚ್ಚಿದರೆ ತಲೆಯ ಆಲೋಚನೆ ಕಡಮೆಯಾಗು ತ್ತದೆ. ಶ್ರೀಧರನಿಗೆ ಹೊಟ್ಟೆಯ ಕೂಗು ಕೇಳತೊಡಗಿತು. ಎಲ್ಲಿಯಾದರೂ

ಒಂದು ಕೆಲಸಕ್ಕೆ ಸೇರಿ, ನಿಧಾನವಾಗಿ ಆಲೋಚಿಸುವುದು ಎಂದು ಒಂದು ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದ. ಅಲ್ಲಿ ಅವನಿಗೆ ಅಜಿತಕುಮಾರನ ಗೆಳೆತನ ವಾಯಿತು.

ಅಜಿತಕುಮಾರ ಕ್ರಾಂತಿಕಾರಿ ಕಮ್ಯೂನಿಸ್ಟ್ ಭಾವನೆಗಳನ್ನು ಹೊಂದಿದ್ದನು. ಕ್ರಮಕ್ರಮೇಣ ಇಬ್ಬರಲ್ಲಿಯೂ ಸಲಿಗೆ ಬೆಳೆದು, ಅಜಿತನ ಪ್ರಭಾವ ಶ್ರೀಧರನ ಮೇಲೆ ಬೀಳತೊಡಗಿತು. ಅಜಿತನ ಮನೆಗೆ ಶ್ರೀಧರ ಹೋಗಿ ಬರುವುದಕ್ಕೆ ಮೊದಲು ಮಾಡಿದ, ಅಜಿತನ ತಂಗಿ ರಾಧಾರಾಣಿ, ತುಂಬಿದ ಮೈಕಟ್ಟಿನ ಚೆಲುವೆ; ಅವಳೂ ಕ್ರಾಂತಿಕಾರಿಣಿ, ಸಿಂಹಿಣಿ. ಇಂಗ್ಲಿಷ್ ವಿದ್ಯಾಭ್ಯಾಸಮಾಡಿ, ಕಮ್ಯುನಿಸ್ಟ್ ತತ್ವಗಳನ್ನೆಲ್ಲಾ ತಲೆಯಲ್ಲಿ ತುಂಬಿಕೊಂಡಿದ್ದಳು. ಅಜಿತ ಮಾತಿನಲ್ಲಿ ಅಷ್ಟು ಚುರುಕಿಲ್ಲ. ಅಲ್ಲದೆ ಧನಾಢ್ಯನಾದ ತನ್ನ ತಂದೆಗೆ ಸ್ವಲ್ಪ ಹೆದರುತ್ತಿದ್ದ. ಅವನಿಗೆ ಹಣದ ಅವಶ್ಯಕತೆ ಯಿಲ್ಲದಿದ್ದರೂ, ಮಿಲ್ಲಿನ ಕೂಲಿಗಳ ಜೀವನ, ಮಿಲ್ಲಿನ ವ್ಯವಸ್ಥೆ, ಮಿಲ್‌ಮಾಲಿಕರ ಮನೋಭಾವನೆ ಇವನ್ನು ಪ್ರತ್ಯಕ್ಷಾನುಭವದಿಂದ ಅರಿಯುವ ಸಲುವಾಗಿ ತಂದೆಗೆ ತಿಳಿಯದಂತೆ ಮಿಲ್ ಕೆಲಸಕ್ಕೆ ಸೇರಿದ್ದ. ಮನೆಯಲ್ಲಿ ಕಮ್ಯೂನಿಜಂ ವಿಚಾರ ಏನೂ ಮಾತಾಡುತ್ತ ಇರಲಿಲ್ಲ. ರಾಧಾರಾಣಿ ಮಾತ್ರ ತಂದೆಗೇ ಕಮ್ಯುನಿಜಂ ಕುರಿತು ಉಪನ್ಯಾಸಮಾಡುವಳು! ಹೆಣ್ಣುಮಗು, ಏನು ತಾನೆ ಮಾಡೀತು ಎಂದು ತಂದೆ ಉದಾಸೀನದಿಂದಿದ್ದರು. ರಾಧಾರಾಣಿ ಮನೆಗೆ ಬರುತ್ತಿದ್ದ ಶ್ರೀಧರನಿಗೆ ಕಾರ್ಲ್‌ಮಾರ್ಕ್ಸ್, ಲೆನಿನ್ ಚರಿತ್ರೆಯನ್ನು ವರ್ಣವತ್ತಾಗಿ ಹೇಳಿ, 'ಭಾರತದೇಶಕ್ಕೆ ಕಮ್ಯುನಿಸಮ್ಮಿನಿಂದಲೇ ಮೋಕ್ಷ' ಎಂಬ ಸಿದ್ಧಾಂತವನ್ನು ಸಾರಿದಳು. ಚೆಲುವೆಯ ಮುಖದಿಂದ ಚಿಮ್ಮಿದ ವಾಗ್ಧಾರೆ ಅವಳ ಮೋಹಕ ನೇತ್ರಗಳ ಆಕರ್ಷಣೆಯೊಂದಿಗೆ ಬೆರೆತು, ಶ್ರೀಧರನನ್ನು ಸೆರೆಹಿಡಿದುವು. ತಾನೂ ಕಮ್ಯುನಿಸ್ಟ್ ಆಗಿ, ರಾಧಾರಾಣಿಯ ಮೆಚ್ಚುಗೆಗೆ ಪಾತ್ರನಾದರೆ ಅವಳ ಒಲವಿಗೂ ಪಾತ್ರನಾಗಬಹುದೆಂಬ ದೂರದ ಆಸೆಯೊಂದು — ಸಂಯಮ ಜೀವನದಿಂದ ಬಹುಕಾಲ ಅಡಗಿಸಿದ್ದ ಯೌವನ ಸಹಜ ಪ್ರವೃತ್ತಿಯ ಕಿರಣವೊಂದು — ತಟ್ಟನೆ ಹೊಮ್ಮಿ ಅವನ ಮನೋಮಂದಿರವನ್ನು ಬೆಳಗತೊಡಗಿತು. ಶ್ರೀಧರ ತತ್ತ್ವತಃ ಕಮ್ಯುನಿಸ್ಟ್ ಆಗಿ ಹೋದ! ಕೆಲವೇ ತಿಂಗಳುಗಳಲ್ಲಿ ಕೆಣ್ಣು ಹೃದಯದ ಪ್ರಭಾವದಿಂದ ಆದ

ಹೃದಯಪರಿವರ್ತನೆ ಆದರೆ, ಅವನು ಅಜಿತನಂತೆ ಪಾರ್ಟಿಯ ಸದಸ್ಯನಾಗಿರಲಿಲ್ಲ. ರಾಧಾರಾಣಿ ಮಾತಿನವಳಾದರೆ ಅಜಿತ ಕಾರ್ಯಪರನಾಗಿದ್ದ. ಪಾರ್ಟಿಯ ಸದಸ್ಯನಾಗಿದ್ದುಕೊಂಡು, ಗುಪ್ತ ಕಾರ್ಯಾಚರಣೆಯಲ್ಲಿ ಅಗ್ರಗಣ್ಯನೆನಿಸಿ, ಪಾರ್ಟಿಯ ಮುಖ್ಯ ಸದಸ್ಯರಲ್ಲಿ ಒಬ್ಬನಾಗಿದ್ದ. ಈ ಸಂಗತಿ ರಾಧಾರಾಣಿಗೂ ತಿಳಿಯದು; ಶ್ರೀಧರನಿಗಂತೂ ಮೊದಲೇ ಗೊತ್ತಿಲ್ಲ.

ಅಜಿತ ಯಾರಿಗೂ ತಿಳಿಸದೆ ಪಾರ್ಟಿಯ ಗುಪ್ತ ಸಭೆಗಳಲ್ಲಿ ಭಾಗವಹಿಸುತ್ತಿದ್ದ. ಎಷ್ಟೋ ವೇಳೆ ರಾಧಾರಾಣಿ ಶ್ರೀಧರ ಇಬ್ಬರೇ ಮನೆಯಲ್ಲಿ ಕುಳಿತು ಚರ್ಚೆಮಾಡುವರು, ಹೊರಗಡೆ ಸುತ್ತಾಡಲು ಹೊರಡುವರು. ಆಗ ಇಬ್ಬರೂ ಬಹು ಸಲಿಗೆಯಿಂದ ಮಾತಾಡುವರು, ಕಾವಿನಿಂದ ಚರ್ಚೆ ಮಾಡುವರು. ರಾಧಾರಾಣಿ ಗಾಂಧಿ ತತ್ತ್ವಗಳನ್ನು ಗಾಳಿಗೆ ತೂರುವಳು; ಅವಳ ಮೋಹಕರೂಪಿನ ಪ್ರಭಾವಕ್ಕೆ ಒಳಗಾಗಿ ಅವಳ ಎಲ್ಲ ಖಂಡಿತವಾದ ಅಭಿಪ್ರಾಯಗಳಿಗೂ ಶ್ರೀಧರ ತಲೆತೂಗುವನು. ಶ್ರೀಧರ ಮಾತ್ರ ಇನ್ನೂ ಗಾಂಧಿ ತತ್ತ್ವಗಳನ್ನು ಸಂಪೂರ್ಣವಾಗಿ ತ್ಯಜಿಸಲು ಸಿದ್ಧನಾಗಿರಲಿಲ್ಲ. 'ನಿನ್ನನ್ನು ಮದುವೆಯಾಗುತ್ತೇನೆಂದು ಅವಳು ಮಾತು ಕೊಟ್ಟಿದ್ದರೆ ತ್ಯಜಿಸಿ ಬಿಡುತ್ತಿದನೇನೋ! ಅವಳು ತನ್ನ ಜೀವದ ಗೆಳತಿಯಾಗುವುದಾದರೆ ಏನು ಬೇಕಾದರೂ ಮಾಡಲು ಅವನು ಸಿದ್ಧನಾಗಿದ್ದ !

ಹೀಗೆ, ಒಂದು ವರ್ಷದ ಮೇಲೆ ಯಾವುದೋ ಸ್ವಪ್ನರಾಜ್ಯದಲ್ಲಿ ಶ್ರೀಧರ ತನ್ನನ್ನು ತಾನು ಮರೆತು ಸುಖವಾಗಿದ್ದ. ತನ್ನ ಸ್ವಪ್ನರಾಣಿ ರಾಧಾರಾಣಿಯ ರೂಪಿನಲ್ಲಿ ತನ್ನ ಕೊರಳಿಗೆ ಹೂಮಾಲೆ ಸೂಡುವ ಸುದಿನಕ್ಕಾಗಿ ಹಂಬಲಿಸುತ್ತಿದ್ದ.

ಆದರೆ, ಅವನ ಕನಸೊಡೆಯುವ ಕಾಲಬಂದಿತು. ತಂದೆಯ ಬಲವಂತಕ್ಕೆ ಕಟ್ಟುಬಿದ್ದು, ರಾಧಾರಾಣಿ ಮದುವೆಯಾಗಬೇಕಾಗಿ ಬಂದಿತು ಅಲ್ಲದೆ, ರಾಧಾರಾಣಿಗೆ ಶ್ರೀಧರ ಮನಸೋತಿದ್ದನೇ ಹೊರತು ಅವಳನ್ನು ಒಲಿಸಿಕೊಳ್ಳಲು ವ್ಯಕ್ತವಾಗಿ ಪ್ರಯತ್ನಪಟ್ಟಿರಲಿಲ್ಲ. ಆದ್ದರಿಂದ ಅವಳು ಅಜಿತನ ಶಿಫಾರಸ್ಸಿನ ಮೇಲೆ ತಾನು ಒಪ್ಪಿದ ವರನನ್ನೆ ಮದುವೆಯಾಗಿದ್ದಳು. ಇದರ ಪರಿಣಾಮವಾಗಿ, ನಿರಾಶೆಗೊಂಡ ಶ್ರೀಧರ ಅಜಿತನೊಂದಿಗೆ, ಅವನಿಗೆ ಇಷ್ಟವಿಲ್ಲವಿದ್ದರೂ, ಹೆಚ್ಚು ಕಾಲ ಕಳೆಯತೊಡಗಿದನು. ಯತ್ನವಿಲ್ಲದೆ ಅಜಿತ

ಶ್ರೀಧರನನ್ನೂ ಪಾರ್ಟಿಯ ಸಭೆಗಳಿಗೆ ಕರೆದೊಯ್ಯುತ್ತ ಬಂದನು. ಶ್ರೀಧ
ಪಾರ್ಟಿಯ ಸದಸ್ಯನಾಗದಿದ್ದರೂ ಸದಸ್ಯನಂತೆಯೇ ಪಾರ್ಟಿಯ ತತ್ತ್ವ
ದೀಕ್ಷಾಬದ್ಧನಾದನು.

ಗಾಂಧಿ-ಇರ್ವಿನ್ ಒಪ್ಪಂದವಾದ ಮೇಲೆ, ಪ್ರಾಂತಗಳಲ್ಲಿ ಕಾಂಗ್ರೆಸ್
ಆಡಳಿತ ಪ್ರಾರಂಭವಾಗಿ ಕೆಲವು ಕಾಲ ಕಳೆದಿತ್ತು. ಜಗತ್ತು ಎರಡನೆಯ
ಯುದ್ಧದತ್ತ ಸಾಗುತ್ತಿತ್ತು. ಈ ಸನ್ನಿವೇಶದಲ್ಲಿ ಕಮ್ಯೂನಿಸ್ಟರು ತಮ್ಮ
ಚಟುವಟಿಕೆಗಳನ್ನು ಎಲ್ಲೆಲ್ಲಿಯೂ ಬಿರುಸಿನಿಂದ ಸಾಗಿಸುತ್ತಿದ್ದರು
ಅಹಮ್ಮದಾಬಾದ್‌ನಲ್ಲಿ ನಡೆದ ಮಿಲ್‌ಮುಷ್ಕರ ಪ್ರಕರಣವೊಂದರಲ್ಲಿ
ಅಜಿತನೂ ಶ್ರೀಧರನೂ ಬಹಿರಂಗವಾಗಿ ಮಿಲ್ ಕೆಲಸಗಾರರನ್ನು ಮಾಲಿಕ
ಮೇಲೆ ಎತ್ತಿ ಕಟ್ಟುತ್ತಿದ್ದರು. ಬ್ರಿಟಿಷರ ಕಮ್ಯುನಿಸ್ಟ್ ವಿರುದ್ಧನೀ
ಭಾರತದಲ್ಲಿ ಎಂದಿನಿಂದಲೂ ಇದ್ದೇ ಇದ್ದಿತು. ಅಜಿತ ಶ್ರೀಧರರಿಬ್ಬರೂ
ದಸ್ತಗಿರಿಯಾಗಿ ಸೆರೆಮನೆಗೆ ಹೋದರು.

ರಷ್ಯ ಯುದ್ಧರಂಗಕ್ಕೆ ಇಳಿದ ಮೇಲೆ ಭಾರತದಲ್ಲಿಯೂ ಕಮ್ಯುನಿಸ್ಟರ
ಲ್ಲರ ಬಿಡುಗಡೆಯಾಯಿತು. ಶ್ರೀಧರನ ಬಿಡುಗಡೆಯೂ ಆಯಿತು. ಬಿಡುಗಡೆ
ಯಾದ ಕೂಡಲೆ ಶ್ರೀಧರ ನೇರವಾಗಿ ಬೆಂಗಳೂರಿಗೆ ಹಿಂದಿರುಗಿದ.

ಶ್ರೀಧರ ಈಗ ಕಮ್ಯೂನಿಸ್ಟ್: ಆದರ ತತ್ತ್ವಗಳೆಲ್ಲವನ್ನೂ ಅವನ
ಸಂಪೂರ್ಣವಾಗಿ ಹೃತ್ಪೂರ್ವಕವಾಗಿ ಅನುಮೋದಿಸದಿದ್ದರೂ ಸಂದರ್ಭವ
ದಿಂದ ಕಮೂನಿಸ್ಟ್ ಎನಿಸಿದ್ದ. ಅವನ ಹೃದಯದಲ್ಲಿ ಗಾಂಧಿಯವರ ಬಗ್ಗೆ
ಪೂಜ್ಯತೆಯಾಗಲಿ, ಸತ್ಯ ಅಹಿಂಸೆಗಳ ನಂಬಿಕೆಯಾಗಲಿ ಹೋಗಿರಲಿಲ್ಲ
ಆದರೆ ಕಮ್ಯೂನಿಸಮ್ಮಿನ ಸರ್ವಸಮನತಾ ಭಾವವೂ ಸಮಾಜಸೌಖ್ಯವ್ಯ
ಸ್ಥೆಯೂ ಅವನ ಮನಸ್ಸಿಗೆ ಹಿಡಿದಿದ್ದುವು. ಇವೆರಡರ ಸಮನ್ವಯಮಾರ್ಗದ
ಆದರ್ಶವನ್ನು ರೂಪಿಸಿಕೊಳ್ಳುತ್ತ, ಅವನ ಮನಸ್ಸು ಅತ್ತ ಇತ್ತ ಹೊಯ್ದಾಡು
ತ್ತಿತ್ತು. ದೇಶದ ಜಾತಿ ಮತ ಭೇದಗಳೆಲ್ಲ ನಿರ್ನಾಮವಾಗಬೇಕು; ವರ್ಗ
ಭೇದಗಳು ಅಳಿಯಬೇಕು; ಇದು ಕೂಡ ಸತ್ಯ ಅಹಿಂಸೆಗಳ ಮೂಲಕವೇ ಏಕೆ
ನಡೆಯಲಾಗದು? ಅವನ ಆಲೋಚನೆ ಹೀಗಿತ್ತು.

ಈ ಮನಸ್ಥಿತಿಯಲ್ಲಿ ಅವನಿಗೆ ಸುಂದರಮೂರ್ತಿಯ ನೆನಪಾಯಿತು;
ಅವನು ಹೇಳಿದ್ದ ಹರಿಜನ ಸೇವೆ, ಹರಿಜನರ ಹುಡುಗಿ — ಸಂಗತಿಗಳ ನೆ

ಪಾಯಿತು; ಅವನು ತನ್ನ ಊರಿನಲ್ಲಿಯೇ ಇರಬಹುದು ಎಂದೆಣಿಸಿ, ಶ್ರೀಧರ ನೆಟ್ಟಗೆ ಕೊಳಲೂರಿನಲ್ಲಿ ಬಂದಿಳಿದನು.

*   *   *   *

ಶ್ರೀಧರನನ್ನು ಕಂಡ ಸುಂದರಮೂರ್ತಿಗೆ ಅತ್ಯಾನಂದವಾಯಿತು ಎಂದು ಬೇರೆ ಹೇಳಬೇಕಾಗಿಯೆ ಇಲ್ಲ. ಸುಂದರಮೂರ್ತಿ, "ಇವಳು ಮಾದನ ಮಗಳು. ನಾನು ನಿನಗೆ ಇವಳ ವಿಚಾರ ಸಾಬರಮತಿಯಲ್ಲಿ ಹೇಳಿದ್ದಂತೆ ನೆನಪು." ಎಂದು ಸಾಧನೆಯ ಪರಿಚಯವನ್ನು ಶ್ರೀಧರನಿಗೆ ಮಾಡಿಕೊಟ್ಟ. ಸಾಧನೆ ಹೊಸ ಅತಿಥಿಗೆ ಮುಗುಳುನಗೆಯ ಮಧುಪರ್ಕ ನೀಡಿ, ವಂದಿಸಿದಳು. ಶ್ರೀಧರಮೂರ್ತಿ, "ಮಾದನ ಮಗಳು" ಎಂದು ಕೇಳಿ ಸಂತೋಷವಾಯ್ತು. ಹೆಚ್ಚಿನ ಸಂತೋಷಕ್ಕೆ ಅವಕಾಶವಿಲ್ಲವೋ? ಅವಳು........ ನಿನ್ನ........" ಸುಂದರ ನಡುವೆ ಮಾತೆತ್ತಿ: "ಅವಳು ನನ್ನ ತಂಗಿ. ಹೊಣೆಯಲ್ಲಿ, ಕನ್ಯಾಪಿತೃವಿನ ಹೊಣೆ ಹೊತ್ತಿದ್ದೇನೆ. ಇರಲಿ. ಮೊದಲು, ಸ್ನಾನ ಮಾಡು. ಊಟವಾದ ಮೇಲೆ ಮಾತುಕತೆಯಾಡೋಣ" ಎಂದು ಗೆಳೆಯನ ಊಟ ಉಪಚಾರಕ್ಕೆ ಏರ್ಪಾಡುಮಾಡಿದ.

ಸಂಜೆಯಲ್ಲಿ, ಶ್ರೀಧರನನ್ನೂ ಕರೆದೊಯ್ದು, ಸಾಧನೆಯೊಂದಿಗೆ ಹರಿಜನರ ಕೇರಿಯನ್ನೆಲ್ಲ ತೋರಿಸಿದ. ಭಾರತದ ಉದ್ಧಾರಕ್ಕೆ ನಿನ್ನಂಥವರು ಹೆಣಗಬೇಕು. ನನ್ನ ಪರಿಮಿತ ಶಕ್ತಿಸಾಮರ್ಥ್ಯಕ್ಕೆ ಈ ಹಳ್ಳಿಯೇ ಭಾರವೆನಿಸಿದೆ" ಎಂದು ಸುಂದರ ತಾನು ಸಾಧಿಸಬೇಕೆಂದಿದ್ದು ಸಾಧಿಸಲಾಗದೆ ಇದ್ದ ಹೃದಯದ ಹಂಬಲುಗಳನ್ನೆಲ್ಲ ತೋಡಿಕೊಂಡ.

ರಾತ್ರಿ ಸಾಧನೆ ಮಲಗಹೋದಳು. ಶ್ರೀಧರನೂ ಸುಂದರನೂ ಹೊರಗೆ ಕಲ್ಲುಪೀಠದ ಮೇಲೆ ಕುಳಿತು, ನಿದ್ದೆಹೋಗಬೇಕೆನ್ನಿಸುವ ವರೆಗೂ ಮಾತುಕತೆಯಾಡುತ್ತಿದ್ದರು. ಶ್ರೀಧರ ತನ್ನ ಈಚಿನ ಕಥೆಯನ್ನೆಲ್ಲ ಹೇಳಿದ. ಅವನ ಉಡುಪಿನಲ್ಲಿ ಆಗಿದ್ದ ಮಾರ್ಪಾಟನ್ನು ಕಂಡು ಅಂದಿನ ಬೆಳಗ್ಗೆಯೇ ಸುಂದರಮೂರ್ತಿಗೆ ಅಚ್ಚರಿಯೆನಿಸಿತ್ತು; ಸಂದೇಹ ಮೂಡಿತ್ತು. ಶ್ರೀಧರನ ವ್ಯಕ್ತಿತ್ವದಲ್ಲಿ ಆದ ಸಂಪೂರ್ಣ ಮಾರ್ಪಾಟು ಅರಿತು ಅವನ ಅಚ್ಚರಿ ಇಮ್ಮಡಿಯಾಯಿತು.

ಸುಂದರನೆಂದ: "ರಾಜಕೀಯ ಅಷ್ಟಾಗಿ ನನ್ನನ್ನು ಈಗ ಬಾಧಿಸು

ತ್ತಿಲ್ಲ. ನೀನೂ ಒಂದು ದೃಷ್ಟಿಯಲ್ಲಿ ಆದರಿಂದ ಹೊರಕ್ಕೆ ಬಂದಿದ್ದೀಯೆ. ನನ್ನನ್ನು ಬಾಧಿಸುತ್ತಿರುವ ಒಂದೇ ವಿಷಯ: ಸಾಧನೆಯ ಭವಿಷ್ಯ. ಅವಳನ್ನು ಯಾರಿಗಾದರೂ ಮದುವೆಮಾಡಿಕೊಟ್ಟರೆ ನನ್ನ ಹೊಣೆ ತೀರಿತು. ಅವಳು ಒಪ್ಪದಿದ್ದರೆ, ಅವಳೂ ನನ್ನೊಂದಿಗೆ ಇಲ್ಲಿಯೇ ಸೇವಾಕಾರ್ಯದಲ್ಲಿ ನಿಲ್ಲುತ್ತಾಳೆ."

"ನೀನು ಅವಳಲ್ಲಿ ಈ ವಿಚಾರ ಪ್ರಸ್ತಾಪಮಾಡಿದ್ದೀಯೋ?"

"ಇಲ್ಲ. ಯಾಕೆ ಮಾಡಲಿ? ಮಾದನ ಮಗಳನ್ನು, ಹರಿಜನರ ಹುಡುಗಿಯನ್ನು, ನಾನು ಮದುವೆಮಾಡಿಕೊಳ್ಳುತ್ತೇನೆ ಎಂದು ಮುಂದೆ ಬರುವವರು ಯಾರು? ಅವಳನ್ನು ಆ ಪ್ರಶ್ನೆ ಕೇಳಿದರೆ, ಅನ್ನ ಬಡಿಸದೆ ಊಟ ಮಾಡು ಎಂದಹಾಗಾಗುತ್ತೆ."

"ಸುಂದರ, ನಾನು ಮುಚ್ಚುಮರೆ ಇಲ್ಲದೆ ಹೇಳುತ್ತೇನೆ. ರಾಧಾ ರಾಣಿಯನ್ನು ಮದುವೆಯಾಗುವ ಹಂಬಲು ನನಗೆ ತುಂಬ ಇತ್ತು. ಆದರೆ ನನ್ನ ಕಡೆಗೆ ಅವಳ ಮನಸ್ಸು ಹರಿದಂತೆ ಕಾಣಲಿಲ್ಲ. ನಾನೂ ಕೂಡ ಅವ ಳನ್ನು ಕೇಳದೆ ಅವಿವೇಕಿಯಾದೆನೋ ಏನೋ. ಅವಳ ಮದುವೆಯಂತೂ ಆಗಿಹೋಯಿತು. ಆದ್ದರಿಂದ, ನನ್ನ ಅವಳ ಪ್ರೇಮ ಬೆಳೆದಿತ್ತು ಎಂದು ಹೇಳಲಾರೆ. ರೂಪಿನ ಮಟ್ಟಿಗೆ ಸಾಧನೆ ರಾಧಾರಾಣಿಗೆ ಕಡಮೆಯಿಲ್ಲ. ನಾನು ತಾಯಿ, ಬಂಧುಬಳಗ, ಜಾತಿ, ಕುಲ, ಆಚಾರ, ಕಡೆಗೆ ದೇವರು— ಎಲ್ಲವನ್ನೂ ಬಿಟ್ಟವನು. ನನಗೆ ಯಾರ, ಯಾತರ ಹಂಗೂ ಇಲ್ಲ. ಸಾಧನೆ ಯನ್ನು ಮದುವೆಯಾಗಲು ನಾನೇನೋ ಸಿದ್ಧ. ಆದರೆ, ನೀನು ಒಪ್ಪಬೇಕು. ಅವಳು ಒಪ್ಪಬೇಕು."

"ನಾನು ಯಾಕೆ ಒಪ್ಪಬೇಕು?"

"ಈಗ ನಾನು ಮೊದಲಿನಂತೆ ಕಾಂಗ್ರೆಸ್ ತತ್ತ್ವ ಪಾಲಕನಲ್ಲ. ನೀನು ಕ್ರಮಕ್ರಮವಾಗಿ ನಿಜವಾದ ಗಾಂಧೀ ಭಕ್ತನೇ ಆಗಿದ್ದೀಯೆ. ಈ ಅಭಿಪ್ರಾಯ ಭೇದ ನಮ್ಮ ನಡುವೆ ಅಡ್ಡ ಬಂದೀತೇನೋ. ಅದೇ ಶಂಕೆ."

"ಅಭಿಪ್ರಾಯ ಭೇದ ಗೆಳೆತನಕ್ಕೆ ಅಡ್ಡಬರಲಾರದು, ಬರಕೂಡದು. ಸಾಧನೆಗೆ ನಿನ್ನ ಹೊರತು ಬೇರೇ ಯಾರೂ ಇಂದು ನನಗೆ ಕಾಣರು. ಅವಳೂ ಕಮ್ಯೂನಿಸ್ಟ್ ಆಗಲಿ! ನನ್ನದೇನೂ ಅಭ್ಯಂತರವಿಲ್ಲ."

“ಹಾಗಾದರೆ, ಆಗಬಹುದು. ಅವಳು ಒಪ್ಪುತ್ತಾಳೆಯೋ?”

“ಅವಳನ್ನು ಒಪ್ಪಿಸುವ ಭಾರ ನನ್ನದು.”

“ಆಗಬಹುದು.”

ಸುಂದರನ ಮನಸ್ಸಿನಲ್ಲಿ ಒಂದು ವಿಷಯ ಬಹುವಾಗಿ ಬಾಧಿಸಿತು. “ಮಾದನ ಮಗಳು” ಎಂದು ಶ್ರೀಧರನಿಗೆ ತಾನು ಸುಳ್ಳು ಹೇಳಿ ವಂಚನೆ ಮಾಡುತ್ತಿಲ್ಲವೇ ಎಂದು. ಆದರೆ, ಬೈರಾಗಿಯು—ಅವಳ ತಂದೆಯು—ತನ್ನ ಚಿಕ್ಕಪ್ಪನ ಆದೇಶ ಹಾಗಿದೆ. ಅದನ್ನು ನಡಸುವಂತೆ ತಾನು ಒಪ್ಪಿಕೊಂಡದ್ದಾಗಿದೆ. ಕೊಟ್ಟ ಮಾತನ್ನು ಮುರಿಯದಿರುವುದೂ ಸತ್ಯಪಾಲನೆಯೇ ಅಲ್ಲವೆ? ಈ ಸತ್ಯಪಾಲನೆಯಿಂದ ಶ್ರೀಧರನಿಗೆ ಕೆಡುಕೆನಿಸದು. ಅವನೇ ಹೇಳುವಂತೆ, ಜಾತಿ ಕುಲದ ಹೆಸ್ಮೆ ಬಿಟ್ಟವನವನು. ನಿಜ ಸಂಗತಿ ನುಡಿಯಬೇಕಾದ ಪ್ರಮೇಯವಿಲ್ಲ — ಎಂದು ಸುಂದರ ತನ್ನಲ್ಲಿ ತಾನು ಸಮಾಧಾನಗೊಂಡ. ಹಾಗೆ ಅವಶ್ಯವಾದರೆ, ಎಂದಾದರೊಂದು ದಿನ ಹೇಳಿದರಾಯಿತು ಎಂಬ ಯೋಚನೆಯೂ ಬಂದಿತು.

ಸುಂದರ ಕೂಡಲೆ ಈ ವಿಷಯವನ್ನು ಸಾಧನೆಯಲ್ಲಿ ಪ್ರಸ್ತಾಪಮಾಡಲಿಲ್ಲ. ಶ್ರೀಧರನನ್ನು ಕೆಲವು ದಿನ ಆಶ್ರಮದಲ್ಲಿಯೇ ತಂಗಿರುವಂತೆ ಒತ್ತಾಯಮಾಡಿದ್ದ. ಅವನೂ ಒಪ್ಪಿಕೊಂಡು ಅಲ್ಲಿಯೇ ಇದ್ದ. ಸುಂದರ ಸಾಧನೆಯರೊಂದಿಗೆ ಆಶ್ರಮದ ದಿನಚರಿಯ ಕಾರ್ಯದಲ್ಲಿ ಉತ್ಸಾಹದಿಂದ ಭಾಗವಹಿಸುತ್ತ ಇದ್ದ.

ಒಂದು ದಿನ, ಶ್ರೀಧರನೂ ಸಾಧನೆಯೂ ಇಬ್ಬರೆ ಕೈತೋಟದಲ್ಲಿ ಸುತ್ತಾಡುತ್ತಿದ್ದರು. ಆಗ ಶ್ರೀಧರ ಪ್ರಶ್ನಿಸಿದ:

“ನೀವು ಸುಂದರಮೂರ್ತಿಯನ್ನು ಮದುವೆಯಾಗಬಹುದಲ್ಲವೆ?”

“ಅಣ್ಣನನ್ನು ಮದುವೆಯಾಗಬಹುದೆ, ನೀವೇ ಹೇಳಿ.”

“ಅವನು ನಿಮ್ಮ ಅಣ್ಣನೆ? ಅದು ಹೇಗೆ?”

“ನನ್ನನ್ನು ತಂಗಿ ಎಂದು ತಿಳಿದು ಕಾಪಾಡುತ್ತ ಇದಾರೆ. ನಾನು ಅವರನ್ನ ಅಣ್ಣ ಎಂದೇ ತಿಳಿದಿದೇನೆ. ಬೇರೆ ರೀತಿ ತಿಳಿಯುವುದು ಆಗಲಿಲ್ಲ.”

“ಹಾಗಾದರೆ, ಮದುವೆ ಮಾಡಿಕೊಳ್ಳುವುದೇ ಇಲ್ಲವೆ?”

“ದೇವರು ಆ ಪುಣ್ಯ ನನಗೆ ಕೊಟ್ಟಿಲ್ಲ ಅಂತ ಕಾಣುತ್ತೆ.”

" ನಿಮಗೆ ದೇವರಲ್ಲಿ ನಂಬಿಕೆ ಉಂಟೋ ? "

" ಉಂಟು."

" ದೇವರಿರುವುದಾದರೆ, ಹಣವಂತರು — ಬಡವರು, ಬ್ರಾಹ್ಮಣರು — ಹೊಲೆಯರು ಹೀಗೆ ಹಲವಾರು ಕಾರಣಗಳಿಂದ ಹಲವಾರು ಪಂಗಡಗಳಾಗಿ ದೇಶದಲ್ಲಿ ದುಃಖ ದಾರಿದ್ರ್ಯ ಇರುವುದನ್ನು ಸಹಿಸುತ್ತ, ಸುಮ್ಮನೆ ನೋಡುತ್ತ, ಇರುತ್ತಿದ್ದಾನೆ? ನನ್ನ ಮಾತು ಅರ್ಥವಾಗುತ್ತಿಯೋ ? "

" ಅರ್ಥವಾಗುತ್ತೆ. ಉತ್ತರ ಕೊಡುವಷ್ಟು ಓದಿದವಳಲ್ಲ. ದೇವರು ಇದ್ದೂ ಹೀಗೆ ಏಕೋ ನಮಗೆ ಗೊತ್ತಾಗುವುದಿಲ್ಲ. ನನ್ನನ್ನು ಸಲಹಿದ ಗುರು ಒಬ್ಬರಿದಾರೆ. ಇದಕ್ಕೆಲ್ಲ ಅವರು ದೈವಸಂಕಲ್ಪ, ನಮಗೆ ಅರ್ಥವಾಗೋದಿಲ್ಲ ಎನ್ನುತ್ತಿದ್ದರು. ಅವರಿಗೇ ಅರ್ಥವಾಗದ್ದು ನಮಗೆ ಹೇಗೆ ಅರ್ಥವಾಗಬೇಕು ? "

" ಒಂದು ವೇಳೆ, ನೀವು ಮದುವೆಯಾದರೆ, ನಿಮ್ಮ ಗಂಡ 'ದೇವರಿಲ್ಲ. ಬಡವರ ಉದ್ಧಾರ ಆಗಬೇಕಾದರೆ ಶ್ರೀಮಂತ ವರ್ಗವನ್ನು ನಾಶಮಾಡಬೇಕು. ಜಾತಿಭೇದ ಅಳಿಸಿ ಎಲ್ಲರೂ ಒಂದೇ ಎಂದಾಗಬೇಕು. ಇದನ್ನೆಲ್ಲಾ ದೇವರು ಬಂದು ಮಾಡುವುದಿಲ್ಲ; ನಾವೇ ಮಾಡಬೇಕು' ಎನ್ನುವವನಾದರೆ, ನೀವೇನು ಮಾಡುತ್ತೀರಿ ? "

" ಗಂಡನನ್ನೇ ದೇವರು ಎಂದು ತಿಳಿದವಳು, ಈ ಯೋಚನೆಯನ್ನು ಹಚ್ಚಿಸಿಕೊಳ್ಳುವುದಿಲ್ಲ. ಗಂಡ ಹೋದ ದಾರಿಯಲ್ಲಿ ನಡೆಯುತ್ತಾಳೆ."

ಶ್ರೀಧರ ಸಮಾಧಾನಗೊಂಡು ಮಾತನ್ನು ಬೇರೆಯ ಕಡೆಗೆ ತಿರುಗಿಸಿದ; ಅವನ ಮಾತಿನ ಉದ್ದೇಶ ಸಾಧನೆಗೆ ಗೊತ್ತಾಗದಿದ್ದರೂ, ಸುಂದರನಂತೆಯೇ ಈತನೂ ಹತ್ತು ಜನಕ್ಕಾಗಿ ಮರುಗುವ ಹೃದಯವುಳ್ಳವನು ಎಂದು ಸಂತೋಷವಾಯಿತು.

ಸುಂದರ ಸಾಧನೆಯೊಂದಿಗೆ ಮದುವೆಯ ಪ್ರಸ್ತಾಪ ಎತ್ತಿದಾಗ, ಶ್ರೀಧರನ ಮಾತುಗಳ ಉದ್ದೇಶ ಅವಳಿಗೆ ಅರ್ಥವಾಯಿತು. ಅವಳು ಶ್ರೀಧರನನ್ನು ಒಲ್ಲೆ ಎನ್ನಲಿಲ್ಲ; ಮೌನದ ಮುಗುಳುನಗೆಯಿಂದ ಸಮ್ಮತಿ ಸೂಚಿಸಿದಳು.

ಮದುವೆ ಎನ್ನುವ ಮಾತು ನಡೆಯಿತು; ಮದುವೆಯ ಕಾರ್ಯಕಲಾಪ ಏನೂ ನಡೆಯಲಿಲ್ಲ. ಆದರೂ, ಶ್ರೀಧರ ಎಷ್ಟು ಹೇಳಿದರೂ ಕೇಳದೆ, ಸುಂದರ ಒಂದು ದಿನ ಹರಿಜನರಿಗೆಲ್ಲಾ ಹಬ್ಬದೂಟ ಹಾಕಿಸಿ, ಅವರ ಮತ್ತು ಕಾಳೇಗೌಡನ ಸಮ್ಮುಖದಲ್ಲಿ ಇನ್ನು ಮೇಲೆ, ಶ್ರೀಧರ-ಸಾಧನೆ ಗಂಡಹೆಂಡಿರು. ಇದು ಶ್ರೀರಾಮನ ಅಪ್ಪಣೆಯಂತೆ ನಡೆದಿದೆ" ಎಂದು ಸಾರಿ, ಎಲ್ಲರಿಗೂ ತಾಂಬೂಲ ಕೊಟ್ಟ, ಊರಿನವರು ಯಾರಿಗೂ ಈ ವಿಷಯ ತಿಳಿಯದು.

ಸಾಧನೆ ಶ್ರೀಧರನೊಂದಿಗೆ ಹೊರಡುವುದಕ್ಕೆ ಮುಂಚೆ ಸುಂದರ ಹಾಸನಕ್ಕೆ ಹೋಗಿ, ಸಾಧನೆಯ ಹೆಸರಿನಲ್ಲಿದ್ದ ಎರಡು ಸಾವಿರ ರೂಪಾಯಿ ತಂದು, "ಇದು ಸಾಧನೆಯ ಹಣ" ಎಂದು ಅಷ್ಟೇ ಹೇಳಿ, ಶ್ರೀಧರನ ಕೈಗೆ ಆ ಮೊತ್ತಕ್ಕೆ ಅವನ ಹೆಸರಿಗೇ ಬರಸಿ ತಂದಿದ್ದ ಹುಂಡಿಯನ್ನು ಕೊಟ್ಟ. ಶ್ರೀಧರ ಆಶ್ಚರಿಗೊಂಡ.

ಶ್ರೀಧರ ನಗುತ್ತ ಹೇಳಿದ: "ಸುಂದರ, ಕ್ಷಮಿಸು" ಮೊದಲು ಏನೂ ಕೆಲಸವಿಲ್ಲದೆ, ಕೈಲಿ ಕಾಸಿಲ್ಲದೆ, ಮುಂದೇನು ಎಂಬ ಪ್ರಶ್ನೆಯನ್ನೇ ಎಲ್ಲೆಲ್ಲೂ ಕಾಣುತ್ತ, ನಿನ್ನನ್ನು ನೋಡಿಕೊಂಡು ಹೋಗೋಣ ಅಂತ ಬಂದೆ. ವರದಕ್ಷಿಣೆ ಸಮೇತ ಈ ದೇವಕನ್ಯೆಯನ್ನು ಮದುವೆಯಾದೆ! ಇದು ದೈವ ಸಂಕಲ್ಪ!— ನನಗೆ ಅರ್ಥವಾಗದ್ದು!

ಸುಂದರ ಸುಪ್ರೀತನಾಗಿ ನುಡಿದ: "ಹೌದು, ಶ್ರೀಧರ. ಸಾಧನೆ ಮಾನವಕನ್ಯೆಯಲ್ಲ; ದೇವಕನ್ಯೆ. ಅವಳ ಹುಟ್ಟು, ಅವಳ ಬೆಳವಣಿಗೆ, ಅವಳ ಮದುವೆ— ಎಲ್ಲ ದೈವಘಟಿತ. ಕೇಳಿದರೆ ಕಥೆ; ನಂಬಿದರೆ ನಿಜ. ಮಾದನ ಮಗಳು ಹೀಗೆ ಸುಖಿಯಾಗುವಳು ಎಂದು ನಾನು ಕನಸೇನೋ ಕಾಣುತ್ತಿದ್ದೆ. ಕನಸು ನನಸಾಗುವುದೆಂದು ನಂಬಿರಲಿಲ್ಲ. ಸತ್ಯಂಕಲ್ಪಗಳಿಗೆ ಹೇಗೋ ಜಯ ದೊರಕುತ್ತದೆ. ಹೌದು, ಇದು ದೈವಸಂಕಲ್ಪ."

ಶ್ರೀಧರ ಸಾಧನೆಯರು ಕಾಳೇಗೌಡನ ಗಾಡಿಯಲ್ಲಿ ಕುಳಿತು ಹೊಳೇ ನರಸೀಪುರಕ್ಕೆ ಪ್ರಯಾಣ ಹೊರಟರು.

ಆಶ್ರಮ ಶೂನ್ಯವಾದಂತೆ ತೋರಿತು ಸುಂದರನಿಗೆ; ಸಂತೋಷ ತೃಪ್ತಿ ಸಮಾಧಾನಗಳಿಂದ ಅವನ ಹೃದಯವೇನೋ ತುಂಬಿತ್ತು; ಕಣ್ಣುಗಳು ಮಾತ್ರ ದುಃಖದ ಹನಿಗಳನ್ನು ಚೆಲ್ಲುತ್ತಿದ್ದುವು.

* * * *

ಬೆಂಗಳೂರಿಗೆ ತಲಪಿ ಅಲ್ಲಿ ನೆಲಸಿದ ಮೇಲೆ, ಸಾಧನೆಯ ಒಪ್ಪಿಗೆ ಪಡೆದು' ಸುಂದರನ ಅನುಮೋದನೆಯನ್ನೂ ಬರೆದು ತರಿಸಿಕೊಂಡು, ಅವಳ ಹಣದ ಬಂಡವಾಳದಿಂದ ಶ್ರೀಧರ ಒಂದು ಸ್ಟೇಷನರಿ ಅಂಗಡಿಯನ್ನು ತೆರೆದ. ಸಾಧನೆಯೊಂದಿಗೆ ನೆಮ್ಮದಿಯ ಬಾಳನ್ನು ಬದುಕತೊಡಗಿದ. ಕಮ್ಯೂನಿಸ್ಟ್ ಪಾರ್ಟಿಯ 'ಜನತಾಯುದ್ಧ' ಎಂಬ ಪತ್ರಿಕೆ ಓದುವುದು ಹೊರತು, ಕಮೂನಿಸ್ಟ್ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಮನಸ್ಸೂ ಕೂಡ ಆಗಲಿಲ್ಲ. ಅವನ ಕೋಣೆಯಲ್ಲಿ ಆವನ ಮೆಚ್ಚಿನ ಲೆನಿನ್ ಸ್ಟಾಲಿನ್ ಚಿತ್ರಗಳು, ಸಾಧನೆಯ ಪ್ರೀತ್ಯರ್ಥವಾಗಿ ರಾಮದೇವರ ಮತ್ತು ಗಾಂಧಿಯವರ ಚಿತ್ರಗಳು — ಎದುರು ಬದುರಾಗಿದ್ದುವು: ಮಾನವ ಪ್ರಯತ್ನ, ದೈವಸಂಕಲ್ಪ; ಸಮಾಜ ಸ್ವಾಮ್ಯವಾದ ಗಾಂಧಿವಾದ — ಇವುಗಳ ಸ್ಪರ್ಧೆಯ ಪ್ರತೀಕದಂತೆ. ಅಥವಾ ಸಮನ್ವಯದ ಸಂಕೇತವಾಗಿಯೋ ? ಯಾರು ಬಲ್ಲರು.

ಆದರೂ, ಕಂಡು ಕೇಳಿದವರಿಗೆಲ್ಲ ತಾನು 'ಕಮ್ಯೂನಿಸ್ಟ್' ಎಂದು ಹೇಳಿಕೊಳ್ಳುವುದರಲ್ಲಿಯೂ ಪ್ರಪಂಚದಲ್ಲಿ ಇಂದಲ್ಲ ನಾಳೆ ಕಮ್ಯೂನಿಸಂ ಗೆದ್ದೇ ಗೆಲುವುದು ಎಂದು ಉದ್ಘೋಷಿಸುವುದರಲ್ಲಿಯೂ ಶ್ರೀಧರನಿಗೆ ತುಂಬ ಹೆಮ್ಮೆ.

## ೯೦

ನಡೆದದ್ದು ಹೀಗೆ. ಇದನ್ನು ಶ್ರೀಧರ ತನ್ನ ನಿರೂಪಣೆಯ ಕ್ರಮದಲ್ಲಿ ಲಕ್ಷ್ಮೀಪತಿಗೆ ಹೇಳಿದಾಗ, ಅವನು ಸಂತೋಷಪಟ್ಟ ; ತೃಪ್ತಿಪಟ್ಟ

"ನಾನು ಬರೀ ಮಾತುಗಾರ. ನೀನು, ಸುಂದರ – ನಿಜವಾದ ಸಾಧಕರು" ಎಂದ ಲಕ್ಷ್ಮೀಪತಿ.

"ಇವಿರಲಿ. ಈಗ ನನ್ನದೊಂದು ಸಲಹೆ. ಕೊಳಲೂರಿಗೆ ಹೋಗಬೇಕು ಅಂತ ಸಾಧನೆಯೂ ಬಯಸುತ್ತ ಇದಾಳೆ. ನನಗೂ ಹೋಗಬೇಕು ಎನ್ನಿಸಿದೆ. ಈ ಗಲಾಟೆ ಕಳೆಯುವ ವರೆಗೆ ನನಗೂ ಅಂಗಡಿ ಬಾಗಿಲು ತೆಗೆಯುವ ಮನಸ್ಸಿಲ್ಲ. ಒಂದು ಎಂಟು ದಿನ ಹೋಗಿಬರೋಣವೋ ? ರಜಾ ಸಿಕ್ಕುತ್ತೆಯೋ ?"

"ರಾಜೀನಾಮೆ ಕೊಟ್ಟವನಿಗೆ ರಜ ಏಕೆ ?"

"ಏನು, ರಾಜೀನಾಮೆ ಕೊಟ್ಟೆಯೊ ?"

" ಹ್ಞೂ."

" ಅಯ್ಯೋ ಬೆಪ್ಪಾ ! "

" ಹೌದು, ನಾನು ಬೆಪ್ಪ. ರಾಜೀನಾಮೆ ಕೊಟ್ಟು ರಾಜನ ಹಾಗೆ ತೆಪ್ಪಗಿದ್ದೇನೆ. "

" ನೋಡು, ಇದು ಸರಿಯಲ್ಲ. ರಾಜೀನಾಮೆ ಹಿಂದಕ್ಕೆ ತೆಗೆದುಕೋ. ಅದಿರಲಿ. ಸದ್ಯಕ್ಕೆ ನನ್ನೊಡನೆ ಬರುತ್ತೀಯೋ ಹೇಗೆ? "

" ಆಗಲಿ " ಎಂದು ಒಪ್ಪಿಕೊಂಡ ಲಕ್ಷ್ಮೀಪತಿ.

ಮೂವರೂ ಕೊಳಲೂರಿಗೆ ಪ್ರಯಾಣ ಮಾಡಿದರು. ರೈಲಿನಲ್ಲಿ ಗಲಭೆಯೋ ಗಲಭೆ. ಬೇರೆ ಬೇರೆ ಸ್ಟೇಷನ್ನುಗಳಲ್ಲಿ ವಿದ್ಯಾರ್ಥಿಗಳು ತಂಡ ತಂಡವಾಗಿ ಟಿಕೆಟ್ಟಿಲ್ಲದೆ ರೈಲು ಹತ್ತಿ ಇಳಿಯುತ್ತ ಇದ್ದರು. ಕೆಲವು ಕಡೆ ಅವರು ಇಳಿದ ಕೂಡಲೆ ಪೋಲೀಸರು ನಿಷ್ಕರುಣೆಯಿಂದ ಅವರ ಮೇಲೆ ಲಾಠೀಪ್ರಹಾರ ಮಾಡಿದರು. ಇದನ್ನೆಲ್ಲ ನೋಡಿ ಲಕ್ಷ್ಮೀಪತಿಯ ರಕ್ತ ಕುದಿಯುತ್ತ ಇತ್ತು. ಶ್ರೀಧರ ಮಾತ್ರ " ಹುಡುಗರಿಗೆ ಬುದ್ಧಿಯಿಲ್ಲ. ಟಿಕೆಟ್ಟಿಲ್ಲದೆ ಪ್ರಯಾಣ ಮಾಡಿದರೆ ಸ್ವರಾಜ್ಯ ಸಿಕ್ಕುತ್ತದೆಯೇ " ಎಂದು ನಗುತ್ತ ಇದ್ದ. ಮಾರ್ಪಟ್ಟ ಮನೋಭಾವವುಳ್ಳ ಶ್ರೀಧರನೊಂದಿಗೆ ಲಕ್ಷ್ಮೀಪತಿ ಚರ್ಚೆಹೂಡಲು ಇಷ್ಟಪಡಲಿಲ್ಲ.

ಕೊಳಲೂರನ್ನು ಮುಟ್ಟಿ ಮೂವರೂ ಆಶ್ರಮವನ್ನು ತಲಪಿದರು. ಆದರೆ ಆಶ್ರಮದ ಬೀಗ ಹಾಕಿತ್ತು. ಕಾಳೇಗೌಡ ಬಾಗಿಲಬಳಿ ತಲೆತಗ್ಗಿಸಿ ಮೌನವಾಗಿ ಕುಳಿತಿದ್ದ.

ಸಾಧನೆಯನ್ನು ಕಂಡು ಅವನಿಗೆ ಶ್ರೀಧರನ ಗುರುತೂ ಹತ್ತಿತು. ಸುಂದರ ದಸ್ತಗಿರಿಯಾಗಿರುವನೆಂದು ಅವನಿಂದ ಎಲ್ಲರಿಗೂ ತಿಳಿಯಬಂದಿತು. ಕಾಳೇಗೌಡನಿಗೆ ಹೆಚ್ಚಿನ ವಿವರಗಳು ಗೊತ್ತಿರಲಿಲ್ಲ. ಕಾಳೇಗೌಡ ಬೀಗ ತೆಗೆದು, ಮೂವರನ್ನೂ ಒಳಕ್ಕೆ ಕರೆದುಕೊಂಡು ಹೋದ. ಸಾಮಗ್ರಿಗಳೆಲ್ಲ ತುಂಬಿದ್ದವು. ಸಾಧನೆ ಅಡಿಗೆಗೆ ಮೊದಲು ಮಾಡಿದಳು. ಮೂವರೂ ಆಶ್ರಮದಲ್ಲಿ ಆ ದಿನ ಇದ್ದು ಮಾರನೆಯ ದಿನ ಬೆಂಗಳೂರಿಗೆ ಕುಗ್ಗಿದ ಮನದಿಂದ ಹಿಂದಿರುಗಿದರು.

೯೧

ಸುಂದರಮೂರ್ತಿ ದಸ್ತಗಿರಿಯಾಗಲು ಕಾರಣವೇನೂ ಇರಲಿಲ್ಲ; ನಿಷ್ಕಾರಣದ ದಸ್ತಗಿರಿ. ಆಗಿನ ಚಳವಳಿಯಲ್ಲಿ ನಡೆದ ಯಾವ ದಸ್ತಗಿರಿ ತಾನೆ ಕಾರಣವುಳ್ಳದ್ದು, ನ್ಯಾಯವಾದ್ದು ? ೧೯೪೨ರ ಚಳವಳಿಯಲ್ಲಿ ದಸ್ತಗಿರಿಯಾಗ ಬೇಕಾದರೆ ಅಂತಹ ಪ್ರಬಲವಾದ ಕಾರಣ ಬೇಕಾಗಿಯೇ ಇರಲಿಲ್ಲ. "ಗಾಂಧಿಕಿ ಜೈ" ಎಂದರೆ ಸಾಕು, ಮೆರೆವಣಿಗೆಯಲ್ಲಿ ಭಾಗ ವಹಿಸಿದರೆ ಸಾಕು, ಹೆಂಡದಂಗಡಿಯ ಮುಂದೆ ಸುಳಿದರೆ ಸಾಕು, ರೈಲುಕಂಬಿಯ ಮೇಲೆ ನಡೆದು ಹೋಗುತ್ತ ಇದ್ದರೆ ಸಾಕು. ವಿದ್ಯಾರ್ಥಿಗಳ ಪೊಲೀಸರ ಘರ್ಷಣೆಯ ನಡುವೆ ಪ್ರವೇಶಿಸಿದರೆ ಸಾಕು – ಕಡಮೆ ಎಂದರೆ ಲಾಠಿ ಏಟು, ಹೆಚ್ಚೆಂದರೆ ದಸ್ತಗಿರಿ! ಸುಂದರ ಮೇಲೆ ಹೇಳಿದ ಯಾವ 'ರಾಜದ್ರೋಹದ' ಕಾರ್ಯವನ್ನೂ ಮಾಡಿರಲಿಲ್ಲ. ತನ್ನ ಪಾಡಿಗೆ ತಾನು ಆಶ್ರಮದಲ್ಲಿದ್ದ.

ಈ ಹಿಂದೆ ನಿಸ್ತೇಜವಾಗಿದ್ದ ಕೋಳಲೂರು ೧೯೪೨ ರ. ಚಳವಳಿಯಲ್ಲಿ ಪ್ರಚಂಡವಾಯಿತು. ಸುಂದರನ ಆಶ್ರಮಕ್ಕೆ ಬರುತ್ತಿದ್ದ ವಿದ್ಯಾರ್ಥಿಗಳೆಲ್ಲರೂ ಕ್ರಮಕ್ರಮವಾಗಿ ರಾಷ್ಟ್ರೀಯ ಭಾವನಾ ಪ್ರದೀಪ್ತರಾಗುತ್ತ ಬಂದಿದ್ದರು. ಸುಂದರ ಪ್ರತ್ಯಕ್ಷವಾಗಿ ರಾಜಕೀಯದ ಆವೇಶವನ್ನು ಅವರಲ್ಲಿ ತುಂಬದೆ ಹೋಗಿದ್ದರೂ ವಿದ್ಯಾರ್ಥಿಗಳೆಲ್ಲರೂ ಸುಂದರನನ್ನು ತಮ್ಮ ಆದರ್ಶವ್ಯಕ್ತಿಯನ್ನಾಗಿ ಮಾಡಿಕೊಂಡಿದ್ದರು. ಅವನ ನಡೆ ನುಡಿ ಎಲ್ಲವೂ ಅವರಿಗೆ ಸ್ಫೂರ್ತಿದಾಯಕವಾಗಿದ್ದವು. ಅವನ ಮೇಲು ಪಂಕ್ತಿಯನ್ನನುಸರಿಸಿ ಅನೇಕ ವಿದ್ಯಾರ್ಥಿಗಳು ಖಾದಿ ಧರಿಸುತ್ತ ಇದ್ದರು, ಕೆಲವರು ಚರಕ ಕೊಂಡು ತರಿಸಿ ನೂಲುತ್ತಿದ್ದರು. ಒಬ್ಬಿಬ್ಬರು ಅಧ್ಯಾಪಕರೂ ಪರೋಕ್ಷವಾಗಿ ತರಗತಿಯ ಪಾಠದೊಂದಿಗೆ ರಾಜಕೀಯ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು; ಸುಂದರ ತನ್ನ ಅನುಭವಗಳನ್ನೆಲ್ಲ ಅವರಿಗೆ ಆಗಾಗ್ಗೆ ಹೇಳುತ್ತ, "ಸ್ವಾತಂತ್ರ್ಯದ ಕರೆ ಬಂದಾಗ ವಿದ್ಯಾರ್ಥಿಗಳು ಮುಂದೆ ನುಗ್ಗಬೇಕು" ಎಂದು ಹೇಳುತ್ತಿದ್ದ. ಇಷ್ಟು ಹೊರತಾಗಿ ಆಗಸ್ಟ್ ತಿಂಗಳಿನಲ್ಲಿ ಅವನು ನೇರವಾಗಿ ಏನೂ ಮಾಡಿರಲಿಲ್ಲ.

ಆಗಸ್ಟ್ ೮ ರ ಹೊತ್ತಿಗೆ ಪೋಲೀಸ್ ಅಧಿಕಾರಿಗಳಿಗೆಲ್ಲಾ ಜಾಗರೂಕರಾಗಿರಬೇಕೆಂದು ತಾಕೀತು ಬಂದಿತ್ತು. ಪೂರ್ವಸಿದ್ಧತೆಯೆಲ್ಲ ನಡೆದಿತ್ತು.

ಅದು ಯಾವುದೋ ಮಾಯದಿಂದ ಎಂಬಂತೆ ಆಗಸ್ಟ್ ೯ ರಂದು ಭಾರತದ ಎಲ್ಲ ಕಡೆಯೂ ಒಂದೇ ಬಗೆಯ ಕಾರ್ಯಕ್ರಮ ನಡೆದುಹೋಯಿತು. ಕೊಳಲೂರಿನ ವಿದ್ಯಾರ್ಥಿಗಳು ಆಗಸ್ಟ್ ೯ರ ಬೆಳಗ್ಗೆ ಧ್ವಜವಂದನೆಮಾಡಿ, ಧ್ವಜಸಹಿತ ಮೆರವಣಿಗೆ ಹೊರಟರು, ಘೋಷಣೆಗಳನ್ನು ಮಾಡಿದರು, ಹೆಂಡದಂಗಡಿಗೆ ಮುತ್ತಿಗೆ ಹಾಕಿದರು, ಪೋಸ್ಟಾಪೀಸಿಗೆ ಬೆಂಕಿ ಇಡಲು ಪ್ರಯತ್ನಪಟ್ಟರು. ಪೋಲೀಸರೇನೋ ಬಹು ಧಾರಾಳವಾಗಿ ಲಾಠಿ ಏಟಿನ ಮಳೆಗರೆದರು. ಪ್ರಾಣವನ್ನೆ ಕೊಡಲು ಸಿದ್ಧರಾಗಿದ್ದ ವೀರಬಾಲಕರು ಬಡ ಪೆಟ್ಟಿಗೆ ಬೆದರುವರೆ? ಪೋಲೀಸರು ಬಂದರೆ ಚೆದರುವರು, ಕಣ್ಮರೆಯಾದರೆ ಕಲೆಯುವರು. ಎಂಟು ಮಂದಿ ಪೋಲೀಸರಿಗೆ ನೂರಾರು ಮಂದಿ ವಿದ್ಯಾರ್ಥಿಗಳನ್ನು ಎದುರಿಸುವುದು ಕಷ್ಟವಾಯಿತು.

ಮುಖಂಡರನ್ನು ದಸ್ತಗಿರಿ ಮಾಡಿದರೆ ಚಳವಳಿ ತಣ್ಣಗಾಗುವುದೆಂದು ಆಗಿನ ಅಧಿಕಾರಿಗಳ ಒಂದು ಸಿದ್ಧಾಂತ ವಾಕ್ಯ. ಅದರಂತೆ, ಈ ವಿದ್ಯಾರ್ಥಿಗಳಿಗೆ ಮುಖಂಡರು ಯಾರಿರಬಹುದು ಎಂದು ಸಬ್ ಇನ್ಸಪೆಕ್ಟರ್ ರಾಮಣ್ಣ ಆಲೋಚಿಸತೊಡಗಿದರು. ಸ್ಕೂಲುಗಳಿಗೆ ಹೋದರೆ, ಉಪಾಧ್ಯಾಯರೆಲ್ಲ ಖಾಲಿ ಬೆಂಚುಗಳನ್ನು ನೋಡುತ್ತ ಕುರ್ಚಿಗಳಲ್ಲಿ ಸ್ವಸ್ಥವಾಗಿ ಕುಳಿತಿದ್ದರು. ಅವರನ್ನು ಏನು ಮಾಡುವುದಕ್ಕೂ ಆಗಲಿಲ್ಲ ಹಾಗೂ ರಾಮಣ್ಣನವರು ಒಬ್ಬರು ಉಪಾಧ್ಯಾಯರನ್ನು "ವಿದ್ಯಾರ್ಥಿಗಳನ್ನೆಲ್ಲಾ ಒಳಕ್ಕೆ ಕರೆಯಿರಿ" ಎಂದು ಜಬರ್‌ದಸ್ತಿನಿಂದ ಬೆದರಿಸಿದರು. ಉಪಾಧ್ಯಾಯರು, "ನಾವು ಅವರನ್ನು ಹೋಗಿ ಎಂದು ಹೇಳಿದೆವೆ? ನೀವು ಕರೆದು ತಂದು ಕೂರಿಸಿ, ನಾವು ಪಾಠ ಹೇಳುವುದಕ್ಕೆ ಸಿದ್ಧ. ನಮ್ಮ ಕೆಲಸ ಅಷ್ಟೇ" ಎಂದರು. ಸಬ್ ಇನ್‌ಸ್ಪೆಕ್ಟರ್ ಸಾಹೇಬರು ಅವರನ್ನು ನುಂಗುವಂತೆ ನೋಡಿ ಹೊರಕ್ಕೆ ಬಂದರು. ಬೀದಿಗಳಲ್ಲಿ ಪೋಲೀಸರೊಂದಿಗೆ ಠರಾಯಿಸುತ್ತ ಇದ್ದಾಗ ಯಾರೋ ಸಲಹೆಮಾಡಿದರು: "ಹೊಲಗೇರಿಯ ಹತ್ತಿರ ಸುಂದರ ಮೂರ್ತಿಯ ಆಶ್ರಮ ಇದೆ. ಅವನೇ ಇವರಿಗೆಲ್ಲ ಮುಖಂಡ. ಅವನನ್ನು ಹಿಡಿದರೆ ಎಲ್ಲರೂ ದಾರಿಗೆ ಬರುತ್ತಾರೆ" ಎಂದು. ಸಬ್ ಇನ್‌ಸ್ಪೆಕ್ಟರು ಜೇಬಿನಲ್ಲಿ ರುಜುವಾಗಿ ಸಿದ್ಧವಾಗಿದ್ದ ವಾರಂಟಿನಲ್ಲಿ ಸುಂದರಮೂರ್ತಿಯ ಹೆಸರನ್ನು ಭರ್ತಿಮಾಡಿಕೊಂಡು, ಆಶ್ರಮಕ್ಕೆ ಹೋಗಿ, ಅವನನ್ನು ದಸ್ತಗಿರಿ

ಮಾಡಿ ಹಾಸನಕ್ಕೆ ಕರೆದೊಯ್ದರು. ಅಲ್ಲಿನ ಜೈಲಿನಲ್ಲಿ ಅವನು ಸರ್ಕಾರದ ಅತಿಥಿಯಾಗಿ ನಿಲ್ಲಬೇಕಾಯಿತು.

ಸುಂದರನ ದಸ್ತಗಿರಿಯೇನೋ ಆಯಿತು. ಆದರೆ ಕೊಳಲೂರಿನಲ್ಲಿ ವಿದ್ಯಾರ್ಥಿಗಳ ಕಿರುಕುಳ ಚಳವಳಿ ನಿಲ್ಲಲೇ ಇಲ್ಲ. ದೇಶದಲ್ಲೆಲ್ಲಾ ನಾಯಕರ ಮಾರ್ಗದರ್ಶನವೂ ಪ್ರೋತ್ಸಾಹವೂ ತಪ್ಪಿ ಜನಕ್ಕೇ ಬೇಸರವಾಗಿ ಅದು ನಂದಿದಾಗ ಮಾತ್ರ ಇಲ್ಲಿಯೂ ನಂದಿತು.

ಸುಂದರ ವಾಸ್ತವವಾಗಿ ಯಾವ ದೃಷ್ಟಿಯಿಂದಲೂ ತಪ್ಪಿತಸ್ಥನಾಗಿರಲಿಲ್ಲ. ಅನೇಕ ಡೆಟಿನ್ಯೂಗಳ ವಿಚಾರಣೆಯಾದಾಗ ಸುಂದರನ ವಿಚಾರಣೆಯೂ ನಡೆಯಿತು. ಅವನ ಆಶ್ರಮವನ್ನು ಶೋಧನೆ ಮಾಡಿದಾಗ ಪೋಲೀಸಿನವರಿಗೆ ಪ್ರಪಂಚವೆಲ್ಲಾ ಓದುತ್ತ ಇದ್ದ ಪ್ರಸಿದ್ಧವಾದ 'ಗಾಂಧಿ ಸಾಹಿತ್ಯ'ದ ಕೆಲವು ಇಂಗ್ಲಿಷ್ ಕನ್ನಡ ಗ್ರಂಥಗಳೂ, 'ಹರಿಜನ'ಪತ್ರಿಕೆಯ ಸಂಚಿಕೆಗಳೂ, ಶ್ರೀಧರ ಇವನ ಅವಲೋಕನಕ್ಕೆಂದು ತಾನು ಕೊಂಡು ಪ್ರೀತಿಯಿಂದ ಇವನಿಗೆ ಕಳಿಸುತ್ತಿದ್ದ 'ಜನತಾಯುದ್ಧ' ಪತ್ರಿಕೆಯ ಕೆಲವು ಸಂಚಿಕೆಗಳೂ ಮಾತ್ರ ದೊರೆತಿದ್ದುವು. ಅಷ್ಟರಿಂದಲೇ ತೃಪ್ತರಾಗಿ ಪೋಲೀಸ್ ಅಧಿಕಾರಿಗಳು 'ಸುಂದರ ಪ್ರಭಾವಶಾಲಿಯಾದ ರಾಜಕೀಯವ್ಯಕ್ತಿ, ಕೋರ್ಟಿನ ಶಿಕ್ಷೆಯಾಗದಿದ್ದರೆ ಕೊಳಲೂರು ಪುಂಡರ ಗ್ರಾಮವಾಗುತ್ತದೆ, ಭಾರತದ ಸಂರಕ್ಷಣೆಗೆ ಮಹಾ ಅಪಾಯ' ಎಂದು ವಾದಿಸಿದ್ದರು. 'ತಪ್ಪಿತಸ್ಥ' ನಲ್ಲವೆಂದು ಬರೆದುಕೊಟ್ಟರೆ ಸುಂದರನ ಬಿಡುಗಡೆಯಾಗಬಹುದೆಂದು ತೀರ್ಮಾನವಾಯಿತು. ಹಾಗೆ ಬರೆದುಕೊಡಲು ಮಾತ್ರ ಸುಂದರ ಸಿದ್ಧನಾಗಿರಲಿಲ್ಲ. ಇದು ತಪ್ಪನ್ನು ಒಪ್ಪಿಕೊಂಡಹಾಗಾಯಿತು ಎಂಬ ತರ್ಕಶಾಸ್ತ್ರದ ಪ್ರಮಾಣದ ಆಧಾರದ ಮೇಲೆ, ಅನೇಕರಿಗೆ ಶಿಕ್ಷೆಯಾದಂತೆ, ಸುಂದರನಿಗೂ ಒಂದು ವರ್ಷದ ಸಾದಾ ಶಿಕ್ಷೆ ಆರ್ಡರಾಯಿತು. ನ್ಯಾಯಸ್ಥಾನದ ಆರ್ಡರೋ ಪೋಲೀಸ್ ಆರ್ಡರೋ ಎಂದು ತಿಳಿಯುವ ಗೋಜಿಗೆ ಯಾರೂ ಹೋಗಲಿಲ್ಲ; ತಿಳಿದು ಆಗಬೇಕಾದದ್ದೂ ಏನೂ ಇರಲಿಲ್ಲ. ಶಿಕ್ಷೆಯನ್ನನುಭವಿಸಲು ಎಲ್ಲರೂ ಸಿದ್ಧವಾಗಿದ್ದರು; ಸುಂದರನೂ ಸಿದ್ಧನಾಗಿದ್ದ.

ಮೈಸೂರಿನ ಕಾಂಗ್ರೆಸ್ ಚಟುವಟಿಕೆಗಳಲ್ಲಿ ಪ್ರಮುಖರೆನಿಸಿದ್ದ ಹಲ

ವರಿಗೆ ಹಲವು ಜೈಲುಗಳ ವಾಸದ ವಿವಿಧಾನುಭವಗಳ ಸೌಭಾಗ್ಯ ದೊರಕಿತ್ತು. ಸಾಧುಪ್ರಾಣಿಯಾಗಿದ್ದ ಸುಂದರ ಒಂದು ವರ್ಷ ಕಾಲವನ್ನೂ ಹಾಸನದ ಜೈಲಿನಲ್ಲಿಯೇ ಕಳೆದು ಕೊಳ್ಳುತ್ತಿರಬೇಕಾಯಿತು. ಅವನ ಸಹವಾಸಿಗಳೊಬ್ಬರು ಪುಸ್ತಕ ಪಿಶಾಚಿ; ಇದರ ದೆಸೆಯಿಂದ, ಅವರು ಓದುತ್ತ ಇದ್ದ ಹಲವು ಬಗೆಯ ಗ್ರಂಥಗಳು ಸುಂದರನ ವಾಚನಕ್ಕೂ ಪ್ರಯಾಸವಿಲ್ಲದೆ ದೊರಕುತ್ತಿದ್ದವು.

ಒಂದು ರೀತಿಯಲ್ಲಿ ಒಂಟಿಯಾಗಿಯೇ ಬಾಳುತ್ತ ಇದ್ದ ಜೀವಕ್ಕೆ, ಹಲವು ಬಗೆಯ ನಿರಾಶೆಗಳ ನಿಚ್ಚಣಿಗೆಯನ್ನು ಏರಿ ಇಳಿದಿದ್ದ ಜೀವಕ್ಕೆ, ಕಷ್ಟಪರಂಪರೆಯ ಕಾರ್ಕೋಟಕ ವಿಷ ರಕ್ತಗತವಾಗಿದ್ದ ಜೀವಕ್ಕೆ, ಒಂದು ವರ್ಷದ ಜೈಲುವಾಸ ಬೇಸರ ಹಿಡಿಸುವುದಾಗಿದ್ದರೂ ಬೆನ್ನೆಲುಬನ್ನು ಬಾಗಿಸಲಿಲ್ಲ; ಬಾಳಿನ ಬೇರನ್ನು ಕದಲಿಸಲಾಗಲಿಲ್ಲ; ಖಚಿತಗೊಂಡ ನಂಬಿಕೆಗಳನ್ನು ಸಡಿಲಗೊಳಿಸಲಾಗಲಿಲ್ಲ. ೧೯೪೩ರ ಸೆಪ್ಟೆಂಬರಿನಲ್ಲಿ ಸುಂದರನ ಬಿಡುಗಡೆಯಾಗಿ, ಅವನು ಹೊಸ ಹುರುಪಿನಿಂದ ತನ್ನ ಕೈಕೊಂಡ ಕಾರ್ಯಕ್ರಮವನ್ನು ಮುಂದುವರಿಸಲು ಪುನಃ ದೀಕ್ಷಾಬದ್ಧನಾಗಿಯೆ ತನ್ನ ಆಶ್ರಮಕ್ಕೆ ಹಿಂದಿರುಗಿದನು.

ಕೋಟೆಯ ಜನವೇನೋ ಸುಂದರನೆಂದರೆ ಈಗಲೂ ಮೂಗು ಮುರಿಯುತ್ತಿದ್ದರು; ಪೇಟೆಯ ಜನದ ಹಲವರಿಗೆ ಸುಂದರ ವೀರಪುರುಷನಾಗಿ ಕಂಡನು; ವಿದ್ಯಾರ್ಥಿಗಳಿಗಂತೂ ಎಂದಿನಿಂದಲೂ ಅವನು ಆದರ್ಶಪುರುಷ. ಹೀಗಾಗಿ, ಅವನು ಊರಿಗೆ ಹಿಂದಿರುಗಿದ ಸುದ್ದಿ ಮುಟ್ಟಿದ ಕೂಡಲೆ, ವಿದ್ಯಾರ್ಥಿಗಳು ನೆರೆದು ಅವನಿಗೆ ಹೂಮಾಲೆ ಹಾಕಿ ಬೀದಿಗಳಲ್ಲಿ ಮೆರೆವಣಿಗೆ ಮಾಡಬೇಕೆಂದು ಬಯಸಿದರು. ಆದರೆ, ಸುಂದರ ವಿದ್ಯಾರ್ಥಿಗಳ ಬಂಧನದಿಂದ ಬಿಡಿಸಿಕೊಂಡು ಊರೊಳಕ್ಕೆ ಹೋಗದೆಯೇ ತನ್ನ ಆಶ್ರಮಕ್ಕೆ ಓಡಿದನು. ವಿದ್ಯಾರ್ಥಿಗಳಿಗೆ ಉತ್ಸಾಹ ಭಂಗವಾಯಿತು. ಆದರೆ ಅವನಿಗೆ ಸಮಾಧಾನವಾಯಿತು.

೯೨

ದಿನದಿನದ, ತಿಂಗಳು ತಿಂಗಳಿನ, ಕೆಲವಾರು ವರ್ಷಗಳ ಕಾಲಮಾನಕ್ಕೆ ಗಡಿಯಾರ, ಪಂಚಾಂಗ ಕ್ಯಾಲೆಂಡರು: ವ್ಯಕ್ತಿಯ ಜೀವಮಾನವನ್ನು ಅಳೆಯುವ ಸಾಧನ. ದೇಶದ ಜೀವನ ಆದರಲ್ಲಿ ನಡೆಯುವ ಮಹದ್ಘಟನೆಗಳಿಂದ

ಅಳಿಯತಕ್ಕದ್ದು. ಭಾರತದ ಇತಿಹಾಸದಲ್ಲಿ ಈಚಿನ ಇಪ್ಪತ್ತು ವರ್ಷಗಳು ಅಂತಹ ಮಹತ್ವದ ಘಟನೆಗಳಿಂದ ಅಂಕಿತವಾಗಿ, ಕಾಲಪುರುಷನ ಕಣ್ಣು ಮಿಟುಕಿನಲ್ಲಿ ಕಳೆದು ಹೋಗಿವೆ. ಆದರೆ, ಭಾರತದ ಜನ ಪಟ್ಟ ಕಷ್ಟ, ಉಂಡ ಬಡತನ ದುಃಖ, ಕಂಡ ಸಾವು ನೋವು, ಮೆರೆದ ಸ್ವಾರ್ಥತ್ಯಾಗ, ತೋರಿಸಿದ ಆತ್ಮಶಕ್ತಿ, ಮಹಾತ್ಮರ ನಿರಂತರ ತಪಸ್ಸಾಧನೆಯ ಫಲವಾಗಿ ಕಲಿತ ಪಾಠ; ಸತ್ಯ ಅಹಿಂಸೆಗಳ ಗೆಲವು – ಆದರ ಸಂಕೇತ, ಭಾರತ ಜನ ಹಾತೊರೆಯುತ್ತಿದ್ದ ಸ್ವಾತಂತ್ರ್ಯದ ಸಾಧನೆ; ಎಂದಿಗೆ ಯುದ್ಧ ನಿಂತೀತು, ಎಂದಿಗೆ ಸುಖದ ಕಾಲ ಕಂಡೇವು ಎಂದು ಒಂದು ಕಣ್ಣಿನಲ್ಲಿ ಕಂಬನಿ; ಎಂದಿಗೆ ಸ್ವಾತಂತ್ರ್ಯಲಭಿಸೀತು, ಎಂದಿಗೆ ದಾಸ್ಯವಿಮೋಚನೆ ಎಂದು ಮತ್ತೊಂದು ಕಣ್ಣಿನಲ್ಲಿ ಕಂಬನಿ; ನಿರಾಶೆಯ ನೋವು, ಆಶೆಯ ಮುನ್ನೋಟ; ಹಾವು ಸಾಯದು, ಕೋಲು ಮುರಿಯದು ಎಂಬ ಪರಿಸ್ಥಿತಿ. ಈ ಹಿನ್ನೆಲೆಯಲ್ಲಿ ನೋಡಿದರೆ, ಭಾರತ ಇಪ್ಪತ್ತು ವರ್ಷಕಾಲದಲ್ಲಿ, ಯುಗಪುರುಷನ ಯಾಜಮಾನ್ಯದಲ್ಲಿ ಆತ್ಮಾರ್ಪಣೆಯ ಯಜ್ಞಮಾಡಿತು, ಯುಗದ ತಪಸ್ಸನ್ನಾಚರಿಸಿತು ಆಹುತಿ ಸಾಲಲಿಲ್ಲ; ಜಾತಿ ಗುರುಡರ ಕೊಲೆಗೈಮೆಯಿಂದ ಭ್ರಾತೃವಧೆಯಾಯಿತು; ಮತ್ತೆ ಮಹಾತ್ಮರ ಉಪವಾಸದ ಪ್ರಾಯಶ್ಚಿತ್ತವಾಯಿತು. ಯಜ್ಞಪುರುಷ ಪೂರ್ಣಾಹುತಿಯನ್ನು ಬೇಡಿದ; ಅಂಧ-ಧರ್ಮ-ದೀಕ್ಷಿತನೊಬ್ಬ ಆ ಆಹುತಿಯನ್ನೂ ಒಪ್ಪಿಸಿದ. ಕಣ್ಣೀರ ಹೊಳೆಯಲ್ಲಿ, ರಕ್ತಸರೋವರದಲ್ಲಿ, ಸ್ವಾತಂತ್ರ್ಯಕಮಲ ಮೂಡಿ ಅರಳಿತು. ಭಾಗ್ಯಲಕ್ಷ್ಮಿ ಮಾತ್ರ ಅದರ ಮೇಲೆ ಬಂದು ಮಂಡಿಸದೆ ಹೋಗಿದ್ದಾಳೆ.

ಎಲ್ಲೆಲ್ಲಿಯೂ ಒಂದೇ ಮಾತು: ಯುದ್ಧ ನಿಂತಿತು; ಸ್ವಾತಂತ್ರ್ಯ ಬಂದಿತು; ಆದರೂ ಬಡವರ ಉದ್ಧಾರವಾಗಲಿಲ್ಲ. ಹರಿಜನರ ಉದ್ಧಾರವಂತೂ ಆಗಿಯೇ ಇರಲಿಲ್ಲ. ತೊಳಲೂರಿನ ಸ್ಥಿತಿ ಹೇಗೆ ಹೊರತಾದೀತು? ಅಲ್ಲಿಯೂ ಇದೇ ಮಾತು.

೯೩

ಶ್ರೀರಾಮದೇವರ ಗುಡಿಯಲ್ಲಿಯೂ ಇದೇ ಮಾತು.

ಈಗ ಗುಡಿಯ ಗೋಷ್ಠಿಯಲ್ಲಿ ಮಾತಾಡುವವರ ಸಂಖ್ಯೆ ಇದ್ದ ಹಾಗೆಯೇ ಇದ್ದು ಇಬ್ಬರು ಮೂವರು ವ್ಯಕ್ತಿಗಳು ಬದಲಾವಣೆಯಾಗಿದ್ದರು, ಅಷ್ಟೆ. ಮಿಡ್ಲ್‌ಸ್ಕೂಲು ಹೈಸ್ಕೂಲುಗಳಿಗೆ ವರ್ಷ ಮುಗಿದು ವರ್ಷವಾದರೆ ಯಾರು ಯಾರೋ ಹೊಸ ಹೊಸಬರು ಮೇಷ್ಟರಾಗಿ ಬರುತ್ತಿದ್ದರು. ಅವರು

ಬರುತ್ತಿರಲಿಲ್ಲ, ತರುತ್ತಿದ್ದರು. ತಂಡವರಲ್ಲಿ ಇಬ್ಬರು ಹೊಸಬರಿದ್ದರು.

ದೇವಾಲಯಕ್ಕೆ ಹರಿಜನರನ್ನು ಪ್ರವೇಶಮಾಡಿಸಲು ಕಾನೂನುಗಳಾಗಬೇಕು ಎಂದು ಅಸೆಂಬ್ಲಿಗಳಲ್ಲಿ ನೇಪಥ್ಯಭಾಷಣ ಘೋಷಣಗಳು ಮೊದಲಾಗಿದ್ದರೂ, ಜನರಲ್ಲಿ ನಿಜವಾದ ದೈವಭಕ್ತಿ ಎಲ್ಲೆಲ್ಲಿಯೂ ಇಳಿಮುಖವಾಗುತ್ತಿತ್ತು. ಕಾಳಸಂತೆಯಲ್ಲಿ ಕೋಟಿ ಸಂಪಾದನೆ ಮಾಡಿದ ಸಾಹುಕಾರರ ದೈವಭಕ್ತಿ ಮಾತ್ರ ಸಮುದ್ರಭರತದಂತೆ ಉಬ್ಬಿ ಹೊಸ ಹೊಸ ದೇವಾಲಯಗಳನ್ನು ಕಟ್ಟಿಸತೊಡಗುತ್ತಿದ್ದರು, ಗೋಪುರಗಳಿಗೆ ಚಿನ್ನದ ಕಳಶ ಹಾಕಿಸುತ್ತಿದ್ದರು, ಕೋಮುವಾರು ಹಾಸ್ಟೆಲುಗಳ ಸ್ಕಾಲರ್‌ಶಿಪ್ಪುಗಳ ಸಂಖ್ಯೆಯನ್ನು ಹೆಚ್ಚಿಸುತ್ತಿದ್ದರು ; ಸಣ್ಣಪುಟ್ಟ ಸಾಹುಕಾರರು ಸತ್ಯನಾರಾಯಣಪೂಜೆ ದೇವಸ್ಥಾನಗಳಲ್ಲಿ ವಿಶೇಷ ಪೂಜೆಗಳು ಪಲ್ಲಕ್ಕಿ ಉತ್ಸವಗಳು ಮುಂತಾದ ಕೈಂಕರ್ಯಗಳನ್ನು ನಡಸುತ್ತಿದ್ದರು. ಬಡವರು ಯಾವ ದೇವರನ್ನೂ ಕಾಣದೆ, ಅನ್ನದೇವರ ಸಾಕ್ಷಾತ್ಕರಣಕ್ಕಾಗಿ ಪರಿತಪಿಸುತ್ತಿದ್ದರು. ಒಟ್ಟಿನಲ್ಲಿ ಜನಕ್ಕೆ ದೈವಭಕ್ತಿ ಕಡಮೆಯಾಗಿತ್ತು ; ಸ್ವಾರ್ಥಸಾಧಕರು ಭಕ್ತರಾಗಿ ಪರಿಣಮಿಸಿದ್ದರು. ಈ ಹೆಚ್ಚು ತಗ್ಗುಗಳಿಂದ ಭಕ್ತರ ಸಂಖ್ಯೆಯೇನೋ ಸರಿದೂಗಿತ್ತು.

ಕೊಳಲೂರಿನಲ್ಲಿಯೂ ಇದೇ ಸ್ಥಿತಿ. ಆದರೆ, ಎಲ್ಲ ಭಕ್ತರೂ ದೇವಸ್ಥಾನದಲ್ಲಿ ಹರಟೆಗೆ ಕುಳಿತುಕೊಳ್ಳುತ್ತಿರಲಿಲ್ಲ. ನಿತ್ಯಸಭೆಯಲ್ಲಿ ನಂಜುಂಡಶಾಸ್ತ್ರಿಗಳು, ನರಸಿಂಹಾಚಾರ್‍ರು, ಸುಬ್ಬಾಭಟ್ಟ, ತಿಪ್ಪಾವಧಾನಿಗಳು— ಇವರು ಖಾಯಂ ಸದಸ್ಯರು ; ಸುಬ್ಬಾಭಟ್ಟ ಹೊರತು, ಉಳಿದ ಮೂವರು ಈಗ ಮುಪ್ಪಿನಿಂದ ಕುಗ್ಗಿ, ದೇವಸಾನ್ನಿಧ್ಯದಲ್ಲಿಯೇ ಹೆಚ್ಚು ಹೊತ್ತು ಕಳೆಯುತ್ತಿದ್ದರು ; ಶಿವರಾಮುಭಟ್ಟರು ತೀರಿಹೋಗಿ, ಸುಬ್ಬಾಭಟ್ಟ ತಂದೆಯ ಸ್ಥಾನದಲ್ಲಿ ಪೂಜಾರಿಯಾಗಿದ್ದ. ಈ ಗೋಷ್ಠಿಗೆ ಹೊಸ ಸದಸ್ಯರೆಂದರೆ, ಸತ್ಯನಾರಾಯಣ ಶೆಟ್ಟರು ಮತ್ತು ಮ್ಯುನಿಸಿಪಲ್ ಪ್ರೆಸಿಡೆಂಟ್ ರಾಮಯ್ಯನವರು.

"ಏನು ಶಾಸ್ತ್ರಿಗಳೇ, ಯುದ್ಧ ನಿಂತಿತು, ಸ್ವರಾಜ್ಯ ಬಂತು, ಜವಾಬ್ದಾರಿ ಸರ್ಕಾರವೂ ಬಂತು ; ಎಲ್ಲಾ ಬಂತು, ಎಲ್ಲಾ ಆಯ್ತು. ಈ ರೇಷನ್ ಮಾತ್ರ ತಪ್ಪಲಿಲ್ಲವಲ್ಲ, ಸ್ವಾಮಿ" ಎಂದು ಜುಗುಪ್ಸೆಯಿಂದ ರಾಗ ಎಳೆದರು ನರಸಿಂಹಾಚಾರ್‍ರು. "ರೇಷನ್ ಉಂಡವಲ, ಉಂಡವಲ. ಇರಬೇಕು ಸ್ವಾಮಿ, ಇರಬೇಕು. ಅದು ಇರೋದರಿಂದಲೇ ಬಡವರಿಗೆ

ನಾಲ್ಕುಕಾಳು ಅಕ್ಕಿ ಸಿಕ್ಕತಾ ಇರೋದು—" ಎಂದರು ಕಾಳಸಂತೆಯ ಕೃಪಾಛತ್ರದಲ್ಲಿ ಈಚೆಗೆ ಸಾಹುಕಾರರು ಎನಿಸಿದ್ದ ಸತ್ಯನಾರಾಯಣಶೆಟ್ಟರು. "ಏನು ಶೆಟ್ಟರೆ ಅಕ್ಕಿ ಸಿಕ್ಕುತಾ ಇರೋದು? ಎಲ್ಲಿ ಪೌರೋಹಿತ್ಯಕ್ಕೆ ಹೋದರೂ ಅಚ್ಚೇರು ಅಕ್ಕಿ ಕೊಡುತ್ತ ಇದ್ದ ಕಡೆ ಒಂದು ಪಾವು ಗೋಧಿ ಕೊಡುತ್ತಾರೆ. ಈಗ ಮೊದಲಿನ ಹಾಗೆ ಕರೆಯುವವರು ತಾನೆ ಯಾರು? ಬ್ರಾಹ್ಮಣ್ಯವೇ ಹೋಗುತ್ತ ಬಂತು. ಇನ್ನೂ ಶ್ರಾದ್ಧ ಒಂದು ಬಿಟ್ಟಿಲ್ಲ. ಸುಂದರಮೂರ್ತಿಯಂಥವರು ಅದನ್ನೂ ಬಿಟ್ಟಿದ್ದಾರೆ ಅಂತ ಕಾಣುತ್ತೆ" ಎಂದು ನಿರಾಶೆಯಿಂದ ನುಡಿದರು ನಂಜುಂಡಶಾಸ್ತ್ರಿಗಳು. "ಅವರ ತಂದೆಯ ವರ್ಷಶ್ರಾದ್ಧಕ್ಕೆ ಹೋಗಿದ್ದ ಅಲ್ಲವೆ?"— ಎಂದು ತಿಪ್ಪಾವಧಾನಿಗಳು ಸಂದೇಹದ ಪ್ರಶ್ನೆಯೊಂದನ್ನು ಎತ್ತಿದರು. "ಅವನೊಬ್ಬ ಮನೆಹಾಳ. ಅವನ ಮಾತು ದೇವರ ಸನ್ನಿಧಿಯಲ್ಲಿ ಯಾಕೆ ಎತ್ತುತ್ತೀರಿ ಅವಧಾನಿಗಳೆ? ಆ ಸಲ ಜೈಲಿಗೆ ಹೋಗಿ ತಾಯಿಯನ್ನು ತಿಂದುಕೊಂಡ. ಈ ಸಲ ಜೈಲಿಗೆ ಹೋಗಿ ತಂದೆಯನ್ನ ತಿಂದುಕೊಂಡು ತೇಗಿದ. ಆಗ ತಂದೆಯ ಬಲವಂತಕ್ಕೆ ಮಾಸಿಕ, ಶ್ರಾದ್ಧ ಎಲ್ಲ ಮಾಡಿದ. ಈಗ ಹೇಳುವವರು ಯಾರು? ಶ್ರಾದ್ಧಕ್ಕೆ ತರ್ಪಣ ಕೊಟ್ಟುಬಿಟ್ಟಿದ್ದಾನೆ" ಎಂದು ಸುಬ್ಬಾಭಟ್ಟ ಎಲ್ಲವನ್ನೂ ಬಲ್ಲವನಂತೆ ಒಕ್ಕಣಿಸಿದ. "ಇಲ್ಲ, ಇಲ್ಲ. ಕಾಳೇಗೌಡನ ಹೆಂಡತಿ ನಮ್ಮ ಮನೆಯ ಹೆಂಗಸರಿಗೆ ಹೇಳಿದಳಂತೆ. ಪ್ರತಿವರ್ಷವೂ ಬೆಂಗಳೂರಿಗೆ ತನ್ನ ತಮ್ಮನ ಮನೆಗೆ ತಂದೆ-ತಾಯಿಯ ಶ್ರಾದ್ಧಗಳಿಗೆ ಹೋಗುತ್ತಾನಂತೆ. ಅವರ ತೋಟವನ್ನ ನಾನೇ ಕೊಂಡುಕೊಂಡೆನಲ್ಲ. 'ಸುಂದರಪ್ಪನಿಗೆ ಬೆಂಗಳೂರಿಗೆ ತೆಗೆದುಕೊಂಡು ಹೋಗುವುದಕ್ಕೆ ಬಾಳೆಯಲೆ ಬಾಳೆಕಾಯಿ ಬೇಕು' ಅಂತ ಒಂದು ಸಲ ಕಾಳೇಗೌಡ ಬಂದು ನಮ್ಮ ಮನೆಯಲ್ಲಿ ಕೇಳಿದನಂತೆ. 'ಅದಕ್ಕೇನು. ತೋಟದಲ್ಲಿ ಕೇಳು, ತೆಗೆದುಕೊಂಡು ಹೋಗು. ಮಾರಿದ ಮಾತ್ರಕ್ಕೆ ಅಷ್ಟು ಅಧಿಕಾರ ಇಲ್ಲವೇ ಅವರಿಗೆ? ಊರಿಗೆ ಊರೇ ಅದನ್ನ ಇನ್ನೂ ಕೃಷ್ಣಪ್ಪನವರ ತೋಟ ಅಂತಲೇ ಕರೆಯುತ್ತ ಇದೆ' ಎಂದು ನಮ್ಮ ಮನೆಯ ಹೆಂಗಸರು ಹೇಳಿದರಂತೆ—"ಎಂದು ರಾಮಯ್ಯನವರು ಸಮಾಧಾನ ಕೊಟ್ಟರು. ಸುಬ್ಬಾಭಟ್ಟ: "ಬಿಡಿ ಸ್ವಾಮಿ ಬಿಡಿ, ನಾನು ಕಾಣೆನೆ. ಕೆಲವು ದಿನ ಮಾದನ ಮಗಳನ್ನ ಅವನೇ ಇಟ್ಟುಕೊಂಡಿದ್ದ. ಅದಕ್ಕೋಸ್ಕರವೇ ಊರ

ಹೊರಗೆ ಮನೆಮಾಡಿಕೊಂಡು ಹರಿಜನರ ಉದ್ಧಾರ, ಆಶ್ರಮ ಅಂತ ಏನೇನೋ ಆಟ ಹೂಡಿದ. ಊರ ಜನ ಆಡಿಕೊಳ್ಳುವುದಕ್ಕೆ ಮೊದಲಾಯಿತು. ಈಗ ಬೆಂಗಳೂರಿನಲ್ಲಿ ಅವಳನ್ನು ಇಟ್ಟು ಹೋಗಿ ಬಂದು ಮಾಡ್ತಾ ಇದಾನೆ. "

ನಂಜುಂಡಶಾಸ್ತ್ರಿಗಳು : ನಾನೂ ಹಾಗೇ ಕೇಳಿದೆ. ಆದರೂ, ಅಷ್ಟು ದೂರ.... ನನಗೆ ಸ್ವಲ್ಪ ಸಂದೇಹ. ವಿಶ್ವನಾಥನನ್ನೂ ಒಂದು ಸಲ ನಾನು ಕೇಳಿದೆ. ನನಗೇನೂ ತಿಳಿಯದು ಅಂದ.

ರಾಮಯ್ಯನವರು : ಇಲ್ಲ ಸ್ವಾಮಿ ಇಲ್ಲ. ನನ್ನ ಮಗ ಬೇಡ ಬೇಡ ಅಂದರೂ ಅವನ ಆಶ್ರಮಕ್ಕೆ ಹೋಗುತ್ತಾನಲ್ಲ. ಮಾದನ ಮಗಳನ್ನ ಯಾವನೋ ಜಾತಿಗೆಟ್ಟ ಬ್ರಾಹ್ಮಣನೇ ಮದುವೆ ಮಾಡಿಕೊಂಡಿದಾನಂತೆ. ಅವರಿಗೆ ಈಗ ಎರಡು ಮಕ್ಕಳಿವೆಯಂತೆ.

ಶೆಟ್ಟರು : ಒಕ ವಿಚಾರವು. ಒಂದು ವಿಚಾರ ಬ್ರಾಹ್ಮಣರು ಚಂಡಾಲ ಸ್ತ್ರೀಯನ್ನು ವಿವಾಹವೃತ—ವಿವಾಹವಾದರೆ—ಅದನ್ನ ಶಾಸ್ತ್ರ ಒಪ್ಪುತದೆಯೆ ಶಾಸ್ತ್ರಿಗಳೇ ?

ಶಾಸ್ತ್ರಿಗಳು : ಈಗ ಶಾಸ್ತ್ರ ಯಾರು ಕೇಳುತ್ತಾರೆ, ಶೆಟ್ಟರೆ ? ನಿಮ್ಮ ವೈಶ್ಯರಿಗೆ ಬುದ್ಧಿ ಇಲ್ಲ. ಶಾಸ್ತ್ರ ಶಾಸ್ತ್ರ ಅಂತ ಬ್ರಾಹ್ಮಣರ ಹಾಗೆ ಒದ್ದಾಡುತ್ತೀರಿ. ಹರಿಜನರನ್ನೆಲ್ಲ ದೇವಾಲಯಕ್ಕೆ ಬಿಡಬೇಕು ಅಂತ ಸರ್ಕಾರದ ಆಜ್ಞೆಯಾಗುತ್ತಂತೆ. ಒಂದು ದಿನ ಬಂದರೆ ಸರಿ. ಮಾರನೆಯ ದಿನ ಶಾಸ್ತ್ರಪ್ರಕಾರ ಸಂಪ್ರೋಕ್ಷಣೆ ಮಾಡಿಸಬಹುದು. ನಿತ್ಯ ಬರತೊಡಗಿದರೆ ನಿತ್ಯ ಸಂಪ್ರೋಕ್ಷಣೆ ಎಂದರೆ ಹುಡುಗಾಟವಾಗಿಹೋಯಿತೆ ಶೆಟ್ಟರೆ ? ಅದರ ಖರ್ಚು ವೆಚ್ಚ....

ಶೆಟ್ಟರು : ನೇನು ನೇನು—ನಾನು, ವಹಿಸಿಕೊಳ್ಳುತೇನೆ ಶಾಸ್ತ್ರಿಗಳೆ. ನೀವು ಯೋಚನೆ ಮಾಡಬೇಡಿ.

ಸುಬ್ಬಾಭಟ್ಟ : ಆದರೆ, ನಾನು ಇರುವವರೆಗೆ ಅದು ನಡೆಯುವುದಿಲ್ಲ ಅನ್ನಿ. ನನ್ನ ರಾಮ ಯಾರು ? ಕೋದಂಡರಾಮ. ಆಪದ್ಧರ್ಮ ಅಂತ ಕ್ಷತ್ರಿಯಧರ್ಮ ಅವಲಂಬಿಸುತ್ತೇನೆ, ಕೋದಂಡ ಹಿಡಿಯುತ್ತೇನೆ. ನಾನು ಯಾರೂ ಅಂತ ತಿಳಿದಿರಿ ? ಶಿವ-ರಾಮ-ಭಟ್ಟರ ಮಗ ( ಎಂದು ಉತ್ತರೀಯ ತೆಗೆದು ತಲೆಗೆ ಲಪ್ಪಟ್ಟೆ ಸುತ್ತಿದ, ಈಗ ಹೇಗೂ ಅವನು ಜೀವಂತ್ತಿತ್ತುವಲ್ಲವಲ್ಲ! )

ರಾಮಯ್ಯ : ಸರಿ ಸರಿ, ಆದೆಲ್ಲಾ ಎಲ್ಲಿ ನಡೆಯುತ್ತೆ, ಸುಮ್ಮನೆ

ಭ್ರಾಂತು. ನೀವು ಕೋದಂಡ ಹಿಡಿದು ಕಾನೂನು ಮುರಿದರೆ 'ಇಕೋ ದಂಡ' ಎನ್ನುತ್ತೆ ಸರ್ಕಾರ.

ಶೆಟ್ಟರು : ಒಕ ಪಾಯಿಂಟು ಶಾಸ್ತ್ರುಲುವಾರು. ಇದಿ ಮುಜರಾಯಿ ದೇವಸ್ಥಾನಮಾ ?

ಶಾಸ್ತ್ರಿಗಳು : ಮುಜರಾಯಿ ತಸದೀಕು; ಒಂದು ಕಾಸೂ ಇಲ್ಲ ಇದಕ್ಕೆ.

ರಾಮಯ್ಯ: ಮುನಿಸಿಪಾಲ್ಟಿ ಗ್ರಾಂಟು ಕೊಡುತ್ತಾ ಇದೇವಲ್ಲ ಸ್ವಾಮಿ?

ಶಾಸ್ತ್ರಿಗಳು : ಮುಜರಾಯೀ ಬೇರೆ, ಮುನಿಸಿಪಾಲ್ಟಿನೀ ಬೇರೆ. ಊರವರೆಲ್ಲ ಸೇರಿ ಬಿಡಬೇಕು ಅಂದರೆ ಬಿಡಬೇಕಾಗುತ್ತೆ. ಊರವರಿಗೆ ಬುದ್ಧಿ ಇಲ್ಲವೆ ? ಎಲ್ಲ ನಮ್ಮ ಹಾಗೇ. ಆ ಕಾಲ ಬಂದಾಗ ನೋಡೋಣ.

ರಾಮಯ್ಯ : ಅದೇ ಸ್ವಾಮಿ ಈಗ ಹೆದರಿಕೆ. ಈಗ ಊರಿನ ವಿದ್ಯಾರ್ಥಿಗಳೆಲ್ಲಾ ಹರಿಜನರ ಉದ್ಧಾರ, ಗ್ರಾಮೋದ್ಧಾರ ಅಂತ ಕುಣೀತಾ ಇದ್ದಾರೆ. ಸ್ವರಾಜ್ಯ ಗೆದ್ದೋರಿಗೆ, ಇಂಗ್ಲೀಷನೋರನ್ನ ಓಡಿಸಿದೋರಿಗೆ, ಊರವರನ್ನ ಬೆದರಿಸೋದು ಹೆಚ್ಚೆ. ಮಾತೆತ್ತಿದರೆ ಸತ್ಯಾಗ್ರಹ ಅಂತಾರೆ, ಉಪವಾಸ ಅಂತಾರೆ, ನಮ್ಮ ಮಕ್ಕಳು. ಅವರನ್ನ ಏನು ಮಾಡುತ್ತೀರಿ? ಅವರು ಮುಂದೆ ನಿಂತರೆ ಕಷ್ಟ.

ತಿಪ್ಪಾವಧಾನಿ : ಇಷ್ಟೆಲ್ಲ ಆ ಸುಂದರನಿಂದಲೇ ಸ್ವಾಮಿ ಅಧ್ವಾನ ಹಿಡಿದಿರೋದು. ಹೇಗಾದರೂ ಮಾಡಿ ಅವನನ್ನ ಊರು ಬಿಟ್ಟು ಹೊರಡಿಸಬೇಕು.

ಶಾಸ್ತ್ರಿಗಳು : ನಾವು ಹೊರಡಿಸುವುದೇನು, ಅವನೇ ಹೋಗ್ತಾನೆ. ಇಲ್ಲಿ ಇರುವುದಕ್ಕೆ ಏನಿದೆ ? ಮನೆ ಮಾರಿಯಾಯಿತು. ಅಣ್ಣ ತಮ್ಮಂದಿರು ಪಾಲಾಗಿ, ತಮ್ಮಂದಿರು ತಮ್ಮ ಪಾಲಿನ ಆಸ್ತಿ ಎಲ್ಲ ಮಾರಿಕೊಂಡಾಯಿತು. ಸುಂದರ ತನ್ನ ಪಾಲಿನ ಆಸ್ತಿ ಒಂದು ಚೂರು ಇಟ್ಟುಕೊಂಡು ಕುಳಿತಿದಾನೆ. ಹರಿಜನರು ಹರಿಜನರು ಅಂತ ಅದನ್ನೂ ಅವರಿಗೆ ಹರಿದು ಹಂಚಿಕೊಟ್ಟು ಅವನ ಚಿಕ್ಕಪ್ಪನ ದಾರಿ ಹಿಡಿದು ದೇಶಾಂತರ ಹೋಗುತ್ತಾನೆ. ಅಲ್ಲ ಸ್ವಾಮಿ, ಹೇಗಿದ್ದ ಮನೆ ಹೇಗಾಯಿತು ? ಇವನಿಗೆ ಹೋಲಿಸಿದರೆ ಕೃಷ್ಣಪ್ಪನವರು ಮಹಾನುಭಾವರು ಸ್ವಾಮಿ, ಮಹಾನುಭಾವರು. ಇವನು ಹರಿಜನ ಉದ್ಧಾರ ಅಂತ ಆ ಮಾದನ ಮಗಳನ್ನು ಕಟ್ಟಿಕೊಂಡ ನೋಡಿ. ಅವರು ಊರುಬಿಟ್ಟು ಹೋದರು. ಬೆಂಗಳೂರಿನಲ್ಲಿ ಕೊರಗಿ ಕೊರಗಿ ಪ್ರಾಣ

ಬಿಟ್ಟರು. ಒಬ್ಬ ಮಾದನ ಮಗಳಿಂದ ಒಂದು ಸಂಸಾರವೇ ಹಾಳಾಯಿತಲ್ಲ, ಇನ್ನು ದೇಶದ ಹರಿಜನರನ್ನೆಲ್ಲಾ ಉದ್ಧಾರಮಾಡುತ್ತೇವೆ ಎಂತ ಹೊರಟರೆ ಪ್ರಪಂಚ ಎಲ್ಲಿ ಉಳಿಯುತ್ತೆ ಸ್ವಾಮಿ? ಪ್ರಳಯವಾಗಿ ಹೋಗುತ್ತೆ! ಕಲಿಯುಗದ ಅಂತ್ಯ ನಮ್ಮ ಮುಂದಯೇ ನಡೆಯುತ್ತೆ.

ಶೆಟ್ಟರು: ಇನ್ನೊಂದು ಯುದ್ಧ ಆದರೆ ಪ್ರಳಯ ಖಂಡಿತ ಶಾಸ್ತ್ರಿಗಳೆ. ಅದೇನೋ ರಷ್ಯಾದವರೂ ಆಟಂಬಾಂಬ್ ಮಾಡಿದ್ದಾರಂತೆ. ಇನ್ನೊಂದು ಯುದ್ಧ ಆಗುತ್ತದೆಯೇನು, ರಾಮಯ್ಯನವರೆ?

ಶೆಟ್ಟರು ಇನ್ನೊಂದು ಯುದ್ಧ ಆಗಲಿ ಎಂದು ಮನಸ್ಸಿನಲ್ಲಿಯೇ ಶ್ರೀರಾಮನನ್ನು ಪ್ರಾರ್ಥಿಸುತ್ತಿದ್ದರು. ಪ್ರಳಯದಲ್ಲಿಯೂ ಪ್ರಯೋಜನ ಪಡೆಯುವುದು ಹೇಗೆ ಎಂಬುದು ಅವರ ಆಲೋಚನೆ.

ರಾಮಯ್ಯನವರು: ಸದ್ಯದಲ್ಲಿ ಕಾಣಲಿಲ್ಲ.

ಶೆಟ್ಟರಿಗೆ ನಿರಾಶೆಯಾಯಿತು.

ತಿಪ್ಪಾವಧಾನಿ: ಇದೆಲ್ಲಾ ಸರಿ. ಸುಂದರ ಅದೇನೋ ಬೈರಾಗಿಯ ಹಾಗೆ ಗಡ್ಡ ಮಂಡೆ ಬಿಟ್ಟಿದಾನಂತೆ, ದಿಟವೇ ಸ್ವಾಮಿ?

ಶೆಟ್ಟರು: ಅವುನು ಅವುನು. ಹೌದು ಹೌದು. ನಮ್ಮ ಅಂಗಡಿಗೆ ವ್ಯಾಪಾರಕ್ಕೆ ಒಂದೊಂದು ಸಲ ಬರುತ್ತಾರಲ್ಲ. ಗಡ್ಡಬಿಟ್ಟಿದಾರೆ ಅಂತ ಹೇಳುವುದಕ್ಕಾಗುವುದಿಲ್ಲ. ಆರು ಏಳು ತಿಂಗಳಿಂದ ಕ್ಷೌರಮಾಡಿಸಿಕೊಂಡಿಲ್ಲ, ಅಂತ ಕಾಣುತ್ತೆ.

ಶಾಸ್ತ್ರಿಗಳು: ಇರಬಹುದು, ಇರಬಹುದು. ಹರಿಜನರ ಉದ್ಧಾರ ಆಗುವವರೆಗೂ ಈ ಗಡ್ಡ ಬೋಳಿಸುವುದಿಲ್ಲ ಅಂತ ದೀಕ್ಷೆ ಬಿಟ್ಟಿರಬಹುದು.

ಸುಬ್ಬಾಭಟ್ಟ: ಮಾದನ ಮಗಳು ಬಸುರಿ ಅಂತ ಕಾಣುತ್ತೆ! (ಎಂದು ಗೊಳ್ಳನೆ ನಕ್ಕ)

ಎಲ್ಲರೂ ನಕ್ಕರು. ಆ ನಗುವಿನ ನಡುವೆ ಯಾರೋ "ಛೀ ಛೀ" ಎಂದ ದನಿಯೂ ಕೂಡಿತ್ತು. ಬಹುಶಃ ರಾಮಯ್ಯನವರು ಹಾಗೆಂದಿರಬೇಕು.

೯೪

ಸುಂದರಮೂರ್ತಿ ತನ್ನ 'ಸಾಧನಾಶ್ರಮ'ದಲ್ಲಿ ಎರಡನೆಯ ಸ್ವಾತಂತ್ರ್ಯೋತ್ಸವವನ್ನು ಬಹು ಸರಳವಾದ ರೀತಿಯಲ್ಲಿ ಆಚರಿಸಿದನು.

ಬೆಳಗ್ಗೆ ಧ್ವಜಾರೋಹಣೆ, ಧ್ವಜವಂದನೆ, ವಿದ್ಯಾರ್ಥಿಗಳಿಗೂ ಹರಿಜನ ಮಕ್ಕಳಿಗೂ ಸಿಹಿತಿಂಡಿಯ ವಿನಿಯೋಗ ; ಸಂಜೆ ಒಂದು ಸಣ್ಣ ಪ್ರಾರ್ಥನಾ ಸಭೆ. ಇಷ್ಟೇ ಕಾರ್ಯಕ್ರಮ. ವಿಶೇಷವೆಂದರೆ, ಮೊದಲ ಸಲದ ಉತ್ಸವಕ್ಕೆ ಶ್ರೀಧರ ಸಾಧನೆ ಇವರು ಬಾರದೆ ಇದ್ದು, ಸುಂದರನ ಒತ್ತಾಯದ ಆಹ್ವಾನದಿಂದ ಈ ಸಲ ಬಂದಿದ್ದುದು; ಅವರೊಂದಿಗೆ ಲಕ್ಷ್ಮೀಪತಿಯೂ ಬಂದಿದ್ದುದು. ಸಂಜೆ ನೆರೆದಿದ್ದ ವಿದ್ಯಾರ್ಥಿಗಳ ಸಭೆಯಲ್ಲಿ ಲಕ್ಷ್ಮೀಪತಿ ಕೆಲವು ಮಾತುಗಳನ್ನು ಹೇಳಿದ್ದು ಹೆಚ್ಚಿನ ವಿಶೇಷ. ಶಾಲೆ ಗಳಲ್ಲಿಯೂ ಉತ್ಸವದ ಏರ್ಪಾಟು ಇದ್ದಿತಾಗಿ, ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ನೆರೆದಿರಲಿಲ್ಲ. ಆದರೂ, ಸುಂದರನಿಗೆ ಸಮಾಧಾನ ; ಲಕ್ಷ್ಮೀಪತಿ ತೃಪ್ತಿಕರವಾದ ರೀತಿಯಲ್ಲಿ ವಿದ್ಯಾರ್ಥಿಗಳಿಗೆ ಹಿತೋಕ್ತಿ ಹೇಳಿದ್ದ ನೆಂದು ಸುಂದರನಿಗೆ ಹೆಚ್ಚಿನ ಸಂತೋಷ. ಬಹಳ ಕಾಲದ ಮೇಲೆ ಲಕ್ಷ್ಮೀಪತಿಯ ಭಾಷಣವನ್ನು ಕೇಳಿ ಸುಂದರನ ಮನಸ್ಸು ಹಿಗ್ಗಿತ್ತು. ಕಡೆಯಲ್ಲಿ ವಿದ್ಯಾರ್ಥಿಗಳನ್ನು ಕುರಿತು ಸುಂದರ ಎರಡೇ ಎರಡು ಮಾತು ಹೇಳಿದ್ದ : “ನಿಮ್ಮ ಶೀಲಸಂಪತ್ತನ್ನು ಬೆಳೆಸಿಕೊಳ್ಳಿ. ಶೀಲವೇ ನಿಜವಾದ ಧರ್ಮ. ಸತ್ಯ ಅಹಿಂಸೆಗಳೇ ಅದರ ಮುನ್ನಡೆಗೆ ಎರಡು ಗಾಲಿಗಳು. ಹುಟ್ಟಿನಿಂದ ವರ್ಣ ನಿರ್ಣಯವಾಗಕೂಡದು. ಗುಣದಿಂದ, ಕರ್ಮದಿಂದ, ವೃತ್ತಿಯಿಂದ, ವರ್ಣ. ಬ್ರಾಹ್ಮಣ ಜ್ಞಾನಸಂಪಾದನೆ ಮಾಡುವುದು ಬಿಟ್ಟು ವ್ಯಾಪಾರಕ್ಕೆ ಕುಳಿತರೆ ವೈಶ್ಯ, ಊಳಿಗಕೆ ನಿಂತರೆ ಶೂದ್ರ ; ಶೂದ್ರ ಜ್ಞಾನಸಂಪನ್ನನಾದರೆ ಅವನು ಬ್ರಾಹ್ಮಣ. ಈ ದೃಷ್ಟಿಯಲ್ಲಿ ಒಂದು ವರ್ಣ ಮೇಲಲ್ಲ, ಇನ್ನೊಂದು ಕೀಳಲ್ಲ. ಇದು ನಾನು ಹೇಳುವ ಮಾತಲ್ಲ: ಗಾಂಧಿಯವರು ಹೇಳಿದ ಮಾತು, ಸನಾತನ ಸತ್ಯ. ಈ ವರ್ಣಾಶ್ರಮದ ಚೌಕಟ್ಟಿನಲ್ಲಿ ಹರಿಜನರನ್ನೂ ಒಳಕೊಳ್ಳಿ. ನೀವು ಹರಿಜನರನ್ನು ಹಾಗೆ ಉದ್ಧಾರ ಮಾಡದಿದ್ದರೆ ನಮ್ಮ ವರ್ಣಾಶ್ರಮಧರ್ಮ, ಭಾರತಸಂಸ್ಕೃತಿಯ ಜೀವಾಳ, ಹಿಂದೂ ಧರ್ಮದ ಸಾರ, ನಾಶವಾಗುತ್ತದೆ. ಇದು ಖಂಡಿತ. ಭಾರತ ಭಾರತವಾಗಿ ಉಳಿಯುವುದಿಲ್ಲ. ನಾವು ಸ್ವಾತಂತ್ರ್ಯಸಂಪಾದನೆ ಮಾಡಿದ್ದು ಇದಕ್ಕಾಗಿಯೇ ? ರಾಜಕೀಯ ದಾಸ್ಯಕ್ಕಿಂತ ಸಾಂಸ್ಕೃತಿಕ ದಾಸ್ಯ ಘೋರತರವಾದದ್ದು. ಈ ಆಶ್ರಮ ನನ್ನದಲ್ಲ, ನಿಮ್ಮದು. ಎಂದು ಇಲ್ಲಿ

ಕೆಲಸಮಾಡಿ. ನಿಮ್ಮ ಊರಿನ ಹರಿಜನರ ಮೇಲ್ಮೆಯನ್ನು ಸಾಧಿಸಿ."

ರಾತ್ರಿ ಊಟವಾದ ಮೇಲೆ ಮಾತು-ಕತೆ ಸಹಜವಾಗಿ ಅಂದಿನ ಸಂಜೆಯ ಭಾಷಣಗಳ ಸುತ್ತ ಬಳಸಿತು. ಸಾಧನೆ ಆಸಕ್ತಿಯಿಂದ ಕೇಳುತ್ತ ಕುಳಿತಿದ್ದಳು. ಅವಳ ಮಕ್ಕಳು ಕೂಡ — ಏಳು ವರ್ಷದ ಶ್ಯಾಮಸುಂದರ್, ಮೂರು ವರ್ಷದ ಮುದ್ದು ಮಾಲತಿ — ಅರ್ಥವಾಗದ ಗಂಭೀರ ಚರ್ಚೆಯನ್ನು ಬಿಟ್ಟ-ಕಣ್ಣುಗಳಿಂದ ಆಲಿಸುತ್ತ ಕುಳಿತಿದ್ದರು.

ಶ್ರೀಧರ ಪ್ರಾರಂಭಿಸಿದ: "ಲಕ್ಷ್ಮೀಪತಿಯ ಸಮತಾವಾದ, ನಿನ್ನ ಗಾಂಧೀವಾದ — ಎರಡರಿಂದಲೂ ದೇಶ ಉದ್ಧಾರವಾಗುವುದಿಲ್ಲ. ಭಾರತದ ಸಮತಾವಾದಿಗಳು, ಭಾರತದ ಸಂಸ್ಕೃತಿ ಕಲೆ ಎಲ್ಲವನ್ನೂ ಉಳಿಸಿಕೊಂಡು, ರಾಷ್ಟ್ರದ ಮುಖ್ಯ ಕೈಗಾರಿಕೆಗಳನ್ನು ರಾಷ್ಟ್ರೀಕರಣ ಮಾಡಿ, ಭಾರತವನ್ನು ಪ್ರಗತಿ ಮಾರ್ಗಕ್ಕೆ ಒಯ್ಯುತ್ತೇವೆ ಎನ್ನುತ್ತಾರೆ; ಅಥವಾ ಸಮತಾವಾದಿ ಲಕ್ಷ್ಮೀಪತಿ ಎನ್ನುತ್ತಾನೆ: ಮುಂದೆ ಬರುವ ಚುನಾವಣೆಗಳಲ್ಲಿ ಜಯಗಳಿಸುವ ಆಶೆ ಇಟ್ಟುಕೊಂಡಿದ್ದಾರೆ. ಕಾಂಗ್ರೆಸ್ ಸರ್ಕಾರಗಳ ಆಡಳಿತ ಈಗಾಗಲೇ ಜನಕ್ಕೆ ಬೇಸರವಾಗಿದೆ; ನಿರುದ್ಯೋಗ, ಹಸಿವು, ಬಡತನ ಇವು ಹೋಗಿಲ್ಲ; ಸಮತಾವಾದದ ಪಾತ್ರಗಳ ಪ್ರಚಾರದಿಂದ ಜನತೆ ತಮ್ಮ ಕಡೆಗೆ ಒಲಿಯುತ್ತಿದೆ, ನಾವು ಸಮತಾವಾದಿ ರಾಜ್ಯವನ್ನು ಸ್ಥಾಪಿಸಬಹುದು—ಎಂದು. ಅವರ ಹುಸಿ ನೆಚ್ಚಿಕೆ ಸಾಲದುದಕ್ಕೆ ಈ ಸಮತಾವಾದಿಗಳು ಗಾಂಧಿಭಕ್ತರೂ ಹೌದು. ಕಾಂಗ್ರೆಸ್ಸಿನವರಂತೂ ಗಾಂಧಿಯ ಪಟ್ಟ ಶಿಷ್ಯರು. ಸತ್ಯ ಅಹಿಂಸೆಗಳ ಮಂತ್ರವನ್ನು ಎಂದಿಗಿಂತ ಜೋರಾಗಿ ಘೋಷಿಸುತ್ತಿದ್ದಾರೆ. ಎಲ್ಲ ಸಮಸ್ಯೆಗಳ ಪರಿಹಾರಕ್ಕೂ ಈ ಎರಡು ಮಂತ್ರ ದಿವ್ಯ ಔಷಧವಾಗಿದೆ. ದೇಶನಾಯಕರು ಶೀಲಸಂಪನ್ನರಿರಬಹುದು. ಇತರರು? ಪ್ರಜೆಗಳು? ಕಾಂಗ್ರೆಸ್ಸಿನವರೆಂದು ಹೇಳಿಕೊಳ್ಳುವವರಿಂದ ಹಿಡಿದು ಕಾಂಗ್ರೆಸ್ಸನ್ನು ಬಯ್ಯುವವರ ವರೆಗೆ — ಎಲ್ಲರೂ ಸ್ವಾರ್ಥಸಾಧಕರಾಗಿದ್ದಾರೆ. ಪ್ರತಿಯೊಬ್ಬರಿಗೂ ಸ್ವಂತ ಆಸ್ತಿ ಮಾಡಿಕೊಳ್ಳುವ ದುರಾಶೆ. ಆಸ್ತಿ ಗಳಿಸುವುದು ಪ್ರಜೆಗಳ ಹಕ್ಕುಗಳಲ್ಲಿ ಒಂದು. ಒಬ್ಬ ಕೂಲಿಗೂ ಸಣ್ಣ ಬಂಡವಾಳಗಾರನಾಗುವ ಹಂಬಲು. ಎಂದಾದರೊಂದು ದಿನ ಕೋಟ್ಯಧೀಶ್ವರನಾಗುವ ಕನಸು. ಇದು ನಿಲ್ಲುವುದೆಂದಿಗೆ? ಇದು ನಿಲ್ಲುವವರೆಗೂ ಬಂಡವಾಳಶಾಹಿ ನಿರ್ಮೂಲವಾಗುವುದಿಲ್ಲ. ಧರ್ಮದ ಹೆಸರಿನಲ್ಲಿ ಬಂಡವಾಳ

ಗಾರರು ಬಲಿಷ್ಠರಾಗುತ್ತಿದ್ದಾರೆ. ಗಾಂಧಿವಾದಿಗಳು, ನಿಮ್ಮ ಧನವನ್ನು ಬಡವರಿಗಾಗಿ ವಿನಿಯೋಗಿಸಿ ಎಂದು ಧರ್ಮೋಪದೇಶ ಮಾಡುತ್ತಾರೆ. ಒಬ್ಬ ಧನಿಕ ೫೦ ೦೦೦ ರೂ. ಗಳಿಗೆ ಆಸ್ಪತ್ರೆ ಕಟ್ಟಿಸಿ, ಧರ್ಮಮಾಡಿ, ಔಷಧಗಳ ಕಳ್ಳವ್ಯಾಪಾರದಿಂದ ಕೋಟಿ ಸಂಪಾದಿಸುತ್ತಾನೆ. ಧನಿಕರ ಧರ್ಮ ಹೀಗೆ. ಸಮತಾವಾದಿಗಳ ಸೌಮ್ಯ ಕಾರ್ಯಕ್ರಮದಿಂದ ದೇಶದ ಉತ್ಪನ್ನ ಸಾಧನಗಳನ್ನು, ವ್ಯಾಪಾರ ಹಂಚಿಕೆ ವ್ಯವಸ್ಥೆಗಳನ್ನು, ಈ ಬಂಡವಾಳಗಾರರ ಬಿಗಿ ಹಿಡಿತದಿಂದ ಬಿಡಿಸುವುದು ಹೇಗೆ? ಜೊತೆಗೆ, ಕೋಮುವಾರು ಭೇದ. ಉತ್ತರದಲ್ಲಿ ಹಿಂದೂ ಮುಸಲ್ಮಾನ; ದಕ್ಷಿಣದಲ್ಲಿ, ಬ್ರಾಹ್ಮಣ-ಬ್ರಾಹ್ಮಣೇತರ; ಬ್ರಾಹ್ಮಣೇತರರಲ್ಲಿ ಮತ್ತೆ ಒಳಪಂಗಡಗಳು. ಉದ್ಯೋಗದಿಂದ ಹಿಡಿದು ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡುವ ವರೆಗೆ ಕೋಮುವಾರು ಪ್ರಾತಿನಿಧ್ಯ. ಈ ನೀತಿಯಿಂದ ಬ್ರಾಹ್ಮಣರು ಹರಿಜನರಾಗುತ್ತಾರೆ; ಹರಿಜನರು ಬರಿ ಜನರಾಗಿಯೇ ಇದ್ದಾರೆ! ಜನ ಜನದ ನಡುವೆ ಸಿಮೆಂಟ್ ಕಾನ್‌ಕ್ರೀಟ್ ಗೋಡೆಗಳು ಏಳುತ್ತ ಇವೆ. ಈ ಗೋಡೆಗಳನ್ನು ಒಡೆಯಬೇಕು; ಜನವೆಲ್ಲಾ ಒಂದಾಗಬೇಕು; ಹೆಣ್ಣು-ಗಂಡು ಎರಡೇ ಜಾತಿ, ಅದೂ ಕೂಡ ಕೇವಲ ಪ್ರಕೃತಿಧರ್ಮಪಾಲನೆಗಾಗಿ: ಸಾಮಾಜಿಕ ರಾಜಕೀಯ ದೃಷ್ಟಿಯಿಂದ ಅಲ್ಲ. ನಮ್ಮ ದೇಶಕ್ಕೆ ಹಿಡಿದಿರುವ ಈ ಉಲ್ಬಣವಾದ ಸಂಕೀರ್ಣ ರೋಗಕ್ಕೆ ಕಾರ್ಲ್‌ಮಾರ್ಕ್ಸನ ಸಿದ್ಧಾಂತವೇ ಸರಿಯಾದ ಔಷಧ; ಕಮ್ಯೂನಿಸ್ಟ್ ಕಾರ್ಯಕ್ರಮವೇ ಶಸ್ತ್ರಚಿಕಿತ್ಸೆ.''

ಸುಂದರ ಸಾವಧಾನವಾಗಿ ಕೇಳುತ್ತ ಕುಳಿತಿದ್ದ; ಸಾಧನೆ ಒಳಗೊಳಗೇ ನಗುತ್ತ ಇದ್ದಳು.

ಸುಂದರ ಕೇಳಿದ: ''ನಮ್ಮಿಬ್ಬರ ಇಂದಿನ ಭಾಷಣಗಳಿಗಿಂತ ನಿನ್ನ ಭಾಷಣ ಹೆಚ್ಚು ಸ್ಫೂರ್ತಿಯಿಂದ ಕೂಡಿದೆ. ಆದರೆ ನಿನ್ನ ವಾದವನ್ನು ಸಂಪೂರ್ಣವಾಗಿ ನಾನು ಒಪ್ಪುವುದಿಲ್ಲ. ಸರ್ವ ಸಮತಾವಾದವನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ. ಗಾಂಧಿ ಹೇಳಿದ್ದಾದರೂ ಏನು? ನಾನೂ ಕಮ್ಯೂನಿಸ್ಟ: ಆದರೆ, ಹಿಂಸೆಯ ಮಾತು ಬಂದಾಗ ಅವರಿಂದ ದೂರ. ಸತ್ಯದಿಂದ, ಅಹಿಂಸೆಯಿಂದ, ಸ್ವರಾಜ್ಯ ಗಳಿಸಿದ್ದೇವೆ; ಸಾಮ್ರಾಜ್ಯವನ್ನು ಬಗ್ಗುಬಡಿದಿದ್ದೇವೆ; ನಮ್ಮನ್ನು ನಾವು ತಿದ್ದಿಕೊಳ್ಳಲಾರೆವೆ?

ಧ್ಯೇಯ – ಅದರ ಸಾಧನೆಯ ಮಾರ್ಗ : ಎರಡೂ ಪವಿತ್ರವಾಗಿರಬೇಕು. ಕ್ರಾಂತಿಯ ಮಾರ್ಗ ಹಿಂಸಾಮಾರ್ಗ. ಹಿಂಸೆಯಿಂದ ಪ್ರತಿಹಿಂಸೆ. ಶಾಂತಿ ಎಲ್ಲಿ ಬಂತು ? ರೋಗ ವ್ಯಾಪಿಸುವುದಕ್ಕೆ ಎಷ್ಟು ಕಾಲವೋ ಗುಣವಾಗುವುದಕ್ಕೂ ಅಷ್ಟೇ ಕಾಲ ಬೇಕು. ಅದಕ್ಕೆ ಶತಮಾನವಾದರೂ ಕಾಯೋಣ, ಕಾಯಬೇಕು. ತಾಳ್ಮೆ ಬೇಕು. ಇದು ನನ್ನ ನಂಬಿಕೆ."

"ಕಾಯುತ್ತ ಇರು. ನೀನು ಇಷ್ಟು ದುಡಿದು ಹಣ್ಣಾಗಿದ್ದೀಯಲ್ಲ ನಿನ್ನ ಊರಿನ ಹರಿಜನರಿಗೆ ಏನೇನು ಸೌಕರ್ಯಗಳನ್ನು ದೊರಕಿಸಿ ಕೊಟ್ಟಿದ್ದೀಯೆ ?"

"ಏನೂ ಇಲ್ಲ, ನನಗೆ ಗೊತ್ತು. ನನ್ನ ಸಾಧನೆ ಬೆಟ್ಟಕ್ಕೆ ಗುಂಡು ಉರುಳಿಸಿದ ಹಾಗೆ ಆಗಿದೆ. ಆದರೆ ಇತರರ ಸಾಧನೆಯಿಂದ ನನ್ನ ಕನಸು ನನಸಾಗುತ್ತದೆ. ಈಗ, ಮಾದನ ಮಗಳನ್ನು ಉದ್ಧಾರ ಮಾಡಿದವರು ಯಾರು ?"

"ಒಪ್ಪಿಕೊಳ್ಳುತ್ತೇನೆ. ನೀನು" ಎಂದ ಶ್ರೀಧರ.

"ಅಲ್ಲ, ನೀನು. ಇನ್ನು ಮುಂದೆ ನಿನ್ನಂಥವರು ಸಾವಿರ ಸಂಖ್ಯೆಯಲ್ಲಿ ಹುಟ್ಟುತ್ತಾರೆ, ನನಗೆ ನಂಬಿಕೆಯಿದೆ. ನಿನ್ನ ಮಗ – ಶ್ಯಾಮಸುಂದರ್ – ಅವನು ಏನು ಸಾಧಿಸುತ್ತಾನೆಯೋ ನೀನು ಕಂಡಿರುವೆಯಾ ?"

ಎಲ್ಲರ ದೃಷ್ಟಿಯೂ ಮಕ್ಕಳ ಕಡೆಗೆ ಹೋಯಿತು. ಚರ್ಚೆಯ ಜೋಗುಳದಲ್ಲಿ ಅವಕ್ಕೆ ನಿದ್ದೆ ಹತ್ತಿತ್ತು.

೯೫

ಶ್ರೀಧರ, ಸಾಧನೆ, ಅವಳ ಮಕ್ಕಳು ಮತ್ತು ಲಕ್ಷ್ಮೀಪತಿ—ಎಲ್ಲರೂ ಬೆಂಗಳೂರಿಗೆ ಹಿಂದಿರುಗಿದರು.

ಈಗ ಕೆಲವು ದಿನಗಳಿಂದ ಸುಂದರ ತನ್ನ ಪುಸ್ತಕ ಸಂಗ್ರಹಗಳಲ್ಲಿ, ಗಾಂಧಿಯವರು ಹರಿಜನ ಸಮಸ್ಯೆಯ ಬಗ್ಗೆಯೂ ನೂತನ ಸಮಾಜ ರಚನೆಯ ಬಗ್ಗೆಯೂ ಬರೆದಿದ್ದ ವಿಚಾರ ಪುಂಜಗಳನ್ನು ಒಳಕೊಂಡ ಪುಟಗಳನ್ನು ಮತ್ತೆ ಮತ್ತೆ ತಿರುವಿಹಾಕಿದ. ಮಹಾತ್ಮರು ಕನಸು ಕಂಡ ಭಾರತವೆ ನಮ್ಮೆಲ್ಲರ ಆದರ್ಶಭಾರತವಾಗಬೇಕು ಎಂಬ ನಂಬಿಕೆ ಅವನಲ್ಲಿ ಪುಷ್ಟಿಗೊಳ್ಳುತ್ತ ಬಂದಿತೇ ಹೊರತು ಸ್ವಲ್ಪವೂ ಕದಲಲಿಲ್ಲ. ಶ್ರೀಧರನು ಹೇಳುವ ಮಾರ್ಗ ವಿಘಾತುಕವಾದುದೆಂದು ಮನವರಿಕೆ ಮಾಡಿಕೊಂಡನು. ದೇಶ ನಾಯಕರ ಅಭಿಪ್ರಾಯವನ್ನೇ ತಾನು ಗಿಣಿಯಂತೆ ನುಡಿಯುತ್ತಿರುವೆನೋ ಇಲ್ಲವೆ ಇದು ತನ್ನ ಆತ್ಮದಲ್ಲಿ ಬೇರೂರಿದ ದೃಢವಾದ ನಂಬಿಕೆಯೋ ಎಂದು

ಮತ್ತೆ ಮತ್ತೆ ತನ್ನನ್ನು ತಾನೇ ಪ್ರಶ್ನಿಸಿಕೊಂಡನು. ಕೀರ್ತಿಗಾಗಿ, ಪ್ರತಿಷ್ಠೆಗಾಗಿ, ಪದವಿಗಾಗಿ, ಅಧಿಕಾರಕ್ಕಾಗಿ, ಜನರಂಜನೆಗಾಗಿ—ಯಾವುದಕ್ಕಾಗಿಯೂ ಈಗ ತುಳಿದ ಮಾರ್ಗವನ್ನು ತಾನು ಕೈಕೊಂಡಿರಲಿಲ್ಲ. ಊರಿನಲ್ಲಿ ಈಗಾಗಲೇ ಮ್ಯುನಿಸಿಪಲ್ ಚುನಾವಣೆಗಳ ಸಂಬಂಧದಲ್ಲಿ ಕಾಂಗ್ರೆಸ್ ಪಕ್ಷ, ಆ ಪಕ್ಷ, ಈ ಪಕ್ಷ ಎಂದು ಪಕ್ಷಪಂಗಡಗಳು ಹುಟ್ಟಿಕೊಂಡಿದ್ದುವು. ಕೆಲವರು ವಿದ್ಯಾರ್ಥಿಗಳು, "ನೀವು ಕಾಂಗ್ರೆಸ್ ಪರ ಈ ವರ್ಷ ಅಧ್ಯಕ್ಷಸ್ಥಾನಕ್ಕೆ ನಿಲ್ಲಿ. ನಾವು ಓಟು ದೊರಕಿಸಿಕೊಡುತ್ತೇವೆ. ನಿಮ್ಮ ಹರಿಜನ ಕಾರ್ಯಕ್ಕೆ ಬೆಂಬಲ ಸಿಕ್ಕುತ್ತೆ" ಎಂದು ಸೂಚಿಸಿದ್ದರು. ರಾಮಯ್ಯನವರು ಗುಡಿಯ ಗುಂಪಿನಿಂದ ಇತ್ತ ಸರಿದು, ಚುನಾವಣೆಯ ದೃಷ್ಟಿಯಿಂದ ತಲೆಯ ಮೇಲೆ ಆಗಲೇ ಖಾದೀ ಟೋಪಿ ಏರಿಸಿ, ಸುಂದರಮೂರ್ತಿಯನ್ನೂ ಬಂದು ಕಂಡು ಮಾತಾಡಿದ್ದರು. ವಿದ್ಯಾರ್ಥಿಗಳಿಗೆ ಹೇಳಿ ತಮಗೇ ಜಯ ಗಳಿಸುವಂತೆ ಮಾಡಿಕೊಟ್ಟರೆ, ಹರಿಜನ ಕಾರ್ಯದಲ್ಲಿ ತಾವು ನೆರವಾಗುವುದಾಗಿ ಭರವಸೆ ಕೊಟ್ಟಿದ್ದರು. ಸುಂದರಮೂರ್ತಿ ಆಗಲಿ ಎಂದು ಒಪ್ಪಿಕೊಂಡಿದ್ದ. ಆದ್ದರಿಂದ, ತಾನು ಅಧ್ಯಕ್ಷನಾಗಿ ಅಧಿಕಾರಸ್ಥಾನವನ್ನು ದುರುಪಯೋಗಪಡಿಸಿಕೊಂಡು ತನ್ನ ಕಾರ್ಯಕ್ಕೆ ಬೆಂಬಲ ದೊರಕಿಸಿಕೊಳ್ಳಲು ಸಿದ್ಧನಾಗಿಲ್ಲವೆಂದೂ, ರಾಮಯ್ಯನವರಿಗಾಗಿಯೇ ಕೆಲಸ ಮಾಡಿದರೆ ಒಳ್ಳೆಯದೆಂದೂ ಸುಂದರಮೂರ್ತಿ ವಿದ್ಯಾರ್ಥಿಗಳನ್ನು ಬೇಡಿಕೊಂಡಿದ್ದ; ವಿದ್ಯಾರ್ಥಿಗಳು ಒಪ್ಪಿಕೊಂಡರು. ಆ ತರುಣದಲ್ಲಿಯೇ ನಡೆದ ಚುನಾವಣೆಯಲ್ಲಿ ರಾಮಯ್ಯನವರೇ ಅಧ್ಯಕ್ಷರಾಗಿ ಮರಳಿ ಆಯ್ದು ಬಂದರು. ಸುಂದರಮೂರ್ತಿ ತನ್ನ ಆದರ್ಶಸಾಧನೆಗೆ ಒಳ್ಳೆಯ ಭವಿಷ್ಯವನ್ನು ಕಂಡರು. ಒಂದು ಆಲೋಚನೆ ಹೊಳೆಯಿತು; ರಾಮಯ್ಯನವರಲ್ಲಿ ಪ್ರಸ್ತಾಪಮಾಡಿ ಅದನ್ನು ಕಾರ್ಯರೂಪಕ್ಕೆ ತಂದ.

ಸುಂದರಮೂರ್ತಿ ತನ್ನ ಆಶ್ರಮ ಸಾರೋದ್ಧಾರವಾಗಿ ನಡೆಯಬೇಕು, ಊರವರ ಬೆಂಬಲ ಅದಕ್ಕೆ ಸಿಕ್ಕಬೇಕು, ಇದು ಆಗಬೇಕಾದರೆ ಆಶ್ರಮದಲ್ಲಿ ಊರ ಜನ ಆಸಕ್ತಿ ತೋರುವಂತಾಗಬೇಕು ಎಂದು ಆಲೋಚಿಸಿದ. ತನಗೆ ಪ್ರಿಯವಾಗಿದ್ದ ಹೆಸರು 'ಸಾಧನಾಶ್ರಮ' ಎಂಬುದನ್ನು ತ್ಯಜಿಸಿ, ದೇಶದಲ್ಲೆಲ್ಲ ಇರುವಂತೆ 'ಹರಿಜನ ಸೇವಕ ಸಂಘ' ಎಂದು ಮಾರ್ಪಡಿಸಿ,

ಆಶ್ರಮದ ಕಟ್ಟಡವನ್ನೂ ತನ್ನ ಜಮೀನನ್ನೂ ಅದಕ್ಕೆ ಬರೆದುಕೊಡಬೇಕು—ಎಂಬ ನಿರ್ಧಾರ ಸಹಜವಾಗಿ ಅವನಲ್ಲಿ ತಲೆದೋರಿತು. ಇದನ್ನು ರಾಮಯ್ಯನವರಿಗೆ ಹೇಳಿದ. ಅವರು ಭೇಷಾಗಿದೆ ಎಂದರು. ಸುಂದರ ಹಾಗೆಯೇ ಮಾಡಿದ: ತನ್ನ ಆಸ್ತಿಯೆಲ್ಲವನ್ನೂ ದಾನಪತ್ರದ ಮೂಲಕ ಆಶ್ರಮಕ್ಕೆ ಬರೆದು, ಅದನ್ನು ರಿಜಿಸ್ಟರು ಮಾಡಿಸಿ, ರಾಮಯ್ಯನವರು ಸಲಹೆಮಾಡಿದ ಮೇರೆಗೆ, ಅವರ ನೆರವಿನಿಂದಲೇ, ಅವರು ಸೂಚಿಸಿದ ಮಹನೀಯರನ್ನೊಳಗೊಂಡ ಆಡಳಿತ ಸಮಿತಿಯೊಂದನ್ನು ಏರ್ಪಡಿಸಿದ; ಅದಕ್ಕೆ ರಾಮಯ್ಯನವರೇ ಅಧ್ಯಕ್ಷರು; ಸುಂದರಮೂರ್ತಿ ಕಾರ್ಯದರ್ಶಿ. ರಾಮಯ್ಯನವರು ಸಂಘಕ್ಕೆ ಹುರುಪಿನಿಂದ ಸದಸ್ಯರನ್ನು ಕೂಡಿಸಿದರು; ನಿಯಮಾವಳಿಯನ್ನು ರಚಿಸಿ, ಸಮಿತಿಯ ಒಪ್ಪಿಗೆ ಅದಕ್ಕೆ ಬರುವಂತೆ ಮಾಡಿ, ಬೇಗನೆಯೇ ಒಂದು ಚುನಾವಣೆ ನಡಸಿ, ಮತ್ತೆ ತಾವೇ ಅದಕ್ಕೆ ಅಧ್ಯಕ್ಷರಾಗಿ ಆಯ್ದುಬಂದು, ತಮ್ಮ ಮಗನೇ ಕಾರ್ಯದರ್ಶಿಯಾಗುವಂತೆ ಏರ್ಪಾಡು ಮಾಡಿದರು! ಸುಂದರಮೂರ್ತಿಗೆ 'ಸ್ಥಾಪಕ-ಪೋಷಕ' ಎಂಬ ಗೌರವದ ಪಟ್ಟ ಕಟ್ಟಿದರು. ಆಶ್ರಮದ ಬೀಗದ ಕೈಯಿಂದ ಹಿಡಿದು ಬೊಕ್ಕಸದ ವರೆಗೆ ಎಲ್ಲ ಅವರ ವಶವಾದುವು. ಮ್ಯುನಿಸಿಪಾಲ್ಟಿಯ ಝಾಡಮಾಲಿಗಳಿಂದಲೇ ಹರಿಜನರ ಕೇರಿಯ ನಿತ್ಯ ನಿರ್ಮಲೀಕರಣಕ್ಕೆ ಏರ್ಪಾಡುಮಾಡಿದರು; ಎರಡು ಕಸದ ತೊಟ್ಟಿ ಇಡಿಸಿದರು; ಕೇರಿಗೆ 'ಹರಿಜನಪುರ' ಎಂದು ಬೋರ್ಡು ಬರಸಿ ಹಾಕಿಸಿದರು; ಎರಡು ದೀಪ ಹಾಕಿಸಿದರು; ಆಶ್ರಮಕ್ಕೂ 'ಹರಿಜನ ಸೇವಕ ಸಂಘ' ಎಂದು ಬೋರ್ಡು ಬರಸಿ ಹಾಕಿಸಿದರು; ಪಾಪ, ಅವರಿಗೂ ಹೆಚ್ಚು ಜಮೀನಿರಲಿಲ್ಲ; ಆಶ್ರಮದ ಜಮೀನನ್ನು ಸ್ವಂತವಾಗಿ ಬೇಸಾಯ ಮಾಡಿಸ ತೊಡಗಿದರು. ತಮ್ಮ ಕಣಜಕ್ಕಿಷ್ಟು, ಹರಿಜನರಿಗೆ ಹತ್ತು ಕಾಳು, ಆಶ್ರಮದ ಲೆಕ್ಕಕ್ಕೆ ಒಂದಿಷ್ಟು—ಹೀಗೆ ಫಸಲಿನ ಹಂಚಿಕೆಗೆ ಮನಸ್ಸಿನಲ್ಲಿ ಗುಣಾಕಾರ ಹಾಕಿದರು. ಆರು ತಿಂಗಳಲ್ಲಿ ಅವರು 'ಹರಿಜನೋದ್ಧಾರಕ' ಎಂಬ ಹೆಸರು ಹೊಂದಿ, ಹರಿಜನರ ಉದ್ಧಾರ ಮಾಡಿದರು! ಸುಂದರ ಹಲವು ವರ್ಷಗಳಲ್ಲಿ ಸಾಧಿಸಲಾಗದ್ದನ್ನು ಅವರು ಕೆಲವು ತಿಂಗಳುಗಳಲ್ಲಿ ಸಾಧಿಸಿಯೇ ಬಿಟ್ಟರು!

"ಹತ್ತೂ ಜನದ ಸಂಸ್ಥೆ. ನೀವು ಆಶ್ರಮದ ವರಮಾನದಿಂದ, ಆಶ್ರಮದಲ್ಲಿ ನೆಲೆಸುವುದು—ಜೀವಿಸುವುದು ತಪ್ಪು ಅರ್ಥಕ್ಕೆ ಅವಕಾಶ ಕೊಡುತ್ತದೆ.

ನೀವು ಉದಾರ ಮನಸ್ಸಿನಿಂದ ಇಷ್ಟೊಂದು ತ್ಯಾಗ ಮಾಡಿದ್ದೀರಿ. ಇದೇ ಏನು ಮಹಾ ಹೇಳಿ ನಿಮಗೆ. ಬೇಕಾದರೆ ನಮ್ಮ ಮನೆಯಲ್ಲಿ ಬಂದು ಇರಿ' ಎಂದು ಒಂದು ಶುಭದಿನದಲ್ಲಿ ಸುಂದರನಿಗೆ ಸೂಚಿಸಿದರು.

ರಾಮಯ್ಯನವರ ರಾವಣಬುದ್ಧಿ ಸರಳಹೃದಯದ ಸುಂದರಮೂರ್ತಿಗೆ ಮೊದಲು ಮೊದಲು ಗೊತ್ತಾಗಲಿಲ್ಲ. ಕಡೆಯಲ್ಲಿ ಸಂಪೂರ್ಣವಾಗಿ ಅರ್ಥವಾಯಿತು. ತನ್ನ ಒಬ್ಬನೇ ಆಪ್ತನಾದ ಕಾಳೇಗೌಡನಲ್ಲಿ ವಿಚಾರ ಹೇಳಿಕೊಂಡ. ಕಾಳೇಗೌಡ ಎಲ್ಲವನ್ನೂ ಕೇಳಿ ತಲೆತಲೆ ಚಚ್ಚಿಕೊಂಡ; ಗೊಳೋ ಎಂದು ಅತ್ತ. ಆದರೆ ಸುಂದರನಿಗೆ ಸಮಾಧಾನ: ಹರಿಜನರ ಉದ್ಧಾರ ಆಗದಿದ್ದರೂ ಊರಿನವರು ಆ ಕಾರ್ಯದಲ್ಲಿ ಆಸಕ್ತಿ ತೋರುವಂತಾಯಿತಲ್ಲಾ ಎಂದು. ವಿದ್ಯಾರ್ಥಿಗಳ ಮುಖಂಡನಾಗಿ ನಿಂತು, ರಾಮಯ್ಯನವರ ನೇತೃತ್ವದಲ್ಲಿ—ಕೆಲಸಮಾಡುತ್ತ ಬಂದ. ವಾಸಕ್ಕೊಂದು ಗೂಡು. ಹೊಟ್ಟೆಗೆ ಹಿಡಿ ಹಿಟ್ಟು—ಇದು ಮಾತ್ರ ಇಲ್ಲ; ಅಕ್ಷರಶಃ ಭಿಕಾರಿಯಾಗಿದ್ದ. ಒಂದು ಕಡೆ ತೃಪ್ತಿ— ಒಂದು ಕಡೆ ವೇದನೆ; ಸರ್ವತ್ಯಾಗ, ತನ್ನದು ಎಂಬ ಮೋಹ.

ಈಗ ಆಶ್ರಮಕ್ಕೆ ಅಮಲ್ದಾರರು, ಜಿಲ್ಲಾಧಿಕಾರಿಗಳು, ಮಂತ್ರಿಗಳು ಎಲ್ಲರೂ ಭೇಟಿಕೊಟ್ಟಿದ್ದರು; ರಾಮಯ್ಯನವರ ಸೇವಾಕಾರ್ಯವನ್ನು ಮುಕ್ತ ಕಂಠದಿಂದ ಹೊಗಳಿ ಹೋಗುತ್ತಿದ್ದರು. ಇದೂ ಸುಂದರನಿಗೆ ತೃಪ್ತಿಯನ್ನೇ ಉಂಟುಮಾಡಿತು; ಯಾವ ಕಾರ್ಯಕ್ಕೂ ಕನಸುಕಾಣುವುದೊಂದೇ ಸಾಲದು, ಕಾರ್ಯದಕ್ಷತೆಯೂ ಬೇಕು ಎಂಬ ನೀತಿಯನ್ನು ಕಲಿಸಿತು.

ಆದರೆ, ಆ ಕಾರ್ಯದಕ್ಷತೆ, ಆ ಸೇವಾಕಾರ್ಯ, ಆ ಜನರಂಜನೆ, ಅಧಿಕಾರಿಪೂಜೆ — ಅವರ ಹಿಂದ ಅಡಗಿದ್ದ ಭಾವ ಯಾವುದು? ದೇಶವೆಲ್ಲ ಹೀಗೇ ಆದರೆ ಗತಿ ಏನು? ಹರಿಜನರ ಉದ್ಧಾರವೋ, ಯಾರ ಉದ್ಧಾರವೋ! ಹೀಗಾದರೆ ಎಂದಿಗೆ ಹರಿಜನರ ಉದ್ಧಾರ, ಎಂದಿಗೆ, ಎಂದಿಗೆ? ದೇಶದಲ್ಲೆಲ್ಲಾ ಹೀಗೇಯೋ ಏನೋ: ದೇಶ ಸುತ್ತಿ ನೋಡಿ ಬರಬೇಕು. 'ಆದದ್ದೆಲ್ಲಾ ಒಳಿತೆ ಆಯಿತು. ಶ್ರೀಧರ ಸೇವೆಗೆ ಸಂಪತ್ತಾಯಿತು' ಎಂದಿರುವವರಲ್ಲವೆ ಪುರಂದರದಾಸರು? ಸೇವಕನ ಕಾರ್ಯಕ್ಷೇತ್ರ ವಿಶಾಲವಾದದ್ದು; ವಿಶಾಲ ಭಾರತವೇ ಇರುವಾಗ ಇನ್ನು ತನ್ನ ಹಳ್ಳಿ ಎಂದೇಕೆ ಕೂಗಬೇಕು? ಎಲ್ಲಿಯೋ ಹೋಗುವುದು, ಏನಾದರೂ ಮಾಡುವುದು. 'ಎಲೆಯ ಮರೆಯ ಕಾಯಂತೆ

ಕೆಲಸ ಮಾಡಬೇಕು' ಎಂದಲ್ಲವೆ ತಾನು ಬಯಸುತ್ತಿದ್ದುದು ? ದೇವರು ಈಗ ಅದಕ್ಕೆ ಅವಕಾಶ ಕಲ್ಪಿಸಿದ್ದಾನೆ. ತನ್ನ ಒಂದು ಸಂಕಲ್ಪ ನೇರವೇರಿತು : ಮಾದನ ಮಗಳ, ತನ್ನ ತಂಗಿಯ ಉದ್ಧಾರ. ಸಾಕು, ಅಷ್ಟು ಸಾಕು. ಸೇವೆಯಲ್ಲಿಯೂ ಮೋಹ, ದುರಾಶೆ ಇರಬಾರದು. ಇನ್ನು ತನ್ನ ಆಶ್ರಮ, ತನ್ನ ಮನೆ, ತನ್ನ ಹೊಲ — ಈ ಮೋಹ ಏಕೆ? ತನ್ನ ಹೃದಯದ ಹೆಣ್ಣಿನ ಮೋಹ ತಾನಾಗಿ ಕಳಚಿಕೊಂಡಿತು ; ತಾನು ಮಾಡಬೇಕು, ತಾನು ಕಡಿಯಬೇಕು ತಾನು ಸಾಧಿಸಬೇಕು — ಇನೂ ಒಂದು ಮೋಹ. ಈಗ ಇದೂ ಕಳಚಿಕೊಂಡಿತು. ಇನ್ನು ತಾನು ಸಂಪೂರ್ಣವಾಗಿ ದೇವರ ಕೈಯ ಆಯುಧ: ಅವನು ತನ್ನಿಂದ ಏನು ಮಾಡಿಸುತ್ತಾನೋ ಅದು ಮಾಡಿಸಲಿ ; ಏನೂ ಮಾಡಿಸಲಿಲ್ಲ, ಬೇಡ. ತಾನು ಯಾವ ಕಾರ್ಯಕ್ಕೂ ಯೋಗ್ಯನಲ್ಲ ಎಂದು ಆತನ ಸಂಕಲ್ಪವಿರಬಹುದು.

ಇನ್ನು ತನ್ನ ವಾಸ; ತನ್ನ ಹೊಟ್ಟೆ. ಹೇಗಿದ್ದರೂ ತನ್ನ ಚಿಕ್ಕಪ್ಪನ — ಬೈರಾಗಿಯ ವೇಷ — ಅರ್ಧ ಬಂದಿದೆ ; ಅದನ್ನು ಪೂರ್ತಿ ಮಾಡಿದರೆ, ಹೊಟ್ಟೆಯ ಪಾಡು ಹೇಗೋ ಕಳೆಯುತ್ತದೆ.

ಕಾಳೇಗೌಡ ಎಷ್ಟು ಹೇಳಿದರೂ ಕೇಳಲಿಲ್ಲ. ಅವನು 'ತನ್ನ ಗುಡಿಸಿಲ ಪಕ್ಕದಲ್ಲಿ ಒಂದು ಗುಡಿಸಿಲು ಹಾಕಿಕೊಡುತ್ತೇನೆ; ಬಂದು ಇರಿ, ಯೋಚನೆ ಮಾಡಬೇಡಿ' ಎಂದ. ಸುಂದರ ಕೇಳಲಿಲ್ಲ ಹೊಳೆಯ ದಡದ ಮುರುಕು ಮಂಟಪ ಅವನನ್ನು ಸೆಳೆಯಿತು. ಅಲ್ಲಿಗೆ ಹೋಗಿ ನಿಂತ. ಕಾಳೇಗೌಡ ಪ್ರೀತಿಯಿಂದ ತಂದುಕೊಡುತ್ತ ಇದ್ದ ಪಾಕಸಾಮಗ್ರಿಗಳಿಂದ ಸ್ವಯಂಪಾಕ; ಬೈರಾಗಿ ಉಪಯೋಗಿಸುತ್ತ ಇದ್ದು ಮರೆತು ಬಿಟ್ಟು ಹೋಗಿದ್ದ ಭಗವದ್ಗೀತೆಯ ಪಾರಾಯಣ, ಧ್ಯಾನ, ಮನನ; ಚಿತ್ತನಿರೋಧ, ಚಿತ್ತಶುದ್ಧಿಗಾಗಿ ಆಹ್ನಿಕ, ರಾಮನಾಮ ಜಪ. ಬಿಡುವಾದಾಗ ಹರಿಜನ ಕೇರಿಗೆ ಹೋಗಿ, ಅವರಿಗೆ ಹಿತವಚನ; ಮಕ್ಕಳ ಮೈತೊಳೆಯುವುದು, ಅವನ್ನು ಆಡಿಸುವುದು; ಅವರು ಮಾಡುವ ಎಲ್ಲ ಕಾರ್ಯಗಳಲ್ಲಿ ಮನಸ್ಸು ಬಂದಷ್ಟು, ಸಹಕರಿಸುವುದು. ಇದು ಈಗ ಸುಂದರನ ನಿತ್ಯ ಕಾರ್ಯಕ್ರಮ.

ಸುಂದರ ಮುರುಕು ಮಂಟಪದಲ್ಲಿ ನೆಲಸತೊಡಗಿದ ಮೇಲೆ ಅವನನ್ನು ಹೆಚ್ಚಾಗಿ ಹೆಚ್ಚಾಗಿ ಏನು, ಎಂದೂ ಕಾಣದಿದ್ದ ಹೆಂಗಸರು ಹೀಗೆ ಮಾತಾಡಿಕೊಳ್ಳುತ್ತಿದ್ದರು: "ನಾವು ಈ ಊರಿಗೆ ಬಂದ ಹೊಸದರಲ್ಲಿ ಇಲ್ಲಿಗೆ ಒಬ್ಬ

ಬೈರಾಗಿ ಬಂದಿದ್ದ. ಇವನೂ ಯಾರೋ? ಅವನ ಹಾಗೆಯೇ ಕಾಣುತ್ತಾನೆ!'

ಈ ಸಂಗತಿಗಳೆಲ್ಲ ಸಾಧನೆಗೆ ತಿಳಿಯದೆ ಹೋಗಲಿಲ್ಲ; ತನ್ನ ಅಣ್ಣನನ್ನು ಭೇಟಿಮಾಡುವುದಕ್ಕೆಂದು ಇನ್ನೊಮ್ಮೆ ಬಂದಾಗ ಅವನನ್ನು ಮುರುಕು ಮಂಟಪದಲ್ಲಿ ಸಂದರ್ಶಿಸಬೇಕಾಯಿತು. ಸಾಧನೆಯೂ ಶ್ರೀಧರನೂ ಸುಂದರನನ್ನು ಬೆಂಗಳೂರಿಗೆ ಬರುವಂತೆ ಬಲವಂತ ಮಾಡಿದರು. ಸುಂದರ ಒಪ್ಪಲಿಲ್ಲ ಸುಂದರ ಸಾಧನೆಯನ್ನು ಬೇಡಿಕೊಂಡ: "ಯಾವುದಾದರೂ ಪ್ರಾಪಂಚಿಕ ಮೋಹ ಕಟ್ಟಿ ಹಾಕದೆ ಹೋದರೆ ಒಂದು ಕಡೆ ಸ್ಥಿರವಾಗಿ ನೆಲಸುವುದಕ್ಕೆ ಸಾಧ್ಯವಾಗುವುದಿಲ್ಲ. ಮಾಲತಿಯನ್ನು ಬಿಟ್ಟು ಹೋಗು." ಶ್ರೀಧರ ಒಪ್ಪಲಿಲ್ಲ; ನಿನಗೆ ಹುಚ್ಚು ಎಂದ. 'ಹೋಗಲಿ, ಬೇಡ' ಎಂದು ಸಮಾಧಾನಗೊಂಡ ಸುಂದರ.

ಇದ್ದಕ್ಕಿದ್ದ ಹಾಗೆಯೇ ಸುಂದರ ಒಂದು ದಿನ ಕಣ್ಮರೆಯಾದ: ಮುರುಕ ಮಂಟಪದಲ್ಲಿರಲಿಲ್ಲ. ಕಾಳೇಗೌಡ ಅತ್ತ, ಕರೆದ; ಕಂಡಕಂಡವರನ್ನೆಲ್ಲ ಕೇಳಿದ; ಸುಂದರಪ್ಪ ಏನಾದನೋ ಎಂದು ಕೊರಗಿದ, ಕಂಗೆಟ್ಟ. 'ಸುಂದರ ಸಾಧು' ಹೊರಟು ಹೋದರೇ, ನಮ್ಮಪ್ಪ ಹೊರಟು ಹೋದನೇ ಎಂದು ಹರಿಜನರೆಲ್ಲ ಗೋಳಾಡಿದರು. ಆದರೆ ಬೆಂಗಳೂರಿನಲ್ಲಿ ಸಾಧನೆಗೆ ಮಾತ್ರ ಒಂದು ಕಾಗದ ಹೋಗಿತ್ತು: "ಸೇವೆಗಾಗಿ ಹುಟ್ಟಿದ ಜೀವ ಸಾಯುವುದಿಲ್ಲ. ಹೆದರಬೇಡ. ಯಾರ ಉದ್ಧಾರವನ್ನೂ ಮಾಡಲಾಗದಿದ್ದರೆ ಆತ್ಮೋದ್ಧಾರಕ್ಕಾದರೂ ಈ ದೇಹ ದುಡಿಯುತ್ತದೆ. ಎಂದಾದರೂ ಬಂದು ನಿನ್ನನ್ನು ನೋಡಿಕೊಂಡು ಹೋಗುತ್ತೇನೆ."

ಸುಂದರನಿಗಾಗಿ ಯಾರೂ ಕಾದಿರಲಿಲ್ಲ; ಸಾಧನೆ – ಮಾದನ ಮಗಳು ಕಾದಿದ್ದಳು; ಕಾದಿದ್ದಾಳೆ.

ಕೋಳಲೂರಿನ 'ಹರಿಜನ ಸೇವಕ ಸಂಘ' ಈಗ ಚೆನ್ನಾಗಿ ಕಾರ್ಯ ಮಾಡುತ್ತಿದೆ ಎಂದು ಪತ್ರಿಕೆಗಳಲ್ಲಿ ಆಗಾಗ್ಗೆ ಸುದ್ದಿಗಳು ಬರುತ್ತಿವೆ ರಾಮಯ್ಯನವರು ಹರಿಜನರಿಗೆ ಜಮೀನು ಕೊಡಿಸುವ ಪ್ರಯತ್ನದಲ್ಲಿಯೇ ಇದ್ದಾರೆ.

ಕಾರ್ಯಾರಂಭ ಮಾಡಿದವರು ಒಬ್ಬರಾದರೆ, ಕೀರ್ತಿ ಗಳಿಸುವವರು ಇನ್ನೊಬ್ಬರು. ಇದು ಪ್ರಪಂಚ. ಚಿನ್ನದ ಕಲಶ ದೂರಕ್ಕೂ ಕಾಣುವುದು; ಅಡಿಗಟ್ಟಿದ ನೆಲದಲ್ಲಿ ಹುದುಗಿ ಯಾರಿಗೂ ಕಾಣದು.